ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೧೨

ಪ್ರಧಾನ ಸಂಪಾದಕ

ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್,

# ಹಿಂದೂದರ್ಶನಸಾರ




ಲೇಖಕರು

ಮಹಾಮಹೋಪಾಧ್ಯಾಯ ಪಂಡಿತರತ್ನಂ

ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯ




೧೯೬೫

Hindudarshana Sara by Lakshmipuram Srinivasacharya, Published by the Director, Prasaranga, University of Mysore, Mysore-570006. Fourth Edition 1985, Crown Octavo PP xii + 352, Price Rs. 16-00.

ಮೊದಲನೆಯ ಮುದ್ರಣ : ೧೯೪೦
ಎರಡನೆಯ ಮುದ್ರಣ : ೧೯೬೦
ಮೂರನೆಯ ಮುದ್ರಣ: ೧೯೭೪
ನಾಲ್ಕನೆಯ ಮುದ್ರಣ : ೧೯೮೫





ಬೆಲೆ : 16-00

ಪ್ರಕಾಶಕರು
ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೬

ಮುದ್ರಕರು
ವಾಸವಿ ಪ್ರಿಂಟರ್ಸ್, ಜಯನಗರ, ಮೈಸೂರು-14

# ಮುನ್ನುಡಿ

ಈ ಗ್ರಂಥವನ್ನು ಬರೆದ ಮಹಾಮಹೋಪಾಧ್ಯಾಯ ಪಂಡಿತರತ್ನಂ ಶ್ರೀಮಾನ್ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು ಗ್ರಂಥ ಅಚ್ಚಾಗುವುದರೊಳಗೆ ದಿವಂಗತರಾದರೆಂದು ತಿಳಿಸಲು ವಿಷಾದವಾಗುತ್ತದೆ. ಅವರಿಗೆ ದರ್ಶನ ಶಾಸ್ತ್ರಗಳಲ್ಲಿ ಅದ್ವಿತೀಯವಾದ ಪಾಂಡಿತ್ಯವಿತ್ತು. ಮೈಸೂರಿನ ಸಂಸ್ಕೃತ ಮಹಾಪಾಠಶಾಲೆಯಲ್ಲಿಯೂ, ಮಹಾರಾಜ ಕಾಲೇಜಿನಲ್ಲಿಯೂ ದರ್ಶನ ಶಾಸ್ತ್ರವನ್ನು ಹಲವು ವರ್ಷಗಳ ಕಾಲ ವಿದ್ಯಾರ್ಥಿಗಳಿಗೆ ಬೋಧಿಸಿ ಅವರ ಮೆಚ್ಚಿಗೆಗೆ ಪಾತ್ರರಾಗಿದ್ದರು. ಅವರು ತತ್ವಜ್ಞರು ಮಾತ್ರವೇ ಅಲ್ಲ ; ಅವರ ಬಾಳೂ ತತ್ವಮಯವಾಗಿಯೇ ರೂಪುಗೊಂಡಿತ್ತು. ಅವರ ಹೃದಯ ಉದಾರವಾದದ್ದು ; ದೃಷ್ಟಿ ವಿಶಾಲವಾದದ್ದು ; ಹಳೆಯದನ್ನು ಹೊಸ ಕಣ್ಣಿನಿಂದ ನೋಡಲು ಸಮರ್ಥರಿದ್ದರು. ವಿಸ್ತಾರವಾದ ಅವರ ವ್ಯಾಸಂಗವೂ ರಹಸ್ಯವನ್ನು ಭೇದಿಸುವ ತೀಕ್ಷ್ಣ ವಿಮರ್ಶೆಯೂ ಸಾತ್ವಿಕ ಜೀವನವೂ ಪೂರ್ಣವಾದ ಅನುಭವವೂ ಅವರು ಬರೆದಿರುವ 'ದರ್ಶನೋದಯ' ಎಂಬ ಸಂಸ್ಕೃತ ಗ್ರಂಥದಲ್ಲಿ ಕಂಡುಬರುತ್ತವೆ. ಅಲ್ಲಿ ಹೇಳಿರುವ ವಿಷಯಗಳನ್ನು ಈ ಕನ್ನಡ ಗ್ರಂಥದಲ್ಲಿ ಸಂಗ್ರಹಿಸಿದ್ದಾರೆ.

ಸೃಷ್ಟಿಯ ಮರ್ಮವನ್ನು ಒಡೆದು ನೋಡುವುದಕ್ಕಾಗಿ ನಮ್ಮ ದೇಶದ ಪ್ರಾಚೀನ ದಾರ್ಶನಿಕರು ಯಾವ ಯಾವ ದಾರಿಗಳಲ್ಲಿ ಹೊರಟರು. ಅವರು ಉಪಯೋಗಿಸಿಕೊಂಡ ಸಾಧನ ಸಾಮಗ್ರಿಗಳೇನು, ಅವರ ವಿಚಾರಸರಣಿ ಹೇಗಿದೆ, ಅವರ ತರ್ಕ ಎಷ್ಟು ಹರಿತವಾಗಿದೆ, ಅವರು ಸಾಧಿಸಿದ್ದೇನು— ಎಂಬಿವೇ ಮುಂತಾದ ವಿಷಯಗಳನ್ನು ಈ ಗ್ರಂಥದಲ್ಲಿ ತಕ್ಕಮಟ್ಟಿಗೆ ಕಾಣಬಹುದು. ವಿಷಯ ದೊಡ್ಡದು, ಸಮಸ್ಯೆಗಳು ಬಹುಮುಖವಾದುವು. ವಾದವಾದಗಳು ಬುದ್ಧಿ ಸೂಕ್ಷ್ಮತೆಯಿಂದ ಕೂಡಿದುವು; "ನೈಕೋ ಋಷಿಃ ಯಸ್ಯ ಮತಂ ಪ್ರಮಾಣಂ" ಎಂಬಂತೆ ಜಿಜ್ಞಾಸೆ ಯಾವ ನಿಲುಗಡೆಗೂ ಬಾರದು ; ಆದರೂ ಮನುಷ್ಯನ ಸತ್ಯವನ್ನರಸುವ ಪ್ರಯತ್ನ ಸತತವಾಗಿ ಸಾಗುತ್ತಿದೆ. ಸಾಮಾನ್ಯ ವಾಚಕರಿಗಾಗಿ ಇಂಥ ಗಹನವಾದ ವಿಷಯ

ವನ್ನು ಆದಷ್ಟು ಸುಲಭ ಸರಳವಾಗಿ ಬರೆಯಲು ಗ್ರಂಥಕರ್ತರು ಪ್ರಯತ್ನಿಸಿದ್ದಾರೆ.

ಈ ಪುಸ್ತಕದ ಮುದ್ರಣ ಕಾರ್ಯದಲ್ಲಿ ನನಗೆ ನೆರವಾದ ಶ್ರೀ ಡಿ.ಎಲ್. ನರಸಿಂಹಾಚಾರ್, ಎಂ.ಎ. ಅವರಿಗೂ ಗ್ರಂಥವನ್ನು ಸಮರ್ಪಕವಾಗಿಯೂ ಅಂದವಾಗಿಯೂ ಅಚ್ಚು ಹಾಕಿರುವ ವೆಸ್ಲಿಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸಿನ ಅಧಿಕಾರಿಗಳಿಗೂ ತುಂಬ ಕೃತಜ್ಞನಾಗಿದ್ದೇನೆ.

ಬೆಂಗಳೂರು
೨೦-೪-೧೯೪೦

ಬಿ. ಎಂ. ಶ್ರೀಕಂಠಯ್ಯ

# ವಿಷಯಸೂಚಿ

---

೧೯೮ ನೇ ಪುಟದಲ್ಲಿ 'ಪದ್ಯ ವಿಭಾಗ' ಎನ್ನುವುದನ್ನು 'ವಿದ್ಯಾ ವಿಭಾಗ' ಎಂದು ಓದಿಕೊಳ್ಳಬೇಕಾಗಿ ವಿನಂತಿ.

೯, ಅದ್ವೈತದರ್ಶನ—



ಶ್ರೀ ಶಾಂಕರಸಿದ್ಧಾಂತ ಸರಣಿ—

## ೧೦. ವಿಶಿಷ್ಟಾದ್ವೈತ—

# ಪೀಠಿಕೆ

ಉದಾರಾನಸ್ಮದಾಚಾರ್ಯಾನಭಿವನ್ದ್ಯ ಲಿಖಾಮ್ಯಹಮ್
ಹಿಂದೂದರ್ಶನಸಾರಾಖ್ಯಂ ಪ್ರಬನ್ಧಂ ದೇಶಭಾಷಯಾ ॥

ನಾನಾದರ್ಶನಪೂರ್ವಪುಣ್ಯಪುರುಷರ್ ಸ್ವಸ್ವೀಯ ಸಿದ್ಧಾಂತದೊಳ್
ತಂತಮ್ಮಾಶಯಮಂ ಪ್ರಕಾಶಪಡಿಸಲ್ ಪ್ರೌಢಪ್ರಬಂಧಂಗಳಂ
ಆರಾರ್ ಮಾಡಿರುವರ್ ತದೀಯವಚನಸ್ವಾರಸ್ಯದಿಂ ಹೇಳುವೇನ್
ಹಿಂದೂದರ್ಶನಸಾರವೆಂಬ ಕೃತಿಯಂ ಕರ್ಣಾಟದೇಶೋಕ್ತಿಯೊಳ್ ॥

ಶ್ರೀಮತ್ಕನ್ನಡದೇಶಭೂಪತಿಲಕರ್ ಶ್ರೀಕೃಷ್ಣರಾಜರ್ ಮಹಾ-
ರತ್ನಾಲಂಕೃತಸಿಂಹಪೀಠಪದದೊಳ್ ಸೌಜನ್ಯವಾತ್ಸಲ್ಯದಿಂ
ರಾಜ್ಯಶ್ರೀಗುರುಭಾರಮಂ ಧರಿಸಿರಲ್ ಕರ್ಣಾಟಸಂಘೀಯರ
ಪ್ರೋತ್ಸಾಹೋತ್ತಮಶಕ್ತಿಯಿಂ ಬರೆಯುವೇನತ್ಯುತ್ತಮಗ್ರಂಥಮಂ ॥

ರಾಗದ್ವೇಷನಿವೃತ್ತಿಶಾಂತಿಸುಖಮಂ ಲೋಕಕ್ಕೆ ಸಂಪಾದಿಸಲ್
ನಾನಾದರ್ಶನಸಂಪ್ರದಾಯನಿಚಯಂ ಪುಟ್ಟಿರ್ಪುದೇನಾದೊಡಂ
ಅನ್ಯೋನ್ಯಪ್ರತಿಪಕ್ಷದಿಂ ಕಲಹದೊಳ್ ನಿಂತಿರ್ಪುದಂ ಕಂಡದಂ
ಚಿಂತಿಪ್ಪರ್ ಸರಲಪ್ರಶಾಂತಹೃದಯರ್ ದೌರ್ಜನ್ಯವೈಚಿತ್ರ್ಯಮಂ ॥

ಕ್ರೂರಾಂತಃಕಲಹಕ್ಕೆ ಕಾರಣಮಿದಂ ನಾನಾಮತಾಜ್ಞಾನಮೇ
ಶ್ರದ್ಧಾದಾರ್ಢ್ಯದ ದೃಷ್ಟಿಯೊಳ್ ಗುರುವರರ್ ಭಾಷ್ಯಂಗಳಂ ಮಾಡಿದರ್
ನಾನಾದರ್ಶನನಿಶ್ಚಯಂ ಬಹುಮತಂ ತತ್ಸಿದ್ಧಿಗೀಗುತ್ತಮಂ
ಹಿಂದೂದರ್ಶನಸಾರವೆಂಬ ಕೃತಿಯೇ ಲೋಕಕ್ಕೆ ಸೌಜನ್ಯದಿಂ ॥

## ಹಿಂದೂದರ್ಶನ

ಹಿಂದೂದರ್ಶನವೆಂದರೆ ಈ ಭರತಖಂಡದಲ್ಲಿ ಬಹುಕಾಲದಿಂದ ಹಿಂದಿನವರು ಮಾಡಿರುವ ತತ್ತ್ವವಿಚಾರವು. ತತ್ತ್ವವೆಂದರೆ ಕಲ್ಪಿತವಲ್ಲದಿರುವ ವಸ್ತುವು. ಅದರ ಸ್ವಭಾವವು, ಅಗ್ನಿರುಷ್ಣಃ, ಜಲಂ ಶೀತಂ, ಇದು ಮೊದಲಾದುದು. ಪ್ರತಿಯೊಂದು ವಸ್ತುವೂ ವಿಚಿತ್ರವಾಗಿರುವುದು. ಅವುಗಳ ಸ್ವಭಾವಗಳು ಅನಂತಗಳಾಗಿಯೂ ಅತಿ ವಿಚಿತ್ರಗಳಾಗಿಯೂ ಇರುವುವು. ವಸ್ತುಸ್ವಭಾವ ವಿಚಾರವೇ ತತ್ತ್ವದರ್ಶನವು.

ವಸ್ತುವೆಂದರೆ ವ್ಯತ್ಯಾಸವಾಗದಿರುವ, ಕಲ್ಪಿತವಲ್ಲದಿರುವ, ಯಥಾರ್ಥವಾಗಿರುವ ಪದಾರ್ಥವೆಂದರ್ಥವು. ಪ್ರತಿಯೊಂದು ವಸ್ತುವಿಗೂ ಹೆಸರು—(ನಾಮಪದ) ಇರುವುದು. ಇಂತಹ ಪದಗಳಿಂದ ತಿಳಿಯಲ್ಪಡುವ ವಸ್ತುಗಳೇ ಪದಾರ್ಥಗಳೂ. ಪದಾರ್ಥವೆಂದರೆ ತತ್ತ್ವವೆಂದರೂ ಒಂದೇ ಅರ್ಥವು. ಪದಾರ್ಥಪರಿಶೋಧನಶಾಸ್ತ್ರವೇ ತತ್ತ್ವವಿಚಾರವು.

ಈ ವಿಚಾರದಿಂದ ಕೆಲವು ವಸ್ತುಗಳಲ್ಲಿ ಕೆಲವು ಸ್ವಭಾವಗಳು ನಿರ್ಣಯಿಸಲ್ಪಡುವುವು. ಆ ಸ್ವಭಾವಗಳ ವ್ಯವಸ್ಥೆಗೆ, ನಿಯಮಕ್ಕೆ, ಸಿದ್ಧಾಂತವೆಂದು ಹೆಸರು. ಸಿದ್ಧವೆಂದರೆ ನಿರ್ಣಯಿಸಲ್ಪಟ್ಟ ವಸ್ತುಸ್ವಭಾವಗಳು; ಅಂತವೆಂದರೆ ವ್ಯವಸ್ಥೆ, ನಿಯಮವು. ವಸ್ತುಸ್ವಭಾವ ನಿಯಮವೇ ಸಿದ್ಧಾಂತವು.

ಈ ಪ್ರಪಂಚದಲ್ಲಿರುವ ವಸ್ತುಗಳಲ್ಲಿ ಕೆಲವು ಪ್ರತ್ಯಕ್ಷಗಳಾಗಿರುವುವು. ಆತ್ಮ, ಪರಮಾತ್ಮ, ಪರಲೋಕ, ಪುಣ್ಯ, ಪಾಪ ಮೊದಲಾದ ಕೆಲವು ವಸ್ತುಗಳು ಪರೋಕ್ಷಗಳಾಗಿರುವುವು. ಪ್ರತ್ಯಕ್ಷ ಪರೋಕ್ಷವಾದ ಸಕಲ ವಸ್ತುಗಳ ವಿಚಾರವೇ ತತ್ತ್ವಮಾರ್ಗವು. ಇದರಲ್ಲಿ ವಿವಿಧ–ವಿಚಿತ್ರಪ್ರಪಂಚದ ಮೂಲತತ್ತ್ವಗಳು ಹೇಗಿರಬಹುದು, ಒಂದೇ ? ಅನೇಕವೇ ? ಒಂದೇ ವಿಧವೇ ? ಅನೇಕ ವಿಧವೇ ? ಇವುಗಳಿಂದ ನಮಗೆ ಸುಖವೇ ? ದುಃಖವೇ ? ನಾವು ಎಂಬುದು ಎಂತಹ ವಸ್ತುವು ? ಅದಕ್ಕೆ ಬೇಕಾದದ್ದು ಯಾವುದು? ಇವೇ ಮೊದಲಾದ ವಿಚಾರವೇ ತತ್ತ್ವಮಾರ್ಗದ ಸ್ವಭಾವವು.

ಇದಲ್ಲದೆ ಭಕ್ತಿಮಾರ್ಗವೆಂದು ಮತ್ತೊಂದು ಮಾರ್ಗವಿರುವುದು. ಅದೇ ಮತವೆನ್ನಲ್ಪಡುವುದು. ಮತವೆಂದರೆ ಮನೋಭಾವಕ್ಕೆ ಗೋಚರವಾದುದು. ಈ ಮನೋಭಾವವನ್ನು ಶ್ರದ್ಧಾಭಕ್ತಿ, ವಿಶ್ವಾಸ, ನಂಬಿಕೆ

ಮೊದಲಾದ ಶಬ್ದಗಳಿಂದ ವ್ಯವಹರಿಸುವರು. ಈ ಮನೋಭಾವಗಳೂ ಅನಾದಿ ಸಂಪ್ರದಾಯಗಳಿಂದ ವಿಚಿತ್ರಗಳಾಗಿರುವುವು. ಇವುಗಳಲ್ಲಿ ವಸ್ತು ಸ್ವಭಾವಗಳನ್ನು ಪರೀಕ್ಷಿಸಬೇಕಾಗಿಲ್ಲ; ಪರೀಕ್ಷಿಸಲೂ ಬಾರದು.

ಏವಂಚ ತತ್ತ್ವಮಾರ್ಗಕ್ಕೂ ಭಕ್ತಿಮಾರ್ಗಕ್ಕೂ ಇರುವ ವ್ಯತ್ಯಾಸ ವಿದು–ಒಂದು ವಸ್ತುಸ್ವಭಾವವಿಷಯ, ಮತ್ತೊಂದು ಸಂಪ್ರದಾಯಿಕ ಮನೋಭಾವ ವಿಷಯ. ಪ್ರಾಯಶಃ ಈಗ ಎರಡು ಮಾರ್ಗಗಳನ್ನುಸರಿಪಡಿಸಿ ಅನುಷ್ಠಾನಕ್ಕೆ, ಆಚರಣೆಗೆ ಒಂದೇ ಮಾಡಿರುವರು. ಪರಸ್ಪರ ಮಿಶ್ರವಾಗಿ ದ್ದರೂ ಮಾರ್ಗಗಳ ವ್ಯತ್ಯಾಸವು ಇದ್ದೇ ಇರುವುದು.

ಈ ತತ್ತ್ವವಿಚಾರವೇ ವಿಚಾರಪರರಿಗೆ ದೃಢಸಂಸ್ಕಾರದಿಂದ ಭಾವನಾ ಮಯವಾಗಿ ಅನುಭವ, ಸಾಕ್ಷಾತ್ಕಾರ ಎಂಬ ಪದಗಳಿಂದಲೂ ಹೇಳಲ್ಪಡು ವುದು. ಆದುದರಿಂದ ತತ್ತ್ವದರ್ಶನವು ಎಂದು ದರ್ಶನಪದವನ್ನು ಪ್ರಯೋ ಗಿಸುವರು.

## ದರ್ಶನೋದಯ

ತತ್ತ್ವವಿಚಾರವೆಂಬ ದರ್ಶನಮಾರ್ಗಗಳು ಆರಂಭವಾಗುವುದಕ್ಕೆ ಕಾರಣಗಳು ಹೀಗಿರುವುವು–ಪ್ರಪಂಚದಲ್ಲಿ ಸಕಲ ಪ್ರಾಣಿಗಳಿಗಿಂತಲೂ ಮನುಷ್ಯನು ಬುದ್ಧಿಶಕ್ತಿಯಲ್ಲಿ ಪ್ರಬಲನು; ಊಹಾಪೋಹ ಶಕ್ತಿಯಲ್ಲಿ ನಿಪು ಣನು. ನಾಗರಿಕತೆ ದಿನೇ ದಿನೇ ಅಭಿವೃದ್ಧಿಯಾಗುತ್ತಿರುವುದು ಪ್ರತ್ಯಕ್ಷವು. ಮನುಷ್ಯರಲ್ಲಿ ಮುಖ್ಯವಾದ ಸಹಜವಾದ ಸ್ವಭಾವಗಳು ರಾಗದ್ವೇಷ ಮೋಹಗಳು. ದಯಾದಾಕ್ಷಿಣ್ಯವಿನಯಾದಿಗಳು ಅಭ್ಯಾಸದಿಂದ ಬರುವಂತಹ ಸ್ವಭಾವಗಳು. ರಾಗವೆಂದರೆ ಆಶೆ. ಇದು ಪ್ರಬಲವಾದರೆ ಕಾಮವೆನ್ನ ಲ್ಪಡುವುದು. ಇದಕ್ಕೆ ವಿರೋಧ ಮಾಡಿರುವವರ ಮೇಲೆ ದ್ವೇಷವು ಅಭಿ ವೃದ್ಧಿಯಾಗಿ ಕ್ರೋಧವಾಗುವುದು. ವಸ್ತುಸ್ವಭಾವವನ್ನು ತಿಳಿಯದೇ ಇರು ವಿಕೆಯೇ, ಭ್ರಾಂತಿಯೇ ಮೋಹವು. ಇದೇ ಅಜ್ಞಾನವ. ಇದು ಪ್ರಬಲ ವಾದರೆ ಲೋಭವಾಗುವುದು. ಲೋಭವೆಂದರೆ ಎಲ್ಲವೂ ತಮಗೇ ಬೇಕು, ಇತರರಿಗೆ ಇರಬಾರದೆಂಬ ದುರ್ಗುಣವು. ಈ ಉತ್ಕಟರಾಗದ್ವೇಷ ಮೋಹ ಗಳೆಂಬ ಕಾಮಕ್ರೋಧಲೋಭಗಳೇ ಮನುಷ್ಯರಿಗೆ ಪ್ರಬಲವಾದ ಶತ್ರುಗಳು.

ಈ ಮೂರು ಗುಣಗಳೇ ಲೋಕದಲ್ಲಿ ಪ್ರಬಲಗಳಾದರೆ ಸಕಲವಿಧ ವಾದ ಅನರ್ಥಗಳಿಗೂ ಕಾರಣಗಳಾಗುವುವು. ಮನುಷ್ಯರಾಗಿರುವವರಿಗೆ ಈ ಗುಣಗಳನ್ನು ಸಂಪೂರ್ಣವಾಗಿ ಬಿಡಲು ಸಾಧ್ಯವೇ ಇಲ್ಲ. ಬಿಟ್ಟರೆ ಜೀವನವೇ ಸಾಧ್ಯವಿಲ್ಲ. ಯಥೋಚಿತವಾಗಿ ಇವುಗಳನ್ನು ತಗ್ಗಿಸುವುದಕ್ಕೆ ಶಾಂತಿಯೆಂದು ಹೆಸರು.

ಇಂತಹ ಶಾಂತಿಯನ್ನು ನಾನಾಮುಖವಾಗಿ ಉದ್ದೇಶಿಸಿ ಕೆಲವು ಸಂದರ್ಭಗಳಲ್ಲಿ ಕೆಲವು ಕಾರಣಗಳಿಗೆ ಪ್ರಾಧಾನ್ಯವನ್ನು ಕೊಟ್ಟು ಅತಿವಾದ ಗಳು ಹೊರಟಿರುವುವು. ಸಕಲ ದರ್ಶನಗಳಿಗೂ ಶಾಂತಿಯೇ ಮುಖ್ಯೋದ್ದೇಶ ವೆಂಬುವರಲ್ಲಿ ಸಂದೇಹವಿಲ್ಲ. ಶಾಂತಿಯಿಂದ ಇಹಲೋಕದಲ್ಲಿ ಬರುವ ಅನುಕೂಲ್ಯವನ್ನು ವಿಸ್ತರಿಸಬೇಕಾಗಿಲ್ಲ; ಪರಲೋಕವಲ್ಲಿ ಬರುವ ಅನುಕೂ ಲ್ಯವು ಅವರವರ ವಿಶ್ವಾಸಾನುಸಾರವಿರುವುದು.

ಇಂತಹ ಶಾಂತಿಕರವಾದ ವಿಚಾರಗಳೇ ದರ್ಶನಗಳು, ಸಿದ್ಧಾಂತಗಳು. ತತ್ತ್ವವಿಚಾರಗಳು. ಇವುಗಳ ವಿಚಾರದಿಂದಲೂ ಯಥೋಚಿತವಾದ ಶಾಂತಿ ಬರುವುದು ಎಂದು ವಿಚಾರಪರರ ಅನುಭವವು.

ಲೋಕದಲ್ಲಿ ಸುಖಾನುಭವವು ಎರಡು ವಿಧ. ಒಂದನೆಯದು—ಕಣ್ಣು ಕಿವಿ ಮೊದಲಾದ ಇಂದ್ರಿಯಗಳ ಮೂಲಕ ಚಿತ್ರ, ಸಂಗೀತ ಮೊದಲಾದುವು ಗಳನ್ನು ತಿಳಿದು ಸಂತೋಷಪಡುವುದು. ಇದು ವಿಷಯಸುಖವೆನ್ನಲ್ಪಡು ವುದು.

ಇದಕ್ಕೆ ಅವಕಾಶವಿಲ್ಲದಿರುವಾಗ ಬರುವ ಸ್ಥಿತಿಯೇ ಎರಡನೆಯ ಸುಖವು. ಇದನ್ನು ಶಮ ದಮ ಶಾಂತಿ ಎನ್ನುವರು. ಇದು ಸುಖವೆನ್ನು ವುದಕ್ಕೆ ಉದಾಹರಣೆ—ಗಾಢಾನಿದ್ರಾವಸ್ಥೆ. ಗಾಢನಿದ್ರಾಕಾಲದಲ್ಲಿ ಇಂದ್ರಿಯ ವ್ಯಾಪಾರವಿಲ್ಲ, ಯಾವ ಸುಖ ದುಃಖಾನುಭವವೂ ಇಲ್ಲ. ಈ ಸ್ಥಿತಿಯನ್ನೇ ಪರಮ ಸುಖಾನುಭವವೆಂದು ತಿಳಿಯುವರು. ಆದುದರಿಂದಲೇ ಸಕಲ ಪ್ರಾಣಿ ಗಳೂ ನಿದ್ರೆಗೋಸ್ಕರ ಪ್ರಯತ್ನಪಡುವುವು. ಇದನ್ನೇ ಆತ್ಮ ಸುಖಾನುಭವ ವೆನ್ನುವರು. ಸ್ಥಿರವಾದ ಈ ಸ್ಥಿತಿಯನ್ನೇ ಮೋಕ್ಷಸುಖಾನುಭವಕ್ಕೆ ಉದಾ ಹರಣೆಯಾಗಿ ವೇದಾಂತಿಗಳೂ ತಾರ್ಕಿಕರೂ ಹೇಳುವರು. ದರ್ಶನದೃಷ್ಟಿಗಳೆ ಲ್ಲವೂ ಇಂತಹ ಶಾಂತಿಸುಖವನ್ನು ಹೊಗಳುವುವು. ಆತ್ಮನೇ ಸುಖಸ್ವರೂಪ

ನಾದರೂ ಆರ್ತನಿಗೆ ಸುಖವೆಂಬ ಸ್ವಭಾವವಿರುವುದಾದರೂ ಸರ್ವದುಃಖ ನಿವೃತ್ತಿಯೇ ಸುಖವಾದರೂ ಗಾಢನಿದ್ರಾವಸ್ಥೆಯೆಂಬ ಸುಷುಪ್ತಿಕಾಲದಲ್ಲಿ ಪರಮಸುಖಾನುಭವ ಇದೆಯೆಂದು ಹೇಳುವುದರಲ್ಲಿ ಬಾಧಕವಿಲ್ಲ.

ಸರಸಕಾವ್ಯಪಠನ, ನಾಟಕದರ್ಶನ ಮೊದಲಾದುವುಗಳಲ್ಲಿ ಮಹಾಪುರುಷರ ಮನೋಭಾವ ಭಾವನೆಯಿಂದ ಪಾಠಕ ಸದಸ್ಯರುಗಳಿಗೆ ಸಂತೋಷವ್ಯಸನಗಳು ಉಂಟಾಗುವುದು ಸಕಲಜನ ಪ್ರತ್ಯಕ್ಷವು. ಹೀಗೆ ದರ್ಶನ ವಿಚಾರದಲ್ಲಿ ಮನಶ್ಶುದ್ಧಿ, ಸಂಪ್ರದಾಯ, ಯಥೋಚಿತಶಾಂತಿ, ದರ್ಶನ ನಿಮಿತ್ತರಾಗದ್ವೇಷನಿವೃತ್ತಿ ಮೊದಲಾದ ಪ್ರಯೋಜನವು ಸಿದ್ಧಿಸುವುದು.

## ವಿರೋಧಪರಿಹಾರ

ಈ ಪ್ರಕಾರ ಶಾಂತಿಯೆಂಬ ದರ್ಶನೋದಯ ಕಾರಣವನ್ನು ತಂತಮ್ಮ ಸಂಪ್ರದಾಯದಲ್ಲಿ ಸಕಲ ದಾರ್ಶನಿಕರೂ ತತ್ತ್ವವಿಚಾರಪರರೂ ಸೂಚಿಸಿರುವರು. ಆದರೂ ತತ್ತ್ವವಿಚಾರಗಳಲ್ಲೇ ಪರಸ್ಪರ ಈರ್ಷ್ಯಾಸೂಯೆಗಳೂ ಕಲಹಗಳೂ ವೃದ್ಧಿಯಾಗಿ ಉದ್ದೇಶವು ನೆರವೇರದೆ ಅನರ್ಥಕ್ಕೂ ಕಾರಣವಾಗಿದೆಯಲ್ಲಾ ಎಂದು ಉದಾರಹೃದಯವುಳ್ಳವರು ಚಿಂತಿಸುತ್ತಾರೆ. ಅವರಿಗೆ ಸಮಾಧಾನವು ಇದು–ಈ ಈರ್ಷ್ಯಾಸೂಯಾದಿಗಳು ಕೆಲವು ಕ್ಷುದ್ರ ವ್ಯಕ್ತಿಗಳಲ್ಲಿರುವುವೇ ಹೊರತು ಉದಾರಹೃದಯವುಳ್ಳ ನಾನಾ ಸಿದ್ಧಾಂತಗಳನ್ನು ತಿಳಿದ ಮಹನೀಯರಲ್ಲಿ ಇಲ್ಲವೇ ಇಲ್ಲ.

ಆದರೂ ಮಹನೀಯರಾದ ಪೂರ್ವಾಚಾರ್ಯರು ಪರಸ್ಪರ ಸಿದ್ಧಾಂತಗಳನ್ನು ಖಂಡನೆ ಮಾಡಿರುವುದಿಲ್ಲವೇ ? ಅವರಿಗೂ ದೌರ್ಜನ್ಯವು ತಪ್ಪಲಿಲ್ಲವಲ್ಲಾ ಎಂದು ಶಂಕೆ ಬರುತ್ತದೆ. ಇಲ್ಲಿ ಸಮಾಧಾನವಿದು–ಆಯಾ ಪೂರ್ವಾಚಾರ್ಯರುಗಳೇ ಇಂತಹ ದೌರ್ಜನ್ಯಾಕ್ಷೇಪವನ್ನು ಮಾಡಿಕೊಂಡು ಹೇಳಿರುವ ಸಮಾಧಾನದ ಸಾರಾಂಶವೆಂತೆಂದರೆ–ತಂತಮ್ಮ ಸಿದ್ಧಾಂತದಲ್ಲಿ ಶಿಷ್ಯರಿಗೆ ಶ್ರದ್ಧೆ ಕಡಮೆಯಾಗದೇ ಇರಬೇಕೆಂಬ ಸಿದ್ಧಾಂತಸಂರಕ್ಷಣೆಯೇ ನಮಗೆ ಉದ್ದೇಶವೆಂದು ಸಕಲರೂ ಹೇಳಿರುವರು. ಅಲ್ಲದೆ, ಖಂಡನದಲ್ಲೇ ತಾತ್ಪರ್ಯವಾದರೆ ಪ್ರತಿಪಕ್ಷ ಸಿದ್ಧಾಂತಗಳು ಖಂಡನವಾಗಿ ಏನಾದರೂ ನಾಶವಾದುವೇ? ಇಲ್ಲ. ಒಂದೇ ಸಿದ್ಧಾಂತವೇನಾದರೂ ಉಳಿದಿದೆಯೇ ? ಇಲ್ಲ. ಆದುದರಿಂದ

ತಂತಮ್ಮ ಸಿದ್ಧಾಂತದಲ್ಲಿ ಭಕ್ತಿ ಶ್ರದ್ಧೆಯನ್ನು ಕಾಪಾಡುವುದೇ ಖಂಡನ ಪ್ರಯೋಜನವು. ಈ ಅಂಶವನ್ನು ಪರಿಶೀಲಿಸಿದವರಿಗೆ ಸಿದ್ಧಾಂತ ನಿಮಿತ್ತವಾದ ರಾಗದ್ವೇಷಗಳು ಇರಲಾರವು. ರಾಗದ್ವೇಷಗಳಿದ್ದರೆ ಶಾಸ್ತ್ರತಾತ್ಪರ್ಯವಾಗಲಿ ಸಿದ್ಧಾಂತ ತಾತ್ಪರ್ಯವಾಗಲಿ ಅವರಿಗೆ ತಿಳಿದಿಲ್ಲವೆಂದು ಸಿದ್ಧಾಂತವು.

## ಸಾಮರಸ್ಯ

ಎಲ್ಲ ದರ್ಶನಕಾರರೂ ತಮ್ಮ ತಮ್ಮ ಸಿದ್ಧಾಂತವೇ ತತ್ತ್ವವಾದುದು, ಯಥಾರ್ಥವಾದುದು. ಕಲ್ಪಿತವಲ್ಲದಿರುವುದು ಎಂದು ವಿಶ್ವಾಸವಿಟ್ಟಿರುವರು. ಮಧ್ಯಸ್ಥವಾದ ದೃಷ್ಟಿಯಲ್ಲಿ ಪರಸ್ಪರ ವಿರುದ್ಧವಾದ ಸಕಲ ಸಿದ್ಧಾಂತಗಳೂ ಹೇಗೆ ಸಮರಸಗಳಾಗುವುವು ? ಎಂದು ಆಕ್ಷೇಪವಿರುತ್ತದೆ. ಇದಕ್ಕೆ ಶಾಸ್ತ್ರಕಾರರು ಕೆಲವರು ಸರ್ವವಸ್ತುಗಳಿಗೂ ಸರ್ವಸ್ವಭಾವವನ್ನೂ ಅಂಗೀಕರಿಸಿ ವಿರೋಧ ಪರಿಹಾರ ಮಾಡಿರುವರು. ಇದಕ್ಕೆ ಅನೇಕಾಂತ ವಾದವೆಂದು ಹೆಸರು. ಏಕಾಂತವೆಂದರೆ ಒಂದೇ ಸ್ವಭಾವವು, ಅನೇಕಾಂತವೆಂದರೆ ನಾನಾ ಸ್ವಭಾವವು. ಇದೇ ಸಾರ್ವಾತ್ಮ್ಯವಾದವು.

ಕೆಲವರು ಸಕಲ ವಸ್ತುಗಳೂ, ಅವುಗಳ ಸ್ವಭಾವಗಳೂ ಪರಮಾರ್ಥಗಳಲ್ಲ, ವಸ್ತುವೆಂಬುದೇ ಇಲ್ಲದಿರುವುದರಿಂದ ವಿರೋಧವಿಲ್ಲ ಎಂದು ಹೇಳುವರು. ಇದಕ್ಕೆ ನೈರಾತ್ಮ್ಯವಾದವೆಂದೂ ಶೂನ್ಯವಾದವೆಂದೂ ಹೆಸರು.

ಕೆಲವರ ತಾತ್ಪರ್ಯವಿದು–ಪ್ರತ್ಯಕ್ಷ ಗೋಚರವಾದ ಮಹಾವೃಕ್ಷ, ಮಹಾಪರ್ವತ ಮೊದಲಾದುವು ಒಂದೊಂದು ದಿಕ್ಕಿನಲ್ಲಿ ನೋಡಿದರೆ ಒಂದೊಂದು ರೀತಿಯಿಂದ ಕಾಣುತ್ತಿರುವಲ್ಲಿ, ಅತ್ಯಂತ ಪರೋಕ್ಷವಾದ ಮತ್ತು ಉಪದೇಶದಿಂದಲೇ ತಿಳಿಯತಕ್ಕುದಾದ ಪ್ರಪಂಚಮೂಲಕಾರಣ ತತ್ತ್ವದಲ್ಲಿ ದೃಷ್ಟಿಭೇದದಿಂದಲೂ ಕಾಲದೇಶಭೇದಗಳಿಂದಲೂ ಮತಭೇದಗಳು, ಅಭಿಪ್ರಾಯಭೇದಗಳು ಏತಕ್ಕೆ ಉದಯಿಸಲಾರವು ? ಸಾಮರಸ್ಯವು ಏತಕ್ಕೆ ಬರಲಾರದು ? ಇದಕ್ಕೆ ಅಂಧಗಜಪರೀಕ್ಷಾವೃತ್ತಾಂತವೇ ನಿದರ್ಶನವಾಗುವುದು. ಅದೆಂತೆಂದರೆ–ನಾಲ್ಕು ಕುರುಡರು ಆನೆಯನ್ನು ತಿಳಿಯಬೇಕೆಂಬ ಅಪೇಕ್ಷೆಯಿಂದ ಒಬ್ಬ ಪುರುಷನ ಸಹಾಯದಿಂದ ಗಜವನ್ನು ಮುಟ್ಟಿ ನೋಡಿದರು. ಅವರಲ್ಲಿ ಕಾಲನ್ನು ಮುಟ್ಟಿ ನೋಡಿದವನು ಆನೆ

ಕಂಭವಂತಿರುವುದೆಂದು ತಿಳಿದನು. ಬಾಲವನ್ನು ಮುಟ್ಟಿದವನು ಕಸಪೊರಕೆಯಂತೆ ಗಜವಿರುವುದೆಂದು ತಿಳಿದನು, ಹೀಗೆ ಕಿವಿಯನ್ನು ಮುಟ್ಟಿದವನು ಮೊರದಂತೆ ಗಜಸ್ವರೂಪವನ್ನೂ, ದಂತವನ್ನು ಮುಟ್ಟಿದವನು ಕಲ್ಲಿನಂತೆ ಗಜಸ್ವರೂಪವನ್ನೂ ತಿಳಿದರು. ಇದರಲ್ಲಿ ಎಲ್ಲವೂ ತಪ್ಪು, ಎಲ್ಲವೂ ನಿಶ್ಚಯವು. ಎಂದರೆ ಯಾವುದೂ ಸಮಗ್ರವಲ್ಲ, ಏಕದೇಶವೆಂದು ತಾತ್ಪರ್ಯವು ಆಗುತ್ತದೆ. ಅದರಂತೆ ತತ್ತ್ವವಿಚಾರವೂ ಇರಬಹುದು ; ಪರಸ್ಪರ ಅಭಿಪ್ರಾಯಭೇದಗಳೂ ಇರಬಹುದು ಎಂದು ಕೆಲವರ ಸಿದ್ಧಾಂತವು.

ಇದರಿಂದ ಸಾರ್ವಾತ್ಮ್ಯ, ನೈರಾತ್ಮ್ಯ, ಏಕದೇಶ ಎಂದು ಮೂರು ಮಾರ್ಗಗಳು ಸಾಮರಸ್ಯೋಪಾಯಗಳೆಂದು ಅಭಿಪ್ರಾಯವಾಗುವುದು.

### ಅದ್ಭುತಗಳು

ಈ ತತ್ತ್ವವಿಚಾರದಲ್ಲಿ ಪ್ರಾಯೇಣ ಸಕಲ ದಾರ್ಶನಿಕರು ವಸ್ತುಸ್ವಭಾವಕ್ಕೂ ಪ್ರತ್ಯಕ್ಷಕ್ಕೂ ವಿರುದ್ಧವಾದ ಅದ್ಭುತಗಳು ಎಂದರೆ ಸಿದ್ಧಿಗಳಿಂದಲೂ, ಕಥೆಗಳಿಂದಲೂ ತತ್ತ್ವವನ್ನು ನಿರ್ಣಯಿಸಲಿಲ್ಲ. ಕರ್ಮಕ್ಕೂ ಈಶ್ವರನಿಗೂ ಅಪಾರವಾದ ಶಕ್ತಿಯನ್ನು ಅಂಗೀಕರಿಸಿರುವವರೂ, ಕರ್ಮವೂ ಈಶ್ವರನೂ ತಾನು ಕೊಟ್ಟಿರುವ ವಸ್ತುಸ್ವಭಾವಗಳನ್ನು ವ್ಯತ್ಯಾಸಮಾಡುವುದಿಲ್ಲವೆಂದು ಅಂಗೀಕರಿಸುತ್ತಾರೆ. ಆದುದರಿಂದ ತತ್ತ್ವವಿಚಾರ ಶಾಸ್ತ್ರವೂ, ವಸ್ತುಸ್ವಭಾವ ಶಾಸ್ತ್ರವೂ ಪರಸ್ಪರ ವಿರುದ್ಧವಲ್ಲವೆಂದು ನಿರ್ಣಯವು.

ಕೆಲವು ದಾರ್ಶನಿಕರು ದರ್ಶನಮೂಲಪುರುಷರ ಅಪಾರವಾದ ಶಕ್ತಿಯನ್ನು ಅವರ ವಿಜಯಗಳಿಂದಲೂ, ಉಪಾಖ್ಯಾನಗಳಿಂದಲೂ ನಂಬಿರುವರು. ಆದರೆ ಆ ನಂಬಿಕೆಗಳು ಮೂಲಪುರುಷರಿಗೆ ಪ್ರಾಮಾಣಿಕತೆಯನ್ನು ಪ್ರಕಾಶಪಡಿಸುವುದರಲ್ಲಿ ಪರ್ಯವಸಾನವಾಗುವುವು. ವೈದಿಕರು ಪ್ರತಿಕಕ್ಷಿಯರ ಅದ್ಭುತಗಳನ್ನು ಖಂಡಿಸಿ ಸಿದ್ಧಾಂತವನ್ನು ನಿರಾಕರಿಸಿರುತ್ತಾರೆ. ಪ್ರಾಯಶಃ ಈ ವಿಚಾರವು ಸೌಗತ ಸಿದ್ಧಾಂತದಲ್ಲಿ ಅಧಿಕವಾಗಿ ಬರುವುದು.

### ವ್ಯವಹಾರ

ಪ್ರಾಯಶಃ ಸಕಲ ದಾರ್ಶನಿಕರೂ ತಮ್ಮ ತಮ್ಮ ವ್ಯವಹಾರದಿಂದ ತತ್ತ್ವನಿರ್ಣಯವನ್ನು ತೋರಿಸುತ್ತಾರೆ. ವ್ಯವಹಾರವೆಂದರೆ ಆಡುವ ಮಾತು

ಗಳು. ಬಾಲಕರಿಗೆ ಅಕ್ಷರಾಭ್ಯಾಸದಂತೆ ಆಡುವ ಮಾತುಗಳು ಕಲಿಸಲ್ಪಡುವುವು. ಮೊಟ್ಟಮೊದಲು ಆನೆ, ಕುದುರೆ, ಆಕಳು, ಚಂದ್ರ, ಸೂರ್ಯ ಮೊದಲಾದ ಮಾತುಗಳಂತೆ ನಾನು ನೀನು ಎಂಬ ಮಾತುಗಳು ಪ್ರತ್ಯಕ್ಷವಾದ ಶರೀರದಲ್ಲಿ ಶಿಕ್ಷಿಸಲ್ಪಡುವುವು. ಕಾಲಕ್ರಮದಲ್ಲಿ ಅವರು ವಿದ್ಯಾವಂತರಾದರೆ ಅಥವಾ ವಿದ್ಯಾವಂತರ ಸಹವಾಸವಿದ್ದರೆ ಶರೀರ ಬೇರೆ, ಶರೀರದೊಳಗಿರುವ ಜೀವಾತ್ಮನು ಬೇರೆ ಎಂಬ ಶಿಕ್ಷೆ ಆಗುವುದು. ಆವಾಗ ನಾನು ನೀನು ಎಂಬ ಪದಗಳಿಗೆ ಶರೀರದೊಡನೆ ಕೂಡಿರುವ ಆತ್ಮನು ಎಂಬ ಅಭಿಪ್ರಾಯ ಬರುತ್ತದೆ. ಅದೇ ಸಂಸ್ಕಾರವು ದೃಢವಾದರೆ ನಾನು ನೀನು ಎಂಬ ಪದಗಳನ್ನು ಆತ್ಮನಲ್ಲೇ ಪ್ರಯೋಗಿಸುತ್ತಾನೆ; ಅಥವಾ ನಾನು ಎಂಬ ಪದವು ಶರೀರಕ್ಕೆ ಸೇರಿದುದು ಎಂದು ಆತ್ಮನಲ್ಲಿ ಉಪಯೋಗಿಸುವುದಿಲ್ಲ.

ಮತ್ತು ಸಕಲವಸ್ತುಗಳಲ್ಲೂ ಬ್ರಹ್ಮವೆಂಬ ಪರಮಾತ್ಮನಿರುತ್ತಾನೆಂಬ ಭಾವನೆ ದೃಢತಮವಾದರೆ ಬ್ರಹ್ಮನೇ ಪರಮಾತ್ಮನೆಂದು ವ್ಯವಹರಿಸುತ್ತಾನೆ. ಹಾಗೆಯೇ ಆ ಪರಮಾತ್ಮನೇ ಶಿವನೆಂದು ನಿರಂತರಭಾವನೆಯಾದರೆ ನಾನೂ ಶಿವನು, ಅವನೂ ಶಿವನು, ಸರ್ವಂ ಶಿವಮಯಂ ಎಂಬ ಭಾವನೆ ಬರುವುದು. ಹೀಗೆ ನಾರಾಯಣಭಾವನೆ ಬಂದರೆ ಸರ್ವಂ ನಾರಾಯಣಮಯಂ ಎಂಬ ಭಾವನೆ ಬರುತ್ತದೆ. ಈ ವಿಷಯಗಳು ಪುರಾಣಗಳಲ್ಲಿ ವಿಸ್ತಾರವಾಗಿರುವುವು.

ನಮ್ಮ ವ್ಯವಹಾರವನ್ನು ಬಿಟ್ಟು ಉಪನಿಷತ್ತುಗಳ ವ್ಯವಹಾರವನ್ನು ಆಧಾರವಾಗಿ, ಪ್ರಮಾಣವಾಗಿ, ಕೆಲವರು ತಿಳಿಯುತ್ತಾರೆ. ಆ ಉಪನಿಷತ್ತುಗಳಲ್ಲಿರುವ ಮಾತುಗಳು ಗುರುಶಿಷ್ಯರಾದ ಋಷಿಗಳಾದ ಮನುಷ್ಯರ ಭಾಷಾಮಯವಾಗಿಯೇ ಇರುವುವು. ಅವುಗಳಿಗೆ ಅರ್ಥಗಳೂ ಸಹ ನಮ್ಮ ವಿದ್ಯಾಭ್ಯಾಸವನ್ನು ಅನುಸರಿಸಿರುತ್ತವೆ. ತಾತ್ಪರ್ಯನಿರ್ಣಯಗಳಿಂದ ಅರ್ಥವನ್ನು ಹೇಳುತ್ತೇವೆಂದು ಕೆಲವರು ಪ್ರಯತ್ನಪಡುತ್ತಾರೆ. ಆ ತಾತ್ಪರ್ಯವನ್ನು ಕಂಡುಹಿಡಿಯುವ ಹೇತುಗಳು ಆಕಾಶದಿಂದ ಬೀಳತಕ್ಕವುಗಳಲ್ಲ. ಅವರವರ ಅಭ್ಯಾಸಾನುಸಾರವಾಗಿ ತೋರುವಂತಹವು. ಆದುದರಿಂದಲೇ ಭಾಷ್ಯಭೇದಗಳು ಅವ್ಯಾಪಿ ಹೊರಡುತ್ತಲಿವೆ.

ಹೀಗಿರುವಲ್ಲಿ ನಾನು ಕೃಶನು, ಸ್ಥೂಲನು ಇತ್ಯಾದಿ ವ್ಯವಹಾರದಿಂದ ನಾನು ಎಂಬ ಪದಕ್ಕೆ ಶರೀರವೇ ಅರ್ಥವು. ಕೃಶತ್ವವು ಶರೀರದಲ್ಲಿರುವ

ಸ್ವಭಾವಗಳು ಎಂದು ಚಾರ್ವಾಕರು ಹೇಳುವರು. ನನ್ನ ದೇಹ, ನನ್ನ ಕೈ, ನನ್ನ ಕಾಲು ಇತ್ಯಾದಿ ವ್ಯವಹಾರಗಳಿರುವುದರಿಂದ ದೇಹಕ್ಕಿಂತಲೂ ಆತ್ಮನು ಬೇರೆಯಾದವನೆಂದು ಇತರರು ತಿಳಿಯುವರು. ಮತ್ತು ಕೆಲವರು ಯುಕ್ತಿಗಳಿಂದ ಸ್ಥಾಪಿಸುವರು. ಈ ವ್ಯವಹಾರ ತತ್ತ್ವಮಾರ್ಗವು ಹೀಗಿರುವುದರಿಂದ ವ್ಯವಹಾರಗಳು ತತ್ತ್ವನಿರ್ಣಯಕ್ಕೆ ಆಧಾರವಾಗಲಾರವು ಎಂದು ಕೆಲವರು ಹೇಳುವರು.

ವ್ಯವಹಾರವು ಈಗ ಪ್ರಾರಂಭವಾದುದಲ್ಲ, ಅನಾದಿ ಸೃಷ್ಟಿಕಾಲದಿಂದಲೂ ಪರಮೇಶ್ವರನ ಆಜ್ಞೆಯಿಂದಲೂ ಮಹರ್ಷಿಗಳ ತತ್ತ್ವದೃಷ್ಟಿಯಿಂದಲೂ ಬಂದು ನಮ್ಮ ಪೂರ್ವಾಚಾರ್ಯರ ಕರುಣಾಪ್ರಸಾದದಿಂದ ಪ್ರಾಪ್ತವಾದುದು. ಇದನ್ನು ಬಿಟ್ಟರೆ ಬೇರೆ ಗತಿಯೇ ಇಲ್ಲ. ಇದನ್ನೇ ಪ್ರಮಾಣವಾಗಿಟ್ಟುಕೊಳ್ಳಬೇಕೆಂದು ಬಹುಜನರು ಅಭಿಪ್ರಾಯಪಡುತ್ತಾರೆ.

ಮತ್ತು ವಿಚಾರಪರರು ವ್ಯವಹಾರ ಮಾರ್ಗವನ್ನು ಬಿಟ್ಟುಹೋಗುವುದಕ್ಕೆ ಅವಕಾಶವೇ ಇಲ್ಲ. ಮಾತಿಲ್ಲದೆ ವಿಚಾರವಿಲ್ಲ, ಭಾಷೆಯಿಲ್ಲದೆ ಮಾತಿಲ್ಲ, ಮನುಷ್ಯನಿಲ್ಲದೆ ಭಾಷೆಯಿಲ್ಲ. ಗ್ರಂಥಗಳು, ಉಪದೇಶಗಳು, ಯುಕ್ತಿಗಳು ಸರ್ವವೂ ಭಾಷಾಮಯವಾಗಿರುವುವು. ವ್ಯವಹಾರವಿಲ್ಲದಿದ್ದರೆ ಕೇವಲ ಮೌನವೇ ಶರಣು. ಆದುದರಿಂದ ಅವರವರ ಸಂಪ್ರದಾಯಾನುಸಾರ ಶ್ರದ್ಧೆಯಿಂದ ಇರುವುದಕ್ಕಿಂತ ಬೇರೆ ಯಾವ ಮಾರ್ಗವೂ ಇಲ್ಲವೆಂದು ಸಿದ್ಧಾಂತವಾಗುತ್ತದೆ.

### ದರ್ಶನವಿಭಾಗ

ಈಗ ಲೋಕದಲ್ಲಿ ದರ್ಶನವಿಚಾರವೆಂದರೆ ತತ್ತ್ವವಿಚಾರ, ಮತವೆಂದರೆ ಆಚಾರ ವಿಚಾರ ಎಂದು ವಾಡಿಕೆಯಿರುವುದರಿಂದ ದರ್ಶನವೆಂದರೆ ತತ್ತ್ವಮಾರ್ಗವು, ಮತವೆಂದರೆ ಭಕ್ತಿಮಾರ್ಗವು. ಈ ಎರಡು ಮಾರ್ಗದಲ್ಲೂ ದರ್ಶನ ಪ್ರವರ್ತಕರ ಹೆಸರುಗಳಿಂದಲೂ ಪೂಜ್ಯದೇವತಾ ಭೇದದಿಂದಲೂ ಆರಾರು ವಿಭಾಗಗಳನ್ನು ಮಾಡಿರುವರು—

ಕಣಾದಸ್ಯಾಕ್ಷಪಾದಸ್ಯ ವ್ಯಾಸಸ್ಯ ಕಪಿಲಸ್ಯ ಚ
ಪತಞ್ಜಲೇಃ ಜೈಮಿನೇಶ್ಚ ದರ್ಶನಾನಿ ಷಡೇವ ಹಿ ॥

ವೈಶೇಷಿಕ, ನ್ಯಾಯ, ವೇದಾಂತ, ಸಾಂಖ್ಯ, ಯೋಗ, ವೇದ ಎಂದು ಆರು ದರ್ಶನಗಳು.

ಶೈವಂ ಚ ವೈಷ್ಣವಂ ಶಾಕ್ತಂ ಸೌರಂ ವೈನಾಯಕಂ ತಥಾ
ಸ್ಕಾನ್ದಂ ಚ ಭಕ್ತಿಮಾರ್ಗಸ್ಯ ದರ್ಶನಾನಿ ಷಡೇವ ಹಿ ॥

ಶೈವ, ವೈಷ್ಣವ, ಶಾಕ್ತ, ಸೌರ, ಗಾಣಾಪತ್ಯ, ಸ್ಕಾಂದಗಳೆಂಬ ಷಣ್ಮತಗಳು ಪೂಜ್ಯದೇವತಾ ವಿಭಾಗದಿಂದ ವಿಭಕ್ತಿಗಳಾಗಿರುವುವು. ಈ ಮತವಿಭಾಗ ಶ್ಲೋಕವನ್ನು ಮಾಧವಾಚಾರ್ಯರು 'ಪರಾಶರಸ್ಮೃತಿ ವ್ಯಾಖ್ಯಾನ'ದಲ್ಲಿ ವಿಷ್ಣು ಪೂಜಾಪ್ರಕರಣದಲ್ಲಿ ಬೋಧಾಯನೀಯ ಪುರಾಣಸಾರವಚನವೆಂದು ಉದಹರಿಸಿರುವರು.

ಭಕ್ತಿಮಾರ್ಗದಲ್ಲಿ ತಕ್ಕ ವೇಷಾಚಾರಗಳು ಪ್ರಸಿದ್ಧಗಳಾಗಿರುತ್ತವೆ. ಬೌದ್ಧ ಜೈನಮತಗಳು ಸಹ ಪೂಜ್ಯಮಹಾಪುರುಷರ ಮೂಲಕವಾಗಿ ದರ್ಶನಗಳಲ್ಲಿ ಮುಖ್ಯಸ್ಥಾನವನ್ನು ಹೊಂದಿರುತ್ತವೆ.

ಏವಂಚ, ತತ್ತ್ವಮಾರ್ಗದಲ್ಲಿ ಮುಖ್ಯವಾಗಿ ಹನ್ನೊಂದು ದರ್ಶನಗಳು ಹಿಂದೂದರ್ಶನವೆಂದು ಇಲ್ಲಿ ವಿವರಿಸಲ್ಪಡುವುವು. ಪ್ರಥಮದಲ್ಲಿ ಸಕಲ ದರ್ಶನಗಳಿಗೂ ಪ್ರತಿಪಕ್ಷವಾಗಿರುವ ಚಾರ್ವಾಕದರ್ಶನವು ತೆಗೆದುಕೊಳ್ಳಲ್ಪಡುವುದು. ಅನಂತರ ಸೌಗತ, ಸಾಂಖ್ಯ, ಆರ್ಹತ, ಯೋಗ, ತಾರ್ಕಿಕ, ಮೀಮಾಂಸಕ, ಅದ್ವೈತ, ವಿಶಿಷ್ಟಾದ್ವೈತ, ದ್ವೈತ, ಶೈವ-ಈ ಹತ್ತು ದರ್ಶನಗಳ ಸಾರಾಂಶಗಳು ವಿವರಿಸಲ್ಪಡುವುವು. ಏವಂಚ, ಈ ಪ್ರಬಂಧವು ಹನ್ನೆರಡು ಅಧ್ಯಾಯಗಳುಳ್ಳದ್ದು ಎಂದು ತಿಳಿಯತಕ್ಕದು.

೨

# ಚಾರ್ವಾಕದರ್ಶನ

## ಸ್ವರೂಪ

ದರ್ಶನಗಳಿಗೆಲ್ಲ ಮೊದಲನೆಯದಾಗಿಯೂ, ಸರ್ವದರ್ಶನ ಪ್ರತಿಕಕ್ಷಿಯಾಗಿಯೂ ಇರುವ ದರ್ಶನವು ಚಾರ್ವಾಕದರ್ಶನವು. ಅನಾದಿಯಾದ ಉಪನಿಷತ್ತುಗಳಲ್ಲಿಯೂ ಇದನ್ನು ಖಂಡಿಸಿರುತ್ತದೆ. ಬುದ್ಧಿವಂತರಿಗೆಲ್ಲಾ ನಿದರ್ಶನವಾಗಿರುವ ಬೃಹಸ್ಪತ್ಯಾಚಾರ್ಯರು ಇದಕ್ಕೆ ಸೂತ್ರಕರ್ತರು, ಪ್ರವರ್ತಕರು. ಚಾರುವಾಕರೆಂಬ ವಿದ್ವಾಂಸರು ಸೂತ್ರಕ್ಕೆ ಭಾಷ್ಯಕಾರರು. ಈ ಸಿದ್ಧಾಂತವು ಲೋಕದಲ್ಲಿ ಹರಡಿರುವುದರಿಂದ ಇದನ್ನು ಲೋಕಾಯತ ಮತ ಎಂದು ಕರೆಯುತ್ತಾರೆ. ಇವರ ಗ್ರಂಥಗಳೆಲ್ಲವೂ ಈಗ ಲುಪ್ತವಾಗಿರುವುವು. ಈ ದರ್ಶನವು ಇತರ ದರ್ಶನಗಳಂತೆ ಪೂರ್ವಕಾಲದಲ್ಲಿ ಪ್ರಸಿದ್ಧವಾಗಿತ್ತೆಂಬುದು ಮಹಾಭಾರತದ ಕಣ್ವಾಶ್ರಮ ವರ್ಣನಪ್ರಕರಣದಲ್ಲಿ ಲೋಕಾಯತ ವಿದ್ವಾಂಸರು ಇರುತ್ತಿದ್ದರೆಂದು ಹೇಳಿರುವುದರಿಂದ ಸ್ಪಷ್ಟವಾಗುತ್ತದೆ. ಈ ಮತಪ್ರವರ್ತಕರ ಕೆಲವು ಹೆಸರುಗಳು ಬೌದ್ಧಗ್ರಂಥಗಳಿಂದ ತಿಳಿದುಬರುವುವು. ಇವರಲ್ಲಿ ಕಂಬಲಾಶ್ವತರರೆಂಬ ಚಾರ್ವಾಕಮತಾಚಾರ್ಯರನ್ನೂ, ಅವರ ಅಭಿಪ್ರಾಯವನ್ನೂ 'ತತ್ತ್ವಸಂಗ್ರಹ' ಎಂಬ ಬೌದ್ಧ ಗ್ರಂಥದಲ್ಲಿ ಅನುವಾದ ಮಾಡಿ ಖಂಡಿಸಿರುತ್ತದೆ.

ಈ ಸಿದ್ಧಾಂತದ ಅಲ್ಪಸ್ವಲ್ಪ ವಿಷಯಗಳು ಜಾಬಾಲಿ, ಪರಾಶರ ಮೊದಲಾದವರ ರಾಮಾಯಣ ವಿಷ್ಣು ಪುರಾಣಾದಿ ಗ್ರಂಥಗಳಿಂದ ತಿಳಿದುಬರುವುವು.

ಇವರು ದೇಹಕ್ಕಿಂತಲೂ ಬೇರೆಯಾದ ಆತ್ಮನೆಂಬ ವಸ್ತುವನ್ನೂ ಜನ್ಮಾಂತರಗಳನ್ನೂ ಪುಣ್ಯಪಾಪಗಳೆಂಬ ಅದೃಷ್ಟವನ್ನೂ, ಪರಲೋಕ ಪರಮೇಶ್ವರನನ್ನೂ ಒಪ್ಪದಿರುವುದರಿಂದ ನಾಸ್ತಿಕರೆಂದು ಇವರನ್ನು ಕರೆಯುತ್ತಾರೆ.

ಈ ಸಿದ್ಧಾಂತದಲ್ಲಿ ಪ್ರತ್ಯಕ್ಷದಿಂದ ತಿಳಿಯಲ್ಪಡುವ ವಸ್ತುಗಳೇ ವಸ್ತುಗಳು. ಇಂದ್ರಿಯಗಳಿಗೆ ಗೋಚರವಿಲ್ಲದ ವಸ್ತುಗಳನ್ನು ಇವರು ನಂಬುವುದಿಲ್ಲ. ಪುಣ್ಯಪಾಪಗಳು ಮನುಷ್ಯರ ಸುಖದುಃಖಗಳಿಗೆ ಕಾರಣವಲ್ಲ; ಆಯಾ ವಸ್ತುಸ್ವಭಾವವೇ ಕಾರಣವು. ನವಿಲುಗರಿಯ ಕಣ್ಣುಗಳು, ಕಮಲಕೇಸರಗಳ ವೈಚಿತ್ರ್ಯವು. ಮುಳ್ಳುಗಳ ತೀಕ್ಷ್ಣವಾದ ಅಗ್ರ ಭಾಗಗಳು. ನಿಂಬೆಹಣ್ಣು ಮೊದಲಾದ ಫಲಗಳಲ್ಲಿ ರಸವೈಚಿತ್ರ್ಯವು–ಇವು ಮೊದಲಾದುವು ಹೇಗೆ ಸ್ವಭಾವಸಿದ್ಧವೋ ಹಾಗೆ ಮನುಷ್ಯರ ಸುಖದುಃಖಗಳೂ ಆಯಾ ದೇಹಾದಿವಸ್ತುಸ್ವಭಾವ ಮೂಲಕವು.

ಪ್ರತ್ಯಕ್ಷಗೋಚರವಾದ ಪೃಥಿವಿ, ಜಲ, ತೇಜಸ್ಸು, ವಾಯು ಎಂಬ ನಾಲ್ಕು ತತ್ತ್ವಗಳು, ಭೂತಗಳು ಅಥವಾ ವಸ್ತುಗಳು ಇರುವುವು. ಇವುಗಳ ಪರಿಣಾಮಗಳಿಂದಲೇ ಶರೀರ ಮೊದಲಾದ ಪ್ರಪಂಚವು ಉತ್ಪನ್ನವಾಗುವುದು. ಆ ನಾಲ್ಕು ಭೂತಗಳ ಸಂಯೋಗವಿಶೇಷದಿಂದ ಬುದ್ಧಿ, ಜ್ಞಾನ ಎಂಬ ಚೈತನ್ಯ ಶಕ್ತಿ ಹೊರಬೀಳುವುದು. ತಾಂಬೂಲರಸದಲ್ಲಿ ಕೆಂಪುಬಣ್ಣದಂತೆಯೂ ಮರದ ಚಕ್ಕೆಗಳ ಪಾಕದಲ್ಲಿ ಮದಶಕ್ತಿಯಂತೆಯೂ ಚೈತನ್ಯ ಶಕ್ತಿ ಭೌತಿಕಶಕ್ತಿಯೇ ಹೊರತು ಬೇರೆ ವಸ್ತುವಲ್ಲ, ಧಾತುವಲ್ಲ, ಪದಾರ್ಥವಲ್ಲ. ಈ ಭೂತಶಕ್ತಿಯೇ ಆತ್ಮ, ಮನಸ್ಸು, ಸುಖ, ದುಃಖ, ಇಚ್ಛೆ, ಕಾಮ, ಕ್ರೋಧ ಮೊದಲಾದ ರೂಪಗಳನ್ನು ಹೊಂದುವುದು. ಸ್ಥೂಲ ವಸ್ತುಗಳಾದ ಭೂತಗಳು ಬೇರೆಬೇರೆಯಾದರೆ ಈ ಶಕ್ತಿಯೆಂಬ ಚೈತನ್ಯವು ಅಡಗಿಹೋಗುವುದು. ಇದೇ ಮರಣವು, ಇದೇ ಮೋಕ್ಷವು. ಭೂತಗಳ ಚಲನೆಯೇ ಜ್ಞಾನವೆಂದು ಇವರ ಅಭಿಪ್ರಾಯವಾದುದರಿಂದ ಭೂತಚೈತನ್ಯವಾದ, ಭೂತಸ್ಪಂದಧೀವಾದ ಎಂದು ಇದನ್ನು ಕರೆಯುತ್ತಾರೆ. ಶಾರೀರ ಶಾಸ್ತ್ರವೆಂಬ ವೈದ್ಯ ಶಾಸ್ತ್ರದಲ್ಲೂ ಪಿತ್ತದ್ರವ್ಯಪ್ರಕಾಶವೇ ಜ್ಞಾನವೆಂದು ಹೇಳಲ್ಪಟ್ಟಿರುತ್ತದೆ. ಚೈತನ್ಯವೇ ಇಲ್ಲವೆಂದು ಲೋಕಾನುಭವ ವಿರುದ್ಧವಾಗಿ ಯಾರೂ ಹೇಳುವುದಿಲ್ಲ. ಆದರೆ ಅದು ದೇಹಕ್ಕಿಂತಲೂ ಬೇರೆ ವಸ್ತುವಲ್ಲ ಎಂದು ವಿವಾದವು.

ಆಯುರಾರೋಗ್ಯೈಶ್ವರ್ಯ ಮೂಲಕ ಮೃಷ್ಟಾನ್ನ ಭೋಜನ, ಜನಾನುರಾಗ ಮೊದಲಾದ ವಿಷಯಸುಖವೇ ಸ್ವರ್ಗಾನುಭವವು. ವ್ಯಾಧಿ,

ದಾರಿದ್ರ್ಯ, ಹಿಂಸೆ ಮೊದಲಾದ ಉಪದ್ರವಗಳೇ ನರಕಾನುಭವವು. ವ್ರತೋಪವಾಸಾದಿಗಳಿಂದ ಶುಷ್ಕರಾಗುವವರು ಮೂರ್ಖರು. ಗೋಭೂದಾನಾದಿ ವಿಧಿಗಳು ಜನಾನುರಾಗಕ್ಕಾಗಿ ಏರ್ಪಟ್ಟು, ಕೊನೆಗೆ ಪುಣ್ಯವೆಂಬ ದರಿದ್ರರ ಸಂಕೇತಗಳಾದುವು. ಅಹಿಂಸೆ, ಸತ್ಯ, ಬ್ರಹ್ಮಚರ್ಯ, ವೈರಾಗ್ಯ ಮೊದಲಾದ ನಿಯಮಗಳು ಪರಸ್ಪರೋಪಕಾರಕ್ಕಾಗಿ ಏರ್ಪಟ್ಟು, ಪಾಪನಿವೃತ್ತಿಯೆಂದು ಅಶಕ್ತರಾದ ಬುದ್ಧಿವಂತರ ಏರ್ಪಾಡುಗಳಾದುವು. ಅಗ್ನಿಹೋತ್ರ ದೇವಾಲಯಾದಿ ಶಾಸ್ತ್ರಗಳು ಬುದ್ಧಿ ಪೌರುಷವಿಲ್ಲದವರ ಜೀವಿಕೆಗಳಾಗಿರುವುವು. ಮುಖ್ಯವಾಗಿ ಅರ್ಥಕಾಮಗಳೇ ಪುರುಷಾರ್ಥಗಳು. ಕೃಷಿ ವಾಣಿಜ್ಯ ದಂಡ ನೀತ್ಯಾದಿಗಳ ಶಿಕ್ಷೆಯಿಂದ ಅರ್ಥಕಾಮಗಳನ್ನು ಸಂಪಾದಿಸಿ ಯಾವಜ್ಜೀವವೂ ಸುಖವಾಗಿರುವುದೇ, ಇತರರನ್ನೂ ಸುಖವಾಗಿರಿಸುವುದೇ ಮನುಷ್ಯಜನ್ಮದ ಮುಖ್ಯಪ್ರಯೋಜನವು. ಈ ಸಿದ್ಧಾಂತವು ಪ್ರಕೃತದಲ್ಲಿ ಪ್ರತ್ಯಕ್ಷವಾಗಿರುವುದರಿಂದ ಇದರ ವಿಸ್ತರವು ಅನಾವಶ್ಯಕ.

## ಚಾರ್ವಾಕದರ್ಶನದ ವ್ಯಾಪ್ತಿ

ಈ ಚಾರ್ವಾಕದರ್ಶನವು ಪೂರ್ವಕಾಲದಲ್ಲಿ ವಿಶೇಷ ಪ್ರಚಾರದಲ್ಲಿತ್ತೆಂಬುದು ನಿಶ್ಚಯವು. ಈ ಅಭಿಪ್ರಾಯದಲ್ಲೇ ಪ್ರಾಚೀನ ಮೀಮಾಂಸಕರಾದ ಶಬರ, ಪ್ರಾಭಾಕರ ಮೊದಲಾದವರು ಬಹುಶಃ ಇರುವರು. ಜೀವಾತ್ಮರನ್ನೂ ಅವರಿಗೆ ಜನ್ಮಾಂತರವನ್ನೂ ಅಂಗೀಕರಿಸಿದರೂ ದೇವರಿಲ್ಲ, ದೇವಲೋಕವಿಲ್ಲ, ರಾಕ್ಷಸರಿಲ್ಲ, ನರಕಲೋಕವಿಲ್ಲ ; ಈ ಲೋಕದಲ್ಲೇ ಸುಖದುಃಖಾನುಭವಗಳು ಸ್ವರ್ಗ ನರಕಗಳು ; ವೇದೋಕ್ತವಾದ ಯಾಗ ದಾನ ಹೋಮಾದಿಗಳೇ ಧರ್ಮವು ; ಆ ವೇದದಲ್ಲೂ ನಾಲ್ಕರಲ್ಲಿ ಒಂದು ಭಾಗದಷ್ಟು ಬ್ರಾಹ್ಮಣ ವಾಕ್ಯಗಳೇ ಪ್ರಮಾಣವು ; ಬಾಕಿಯೆಲ್ಲಾ ಯಥಾಶ್ರುತಾರ್ಥದಲ್ಲಿ ತಾತ್ಪರ್ಯವಿಲ್ಲದವು; ಮಂತ್ರಗಳಿಗೆ ಅರ್ಥವೇ ಇಲ್ಲ; ಬರಿ ಉಚ್ಚಾರಣೆಯಿಂದಲೇ ಉಪಯೋಗವೆಂಬ ಅಭಿಪ್ರಾಯವೂ ಇತ್ತು ; ಅನ್ನಸತ್ರ, ಕೆರೆ, ಕೊಳ ಮೊದಲಾದ ಧರ್ಮಕಾರ್ಯಗಳು ಪರೋಪಕಾರವೇ ಹೊರತು ಧರ್ಮವಲ್ಲ— ಎಂದು ಶಬರಸ್ವಾಮಿಗಳು ಹೇಳುವರು. ಯಾಗಾದಿ

ಕರ್ಮಗಳೇ ಸುಖವೆಂಬ ಪಶುಪುತ್ರ ವೃಷ್ಟಿ ಅನ್ನ ಮೊದಲಾದುವುಗಳಿಗೆ ಕಾರಣವು. ಇವರಲ್ಲಿ ಕೆಲವರು ಅದೃಷ್ಟವೆಂಬ ಯಾಗಾದಿಪುಣ್ಯವನ್ನು ಮಾತ್ರ ಒಪ್ಪುತ್ತಾರೆ. ಪಾಪವೆಂಬ ಅದೃಷ್ಟವು ಇಲ್ಲ. ಹಿಂಸಾದಿಕರ್ಮಗಳು ನರಕವೆಂಬ ದುಃಖಕ್ಕೆ ಕಾರಣ ; ಕೆಟ್ಟ ಕೆಲಸಕ್ಕೆ ಇಹಲೋಕವಲ್ಲಿ ಆಗುವ ರಾಜಾದಿಶಿಕ್ಷೆಯೇ ನರಕ ಎಂದು ಅಭಿಪ್ರಾಯವು.

ದೇವರಿಲ್ಲದಿರುವಾಗ ದೇವದೇವನಾದ ಪರಮೇಶ್ವರನಿಲ್ಲ ; ದೇವತೆಗಳಿಗೆ ವಿಗ್ರಹಗಳಿಲ್ಲ ; ವಿಗ್ರಹಾರಾಧನೆ ಉಪಯೋಗವಿಲ್ಲ ; ನಾವು ಕೊಡುವ ನೈವೇದ್ಯವನ್ನು ಸ್ವೀಕರಿಸುವುದಿಲ್ಲ, ತೃಪ್ತಿಯಿಲ್ಲ, ಅನುಗ್ರಹನಿಗ್ರಹಗಳಿಲ್ಲ ಇತ್ಯಾದಿ ವಿಷಯಗಳೆಲ್ಲವೂ ಪ್ರಾಭಾಕರ ಗ್ರಂಥಗಳಾದ 'ಪ್ರಕರಣ ಪಂಚಿಕೆ' ಯಲ್ಲಿ ಈಗ ಸಿಕ್ಕುತ್ತವೆ. ಹೀಗಿರುವಲ್ಲಿ ಆಧುನಿಕ ದುರ್ವಾದಗಳಿಗೆ ಆಶ್ಚರ್ಯವೇನು? ಇದರಿಂದ ಚರಿತ್ರ ದೃಷ್ಟಿಯಲ್ಲಿ ಒಂದಂಶವು ತಿಳಿದುಬರುತ್ತದೆ—ಆರ್ಯರೆಂಬ ವೈದಿಕರು ಹೀಗೆ ಹೇಳಬೇಕಾಗಿದ್ದರೆ ಇವರ ಕಾಲಕ್ಕಿಂತಲೂ ಪೂರ್ವದಲ್ಲೇ ಆಗಮಸಂಪ್ರದಾಯವೂ, ವಿಗ್ರಹಾರಾಧನೆಯೂ ಭಾರತದೇಶದಲ್ಲಿ ಅನಾದಿಯಾಗಿತ್ತೆಂಬುದು ಸಿದ್ಧವು.

ಮತ್ತು ವೈದಿಕರಾದ ಕುಮಾರಿಲರು ಹೀಗೆ ಹೇಳುತ್ತಾರೆ—ಯುದ್ಧ ವರ್ಣನೆಗಳೂ ಅಸ್ತ್ರಶಸ್ತ್ರಗಳೂ ಭೀರುಗಳ ಪ್ರೋತ್ಸಾಹನೆಗಾಗಿ ; ಪುರಾಣ ಕಥೆಗಳೆಲ್ಲವೂ ನೀತಿಬೋಧಕಗಳು ; ಸೃಷ್ಟಿ ಪ್ರಲಯ ಮೊದಲಾದ ಕಥೆಗಳು ದೈವಶಕ್ತಿಯೆಂಬ ಕರ್ಮಮಹಿಮೆಯನ್ನು ತೋರಿಸುವುದಕ್ಕೆ ಹೊರಟಿವೆ; ಪ್ರಪಂಚಕ್ಕೂ ಸೂರ್ಯ ಚಂದ್ರಾದಿಗಳಿಗೂ ಸೃಷ್ಟಿಯಿಲ್ಲ, ಸರ್ವವೂ ಅನಾದಿ; ಆದಿಯಿಲ್ಲ, ಸರ್ವಜ್ಞರಿಲ್ಲ ; ಅಣಿಮಾದಿಸಿದ್ಧಿಗಳೆಲ್ಲವೂ ಚಮತ್ಕಾರಗಳು; ಮನುಷ್ಯರ ಜನ್ಮಪರಂಪರೆಗೆ ಪರ್ಯವಸಾನವೆಂಬ ಮೋಕ್ಷವಿಲ್ಲ—ಇತ್ಯಾದಿ, ಇತ್ಯಾದಿ.

ಈಗಿರುವ ಮೋಕ್ಷ ಶಾಸ್ತ್ರಗಳಲ್ಲಿ ಮೋಕ್ಷವೆಂಬುದಿಲ್ಲ ಎಂದು ಪೂರ್ವಪಕ್ಷ ಮಾಡಿಕೊಂಡು ಸಮಾಧಾನವನ್ನು ಹೇಳಿ ಮೋಕ್ಷವನ್ನು ಸಾಧಿಸಿರುತ್ತಾರೆ. ಈ ಪೂರ್ವಪಕ್ಷಕ್ಕೆ ಪ್ರಾಚೀನ ಮೀಮಾಂಸಕರೇ ಮೂಲವೆಂದು ಸ್ಪಷ್ಟವಾಗುತ್ತದೆ.

## ಮೋಕ್ಷವಿವಾದ

ಮೋಕ್ಷವಿಲ್ಲವೆಂಬ ಪೂರ್ವಪಕ್ಷದ ಸಾರಾಂಶ—ಅನಾದ್ಯನಂತಜನ್ಮಗಳಲ್ಲಿ ಸಂಪಾದಿಸಿರುವ ಕರ್ಮಗಳು ಫಲಾನುಭವದಿಂದ ಕಲ್ಪಕೋಟಿಸಹಸ್ರಗಳಾದರೂ ಮುಗಿಯುವ ಹಾಗಿಲ್ಲ. ಕರ್ಮಫಲವನ್ನು ಅನುಭವಿಸುವ ಕಾಲದಲ್ಲಿ ಮಾಡಲ್ಪಡುವ ಕರ್ಮಗಳು ರಾಶಿರಾಶಿಯಾಗಿ ಬೀಳುತ್ತವೆ. ಅನಾದಿ ಕಾಲದಿಂದ ಬಂದಿರುವ ಕರ್ಮವಾಸನೆ ಮುಂದೆ ಎಷ್ಟು ಕಾಲವಾದರೂ ವೃದ್ಧಿಯಾಗುವುದೇ ಹೊರತು ವಿನಾಶವಾಗುವುದು ಹೇಗೆ ? ವಿನಾಶವನ್ನು ಹೇಳುವ ಸಕಲಶಾಸ್ತ್ರಗಳೂ ಬರಿ ಕಲ್ಪನೆ.

ಸಾಂಖ್ಯಾದಿ ದರ್ಶನಗಳಲ್ಲಿ ಹೇಳಿರುವ ಮೋಕ್ಷ ಸ್ವರೂಪವು ಯಾರಿಗೂ ಬೇಡ, ಅಲ್ಲಿ ಯಾವ ಮಂಗಳವೂ ಇಲ್ಲ, ಯಾವ ಸುಖವೂ ಇಲ್ಲ, ಯಾವತ್ಕಾಲವೂ ಶೂನ್ಯವಾಗಿ ಗಾಢಾಂಧಕಾರದಲ್ಲಿರುವುದಕ್ಕಿಂತ, ಕಲ್ಲುಬಂಡೆಯ ಹಾಗೆ ಯಾವ ಜ್ಞಾನವೂ ಇಲ್ಲದೆ ಬಿದ್ದುಬಿಡುವುದಕ್ಕಿಂತ, ಬೇರೆ ಶಿಕ್ಷೆಯುಂಟೆ ? ಇಂತಹ ಮೋಕ್ಷವನ್ನು ಯಾವನೂ ಅಪೇಕ್ಷಿಸಲಾರನು. ಇದಕ್ಕಿಂತಲೂ ಸಂಸಾರವೇ ಉತ್ತಮ. ಇಲ್ಲಿ ಸ್ವಲ್ಪವಾದರೂ ಸುಖ ಇರುವುದು, ಇತ್ಯಾದಿ.

ಗೃಹಸ್ಥಾಶ್ರಮವೇ ಆಶ್ರಯವು. ಮೋಕ್ಷಾಶ್ರಮವೆಂಬ ಸಂನ್ಯಾಸಾಶ್ರಮವೇ ವೇದೋಕ್ತವಲ್ಲ. ಸ್ಮೃತ್ಯಾದಿಗಳಲ್ಲಿ ಹೇಳಿರುವ ಸಂನ್ಯಾಸಾಶ್ರಮವು ಗೃಹಸ್ಥಾಶ್ರಮದಲ್ಲಿ ಅಧಿಕಾರವಿಲ್ಲದಿರುವ ಕುರುಡ, ಕುಂಟ ಮೊದಲಾದವರ ಜೀವನೋಪಾಯವು. ಮನುಷ್ಯನು ಜನನವಾದ ಒಡನೆಯೇ ವೇದೋಕ್ತಋಣಾನುಬಂಧವೂ ಕ್ಲೇಶಾನುಬಂಧವೂ ಪ್ರವೃತ್ಯನುಬಂಧವೂ ಸಿದ್ಧವಾಗಿರುವುವು. ಎಂದರೆ, ಯಾಗಾದಿಕರ್ಮವನ್ನು ಯಾವಜ್ಜೀವವೂ ಅನುಷ್ಠಾನಮಾಡಬೇಕು, ಬಿಡಬಾರದೆಂಬುದು ಋಣಾನುಬಂಧವು. ದುಃಖ ಪರಂಪರೆಯೇ ಕ್ಲೇಶಾನುಬಂಧವು. ವಾಗ್ಬುದ್ಧಿಶರೀರಾದಿಗಳಿಂದ ವ್ಯಾಪಾರಗಳು ನಿವೃತ್ತಿಯಾಗದಿರುವಿಕೆಯೇ ಪ್ರವೃತ್ತ್ಯನುಬಂಧವು. ಹೀಗಿರುವಲ್ಲಿ ಮೋಕ್ಷಧರ್ಮಕ್ಕೆ ಅವಕಾಶವೆಲ್ಲಿ ? ಇತ್ಯಾದಿ.

ಜೀವಾತ್ಮರುಗಳಿಗೆ ಅವರವರ ಕರ್ಮಾಧೀನವಾಗಿ ಬರುವ ದೇಹವನ್ನು ದೇವ ಮನುಷ್ಯ ತಿರ್ಯಕ್ ಸ್ಥಾವರವೆಂದು ಸಾಮಾನ್ಯವಾಗಿ ನಾಲ್ಕು

ಪ್ರಕಾರ ಪುರಾಣಗಳಲ್ಲಿ ವಿಭಾಗಮಾಡಿರುತ್ತಾರೆ. ದೇವರೆಂದರೆ ಇಂದ್ರೋಪೇಂದ್ರಾದಿಗಳು. ನಾವೇ ಮನುಷ್ಯರು ತಿರ್ಯಕ್ಕು ಎಂದರೆ ಪಶುಪಕ್ಷಿ ಮೊದಲಾದುವು. ಸ್ಥಾವರವೆಂದರೆ ವೃಕ್ಷಗುಲ್ಮಲತೆ ಮೊದಲಾದುವು. ಈ ಮೀಮಾಂಸಕರು ಮನುಷ್ಯತಿರ್ಯಕ್ ಎಂಬ ಎರಡು ವಿಧಗಳನ್ನು ಮಾತ್ರ ಅಂಗೀಕರಿಸಿರುವರು. ದೇವಶರೀರವಿಲ್ಲದಿರುವುದರಿಂದ ವಿದ್ಯಾಧರ, ಅಪ್ಸರ ಯಕ್ಷ, ರಕ್ಷ, ಗಂಧರ್ವ, ಕಿನ್ನರ, ಪಿಶಾಚ, ಗುಹ್ಯಕ, ಸಿದ್ಧ, ಭೂತ ಮೊದಲಾದ ದೇವಜಾತಿಗಳಿಲ್ಲ. ವೃಕ್ಷಾದಿಗಳಲ್ಲಂತೂ ಜೀವಸಾನ್ನಿಧ್ಯವನ್ನು ಅವರು ನಿರಾಕರಿಸಿರುವರು.

ಆದುದರಿಂದ ಇವರ ಕಾಲಕ್ಕಿಂತಲೂ ಪೂರ್ವಕಾಲದಲ್ಲಿ ಪಶುಪಕ್ಷ್ಯಾದಿದೇಹಗಳಲ್ಲಿ ಜೀವಸಾನ್ನಿಧ್ಯವಿಲ್ಲವೆಂಬ ಅಭಿಪ್ರಾಯವಿದ್ದುದರಿಂದ ಆಹಾರದಲ್ಲೂ ಯಾಗಾದಿಗಳಲ್ಲೂ ಅವುಗಳನ್ನು ಪಯೋಗಿಸುತ್ತಿದ್ದರು. ಬರುತ ಬರುತ ಅವುಗಳಲ್ಲಿ ಕೂಡ ಸುಖದುಃಖಚಿಹ್ನೆಗಳನ್ನೂ, ಚೇಷ್ಟೆಯನ್ನೂ ಕಂಡು ಕೆಲವು ನಿರೂಪಕರು ಪ್ರಾಣಿಹಿಂಸೆಯನ್ನು ತ್ಯಾಗ ಮಾಡಿದರು. ಕೆಲವರು ಪೂರ್ವಾಭ್ಯಾಸದಿಂದ ಬಿಡದೆ ಇರಬಹುದು. ಆದುದರಿಂದಲೇ ಮಹಾಭಾರತಾದಿ ಪುರಾಣಗಳಲ್ಲಿ ಪ್ರಾಣಿಹಿಂಸೆಯ ವಿಷಯದಲ್ಲಿ ಮತಭೇದಗಳನ್ನು ಬಹುವಿಧವಾಗಿ ವಿಚಾರಮಾಡಿ ನಿವೃತ್ತಿಯೇ ಮುಖ್ಯಪಕ್ಷವೆಂದು ನಿರ್ಣಯಿಸಿರುತ್ತಾರೆ. ಈಗಲೂ ಈ ವಿಚಾರವು ನಡೆಯುತ್ತಲೇ ಇರುವುದು.

ಹಾಗೆಯೇ ಫಲಪುಷ್ಪಾದಿಗಳಲ್ಲಿಯೂ ಚೈತನ್ಯಶಕ್ತಿಯಿರುವುದೆಂದು ಪುರಾಣಗಳಲ್ಲೂ ಆಧುನಿಕ ಪರೀಕ್ಷಕರ ಪ್ರವಾದಗಳಲ್ಲೂ ತಿಳಿದುಬರುತ್ತದೆ. ಆದುದರಿಂದಲೇ ಸರ್ವಪ್ರಾಣಿಗಳಿಗೂ ಅಭಯಪ್ರದಾನವನ್ನು ಮಾಡಿರುವ ಸಂನ್ಯಾಸಿಗಳು ಪತ್ರಫಲಪುಷ್ಪಾದಿಗಳನ್ನು ಸ್ವಯಂ ಕೀಳಬಾರದೆಂದು ವಿಧಿಯಿರುವುದು. ಪ್ರಾಣಿಗಳಲ್ಲಿ ಚೈತನ್ಯಶಕ್ತಿಜ್ಞಾನವೂ ಆದರಿಂದ ಪ್ರಪಂಚೋಪಕಾರವೂ ಹೆಚ್ಚುತ ಹೆಚ್ಚುತ ಹಿಂಸೆಯಲ್ಲಿ ಪಾಪತಾರತಮ್ಯವು ಲೋಕದಲ್ಲೂ ಶಾಸ್ತ್ರದಲ್ಲೂ ಸ್ಪಷ್ಟವಾಗಿರುವುದು. ಆದುದರಿಂದಲೇ ಗೋಬ್ರಾಹ್ಮಣ ಹಿಂಸೆ ಬಹು ಪಾಪವೆಂದು ಪ್ರಸಿದ್ಧಿ.

ಹೀಗೆ ಚೈತನ್ಯಶಕ್ತಿಯಿಲ್ಲದಿರುವ ವಸ್ತುವೇ ಇಲ್ಲದಿರುವುದರಿಂದ ಮನು–"ಸ್ಥಾವರಂ ಜಙ್ಗಮಂ ಚೈವ ಸರ್ವಂ ಪ್ರಾಣಸ್ಯ ಭೋಜನಮ್"

(೪, ೮) ಎಂದು ಹೇಳುತ್ತಾರೆ. ಚರಕ್ಕೆ ಅಚರವು, ಹಲ್ಲಿರುವುದಕ್ಕೆ ಅದಿಲ್ಲದಿರುವುದು, ಕೈಯಿರುವುದಕ್ಕೆ ಅದಿಲ್ಲದಿರುವುದು, ಸಪಾದಕ್ಕೆ ಅಪಾದವು, ದ್ವಿಪಾದಕ್ಕೆ ಚತುಷ್ಪಾದವು, ಶೂರನಿಗೆ ಭೀರುವು, ಪ್ರಬಲನಿಗೆ ದುರ್ಬಲನು —"ಜೀವೋ ಜೀವಸ್ಯ ಜೀವನಮ್" ಎಂದು ಶ್ರೀಭಾಗವತದಲ್ಲಿ ವಿಸ್ತರಿಸಿರುವರು. ಏವಂಚ, ಸ್ಥೂಲವಾಗಲಿ ಸೂಕ್ಷ್ಮವಾಗಲಿ ಜೀವಕ್ಕೆ ಜೀವವೇ ಜೀವನವು.

ಹೀಗೆ ಲೋಕಾಯತಮತದಲ್ಲಿರುವ ಬಹುವಿಷಯಗಳನ್ನು ಪ್ರಾಚೀನ ಮೀಮಾಂಸಕರು ಒಪ್ಪಿರುವುದರಿಂದ ಇವರನ್ನು ಇತರರು ಅರ್ಧಲೋಕಾಯತರೆಂದು ಕರೆಯುತ್ತಾರೆ. ನವೀನ ಮೀಮಾಂಸಕರಾದ ಕುಮಾರಿಲ ಮೊದಲಾದವರು ಈ ಅಪವಾದವನ್ನು ಒಪ್ಪಿಕೊಂಡು ಪರಿಹಾರಮಾರ್ಗಗಳನ್ನು ತೋರಿಸುತ್ತಾರೆ.

### ಚಾರ್ವಾಕಮತದಲ್ಲಿರುವ ಗುಣಾಂಶ

ಈ ಚಾರ್ವಾಕಮತವನ್ನು ಎಲ್ಲರೂ ಖಂಡಿಸಿರುವರು. ಇದರಲ್ಲಿರುವ ಗುಣಾಂಶವನ್ನು ಗಮನಿಸಬೇಕು. ಅದೆಂತೆಂದರೆ—ಈ ದರ್ಶನವು ಪರಮ ಶಾಂತಿಗೆ ಕಾರಣವಾಗಿರುವುದು ಈ ಮತದವರು ನಶ್ವರವಾದ ದೇಹಕ್ಕಿಂತಲೂ ಬೇರೆಯಾದ ಶಾಶ್ವತನಾದ ಆತ್ಮನನ್ನು ಒಪ್ಪುವುದಿಲ್ಲ. ಎಂದರೆ ಎಲ್ಲಾ ಅನರ್ಥಕ್ಕೂ ಕಾರಣವಾದ ಅಹಂಕಾರವೆಂಬ ಅಭಿಮಾನವನ್ನೇ. ನಿರ್ಮೂಲ ಮಾಡಿದ ಹಾಗಾಯಿತು. ಶಾಶ್ವತವಾದ ಅಹಂಕಾರವಿದ್ದಲ್ಲಿ ವೈರಾಗ್ಯ, ಶಾಂತಿ ಎಂಬುದು ಹೇಗೆ?

ಮತ್ತು ಇವರು ಕಾರ್ಯಕಾರಣಭಾವವನ್ನು ಒಪ್ಪುವುದಿಲ್ಲ. ಇವರದು ಸ್ವಭಾವವಾದವು. ಎಂದರೆ, ಪ್ರತ್ಯಕ್ಷವಾದ ಕಾರಣಶಕ್ತಿಯೆಂಬ ವಸ್ತು ಸ್ವಭಾವದಿಂದಲೇ ಪರಿಣಾಮಗಳು ಪ್ರತ್ಯಕ್ಷಗಳಾಗಿರುತ್ತವೆ. ಒಂದು ಬೀಜವು ಭೂಮಿಯಲ್ಲಿ ಬಿದ್ದರೆ ಬೀಜಶಕ್ತಿಯಿಂದಲೇ ಮೊಳಕೆಯಾಗಿ ಎಲೆಗಳಾಗಿ ದಂಟಾಗಿ ಪುಷ್ಪವಾಗಿ ಫಲವಾಗುತ್ತದೆ. ಇದಕ್ಕೆ ಸ್ವಭಾವವಾದವೆಂದು ಹೆಸರು. ಇಲ್ಲಿ ನಿಮಿತ್ತ ಕಾರಣವು ಕಂಡುಬರುವುದಿಲ್ಲ. ಇದೇ ನಿರಪೇಕ್ಷವಾದವು. ಎಂದರೆ, ಒಬ್ಬ ಮನುಷ್ಯನ ಬುದ್ಧಿಪೂರ್ವಕ ಇಚ್ಛಾ

ಸಂಕಲ್ಪ ಪ್ರಯತ್ನಗಳಿಂದ ಈ ಪರಿಣಾಮ ಪರಂಪರೆ ಉಂಟಾಗುವ ಹಾಗೆ ಕಂಡುಬರುವುದಿಲ್ಲ. ಇವಕ್ಕೆ ನಿಯಮಿತವಾದ ನಿಯಾಮಕವಿಲ್ಲದಿರುವುದರಿಂದ ಇವೇ ಯಾದೃಚ್ಛಿಕವಾದವು. ನಮ್ಮ ಪ್ರಾರ್ಥನೆಯಿಲ್ಲದೆಯೇ ನಮಗೆ ತಿಳಿಯದೆಯೇ ಸುಖದುಃಖಗಳು ಅನುಭವಗೋಚರವಾದುದರಿಂದ ಇವೇ ಪ್ರಾಸಂಗಿಕವಾದವೂ ಆಗುತ್ತವೆ. ವಸ್ತುಗಳಿಗೆ ದೇಶನಿಯಮದ ಹಾಗೆ ಕಾಲನಿಯಮವಾದರೆ ಇವೇ ಕಾದಾಚಿತ್ಕವಾದವಾಗುತ್ತವೆ. ಇವೆಲ್ಲವೂ ಸೇರಿದರೆ ಆಕಸ್ಮಿಕತಾವಾದ ಎಂದು ಇವರ ಅಭಿಪ್ರಾಯವು.

ಇಂತಹ ಸಿದ್ಧಾಂತದಲ್ಲಿ ಮನುಷ್ಯನಿಗೆ ಬರುವ ಸುಖದುಃಖಾದಿಗಳು ವಸ್ತುಸ್ವಭಾವದಿಂದುಂಟಾಗುವುದೇ ವಿನಾ ಮತ್ತೊಬ್ಬ ಪುರುಷನ ಪ್ರಯತ್ನದಿಂದ ಬರುವುದಿಲ್ಲ. ಈ ನಿಶ್ಚಯವು ದೃಢವಾಗಿರುವುದಾದರೆ ಪರಸ್ಪರ ದ್ವೇಷವೆಂಬುದಕ್ಕೆ ಅವಕಾಶವೆಲ್ಲಿ ? ದ್ವೇಷವಿಲ್ಲದೆ ರಾಗವಿಲ್ಲ. ರಾಗದ್ವೇಷಗಳಿಲ್ಲದೆ ಯಾವ ಮನೋದೋಷಗಳಿಗೂ ಮಾರ್ಗವಿಲ್ಲ. ಇವಕ್ಕಿಂತಲೂ ಶಾಂತಿಯೆಂಬುದು ಎಂತಹುದು ?

ಮನುಷ್ಯನ ಸಂಕಲ್ಪ ಪ್ರಯತ್ನಗಳು ಕಾರ್ಯಗಳಿಗೆ ಕಾರಣವಲ್ಲವೇ ಹೋದರೆ ಕೃಷಿವಾಣಿಜ್ಯಾದಿ ಪ್ರಯತ್ನಗಳು ವ್ಯರ್ಥವಲ್ಲವೇ ? ಎಂಬ ಆಕ್ಷೇಪವಿರುತ್ತದೆ ಬೀಜಗಳಲ್ಲಿ ಅಂಕುರಾದಿ ಪರಿಣಾಮಶಕ್ತಿ ಸಹಜವಾಗಿರುವುದು. ಬೀಜಗಳು ಮನೆಯಲ್ಲಿರುವುದರಿಂದ ಶಕ್ತಿ ತಡೆಯಲ್ಪಟ್ಟಿರುವುದು. ನೆಲದಲ್ಲಿ ಬೀಜವನ್ನು ಚೆಲ್ಲುವುದರಿಂದ ತಡೆಯನ್ನು ನಿವಾರಣೆ ಮಾಡುವುದಕ್ಕೆ ಪ್ರಯತ್ನವೇ ಹೊರತು ಪರಿಣಾಮಕ್ಕೆ ಕಾರಣವಲ್ಲವೆಂದು ಸಮಾಧಾನವು. ಗದ್ದೆಗೆ ನೀರು ಹಾಯಿಸುವವನು ತಡೆಯಾಗಿರುವ ಗನಿಮೆಯನ್ನು ಮಾತ್ರ ತೆಗೆಯುವನು. ನೀರು ತನ್ನ ಸ್ವಭಾವದಿಂದಲೇ ಗದ್ದೆಯನ್ನು ಹಾಯುವುದಿಲ್ಲವೇ ?

ಪ್ರತಿಬಂಧಕನಿವಾರಣೆಗಾದರೂ ಪುರುಷಪ್ರಯತ್ನವು ಬೇಕಾಗಿದೆಯಲ್ಲ? ಎಂದರೆ, ಪ್ರತಿಬಂಧಕವಿಲ್ಲದಿರುವ ಸ್ಥಳದಲ್ಲಿ ಸ್ವಭಾವದಿಂದಲೇ ಪರಿಣಾಮವು ನಡೆಯುವಲ್ಲಿ ಪ್ರತಿಬಂಧಕನಿವಾರಣೆ ಅಷ್ಟು ಮುಖ್ಯವಲ್ಲ. ಬೀಜಶಕ್ತಿಯಿಲ್ಲದ ಸ್ಥಲದಲ್ಲಿ ಎಷ್ಟು ಪ್ರತಿಬಂಧಕನಿವಾರಣೆಯಾದರೂ ಏನಾದರೂ ಫಲವುಂಟೇ ? ಆದುದರಿಂದ ಪುರುಷಪ್ರಯತ್ನವು ಅನ್ಯಥಾ ಸಿದ್ಧವು ಎಂದರೆ ಕಾರಣಗಳಲ್ಲಿ ಸೇರಲರ್ಹವಲ್ಲವೆಂದು ತಾತ್ಪರ್ಯವು.

ಈ ಚಾರ್ವಾಕದರ್ಶನದಲ್ಲಿ ಬೇಕಾದಷ್ಟು ದೂಷಣಗಳಿರಲಿ, ಮುಖ್ಯವಾಗಿ ಪರರಲ್ಲಿ ರಾಗದ್ವೇಷಗಳನ್ನು ಅಡಗಿಸಿದರೆ ಇದಕ್ಕಿಂತಲೂ ದರ್ಶನೋದ್ದೇಶವು ಬೇರೆ ಯಾವುದಿರುವುದು? ಆದುದರಿಂದ ಚಾರ್ವಾಕರು ಅತಿವಾದದಿಂದ ಶಾಂತಿಯನ್ನುಪದೇಶಿಸಿರುವರೆಂದು ಅಭಿಪ್ರಾಯವಾಗುತ್ತದೆ. ಬೌದ್ಧಮತವು ಸಹ ಉತ್ಕಟ ವೈರಾಗ್ಯವನ್ನುಪದೇಶಿಸುವುದಕ್ಕಾಗಿ ಉಪನಿಷತ್ತುಗಳ ಮೂಲಕವಾಗಿಯೇ ಹೊರಟು ಇರುವುದೆಂದು ಕುಮಾರಿಲ ಭಟ್ಟಾಚಾರ್ಯರು ಬರೆಯುತ್ತಾರೆ.

ಪ್ರಾಚೀನ ಕರ್ಮಗಳೆಂಬ ಅದೃಷ್ಟವೋ, ಸರ್ವಶಕ್ತನಾದ ಪರಮೇಶ್ವರನೋ ಮನುಷ್ಯನ ಸುಖದುಃಖಗಳಿಗೆ ಕಾರಣವೆಂದು ಆಸ್ತಿಕ ದರ್ಶನಗಳು ಹೇಳುವುದು ಸಹ ಪರರಲ್ಲಿ ದ್ವೇಷವನ್ನು ಮಾಡದಿರುವುದಕ್ಕಾಗಿಯೇ ಎಂದು ತಿಳಿಯಬೇಕು.

ಈ ಚಾರ್ವಾಕ ವಿಷಯದಲ್ಲಿ 'ಮಹಾಭಾರತ'ದಲ್ಲಿ ಒಂದು ಕಥೆ ಇರುವುದು. ಮಹಾಭಾರತ ಯುದ್ಧವಾದ ಮೇಲೆ ಧರ್ಮರಾಜನು ಪಟ್ಟಾಭಿಷಿಕ್ತನಾಗಿ ಒಂದು ದಿನ ಸಭೆಯಲ್ಲಿರುವಾಗ ದುರ್ಯೋಧನನ ಮಿತ್ರನಾದ ಚಾರ್ವಾಕನೆಂಬ ರಾಕ್ಷಸನು ಬಂದು—ಅಯ್ಯಾ, ಮಹಾರಾಜನೇ, ನೀನು ಮಹಾಪಾಪಿಷ್ಠನು: ನಿನ್ನ ಮುಖವನ್ನು ನೋಡಬಾರದು; ಕೇವಲ ರಾಗಾಂಧನಾಗಿ ಪ್ರಪಂಚವನ್ನೆಲ್ಲಾ ಸ್ತ್ರೀಬಾಲಶೇಷವಾಗಿ ಹಾಳು ಮಾಡಿದೆಯಲ್ಲಾ; ಇಷ್ಟು ಜನರನ್ನೂ ಕೊಂದು ರಕ್ತಮಯವಾದ ರಾಜ್ಯಭೋಗವನ್ನು ಅನುಭವಿಸುವುದಕ್ಕಿಂತಲೂ ನರಕಾನುಭವವು ಉತ್ತಮವಲ್ಲವೇ ? ಯುದ್ಧದಲ್ಲಿ ಸತ್ತವರಿಗೆ ಸ್ವರ್ಗ ಬರುವುದೆಂದು ಪ್ರೋತ್ಸಾಹ ಮಾಡಿ ಪ್ರಪಂಚವನ್ನೇ ವಿನಾಶ ಮಾಡಿದೆ, ಎಂದು ಬಹುವಿಧವಾಗಿ ದೂಷಣೆ ಮಾಡಿದನು. ಅನಂತರ ಅಲ್ಲಿದ್ದ ಬ್ರಾಹ್ಮಣರು ಶಾಪದಿಂದ ಈ ರಾಕ್ಷಸನನ್ನು ಕೊಂದುಬಿಟ್ಟರು.

ಈ ಕಥೆಯಿಂದ ಅನೇಕ ನೀತಿಗಳು ಸೂಚಿಸಲ್ಪಟ್ಟರೂ ಪ್ರಕೃತಕ್ಕೆ ಒಂದು ನೀತಿ ತೋರುತ್ತದೆ. ಚಾರ್ವಾಕಮತದಲ್ಲೂ ಪ್ರಪಂಚವನ್ನು ಸುಖವಾಗಿಟ್ಟುಕೊಂಡು ತಾವೂ ಸುಖವಾಗಿರಬೇಕು; ಕೇವಲ ತಮ್ಮ ಸುಖಕ್ಕೋಸ್ಕರವೇ ಪ್ರಪಂಚವನ್ನು ಹಿಂಸಿಸಬಾರದು ಎಂಬ ಪ್ರಪಂಚಾನುಗ್ರಹ ದೃಷ್ಟಿ ಇರುವುದು.

## ಚಾರ್ವಾಕಮತನಿದಾನ

ಈ ಅಸ್ತಿನಾಸ್ತಿಮತಗಳಲ್ಲಿ ಯಾವುದು ಮೊದಲೆಂದು ಪ್ರಶ್ನೆ ಬಂದರೆ, ಆಸ್ತಿಕಮತದಲ್ಲಿ ನಾಸ್ತಿಕ ಖಂಡನೆಯೂ ನಾಸ್ತಿಕ ಮತದಲ್ಲಿ ಆಸ್ತಿಕ ಖಂಡನೆಯೂ ಇರುವುದರಿಂದ ಒಂದಕ್ಕೊಂದು ಪ್ರಸಕ್ತಿಯಿಲ್ಲದೆ ವಿಭಾಗಕ್ಕೆ ಅವಕಾಶವೇ ಇರಲಾರದಾದ ಕಾರಣ ಅನಾದಿಕಾಲದಿಂದ ಈ ಅಭಿಪ್ರಾಯಗಳು ಇದ್ದುವೆಂದು ತಿಳಿಯಬೇಕು. ಆದರೂ ನಾಸ್ತಿಯೆಂಬ ಅಭಿಪ್ರಾಯಕ್ಕೆ ಕಾರಣವು ಹೀಗಿರಬಹುದು—ಸರ್ವ ಪ್ರಾಣಿಗಳಿಗೂ ಆಲಸ್ಯವೆಂಬ ಸೋಮಾರಿತನ ಸಹಜ. ಅದರಲ್ಲೂ ಮನುಷ್ಯರಿಗೆ ಇತರ ಚಮತ್ಕಾರಗಳಂತೆ ಆಲಸ್ಯ ಅಧಿಕ. ಎಂತಹ ಉದ್ಯೋಗದ ಜವಾಬ್ದಾರಿಯುಳ್ಳ ಮನುಷ್ಯನಾದರೂ ಆಲಸ್ಯಕ್ಕೆ ಅವಕಾಶವಿದ್ದರೆ ಅದನ್ನು ಉಪಯೋಗಿಸಿಕೊಳ್ಳದೆ ಇರುವುದು ಅತ್ಯಪೂರ್ವ. ಇದು ಸ್ವಭಾವವಾದರೆ ಇದಕ್ಕೆ ಪ್ರತಿಯಾದದ್ದು ಪ್ರವೃತ್ತಿ, ಚಟುವಟಿಕೆ. ಇದಕ್ಕೆ ಎರಡು ಕಾರಣಗಳುಂಟು—ಒಂದನೆಯದು ಆಶೆ, ಎರಡನೆಯದು ಭಯ. ಶಾಸ್ತ್ರದಿಂದುಂಟಾಗುವ ಪ್ರವೃತ್ತಿಯಲ್ಲೂ ಒಬ್ಬರು ಆಶೆಯನ್ನೂ ಮತ್ತೊಬ್ಬರು ಭಯವನ್ನೂ ಮುಂದಿಡುತ್ತಾರೆ. "ನಹಿ ವಿಧಿಶತೇನಾಪಿ ತಥಾ ಪ್ರವರ್ತತೇ ಯಥಾ ಲೋಭೇನ." ಆಶೆಯಿಂದ ಹೇಗೆ ಪ್ರವೃತ್ತಿಯೋ ಹಾಗೆ ನೂರು ಶಾಸ್ತ್ರಗಳಿದ್ದರೂ ಇಲ್ಲವೆಂದು ಕುಮಾರಿಲರು ಫಲದೃಷ್ಟಿಯಿಂದ ಹೇಳುತ್ತಾರೆ. "ಭಯಾತ್ ಪ್ರವೃತ್ತಿಃ ಧ್ರುವಭಾವಿನೀ" ಭಯದಿಂದ ಪ್ರವೃತ್ತಿ ತಪ್ಪದೇ ಬರುವುದೆಂದು ಫಲದೃಷ್ಟಿಗೆ ಪ್ರತಿಯಾಗಿ ಪ್ರಾಭಾಕರರು ಹೇಳುವರು. ಈ ಎರಡು ಪಕ್ಷಗಳಲ್ಲೂ ಆಲಸ್ಯಕ್ಕೆ ಅವಕಾಶವು ಇಲ್ಲದಿರುವುದಿಲ್ಲ, ಹೇಗಾದರೂ ಆಲಸ್ಯಪಕ್ಷದಲ್ಲಿ ಚಿತ್ತವಿಕ್ಷೇಪವೆಂಬ ಮಾನಸಾಯಾಸವಿಲ್ಲ.

ಹೀಗಾದರೆ ಶಾಶ್ವತನಾದ, ಅನಂತಜನ್ಮಾಂತರಗಳಿಗೆ ಅರ್ಹನಾದ ದೇಹಾತಿರಿಕ್ತ ಆತ್ಮನೆಂಬ ವಸ್ತುವಿದ್ದರೆ, ಸುಖದುಃಖಗಳೆಲ್ಲವೂ ಅವನಿಗೇ ಸೇರಿದುದಾದರೆ, ಅವನನ್ನು ಸರ್ವದಾ ಕಷ್ಟವಿಲ್ಲದೆ ಸುಖದಲ್ಲೇ ಇಡಬೇಕಾದರೆ, ಅದಕ್ಕೆ ಉಪಾಯವನ್ನು ಹುಡುಕಬೇಕಾದರೂ ಮನಸ್ಸಿಗೆ ಎಷ್ಟು ಯೋಚನೆಯುಂಟಾಗುತ್ತದೆ ? ಭಾರವಾಗುತ್ತದೆ ? ಭಯವಾಗುತ್ತದೆ ? ನೋಡಿದಿರಾ ? ಇದಕ್ಕಾಗಿಯೇ ಶಾಶ್ವತ ಸುಖವೋ. ಶಾಶ್ವತ ದುಃಖ

ನಿವೃತ್ತಿಯೋ, ಸರ್ವೈಶ್ವರ್ಯವೋ, ಸರ್ವ ಶೂನ್ಯವೋ ಲಕ್ಷಣವಾಗಿರುವ ಮೋಕ್ಷವಾದಗಳು ಉದಯಿಸಿದವು. ಇಂತಹ ಮೋಕ್ಷವಾದಗಳಲ್ಲಿ ಸಾಧನ ಗಳನ್ನು ಹುಡುಕುತ್ತಾ ಮನೆ ಬೇಡ, ಮಠ ಬೇಡ, ಮಕ್ಕಳು ಬೇಡ, ಕೊನೆಗೆ ತಿಂಡಿಯೂ ಬೇಡ, ತೀರ್ಥವೂ ಬೇಡವೆಂದು ಚಿಂತಾಕ್ರಾಂತರಾಗಿ, ವೈಖಾನ ಸರು ವಾಲಖಿಲ್ಯರು ಮೊದಲಾದ ಮಹರ್ಷಿಗಳಾಗಿರುವರು. ಇಂತಹ ತೊಂದರೆಗಳಾವುದೂ ಇಲ್ಲದೆ ಬದುಕಿರುವವರೆಗೆ ನಿಶ್ಚಿಂತೆಯಾಗಿರುವಂತಹ ದೇಹಾತ್ಮವಾದದಲ್ಲಿ ಆಲಸ್ಯವಿಲಾಸವು ಎಷ್ಟು ದೂರ ಹೋಗಿರುತ್ತದೆ ಎಂಬುದನ್ನು ಯೋಚಿಸಬಹುದು. ಆದುದರಿಂದ ನಾಸ್ತಿಪಕ್ಷಕ್ಕೆ ಆಲಸ್ಯವೇ ಮೂಲಕಾರಣವು.

## ಚಾರ್ವಾಕಮತನಿರಾಸ ಸಾರಾಂಶ

ಇಂದ್ರಿಯಗಳೆಂಬ ಚಕ್ಷುಸ್ಸು ಮೊದಲಾದುದು ಪ್ರತ್ಯಕ್ಷಪ್ರಮಾಣವು. ಅದರಿಂದ ಬರುವ ಜ್ಞಾನವೇ ನಂಬಲರ್ಹವು, ಸರಿಯಾದುದು. ಯುಕ್ತಿ ಯೆಂಬ ಅನುಮಾನಪ್ರಮಾಣವೂ, ಶಾಸ್ತ್ರವೆಂಬ ಆಗಮವೂ ನಂಬಲರ್ಹ ವಾದುದಲ್ಲ, ಸರಿಯಾದ ಪ್ರಮಾಣವಲ್ಲ. ಆದುದರಿಂದಲೇ ಲೋಕದಲ್ಲಿ ಅನುಮಾನವೆಂದರೆ ಸಂದೇಹವೆಂದೇ ಅರ್ಥವು. ಹಾಗೆ ಆಗಮವೆಂಬ ಶಬ್ದವು "ಕೇಳಿದುದೋ ? ನೋಡಿದುದಲ್ಲ" ಎಂದು ಹಾಸ್ಯಾಸ್ಪದವಾಗಿರುತ್ತದೆ.

ಇತರರ ದರ್ಶನಗಳಲ್ಲಾದರೋ ಪ್ರತ್ಯಕ್ಷಕ್ಕಿಂತಲೂ ಯುಕ್ತಿಯೆಂಬ ಅನುಮಾನಕ್ಕೆ ಹೆಚ್ಚಿನ ಪ್ರಾಬಲ್ಯವನ್ನು ತಾರ್ಕಿಕರು ಕೊಡುವರು. ಎಲ್ಲ ಕ್ಕಿಂತಲೂ ಆಗಮವು ಮುಖ್ಯವೆಂದು ವೈದಿಕರು ಅಂಗೀಕರಿಸಿರುವರು.

ಚಾರ್ವಾಕವಾದವನ್ನು ನಿರಾಕರಿಸುವವರು ಹೇಳುವುದೇನೆಂದರೆ— ಗುರುಶಿಷ್ಯರು, ಪಿತಾಪುತ್ರರು, ಭಾರ್ಯಾಭರ್ತೃಗಳು, ಸ್ವಾಮಿಭೃತ್ಯರು, ವಾದಿಪ್ರತಿವಾದಿಗಳು, ಮಧ್ಯಸ್ಥರು ಇವರೆಲ್ಲ ಪರಸ್ಪರ ಅಭಿಪ್ರಾಯಗಳನ್ನು ತಿಳಿದುಕೊಂಡು ಲೋಕದಲ್ಲಿ ವ್ಯವಹರಿಸುತ್ತಿದ್ದಾರೆ. ಪರಸ್ಪರ ಮನಸ್ಸಿ ನಲ್ಲಿರುವ ಅಭಿಪ್ರಾಯವು ವಾಕ್ಯದಿಂದಲೇ ತಿಳಿಯಬೇಕಾಗಿರುತ್ತದೆ. ಅಂತಹ ವಾಕ್ಯ ಪ್ರಯೋಗಕ್ಕೆ ಆ ಅಭಿಪ್ರಾಯವೇ ಕಾರಣವು. ಇದೇ ಕಾರ್ಯ ಲಿಂಗಕಾನುಮಾನ, ಎಂದರೆ ಕಾರ್ಯದಿಂದ ಕಾರಣವನ್ನು ತಿಳಿಯುವುದು.

ಧೂಮದಿಂದ ಅಗ್ನಿಯನ್ನು ತಿಳಿಯುವುದು; ಧೂಮವು ಅಗ್ನಿಯಿಂದ ಹುಟ್ಟಿ
ದುದು, ಆದುದರಿಂದ ಧೂಮವು ಕಾರ್ಯವು, ಅಗ್ನಿಯೇ ಕಾರಣವು.
ಹೀಗೆ ನದಿಯಲ್ಲಿ ಪ್ರವಾಹವನ್ನು ನೋಡಿ ಮೇಲುಭಾಗದಲ್ಲಿ ಮಳೆಯಾಗಿದೆ
ಯೆಂದು ತಿಳಿಯುವುದು. ಇವು ಉದಾಹರಣೆಗಳು.

ಮತ್ತು ಪರಸ್ಪರ ಮನಸ್ಸಿನಲ್ಲಿರುವ ಸುಖದುಃಖ ಪ್ರೀತಿಕೋಪರಾಗ
ದ್ವೇಷ ಇಷ್ಟಾನಿಷ್ಟಗಳೇ ಮೊದಲಾದ ಒಳಗಿರುವ ಭಾವಗಳೆಲ್ಲವೂ ಪರರಿಗೆ
ಕಣ್ಣೀರು ರೋದನ ರೋಮಾಂಚ ಮೊದಲಾದ ಕಾರ್ಯಕಾರಣಭಾವದಿಂದ
ತಿಳಿಯಬೇಕಾಗಿರುತ್ತವೆ. ಈ ಕಾರ್ಯಕಾರಣಭಾವ ವಿಜ್ಞಾನವೇ ಅನು
ಮಾನವೆನಿಸುವುದು. ಇವೇ ನ್ಯಾಯಗಳು, ಇವೇ ಯುಕ್ತಿಗಳು. ಇವು
ಉಪಯೋಗವಿಲ್ಲದಿದ್ದರೆ ಚಾರ್ವಾಕರು ಹೇಗೆ ಮನುಷ್ಯರಾಗುವರು?

ಪಶು ಪಕ್ಷಿ ಮೃಗ ಮೊದಲಾದುವು ಸಹ ಇಂಗಿತವೆಂಬ ಚೇಷ್ಟೆ
ಯಿಂದಲೂ ಧ್ವನಿಯೆಂಬ ಶಬ್ದದಿಂದಲೂ ಪರಸ್ಪರ ಇತರ ಜಾತೀಯರ ಅಭಿ
ಪ್ರಾಯಗಳನ್ನು ತಿಳಿದುಕೊಳ್ಳುತ್ತವೆ. ಇದು ಪ್ರತ್ಯಕ್ಷ ಪ್ರಮಾಣವಲ್ಲ.
ಅನುಮಾನ ಶಬ್ದಗಳೇ ಆಗಿರುತ್ತವೆ. ಆದುದರಿಂದ ಕೆಲವು ಯುಕ್ತಿಗಳೂ
ಕೆಲವು ವಾಕ್ಯಗಳೂ ಆಭಾಸವಾದಮಾತ್ರಕ್ಕೆ ಸಕಲವೂ ತಪ್ಪು ಎಂಬುದು
ವಿಚಾರಪರರಿಗೆ ಸಮ್ಮತವಾಗಲಾರದು.

ಪ್ರತ್ಯಕ್ಷವೂ ಕೆಲವು ವೇಳೆ ಆಭಾಸವಾಗುವುದು. ವಾಕ್ಯವೆಂಬ
ಶಬ್ದವೇ ಭಾಷೆ. ಅದು ಉಪಯೋಗವಿಲ್ಲದಿದ್ದರೆ ಚಾರ್ವಾಕರಿಗೆ ಮೌನವೇ
ಗತಿಯಾಗುತ್ತದೆ. ಕೋಪತಾಪಾದಿಗಳಿಗೆ ಅವಕಾಶವಿಲ್ಲ. ಕೊನೆಗೆ ಆಹಾ
ರಾದಿ ವ್ಯವಹಾರಗಳು ಸಹ ಪೂರ್ವಾಪರಜ್ಞಾನವಿಲ್ಲದೆ ಸಾಧ್ಯವಿಲ್ಲ.

ಈಗ ಸುಶಿಕ್ಷಿತ ಚಾರ್ವಾಕರೆಂಬ ಕೆಲವು ಗ್ರಂಥಕಾರರು ಅನುಮಾನಾ
ಗಮಗಳನ್ನು ಅಂಗೀಕರಿಸಿರುವರು. ಅವರು ಹೇಳುವುದೇನೆಂದರೆ—ನಮ್ಮ
ಪ್ರತ್ಯಕ್ಷಕ್ಕೆ ಸಂವಾದಬರುವ ಅಂದರೆ ಪ್ರತ್ಯಕ್ಷಕ್ಕೆ ಗೋಚರವಾಗತಕ್ಕ ವಿಷಯ
ಗಳಲ್ಲಿ ಅನುಮಾನಾಗಮಗಳಿಗೆ ಅವಕಾಶವುಂಟು. ಅತ್ಯಂತ ಪರೋಕ್ಷವಾದ
ಆತ್ಮ, ಪರಮಾತ್ಮ, ಸ್ವರ್ಗ, ನರಕ, ಪುಣ್ಯ, ಪಾಪ, ದೇವ, ರಾಕ್ಷಸ ಮೊದ
ಲಾದ ವಿಷಯಗಳು ಯಾವಾಗಲೂ ಯಾರಿಗೂ ಅನುಭವಗೋಚರವಾಗುವ
ವಾಗಿಲ್ಲ. ಅಂತಹ ವಿಷಯಗಳಲ್ಲಿ ಯುಕ್ತಿ ಆಗಮಗಳು, ವಿಶ್ವಾಸಕ್ಕೆ ಅರ್ಹ

ವಲ್ಲವೆಂದು ಹೇಳುತ್ತಾರೆ. ಯುಕ್ತಿಯಿಂದಲೇ ಅತ್ಯಂತ ಪರೋಕ್ಷವನ್ನು ನಂಬುವವರು ತಾರ್ಕಿಕರು. ವೈದಿಕರು ಯುಕ್ತಿಯಿಂದ ಒಪ್ಪುವುದಿಲ್ಲ. ಶಾಸ್ತ್ರದಿಂದ ಅಂತಹ ವಿಷಯಗಳನ್ನು ನಂಬುತ್ತಾರೆ. ಚಾರ್ವಾಕೇತರ ದರ್ಶನಗಳಲ್ಲೇ ಪರಸ್ಪರ ವೈಚಿತ್ರ್ಯಗಳಿರುವುದರಿಂದ ಚಾರ್ವಾಕರಲ್ಲಿ ಅವು ಇರುವುದು ಆಶ್ಚರ್ಯವಲ್ಲ.

ಮುಖ್ಯವಾಗಿ ಚಾರ್ವಾಕರು ಅತಿವಾದವನ್ನು ಮಾಡುತ್ತಾರೆ. ಇವೆಲ್ಲವೂ ರಾಗದ್ವೇಷನಿವೃತ್ತಿಯನ್ನು ಉಪದೇಶಿಸುವುದಕ್ಕೆಂದು ಗಣಾಂಶವನ್ನು ಗ್ರಹಿಸಬಹುದು.

ಶ್ರೀ ಶಂಕರಾಚಾರ್ಯರು ಚಾರ್ವಾಕಮತ ವಿಷಯದಲ್ಲಿ ಪೂರ್ವೋತ್ತರ ಮೀಮಾಂಸಾವೃತ್ತಿಕಾರರಾದ ಉಪವರ್ಷಾಚಾರ್ಯರ ಅಭಿಪ್ರಾಯವೆಂದು 'ಸೂತ್ರಭಾಷ್ಯ'ದಲ್ಲಿ (೩-೩-೫೩) ಹೇಳಿರುವುದು ಇದು—ಚೇತನವೆಂಬ ಪುರುಷನು ತನ್ನ ಚೈತನ್ಯಶಕ್ತಿಯಿಂದ ಭೂತ, ಭೌತಿಕ, ದೇಹೇಂದ್ರಿಯ ಮೊದಲಾದ ವಸ್ತುಗಳನ್ನು ನೋಡತಕ್ಕವನು. ಇದರಿಂದ ಕರ್ತೃಕರ್ಮ ವಿಭಾಗವು ಲೋಕಪ್ರಸಿದ್ಧವು. ಭೌತಿಕಶಕ್ತಿಯೇ ಭೂತಭೌತಿಕವಸ್ತುಗಳನ್ನು ನೋಡುವುದಾದರೆ ಕರ್ತೃಕರ್ಮ ಇವೆರಡೂ ಒಂದೇ ಆಗುವುವು. ಇದು ಲೋಕವಿರುದ್ಧವು. ಬೆಂಕಿ ತನ್ನನ್ನೇ ತಾನು ಸುಡಲಾರದು. ನಟನು ಎಷ್ಟು ಶಿಕ್ಷಿತನಾದರೂ ತನ್ನ ಭುಜದ ಮೇಲೆ ತಾನು ಹತ್ತಲಾರನು. ಇದನ್ನು ಕರ್ತೃಕರ್ಮವಿರೋಧವು, ಚಾರ್ವಾಕದರ್ಶನದಲ್ಲಿರುವ ಅಸಂಗತವು ಇದು ಎಂದು.

ಇದರ ಮೇಲೆ ಚೈತನ್ಯವೆಂಬ ಜ್ಞಾನವು ಸ್ವಯಂಪ್ರಕಾಶವು. ಎಂದರೆ, ತನ್ನನ್ನು ತಾನೇ ತಿಳಿದುಕೊಳ್ಳುವಂತಹುದು ಎಂದು ಪ್ರಾಯೇಣ ಬಹು ದಾರ್ಶನಿಕರು ಒಪ್ಪುವರು. ಅದು ಹೇಗೆಂದು ಚಾರ್ವಾಕರು ಆಕ್ಷೇಪಿಸುವರು.

ಅದಕ್ಕಾಗಿಯೇ ಮೀಮಾಂಸಕರು ಜ್ಞಾನವು ತನ್ನನ್ನು ತಾನೇ ತಿಳಿಯಲಾರದೆಂದು—ಇದು ಘಟವು ಎಂಬ ಜ್ಞಾನವು ಬರುವುದು. ಮುಂದಕ್ಕೆ ವ್ಯವಹಾರ ನಡೆಯುವುದು. ನನಗೆ ಘಟಜ್ಞಾನ ಹುಟ್ಟಿತು ಎಂದು ತಿಳಿಯಬೇಕಾಗಿಲ್ಲ ಎಂದು—ಹೇಳುವರು. ತಾರ್ಕಿಕರು ಹೇಳುವುದೇಂತೆಂದರೆ—

ಮೊದಲು ಇಂದ್ರಿಯಾದಿಗಳಿಂದ ಇವನು ಮನುಷ್ಯನು ಎಂಬ ಜ್ಞಾನವು ಹುಟ್ಟುವುದು. ಅದಕ್ಕೆ ವ್ಯವಸಾಯವೆಂದು ಹೆಸರು. ಅನಂತರ ಮಾನಸಿಕವಾದ ಮತ್ತೊಂದು ಮನುಷ್ಯನನ್ನು ತಾನು ತಿಳಿದುಕೊಂಡೆನು ಎಂಬ ಜ್ಞಾನ ಹುಟ್ಟುವುದು. ಅದಕ್ಕೆ ಅನುವ್ಯವಸಾಯವೆಂದು ಹೆಸರು. ಆ ಅನುವ್ಯವಸಾಯವು ವ್ಯವಸಾಯವನ್ನು ತಿಳಿಯುವುದೇ ವಿನಾ ವ್ಯವಸಾಯವೇ ತನ್ನನ್ನು ತಿಳಿಯುವುದಿಲ್ಲವೆಂದು ಹೇಳುವರು. ಇವರಿಬ್ಬರನ್ನು ಇತರರು ಜಡಬುದ್ಧಿವಾದಿಗಳೆಂದು ಕರೆಯುತ್ತಾರೆ. ಈ ಸ್ವಯಂಪ್ರಕಾಶ ಅಸ್ವಯಂಪ್ರಕಾಶವೆಂಬ ವಿಚಾರವು ಬಹು ದೊಡ್ಡದು, ಇದರಲ್ಲೇ ಬೌದ್ಧಮತಕ್ಕೂ ಇತರ ಮತಗಳಿಗೂ ಇರುವ ವ್ಯತ್ಯಾಸಗಳು ಬಹುವಾಗಿರುವುವು. ತಾರ್ಕಿಕರ ಮೀಮಾಂಸಕರ ಅಂತಃಕಲಹದಿಂದ ಬಹುರಹಸ್ಯವು ವ್ಯಕ್ತವಾಗುವುದು.

ಚಾರ್ವಾಕ ಮತಕ್ಕೆ ತಾರ್ಕಿಕರು ಹೇಳಿರುವ ಕೊನೆಯ ಸಮಾಧಾನವಿದು—ಜೀವಾತ್ಮನನ್ನೂ ಜನ್ಮಾಂತರವನ್ನೂ ಪುಣ್ಯಪಾಪಗಳನ್ನೂ ಪರಲೋಕವನ್ನೂ ಪರಮೇಶ್ವರನನ್ನೂ ನಾವು ನಂಬಿರುವೆವು. ಇವೆಲ್ಲವೂ ಇಲ್ಲವೆಂದು ನಿಮ್ಮ ಅಭಿಪ್ರಾಯವು. ಒಂದು ವೇಳೆ ಇವೆಲ್ಲವೂ ಇಲ್ಲದಿದ್ದರೆ ನಮಗೇನೂ ನಷ್ಟವಿಲ್ಲ ಇದ್ದದ್ದೇ ಆದರೆ ನಿಮ್ಮ ಗತಿಯೇನು? ಆದುದರಿಂದ ಸಂದೇಹವಾದರೂ ನಮ್ಮ ಮಾರ್ಗವೇ ಯುಕ್ತ ಎಂದು ಬರೆದಿರುತ್ತಾರೆ, ಇದನ್ನು 'ತತ್ತ್ವಚಿಂತಾಮಣಿ' ಎಂಬ ಗ್ರಂಥದಲ್ಲಿ ಗಂಗೇಶೋಪಾಧ್ಯಾಯರು ಬರೆದಿದ್ದಾರೆ.

ಹಾಗೆಯೇ ಆಸ್ತಿಕನಾಸ್ತಿಕ ವಿಚಾರದಿಂದ ಮುಖ್ಯವಾಗಿ ಕಂಡು ಬರುವ ಅಂಶವು—ರಾಗದ್ವೇಷನಿವೃತ್ತಿಗೋಸ್ಕರವೇ ಸಕಲ ದರ್ಶನಗಳೂ ಹೊರಟಿರುವುವಾದರೂ ವಸ್ತುಸ್ವಭಾವ ಶಕ್ತಿಯಿಂದಲೇ ಸಕಲ ಕೆಲಸಗಳೂ ನಡೆಯುತ್ತವೆಂಬುದು ನಿರಪೇಕ್ಷವಾದವು, ಸ್ವಭಾವವಾದವು, ಪುರುಷಪ್ರಯತ್ನ ಸಂಕಲ್ಪಗಳಿಂದ ನಡೆಯುತ್ತವೆಂಬುದು ಸಾಪೇಕ್ಷವಾದವು, ಈ ಸಾಪೇಕ್ಷ ನಿರಪೇಕ್ಷವಾದಗಳೇ ಮೂಲಬೀಜವು. ನಿರಪೇಕ್ಷವಾದವನ್ನು ಚಾರ್ವಾಕ ದರ್ಶನದಿಂದ ನಿರೂಪಿಸಿದೆವು. ಸಾಪೇಕ್ಷವಾದದಿಂದ ಇತರ ದರ್ಶನಗಳ ರಹಸ್ಯವನ್ನು ಸೂಚಿಸುತ್ತೇವೆ. ಪುರುಷಪ್ರಯತ್ನವೆಂದರೆ—ವೈದಿಕಲೌಕಿಕ ಜನ್ಮಜನ್ಮಾಂತರ ಸಕಲ ವ್ಯಾಪಾರಗಳು. ವೈದಿಕ ವ್ಯಾಪಾರಗಳಿಗೇ ಪುಣ

ಪಾಪ, ಅದೃಷ್ಟವೆಂದು ಹೆಸರು. ಈ ಅದೃಷ್ಟವೆಂಬುದು ಸಕಲ ಕೆಲಸಗಳಿಗೂ ಸಕಲ ಫಲಗಳಿಗೂ ಕಾರಣವಾಗಿರುವುದೆಂದು ಈ ವಾದದ ಅಭಿಪ್ರಾಯವು.

ಈ ಅದೃಷ್ಟವೆಂಬ ಕರ್ಮಶಕ್ತಿಯಿಂದಲೇ ಸಕಲ ಕೆಲಸಗಳೂ ನಡೆಯುವುವೆಂದರೆ, ಅಚೇತನಗಳಾದ ಕರ್ಮಗಳಿಗೆ ದೇಶಕಾಲ ಸಂದರ್ಭವಿಜ್ಞಾನವಿಲ್ಲದಿರುವುದರಿಂದ, ಚೇತನನ ಸಹಾಯವು ಬೇಕಾದರೆ, ಈ ಕರ್ಮಗಳ ಪ್ರಕಾರ ಫಲವನ್ನು ಕೊಡುವ ಪರಮೇಶ್ವರನಿರಬೇಕೆಂದು ಅಂಗೀಕರಿಸಬೇಕಾಗುತ್ತದೆ. ಸಕಲಾನಂತಕೋಟಿ ಜೀವಾತ್ಮರ ಸಕಲ ಜನ್ಮಗಳ ಸಕಲ ಕರ್ಮಗಳನ್ನು ತಿಳಿದು ಫಲವನ್ನು ಕೊಡಬೇಕಾಗಿದ್ದರೆ ಅವನ ಬುದ್ಧಿಶಕ್ತಿ ಎಷ್ಟಿರಬೇಕು? ಸದಾ ಸಹಜ ಸರ್ವಜ್ಞನೇ ಆಗಿರಬೇಕು. ಹೀಗೆ ಸರ್ವಜ್ಞನಾಗಿ ಶಕ್ತಿಯಿಲ್ಲದಿದ್ದರೆ ಅವನ ದುಃಖವು ಯಾರಿಗೂ ಬೇಡ, ಆದುದರಿಂದ ಸರ್ವಶಕ್ತನಾಗಿರಬೇಕು. ಹಾಗೆಯೇ ಶಕ್ತಿಯೂ ಜ್ಞಾನವೂ ಇದ್ದು, ದಯೆ ದಾಕ್ಷಿಣ್ಯ ಮೊದಲಾದ ಗುಣಗಳಿಲ್ಲದಿದ್ದರೆ ಅವನಿಂದ ಯಾರಿಗೂ ಯಾವ ವಿಧವಾದ ಉಪಕಾರವೂ ಇರಲಾರದಾದ್ದರಿಂದ ಪರಮಕರುಣಾನಿಧಿಯೆಂದು ಹೇಳಬೇಕು. ಹೀಗೆಯೇ ನಿತ್ಯತೃಪ್ತನು, ನಿರ್ದೋಷನು, ಜಗದುದ್ಧಾರಕನು ಇತ್ಯಾದಿ ಸ್ವಭಾವಗಳನ್ನು ಅವನಿಗೆ ಹೇಳಬೇಕು.

ಇಂತಹ ಪರಮೇಶ್ವರನು ಪಕ್ಷಪಾತವಿಲ್ಲದೆ ಪ್ರಪಂಚ ಸೃಷ್ಟಿಸ್ಥಿತಿಸಂಹಾರಾದಿಗಳನ್ನು ನಡಸಬೇಕಾಗಿದ್ದರೆ ಜೀವಾತ್ಮರ ಕರ್ಮಾಧೀನನಾಗಿ ನಡೆಯಿಸುತ್ತಾನೆಂದು ತಿಳಿಯಬೇಕು. ಮತ್ತು ಜಗದನುಗ್ರಹಕ್ಕಾಗಿಯೇ ಅವತಾರ ಮಾಡಿ ಮಹರ್ಷಿಗಳಲ್ಲಿ ಅನುಪ್ರವೇಶಮಾಡಿ ಸಕಲಶಾಸ್ತ್ರಗಳನ್ನು ಉಪದೇಶಿಸುತ್ತಿರುತ್ತಾನೆ. ಅವನಿಗೆ ಯಾವುದೂ ಬೇಕಾಗಿಲ್ಲ. ಆಶ್ರಿತರಿಗೋಸ್ಕರವೇ ಅವನಿರುವುದು. ಅವನ ಸಕಲೈಶ್ವರ್ಯವೂ ಅಸಂಖ್ಯಾತ ಸಕಲ ಜೀವರಾಶಿಗಳು ಅನಾದಿಕಾಲದಿಂದ ಸಂಪಾದಿಸಿರುವ ಕರ್ಮಗಳಿಗೆ ದೇಶಕಾಲ ಸ್ವಭಾವಾನುಸಾರ ಫಲವನ್ನು ಕೊಡುವುದಕ್ಕಾಗಿಯೇ ಇರುವುದು. ಆದುದರಿಂದ ಅಂತಹ ಪರಮೇಶ್ವರನ ಪಾದಾರವಿಂದವೇ ಗತಿಯೆಂದು ಸದಾ ಅವನ ಸ್ಮರಣೆಯಲ್ಲೇ ಇರಬೇಕು, ಇದೇ ಭಕ್ತಿ, ನಾವು ಮಾಡುವ ನಿಷಿದ್ಧವಲ್ಲದ ಸಕಲ ವ್ಯಾಪಾರಗಳೂ ಅವನ ಸೇವೆಯೆಂದು ಭಾವನೆ ಇರಬೇಕು, ಹೀಗೆ ಒಂದಕ್ಕೊಂದು ಕಾರ್ಯಕಾರಣಭಾವದಿಂದ ಬಂದಿರುವುದೇ ಆಸ್ತಿಕ

ದರ್ಶನವು, ಇದರ ವಿಸ್ತಾರವೇ ಮುಂದಿರುವುದು. ಆದುದರಿಂದ ಚಾರ್ವಾಕ ದರ್ಶನ ವಿಜ್ಞಾನವು ಸಕಲ ದರ್ಶನಕ್ಕೆ ಮೂಲವು, ಮಾರ್ಗವನ್ನು ಕೊಡುವುದು ಎಂದು ನಿರೂಪಿಸಲಾಯಿತು, ಕ್ರಮೇಣ ಬೌದ್ಧಾದಿ ದರ್ಶನಗಳು ಪ್ರಾರಂಭವಾಗುತ್ತವೆ.




## ೩

# ಬೌದ್ಧ ದರ್ಶನ

### ಗ್ರಂಥಗಳ ವಿಚಾರ

ಬುದ್ಧನೆಂದರೆ ತತ್ತ್ವಜ್ಞಾನೋದಯವನ್ನು ಹೊಂದಿದ ಒಬ್ಬ ಮಹಾ ಪುರುಷನು. ಅವನಿಂದ ಪ್ರಚಾರಕ್ಕೆ ಬಂದ ದರ್ಶನ ಬೌದ್ಧಸಿದ್ಧಾಂತ. ಬೌದ್ಧ ಸಿದ್ಧಾಂತದ ಮೂಲ ತತ್ತ್ವಗಳಾದ ಶೂನ್ಯವಾದವೇ ಮೊದಲಾದ ವಿಷಯಗಳು ವೇದಾಂತವೆಂಬ ಉಪನಿಷತ್ತುಗಳಲ್ಲಿ ನಿರಾಕರಿಸಲ್ಪಟ್ಟಿರುವು ದರಿಂದ ಅವು ಅನಾದಿ ಕಾಲದಿಂದಲೂ ಬಂದಿರುವುವೆಂದು ಹೇಳಬೇಕು. ಬುದ್ಧನಿಗಿಂತಲೂ ಪ್ರಾಚೀನರಾದ ಕಾಶ್ಯಪ, ಕನಕಮುನಿ ಮೊದಲಾದವ ರಿಂದ ಈ ಸಿದ್ಧಾಂತವು ಪ್ರವರ್ತಿಸಲ್ಪಟ್ಟಿತೆಂದು ಬೌದ್ಧಗ್ರಂಥಗಳಿಂದ ತಿಳಿದು ಬರುತ್ತದೆ. ಅನಂತರ ಬುದ್ಧನ ಉಪದೇಶದಿಂದ ಅದು ಪ್ರಸಿದ್ಧಿಗೆ ಬಂದಿತು.

ಅದಕ್ಕೆ ಅನೇಕ ಕಾರಣಗಳಲ್ಲಿ ಇದೊಂದು ಕಾರಣವಿರಬಹುದು— "ಸುವರ್ಣವನ್ನು ಬೆಂಕಿಯಲ್ಲಿ ಕಾಯಿಸಿ ಕತ್ತರಿಸಿ ಒರೆಹಚ್ಚಿ ಪರೀಕ್ಷಿಸಿ ಪರಿಗ್ರಹಿಸುವಂತೆ ನನ್ನ ಮಾತನ್ನು ಪರೀಕ್ಷಿಸಿ ಪರಿಗ್ರಹಿಸಿ. ನನ್ನಲ್ಲಿ ಬರಿ ಗೌರವದಿಂದ ನಂಬಬೇಡಿ" ಎಂದು ಬುದ್ಧನು ಹೇಳಿದನೆಂದು ಬೌದ್ಧಗ್ರಂಥ ಕಾರರು ಬರೆಯುತ್ತಾರೆ.

ತಾಪಾತ್ ಛೇದಾಚ್ಚ ನಿಕಷಾತ್ ಸುವರ್ಣಮಿವ ಪಣ್ಡಿತೈಃ
ಪರೀಕ್ಷ್ಯ ಭಿಕ್ಷವಃ ಗ್ರಾಹ್ಯಂ ನ ತು ಮದ್ವಾಕ್ಯಗೌರವಾತ್ ॥

(ತತ್ತ್ವಸಂಗ್ರಹ ; ಪೀಠಿಕೆ)

ಎಂದು ಬುದ್ಧನು ಹೇಳಿದನಂತೆ.

ಇತರರು ಹೇಳುವುದು ಏನೆಂದರೆ—"ಸಂಪ್ರದಾಯಸ್ಥರು ಹೇಳುವು ದನ್ನು ಶ್ರದ್ಧೆಯಿಂದ ನಂಬಬೇಕು. ಇಲ್ಲದಿದ್ದರೆ ಅನರ್ಥವೆನ್ನುತ್ತಾರೆ. ಇದ ರಿಂದ ಬೌದ್ಧಮತವು ಯುಕ್ತವಾಗಿರುವುದೆಂದು ಬಹು ಜನರು ನಂಬಿ ದರು" ಎಂದು ಒಂದು ಕಾರಣ.

ಬುದ್ಧನ ನಿರ್ವಾಣಾನಂತರ ಎರಡು-ಮೂರು ಶತಮಾನಗಳಾದ ಮೇಲೆ ರಾಜಗೃಹವೆಂಬ ನಗರದಲ್ಲಿ ಮಹಾಸ್ಥವಿರರೆಂಬ ಅನೇಕ ವಿದ್ವಾಂಸರು ಬುದ್ಧನ ಉಪದೇಶಗಳನ್ನೆಲ್ಲಾ ಸಂಗ್ರಹಿಸಿದರು. ಅವರಲ್ಲಿ ಮತಭೇದದಿಂದ ತ್ರಿಪಿಟಕ ಸಂಪ್ರದಾಯವು ಪ್ರಾರಂಭವಾಯಿತು. ಸೂತ್ರಪಿಟಕ, ವಿನಯ ಪಿಟಕ, ಅಭಿಧರ್ಮ ಪಿಟಕ ಎಂದು ಮೂರು ಪಿಟಕಗಳು. ಈ ಗ್ರಂಥಗಳೆಲ್ಲವೂ ಮಾಗಧಿಭಾಷೆ ಪಾಳೀಭಾಷೆ ಮೊದಲಾದ ಪ್ರಾಕೃತಭಾಷಾಮಯವಾಗಿರುವುವು. ಈ ತ್ರಿಪಿಟಕ ಸಂಪ್ರದಾಯವು ಅಶೋಕ ಮಹಾರಾಜನ ಕಾಲದಲ್ಲಿ ಬಹು ಪ್ರಚಾರದಲ್ಲಿತ್ತಂತೆ. ಪಿಟಕವೆಂದರೆ, ಪೇಟಿಕಾ, ಪೆಟ್ಟಿಗೆ. ಗ್ರಂಥಗಳನ್ನು ವಿಭಾಗಮಾಡುವಾಗ ಮೂರು ಪೆಟ್ಟಿಗೆಯಲ್ಲಿ ವಿಷಯಾನುಸಾರ ರಾಶಿ ಮಾಡಿದ್ದರಿಂದ ಪಿಟಕವೆಂದು ಹೆಸರು ಬಂದಿರಬಹುದು. ಸೂತ್ರರೂಪವಾದ ಗ್ರಂಥಗಳು ಒಂದು ರಾಶಿ ಶಿಕ್ಷಾರೂಪಗ್ರಂಥಗಳೊಂದು ರಾಶಿ, ತತ್ತ್ವವಿಚಾರಗ್ರಂಥಗಳು ಮತ್ತೊಂದು ರಾಶಿ—ಈ ಪ್ರಕಾರ ಮೂರು ರಾಶಿಗಳು.

ಅನಂತರ ಧರ್ಮಪಿಟಕವನ್ನು ಕುರಿತು 'ಅಭಿಧರ್ಮಜ್ಞಾನ ಪ್ರಸ್ಥಾನ ಶಾಸ್ತ್ರಂ' ಎಂಬ ಸಂಸ್ಕೃತ ಗ್ರಂಥವನ್ನು ಕಾತ್ಯಾಯನೀಪುತ್ರರೆಂಬ ಪಂಡಿತರು ವಿರಚಿಸಿದರು. ಅನಂತರ ಕಾನಿಷ್ಕನೆಂಬ ಕಾಶ್ಮೀರಾಧಿಪತಿಯ ಕಾಲದಲ್ಲಿ ಪಿಟಕತ್ರಯಕ್ಕೂ ಸಂಸ್ಕೃತದಲ್ಲಿ ಸೂತ್ರೋಪದೇಶ, ವಿನಯವಿಭಾಷಾ, ಅಭಿಧರ್ಮವಿಭಾಷಾ ಎಂಬ ಮೂರು ಗ್ರಂಥಗಳು ಹುಟ್ಟಿದುವು.

'ಸೂತ್ರೋಪದೇಶ' ಸಂಪ್ರದಾಯಕ್ಕೆ ಸೇರಿದ ಆರ್ಯಮಹಾಸಾಂಘಿಕ, ಆರ್ಯಸ್ಥವಿರ ಮೊದಲಾದ ಸಂಪ್ರದಾಯಸ್ಥರು ಸೌತ್ರಾಂತಿಕರೆಂಬ ಈಗಿನ ವ್ಯವಹಾರಕ್ಕೆ ಮೂಲಪುರುಷರು. 'ವಿನಯವಿಭಾಷಾ' ಸಂಪ್ರದಾಯಸ್ಥರು ಆರ್ಯಸರ್ವಾಸ್ತಿವಾದೀ, ಆರ್ಯಸಮಿತೀಯ ಮೊದಲಾದ ಸಂಪ್ರದಾಯದವರು ವೈಭಾಷಿಕವ್ಯವಹಾರಕ್ಕೆ ಮೂಲಪುರುಷರು. 'ಅಭಿಧರ್ಮವಿಭಾಷಾ' ಸಂಪ್ರದಾಯಕ್ಕೆ ಸೇರಿದವರು ಯೋಗಾಚಾರರೂ ಮಾಧ್ಯಮಿಕರೂ ಆಗಿರುವರು. ಸೌತ್ರಾಂತಿಕ ವೈಭಾಷಿಕ ಮೊದಲಾದ ಪದಗಳಿಗೆ 'ಸರ್ವದರ್ಶನಸಂಗ್ರಹ' ವೇ ಮೊದಲಾದ ಗ್ರಂಥಗಳಿಂದ ಬೇರೆ ಬೇರೆ ಅರ್ಥಗಳು ತಿಳಿಯಬರುವುವು. ಅವರೂ ತಾತ್ಪರ್ಯದಲ್ಲಿ ಭೇದವಿಲ್ಲ.

ಈ ನಾಲ್ಕು ಪಂಗಡದವರಲ್ಲಿ ವೈಭಾಷಿಕರೂ ಸೌತ್ರಾಂತಿಕರೂ ಬಾಹ್ಯಾಂತರ, ಒಳಗಿನ ಹೊರಗಿನ. ಸರ್ವವಸ್ತುಗಳನ್ನು ಒಪ್ಪಿ ಅವುಗಳಿಗೆ ಕ್ಷಣಿಕತ್ವವನ್ನು ಉಪದೇಶಮಾಡಿ ವಿರಕ್ತರಾಗಿರುವರು. ಕ್ಷಣಿಕವೆಂದರೆ ಪ್ರತಿ ಕ್ಷಣದಲ್ಲೂ ಪ್ರತಿವಸ್ತುವೂ ಹುಟ್ಟಿ ವಿನಾಶವಾಗುವುದೆಂದರ್ಥವು. ಇದರ ವಿವರಣೆ ಮುಂದಿರುವುದು. ಯೋಗಾಚಾರರು ಪ್ರತಿಮಾವನಿತಾ ನ್ಯಾಯು ದಿಂದ ಬಾಹ್ಯ ವಸ್ತುಗಳೆಲ್ಲವನ್ನೂ ವಿಜ್ಞಾನವೆಂಬ ಮನಸ್ಸಿನಲ್ಲಿ ಸೇರಿಸಿ ಮನೋನಿಯಮದಿಂದ ವೈರಾಗ್ಯೋಪದೇಶದಲ್ಲಿರುವರು. ಇವರಿಗೆ ಭೂತ ಭೌತಿಕಗಳೆಂಬ ಬಾಹ್ಯವಸ್ತುಗಳಿಲ್ಲ. ಮಾಧ್ಯಮಿಕ ಮತವೆಂದರೆ—ಯಾವು ದನ್ನೂ ಒಪ್ಪದೆ ಸರ್ವಶೂನ್ಯವಾದದಿಂದ ಬಾಹ್ಯವೂ ಬೇಡ, ಅಂತರವೂ ಬೇಡವೆಂದು ಮಧ್ಯಸ್ಥಾವಸ್ಥೆಯಲ್ಲಿರುವುದು. ಈ ನಾಲ್ಕು ಮತಗಳಲ್ಲಿ ಮಾಧ್ಯ ಮಿಕರು ಸುಷುಪ್ತ್ಯವಸ್ಥೆಯೆಂಬ ಗಾಢನಿದ್ರಾವಸ್ಥೆಯನ್ನು ನೋಡಿ ಸರ್ವ ಶೂನ್ಯವಾದದಿಂದ ಪರಮವಿರಕ್ತಿಯನ್ನು ತಿಳಿದಿರುವರು. ಬಾಕಿ ಮೂರು ಮತದವರು ಸ್ವಪ್ನಾವಸ್ಥೆಯನ್ನು ನೋಡಿ ಜಾಗ್ರದವಸ್ಥೆಯನ್ನು ಅದಕ್ಕೆ ಹೋಲಿಸಿ ವೈರಾಗ್ಯವನ್ನುಪದೇಶಿಸುವರು.

ಅನಂತರದಲ್ಲಿ ಆಚಾರ್ಯಬುದ್ಧಪಾಲಿತ, ಚಂದ್ರಕೀರ್ತಿ, ವಸು ಮಿತ್ರ, ವಸುಬಂಧು, ಧರ್ಮತ್ರಾತ, ನಾಗಾರ್ಜುನ, ಅಸಂಗ, ಬುದ್ಧದೇವ, ದಿಙ್ನಾಗ, ಧರ್ಮಕೀರ್ತಿ. ಶಾಂತದೇವ, ಪ್ರಜ್ಞಾಕರ, ಶಾಂತರಕ್ಷಿತ, ಕಮಲ ಶೀಲ ಮೊದಲಾದವರು ಈ ನಾಲ್ಕು ವಿಧ ಮತಗಳಲ್ಲೂ ದೃಷ್ಟಿಯನ್ನಿಟ್ಟು ಕೊಂಡು ತಮ್ಮ ಗ್ರಂಥಗಳಿಂದ ಬಹುವಿಧವಾಗಿ ಬೌದ್ಧಮತವನ್ನು ಪ್ರಚಾರ ಗೊಳಿಸುತ್ತಲಿದ್ದರು.

ಇತ್ತಕಡೆಯಲ್ಲಿ ಜೈಮಿನಿ. ಬಾದರಾಯಣ, ಗೌತಮ, ಕಣಾದ, ಶಬರ, ವಾತ್ಸ್ಯಾಯನ, ಪ್ರಶಸ್ತಪಾದ, ಉದ್ಯೋತಕರ, ಕುಮಾರಿಲ, ಪ್ರಾಭಾಕರ, ಮಂಡನಮಿಶ್ರ, ಶಂಕರ ಮೊದಲಾದವರಿಂದ ಬೌದ್ಧಸಿದ್ಧಾಂತ ವಿಷಯಗಳು ಖಂಡನೆಗಾಗಿ ಕೆಲವು ಅನುವಾದಮಾಡಲ್ಪಟ್ಟಿರುವುವು.

ಈ ಮಾಧ್ಯಮಿಕ ಸಂಪ್ರದಾಯಕ್ಕೆ ಮಹಾಯಾನವೆಂದೂ, ಯೋಗಾ ಚಾರ ಸಂಪ್ರದಾಯಕ್ಕೆ ಹೀನಯಾನವೆಂದೂ ಹೆಸರುಗಳು ಉಂಟಾದುವು. ಮಹಾಯಾನ ಗ್ರಂಥಗಳೆಲ್ಲವೂ ಈಗ ಸಂಸ್ಕೃತಮಯವಾಗಿರುವುವು. ಅವು

ಗಳಲ್ಲಿ ಅಷ್ಟಸಾಹಸ್ರ, ಪ್ರಜ್ಞಾಪಾರಮಿತಾ, ಗಂಡವ್ಯೂಹ, ದಶಭೂಮೀಶ್ವರ, ಸಮಾಧಿರಾಜ, ಲಂಕಾವತಾರಸೂತ್ರ, ಸದ್ಧರ್ಮಪುಂಡರೀಕ, ತಥಾಗತಗುಹ್ಯಕ, ಸುವರ್ಣಪ್ರಭಾಸ ಮೊದಲಾದ ಗ್ರಂಥಗಳು ಮುಖ್ಯವೆಂದು ಬೋಧಿಚರ್ಯಾವತಾರ ಮೊದಲಾದ ಗ್ರಂಥಗಳಿಂದ ತಿಳಿದುಬರುತ್ತದೆ. ಸೌತ್ರಾಂತಿಕರಿಗೂ ವೈಭಾಷಿಕರಿಗೂ ಅತ್ಯಂತ ಭೇದವಿಲ್ಲದಿರುವುದರಿಂದ ಇವರನ್ನು ಒಂದೇ ವರ್ಗಕ್ಕೆ ಸೇರಿಸಿ, ಬಾಹ್ಯಾಂತರವಸ್ತುಗಳನ್ನು ಇವರು ಅಂಗೀಕರಿಸಿರುವುದರಿಂದ ಸರ್ವಾಸ್ತಿವಾದಿಗಳೆಂದು ಇವರನ್ನು ಇತರರು ಕರೆಯುತ್ತಾರೆ. ಇವರು ಪ್ರಮಾಣವಿಭಾಗವನ್ನೂ ಪದಾರ್ಥವಿಭಾಗವನ್ನೂ ಮೋಕ್ಷಶಾಸ್ತ್ರವನ್ನೂ ಬಹು ವಿಧವಾಗಿ ಮಾಡಿರುವರು. ಯೋಗಾಚಾರ ಮಾಧ್ಯಮಿಕ ಸಂಪ್ರದಾಯಕರು ಇವುಗಳನ್ನು ಅಂಗೀಕರಿಸಿರುವರು. ಹೇಗೆಂದರೆ-ಯೋಗಾಚಾರ ಮತದಲ್ಲಿ ಹೊರಗಿನ ವಸ್ತುಗಳು ಇಲ್ಲವೆಂದರೂ ಮಾಧ್ಯಮಿಕಮತದಲ್ಲಿ ಸರ್ವವಸ್ತುಗಳು ಇಲ್ಲವೆಂದರೂ ಲೋಕ ವ್ಯವಹಾರವನ್ನು ನಿರಾಕರಿಸುವುದಿಲ್ಲ. ಪರಮಾರ್ಥ ದೃಷ್ಟಿಯಲ್ಲಿ ಶೂನ್ಯವಾದವೇ ಹೊರತು ವ್ಯವಹಾರ ದೃಷ್ಟಿಯಲ್ಲಿ ಸತ್ಯವೆಂಬ ವ್ಯವಸ್ಥೆಯುಂಟು. ಈ ವ್ಯವಹಾರ ಮಾರ್ಗವೇ ಪರಮಾರ್ಥಮಾರ್ಗಕ್ಕೆ ದಾರಿ. ಇದೇ ಅಸತ್ಯದಿಂದ ಸತ್ಯಸಿದ್ಧಿ ಎಂಬ ವಾದಕ್ಕೆ ಮೂಲ. ಈ ವ್ಯವಹಾರ ಮಾರ್ಗಕ್ಕೆ ಮಾಯೆ, ಅವಿದ್ಯೆ, ಭ್ರಾಂತಿ, ಅಜ್ಞಾನ, ಸಂವೃತಿ ಎಂಬ ಕಾರಣವನ್ನು (ಆವರಣವನ್ನು) ಕಲ್ಪಿಸಿ ಸರ್ವವೂ ತನ್ಮಯವೆಂದು ಇವರು ನಿರೂಪಿಸಿರುತ್ತಾರೆ.

ಈ ಬೌದ್ಧಸಿದ್ಧಾಂತರಹಸ್ಯವು ಸ್ಪಷ್ಟಪಡಬೇಕಾದರೆ ಅಲ್ಲಲ್ಲಿ ಇತರರು ಹೇಳುವ ರೀತಿಯನ್ನು ತೋರಿಸಿ ಪರಸ್ಪರ ವೈಲಕ್ಷಣ್ಯವನ್ನು ತಿಳಿಯಿಸಬೇಕು. ಅದಕ್ಕಾಗಿ ಅಲ್ಲಲ್ಲಿ ಇತರರ ಅಭಿಪ್ರಾಯಗಳು ಸೂಚಿತವಾಗಿವೆ.

ಇತರ ದಾರ್ಶನಿಕರು ಹೇಳುವುದೇನೆಂದರೆ—ಪ್ರಪಂಚದಲ್ಲಿ ವ್ಯವಹಾರ ಮಾರ್ಗವನ್ನು ಬಿಟ್ಟರೆ ಬೇರೆ ಗತಿಯಿಲ್ಲ. ವ್ಯವಹಾರಮಾರ್ಗದಲ್ಲೇ ಸತ್ಯಾಸತ್ಯ ಪ್ರಾಮಾಣಿಕ ಅಪ್ರಮಾಣಿಕವೆಂಬ ವಿಭಾಗವೂ ಅನುಭವಸಿದ್ಧವಾಗಿದೆ. ನೀವು ಸಹ ವ್ಯವಹಾರದಲ್ಲಿ ಅನುಭವಾನುಸಾರ ಸತ್ಯಾಸತ್ಯವೆಂದು ವಿಭಾಗ ಮಾಡಿರುವಿರಿ. ಇದಕ್ಕಿಂತಲೂ ಪರಮಾರ್ಥವೆಂಬ ಮೂರನೆಯ ವಿಭಾಗವು ಬೇಕಾಗಿಲ್ಲ. ಪ್ರಾಮಾಣಿಕವೆಂದರೆ ಅಬಾಧಿತವು. ಎಂದರೆ ಯಾವ

ವ್ಯವಹಾರವು, ಅದಕ್ಕೆ ಬೇಕಾದ ಜ್ಞಾನವು ಮುಂದಕ್ಕೆ ತಪ್ಪು ಎಂದು ಗೋಚರವಾಗುವುದೋ ಅದು ಬಾಧಿತವು. ಸ್ವಾಪ್ನವ್ಯವಹಾರ, ಭ್ರಾಂತಿ ಮೂಲಕ ವ್ಯವಹಾರ ಮೊದಲಾದುವು ಇದಕ್ಕೆ ಉದಾಹರಣೆ, ಅಬಾಧಿತ ವೆಂದರೆ, ಮುಂದೆ ಸರಿಯಾಗಿದೆಯೆಂದು ಅನುಭವಕ್ಕೆ ಬರುವಂತಹುದು. ಈ ವಿಭಾಗವನ್ನು ಸಂವಾದ ವಿಸಂವಾದವೆಂದು ಹೇಳುವರು. ವ್ಯವಹಾರ ವನ್ನು ನಿರಾಕರಿಸಿ ಪಾರಮಾರ್ಥಿಕಮಾರ್ಗವನ್ನು ನಿರೂಪಿಸುವುದು ಅಸಾಧ್ಯ ವೆಂದು ಇತರರ ಅಭಿಪ್ರಾಯ.

## ಪ್ರಮಾಣವಿಚಾರ

ಈ ಬೌದ್ಧರಲ್ಲಿ ಪ್ರತ್ಯಕ್ಷ, ಅನುಮಾನ ಎಂಬ ಎರಡೇ ಪ್ರಮಾಣಗಳು. ಶಬ್ದ ಪ್ರಮಾಣವನ್ನೂ ಕೆಲವರು ಸೇರಿಸಿರುತ್ತಾರೆ. ಪ್ರತ್ಯಕ್ಷವೆಂಬ ಇಂದ್ರಿಯ ಮೂಲಕವಾಗಿಯೇ ಯುಕ್ತಿಯೆಂಬ ಅನುಮಾನವೂ, ಭಾಷೆಯೆಂಬ ಶಬ್ದವೂ ಇರುವುದರಿಂದ ಪ್ರತ್ಯಕ್ಷವೊಂದೇ ಮುಖ್ಯಪ್ರಮಾಣವು, ವಸ್ತುವನ್ನು ಗ್ರಹಿಸು ವುದು. ಆ ಪ್ರತ್ಯಕ್ಷದಲ್ಲಿಯೂ ನಿರ್ವಿಕಲ್ಪವೇ ಸ್ವಲಕ್ಷಣವೆಂಬ ಸತ್ಯವಾದ ವಸ್ತುವನ್ನು ಗ್ರಹಿಸುವುದು. ಸವಿಕಲ್ಪಕವೆಂಬ ಪ್ರತ್ಯಕ್ಷವು ಸ್ವಲಕ್ಷಣದಲ್ಲಿ ಅನೇಕ ಕಲ್ಪನೆಗಳನ್ನು ಮಾಡಿಕೊಂಡು ಬರುವುದು. ಅನುಮಾನ ಶಬ್ದಗಳು ಸಾಮಾನ್ಯಲಕ್ಷಣವೆಂಬ ಅಸತ್ಯಗಳಾದ ಇತರ ವಸ್ತುಗಳನ್ನು ಗ್ರಹಿಸುವುವು. ಸವಿಕಲ್ಪದ ಕಲ್ಪನೆಗಳು ಗುಣ, ಜಾತಿ, ಕ್ರಿಯೆ, ದ್ರವ್ಯ, ನಾಮ ಎಂದು ಐದು ವಿಧಗಳಾಗಿ ಇರುವುವು. "ಕಪ್ಪಾದ ಗೋವಿಂದನೆಂಬ ಗೊಲ್ಲರವನು ಕೈಯಲ್ಲಿ ಕೊಳಲನ್ನಿಟ್ಟುಕೊಂಡು ಊದುತ್ತಿರುವನು" ಎಂಬುದು ಸವಿಕಲ್ಪದ ಪ್ರತ್ಯ ಕ್ಷವು. ಇದರಲ್ಲಿ ಕಪ್ಪೆಂಬುದು ಗುಣವು, ಗೊಲ್ಲನೆಂಬುದು ಜಾತಿ, ಗೋವಿಂದ ನೆಂಬುದು ನಾಮ, ಕೊಳಲು ಎಂಬುದು ದ್ರವ್ಯ, ಊದುವವನು ಎಂಬುದು ಕ್ರಿಯೆ. ಈ ಕಲ್ಪನೆಗಳು ಸ್ವಲಕ್ಷಣವೆಂಬ ಶುದ್ಧವಾದ, ಕ್ಷಣಿಕವಾದ ವಸ್ತು ವಿನಲ್ಲಿ ನಡೆಯುವುವು. ಈ ಕಲ್ಪನೆಗಳಿಲ್ಲದೆ ಇರುವ ನಿರ್ವಿಕಲ್ಪವೆಂಬ ಜ್ಞಾನವೇ ಪ್ರಮಾಣವು. ಸ್ವಲಕ್ಷಣವೇ ವಸ್ತುವು. ಬಾಕಿ ಜ್ಞಾನಗಳೆಲ್ಲ ಅಪ್ರಮಾಣ, ಭ್ರಾಂತಿ. ಇವುಗಳಿಗೆ ಗೋಚರವಾಗುವುದೆಲ್ಲ ವಸ್ತುಗಳಲ್ಲ ಎಂದು ಒಂದು ಸಿದ್ಧಾಂತ.

## ಪ್ರಮಾಣದ್ವೈಧವಾದ

ಮತ್ತೊಂದು ರೀತಿಯಿಂದ ಪ್ರಮಾಣಪ್ರಮೇಯ ವಿಭಾಗವಿರುವುದು— ಪ್ರಪಂಚವು ಗ್ರಾಹ್ಯ, ಅಧ್ಯವಸೇಯ ಎಂದು ಎರಡು ವಿಧ. ಗ್ರಹಣ, ಅಧ್ಯವಸಾಯ ಎಂದು ಜ್ಞಾನ ಎರಡು ವಿಧ. ನಿರ್ವಿಕಲ್ಪಕ ಪ್ರತ್ಯಕ್ಷವೇ ಗ್ರಹಣ, ಇದೇ ಪ್ರಮಾಣ. ಇತರ ಜ್ಞಾನಗಳೆಲ್ಲವೂ ಪರೋಕ್ಷ. ಅಧ್ಯವಸಾಯವು ಅಪ್ರಮಾಣವು. ನಿರ್ವಿಕಲ್ಪಕಕ್ಕೆ ವಿಷಯವಾದ ಸ್ವಲಕ್ಷಣವೇ ವಸ್ತುವು. ಅಧ್ಯವಸಾಯಕ್ಕೆ ವಿಷಯವಾದದ್ದು ಕಲ್ಪಿತವು, ವಸ್ತುವಲ್ಲ; ಸ್ವಲಕ್ಷಣವೆಂದರೆ ಅಭಿನ್ನದೇಶಕಾಲ ವಿಭಿನ್ನದೇಶಕಾಲಗಳನ್ನುಳ್ಳದಲ್ಲ. ಎಂದರೆ ಬೇರೆ ಬೇರೆ ದೇಶಗಳಲ್ಲೂ ಬೇರೆ ಬೇರೆ ಕಾಲಗಳಲ್ಲೂ ತೋರುವ ವಸ್ತುವಲ್ಲ. ಸಾಮಾನ್ಯವೆಂಬ ಜಾತಿ ಅನೇಕ ದೇಶದಲ್ಲೂ ಅನೇಕಕಾಲದಲ್ಲೂ ಇರುವ ಹಾಗೆ ತೋರುವುದು. ಇದೇ ಸಾಮಾನ್ಯಲಕ್ಷಣವು, ಇಂತಹ ಅನುಗತವಾದ ಸ್ಥಿರವಾದ ಸಾಮಾನ್ಯಲಕ್ಷಣವೆಂಬ ವಸ್ತುವು ಇಲ್ಲ. ಆದುದರಿಂದ ಈ ಸ್ವಲಕ್ಷಣವೆಂಬ ಪರಮಾಣುಸಮೂಹವೇ ಪ್ರಪಂಚವು. ಇದೇ ಸಂಘಾತವಾದವು ಪುಂಜವಾದವು. ಈ ಸ್ವಲಕ್ಷಣಗಳಲ್ಲಿ ಹಿಂದೆ ಹೇಳಿದ ಕಲ್ಪನೆಗಳಿಂದ ಜಗತ್ತಿನ ವ್ಯವಹಾರವು ನಡೆಯುವುದು. ಇದೊಂದು ಪ್ರಕಾರದ ವಿಭಾಗ,

## ಪ್ರತ್ಯಕ್ಷ

ನಿರ್ವಿಕಲ್ಪಕವಾಗಲಿ ಸವಿಕಲ್ಪಕವಾಗಲಿ ಪ್ರತ್ಯಕ್ಷವು ನಾಲ್ಕು ಪ್ರಕಾರ —ಇಂದ್ರಿಯಜ, ಸಮನಂತರಪ್ರತ್ಯಯಜ. ಮಾನಸಜ, ಭವನಾಬಲಜ ಎಂದು. ಸಕಲವೂ ಕ್ಷಣಿಕವಾದುದರಿಂದ ವಸ್ತುವಿಗೂ ಇಂದ್ರಿಯಕ್ಕೂ ಸಂಬಂಧ ಬರುವುದಿಲ್ಲ. ಅದು ಬರಬೇಕಾದರೆ ವಸ್ತು ಇಂದ್ರಿಯ ಎರಡೂ ಕ್ಷಣವಾದರೂ ಇರಬೇಕು, ಅದಕ್ಕಾಗಿ ಸನ್ನಿಕರ್ಷವೆಂಬ ವಿಷಯೇಂದ್ರಿಯ ಸಂಬಂಧವು ಆವಶ್ಯಕವಿಲ್ಲ. ಅನಾವರಣವೇ ಸಾಕು. ಇದಕ್ಕೆ ಅಪ್ರಾಪ್ಯಕಾರಿ ಎಂದು ಹೆಸರು, ಉತ್ತರಕ್ಷಣವಸ್ತುವಿಗೆ ಪೂರ್ವಕ್ಷಣವಸ್ತುವು ಕಾರಣವಾದುದರಿಂದ ಇಂದ್ರಿಯಜಜ್ಞಾನದಿಂದ ದ್ವಿತೀಯ ತೃತೀಯ ಜ್ಞಾನಗಳು ಬರುವುವು. ಅವು ಸಮನಂತರ ಪ್ರತ್ಯಯಜಗಳು. ಮನಸ್ಸಿನ ಯೋಚನೆಯಿಂದ

ಬರುವ ಜ್ಞಾನವು ಮಾನಸಜವು. ಧ್ಯಾನದಿಂದ ಸಾಕ್ಷಾತ್ಕಾರವೆಂಬ ಜ್ಞಾನವು ಬರುವುದು. ಅದನ್ನುಳ್ಳವರೇ ಯೋಗಿಗಳು. ಬುದ್ಧರೇ ಮೊದಲಾದ ಅನೇಕ ಸರ್ವಜ್ಞರು, ಯೋಗಸಿದ್ಧರು ಜಗದನುಗ್ರಹಕ್ಕಾಗಿರುವರೆಂದು ಅಭಿಪ್ರಾಯ.

## ಅನುಮಾನ

ಈ ಸಿದ್ಧಾಂತದ ಅನುಮಾನ ಪ್ರಮಾಣವಿಚಾರವನ್ನು ಸ್ವಲ್ಪ ಹೇಳ ಬಹುದು. ಕಾರ್ಯಲಿಂಗ, ಸ್ವಭಾವಲಿಂಗ ಎಂದು ಹೇತು ಎರಡು ವಿಧ. ಕಾರ್ಯದಿಂದ ಕಾರಣವನ್ನು ತಿಳಿಯುವುದು ಒಂದನೆಯದು. ಧೂಮದಿಂದ ಅಗ್ನಿಯನ್ನೂ ನದೀಪ್ರವಾಹದಿಂದ ಮೇಲುಭಾಗದಲ್ಲಿ ಮಳೆಯನ್ನೂ ತಿಳಿಯು ವುದು ಇದಕ್ಕೆ ಉದಾಹರಣೆ. ವಿಶೇಷದಿಂದ ಸಾಮಾನ್ಯವನ್ನು ತಿಳಿಯು ವುದು ಎರಡನೆಯದು; ಒಂದು ವ್ಯಕ್ತಿಯನ್ನು ನೋಡಿ ಜಾತಿ ನಿಶ್ಚಯವನ್ನು ಮಾಡಿಕೊಳ್ಳುವುದು. ಒಬ್ಬ ಮನುಷ್ಯನನ್ನು ನೋಡಿ ಇವನು ದಾಕ್ಷಿಣಾ ತ್ಯನು, ಒಂದು ವಸ್ತುವನ್ನು ನೋಡಿ ಇದು ಲೋಹಜಾತಿಗೆ ಸೇರಿದುದು, ಇದು ವೃಕ್ಷಜಾತಿಗೆ ಸೇರಿದುದು, ಇದು ಪ್ರಾಣಿಜಾತಿಗೆ ಸೇರಿದುದು ಎಂದು ತಿಳಿಯುವುದು ಉದಾಹರಣೆಗಳು. ಆಯಾ ವ್ಯಕ್ತಿಯೂ ಜಾತಿಯೂ ಒಂದೇ ಸ್ವಭಾವದಲ್ಲಿರುವುದರಿಂದ ಸ್ವಭಾವಲಿಂಗವೆಂದು ಹೆಸರು. ಅನುಮಾನವು ಪ್ರಮಾಣವಲ್ಲದೇ ಹೋದರೆ ಲೋಕವ್ಯವಹಾರವೇ ನಿಂತುಹೋಗುವುದು. ಇದರ ವಿಸ್ತಾರವು ಚಾರ್ವಾಕದರ್ಶನದಲ್ಲಿರುವುದು. ಶಬ್ದಪ್ರಾಮಾಣ್ಯವು ಹೇಳುವವರ ಯೋಗ್ಯತೆಯ ಮೇಲೆ ನಿಲ್ಲುತ್ತದೆ. ಇದಕ್ಕೆ ವಕ್ತೃಜ್ಞಾನಾನು ಮಾನಾಧೀನ ಪ್ರಾಮಾಣ್ಯವೆಂದು ಹೆಸರು. ವಕ್ತೃವಿನ ಜ್ಞಾನವನ್ನು ಊಹಿಸಿ ಈ ಜ್ಞಾನಕ್ಕೆ ಪ್ರಾಮಾಣ್ಯವನ್ನು ತಿಳಿಯುವುದು. ಇದನ್ನು ಪ್ರಾಭಾಕರರು ಸ್ವೀಕರಿಸಿರುವರು.

## ಆರ್ಯಸತ್ಯ

ಹೀಗೆ ಪ್ರಮಾಣವನ್ನು ವಿಭಾಗ ಮಾಡಿ ಪ್ರಮೇಯವೆಂಬ ಪದಾರ್ಥ ಗಳನ್ನು ಬಹುಮುಖವಾಗಿ ನಿರೂಪಿಸಿ ವೈರಾಗ್ಯವನ್ನೂ ಮೋಕ್ಷಸ್ವರೂಪ ವನ್ನೂ ಬೌದ್ಧರು ಉಪದೇಶಿಸಿರುವರು. ಇವರಲ್ಲಿ ಆರ್ಯಸತ್ಯವೆಂಬ ಒಂದು

ಸಂಪ್ರದಾಯವಿದೆ. ಇವರಿಗೆ ಸರ್ವಾಸ್ತಿವಾದವು ಇಷ್ಟವಾಗಿ ಶೂನ್ಯವಾದವು ಇಷ್ಟವಿಲ್ಲವಾದುದರಿಂದ ಆರ್ಯಸತ್ಯವೆಂಬ ಹೆಸರು ಬಂದಿರುವುದು. ಆರ್ಯ ಸತ್ಯವಸ್ತುಗಳು—ದುಃಖ, ಸಮುದಯ, ಮಾರ್ಗ, ನಿರೋಧ ಎಂಬುದಾಗಿ ನಾಲ್ಕು ವಿಧ. ದುಃಖವೆಂದರೆ, ಪ್ರಪಂಚವೇ ದುಃಖಮಯವಾದುದರಿಂದ ಅದೇ ದುಃಖವು. ಅದು ರೂಪ, ವಿಜ್ಞಾನ, ವೇದನಾ, ಸಂಜ್ಞಾ, ಸಂಸ್ಕಾರ ಎಂದು ಐದು ಸ್ಕಂಧಗಳಾಗಿ ಇರುವುದು. ಸ್ಕಂಧಗಳೆಂದರೆ ಗುಂಪುಗಳು; ಪ್ರವಾಹವೆಂದು ಕೆಲವರು ಹೇಳುತ್ತಾರೆ.

ರೂಪಸ್ಕಂಧವೆಂದರೆ—ಕಣ್ಣು ಕಿವಿ ಮೂಗು ನಾಲಗೆ ದೇಹ ಎಂಬ ಐದು ಇಂದ್ರಿಯಗಳು. ಇವುಗಳಿಗೆ ವಿಷಯಗಳಾದ ಬಣ್ಣ ಶಬ್ದ ಗಂಧ ರಸ ಸ್ಪರ್ಶಗಳು ಸೇರಿ ಹತ್ತು ವಿಧವು, ಕೆಲವರು ಅವಿಜ್ಞಪ್ತಿ ಎಂಬುದೊಂದು ಸೇರಿ ಹನ್ನೊಂದು ವಿಧವೆಂದು ತಿಳಿಯುವರು, ಅವಿಜ್ಞಪ್ತಿಯೆಂದರೆ ತಿಳಿಯದೇ ಇರುವುದು ; ಅದೃಷ್ಟ ಪುಣ್ಯ ಪಾಪ ಎಂದು ಅದರ ಅರ್ಥ. ಇಂದ್ರಿಯಪಂಚಕ ವಿಷಯಪಂಚಕ ಭೂತಪಂಚಕ ಸೇರಿ ಹದಿನೈದು ವಿಧ ವೆಂದು ಕೆಲವರು ಹೇಳುವರು.

ವಿಜ್ಞಾನಸ್ಕಂಧವೆಂದರೆ, ಮನಸ್ಸು ಚಿತ್ತ ಬುದ್ಧಿ ಎಂದು ಹೇಳಲ್ಪಡುವ ವಸ್ತು. ಇದು ಆಲಯವಿಜ್ಞಾನ ಪ್ರವೃತ್ತಿ ವಿಜ್ಞಾನ ಎಂದು ಎರಡು ವಿಧ. ನಾನು ಎಂಬ ಭಾವನೆ ಆಲಯವಿಜ್ಞಾನ. ಇದನ್ನೇ ಇತರರು ಆತ್ಮ ಎಂದು ಹೇಳುವರು. ಪ್ರವೃತ್ತಿವಿಜ್ಞಾನವು—ಚಕ್ಷುವಿಜ್ಞಾನ, ಶ್ರೋತ್ರ ವಿಜ್ಞಾನ, ನಾಸಿಕವಿಜ್ಞಾನ, ರಸನಾವಿಜ್ಞಾನ, ಕಾಯವಿಜ್ಞಾನ, ಮನೋ ವಿಜ್ಞಾನ ಎಂದು ಆರು ಪ್ರಕಾರವಾಗಿದೆ.

ವೇದನಾಸ್ಕಂಧವು—ಸುಖ ದುಃಖ ಅಪೇಕ್ಷೆ ಎಂದು ಮೂರು ಪ್ರಕಾರವು.

ಸಂಜ್ಞಾಸ್ಕಂಧವು—ಸವಿಕಲ್ಪಕ ಪ್ರತ್ಯಯವು ಇದು. ನೀಲ, ಇದು ಗೋವು ಮೊದಲಾದ ಜ್ಞಾನವು.

ಸಂಸ್ಕಾರಸ್ಕಂಧವು—ರಾಗ ದ್ವೇಷ ಮದ ಮಾನ ಮಾತ್ಸರ್ಯ ಮೊದಲಾದವು, ಜನ್ಮಮರಣಾದಿಕ್ಲೇಶಗಳು.

ಈ ಸ್ಕಂಧಪಂಚಕವು ದುಃಖಮೂಲವಾಗಿಯೂ, ದುಃಖಮಿಶ್ರ

ವಾಗಿಯೂ, ದುಃಖಸಾಧನವಾಗಿಯೂ ಇರುವುದರಿಂದ ದುಃಖವೆಂದು ಒಂದು ರಾಶಿಯಾಗಿರುವುದು.

ಈ ಸ್ಕಂಧಪಂಚಕದಲ್ಲೇ ದ್ವಾದಶಾಯತನ, ಅಷ್ಟದಶಧಾತುಗಳು ಎಂದು ವಿಚಾರವಿರುವುದು. ದ್ವಾದಶಾಯತನವೆಂದರೆ—ಮನಸ್ಸನ್ನು ಸೇರಿಸಿ ಆರು ಇಂದ್ರಿಯಗಳು, ಧರ್ಮವನ್ನು ಸೇರಿಸಿ ಆರು ವಿಷಯಗಳು. ಅಷ್ಟಾ ವಶಧಾತುಗಳೆಂದರೆ—ಷಡ್ವಿಜ್ಞಾನಗಳನ್ನು ಸೇರಿಸಿ ಹದಿನೆಂಟು ಧಾತು ಗಳೆಂದು ವಿಭಾಗ ಮಾಡಿರುವರು.

**ಸಮುದಯ—ಪ್ರತೀತ್ಯಸಮುತ್ಪಾದ**

ಸಮುದಯವೆಂದರೆ ಸ್ಕಂಧಪಂಚಕದ ಉತ್ಪತ್ತಿ. ಇದಕ್ಕೆ ಪ್ರತೀತ್ಯ ಸಮುತ್ಪಾದವೆಂದು ಹೆಸರು. ಈ ಉತ್ಪತ್ತಿ ಹೇತೂಪನಿಬಂಧನ, ಪ್ರತ ಯೋಪನಿಬಂಧನ ಎಂದು ಎರಡು ವಿಧ. ಒಂದನೆಯದು—ಇತರ ದಾರ್ಶ ನಿಕರ ದೃಷ್ಟಿಯಿಂದ ಸಮವಾಯಿಕಾರಣ ವಿಚಾರವು ; ಎರಡನೆಯದು— ಸಹಕಾರಿಕಾರಣ ವಿಚಾರವಾಗುವುದು. ಒಂದನೆಯದು—ಬೀಜದಿಂದ ಅಂಕುರವು, ಅನಂತರ ಎಲೆ, ದಂಟು, ನಾಳ, ಗರ್ಭ, ಶೂಕ, ಪುಷ್ಪ, ಫಲ ಈ ಪ್ರಕಾರವಾಗುವ ಉತ್ಪತ್ತಿ ಹೇತೂಪನಿಬಂಧನವು. ಪ್ರತ್ಯಯೋಪ ನಿಬಂಧನವೆಂದರೆ— ಪೃಥಿವ್ಯಾದಿ ಧಾತುಗಳ ಸಹಕಾರಸಮಾವೇಶದಿಂದ ಉಂಟಾಗುವ ಪ್ರಯೋಜನವು, ಪೃಥಿವಿ ಬೀಜವನ್ನು ಧರಿಸುತ್ತದೆ. ಜಲವು ಮೃದು ಮಾಡುತ್ತದೆ. ತೇಜಸ್ಸು ಪಾಕ ಮಾಡುತ್ತದೆ. ವಾಯು ಹೊರಗೆ ತರು ತ್ತದೆ. ಆಕಾಶವು ಅವಕಾಶವನ್ನು ಕೊಡುತ್ತದೆ. ಈ ಪ್ರಕಾರವಾಗುವ ಸಹಾಯವು ಪ್ರತ್ಯಯೋಪನಿಬಂಧನವು. ಈ ಕಾರ್ಯಕಾರಣಪ್ರಕ್ರಿಯೆ ಯಲ್ಲಿ ಒಬ್ಬ ಪುರುಷನ ಇಚ್ಛಾಸಂಕಲ್ಪಪ್ರಯತ್ನಗಳಿಗೆ ಅವಕಾಶವಿಲ್ಲ. ಕರ್ತೃ ಎಂಬ ನಿಮಿತ್ತಕಾರಣ ಬೇಕಾಗಿಲ್ಲವೆಂದು ತಾತ್ಪರ್ಯ.

ಇದು ಹೊರಗಿನ ಭೂತಭೌತಿಕವಸ್ತುವಿಷಯವಾಯಿತು. ಆಧ್ಯಾತ್ಮ ವಿಷಯದಲ್ಲೂ ಎರಡು ವಿಧವಾದ ಹೇತುಪ್ರತ್ಯಯೋಪನಿಬಂಧನಗಳು ಇರು ವುವು. ಆಧ್ಯಾತ್ಮವೆಂದರೆ—ದೇಹೇಂದ್ರಿಯ ವಿಜ್ಞಾನಸಂಘಾತವು. ವಿಜ್ಞಾ ನವೇ ಮನಸ್ಸು, ಚಿತ್ತ. ಇದರ ಅವಸ್ಥೆಗಳು ಪರಿಣಾಮಗಳು, ಪ್ರವಾಹ

ಗಳು, ಸುಖ ದುಃಖ ರಾಗ ದ್ವೇಷ ಮೊದಲಾದುವುಗಳು ಚೈತ್ತ್ಯವೆನ್ನಲ್ಪಡುವುವು. ವಿಜ್ಞಾನವೆಂಬ ವಸ್ತುವೇ ಇತರ ದಾರ್ಶನಿಕರ ಜೀವಾತ್ಮಸ್ಥಾನದಲ್ಲಿರುವುದು. ಇದು ಪ್ರತಿಕ್ಷಣದಲ್ಲೂ ಹುಟ್ಟಿ ನಾಶವಾಗುತ್ತಿದ್ದರೂ ಸಂತತಿ ಪ್ರವಾಹರೂಪವಾಗಿ ಸ್ಥಿರವಾದ ವಸ್ತುವಿನಂತೆ ಕೆಲಸವನ್ನು ಮಾಡುತ್ತಿರುವುವು. ಇದು ಅಸಂಖ್ಯಾತ ಸಂತತಿಗಳಾಗಿ ಅಸಂಖ್ಯಾತಜೀವಾತ್ಮರುಗಳಂತೆ ಇರುವುದು. ಈ ಸಂತತಿಯಲ್ಲೇ ಸಂಸ್ಕಾರ, ವಾಸನೆ ಎಂಬ ಶಕ್ತಿ ಇರುವುದು. ಇದರಲ್ಲಿ ಕರ್ಮವಾಸನೆ, ಜ್ಞಾನವಾಸನೆ ಎಂದು ಎರಡು ವಿಧವು. ಕರ್ಮವಾಸನೆ ಪುಣ್ಯಪಾಪಗಳು, ಜ್ಞಾನವಾಸನೆ ಸಂಸ್ಕಾರವೆಂದು ಸ್ಮರಣೆಗೆ ಹೇತುವಾಗಿರುವುದು. ಈ ಚಿತ್ತವು, ನಾರಕ ಭೂತ ದೇವ ಮನುಷ್ಯ ತಿರ್ಯಕ್ ಎಂಬ ಐದು ವಿಧವಾದ ಶರೀರಗಳಲ್ಲಿ, ಆಕಾಶದಲ್ಲಿ ಪ್ರಭೆಯಂತೆಯೂ, ಬತ್ತಿಯಲ್ಲಿ ಜ್ವಾಲೆಯಂತೆಯೂ, ನೀರಿನಲ್ಲಿ ಗುಳ್ಳೆಯಂತೆಯೂ, ಅಂಟಿಯೂ ಅಂಟದೆಯೂ ಅಂತರಾಳದಲ್ಲಿ ಇರುವುದು.

ಈ ವಿಜ್ಞಾನಸಂತತಿ ಸೂಕ್ಷ್ಮಚಿತ್ತವೆಂಬ ರೂಪದಲ್ಲಿ ಕರ್ಮವಾಸನೆಯಿಂದ ಮಾತೃಕುಕ್ಷಿಯನ್ನು, ಗರ್ಭಕೋಶವನ್ನು ಪ್ರವೇಶಿಸುವುದು. ಇದೇ ಬೀಜಸ್ಥಾನದಲ್ಲಿರುವುದು. ಈ ಸೂಕ್ಷ್ಮಚಿತ್ತವು ಅವಿದ್ಯೆ ಸಂಸ್ಕಾರ ವಿಜ್ಞಾನ ನಾಮರೂಪ ಷಡಾಯತನ ಸ್ಪರ್ಶ ವೇದನಾ ತೃಷ್ಣಾ ಭವ ಜಾತಿ ಮರಣ ವ್ಯಾಧಿರೂಪವಾಗಿ ಕಾರ್ಯಕಾರಣಪ್ರಕ್ರಿಯೆಯನ್ನು ಹೊಂದುವುದು. ಇದೇ ಅಧ್ಯಾತ್ಮಿಕಹೇತುನಿಬಂಧನವು. ಇದು ಚಕ್ರರೂಪವಾಗಿ ತಿರುಗುತ್ತಿರುವುದು.

ಈ ಸೂಕ್ಷ್ಮಚಿತ್ತವು ನಾನು ಎಂಬ ಭಾವನೆಯಿಂದ ಆತ್ಮವೆನ್ನಲ್ಪಡುವುದು. ಇದೇ ಆಲಯವಿಜ್ಞಾನವು. ಪ್ರವೃತ್ತಿವಿಜ್ಞಾನವೆಂದರೆ, ಗರ್ಭದಲ್ಲಿರುವ ಚಿತ್ತಕ್ಕೆ ವಿಷಯಸಂಬಂಧವು. ಇದೇ ಚಿತ್ತಾಭಿಜ್ವಲನವು, ಅನಂತರ ಜಗತಕ್ಕೆ ವಿಜ್ಞಾನಸಂತಾನವು ಸ್ಥೂಲಚಿತ್ತವೆನಿಸುವುದು, ಸುಖದುಃಖ ಮೊದಲಾದ ಪ್ರವಾಹಗಳೇ ಚೈತ್ತ್ಯವೆನಿಸುವುವು. ಇದು ಹೇತೂಪನಿಬಂಧನ.

ಅಧ್ಯಾತ್ಮದಲ್ಲಿ ಪ್ರತ್ಯಯೋಪನಿಬಂಧನವು ಹೇಗೆಂದರೆ—ಪೃಥಿವಿಯಿಂದ ದೇಹಕ್ಕೆ ಕಾಠಿನ್ಯ, ಜಲದಿಂದ ಮಾರ್ದವ, ತೇಜಸ್ಸಿನಿಂದ ಆಹಾರಪರಿಪಾಕ,

ವಾಯುವಿನಿಂದ ಉಚ್ಛ್ವಾಸನಿಶ್ವಾಸ, ಆಕಾಶದಿಂದ ಅನಾವರಣ ಬರುವುದು. ವಿಜ್ಞಾನವೆಂಬ ಧಾತು ಚಿತ್ತಚೈತ್ತಾತ್ಮಕವಾಗಿ ಸಹಾಯ ಮಾಡುವುದು. ಈ ಕಾರ್ಯಕಾರಣಪ್ರಕ್ರಿಯೆಯೇ ಅಧ್ಯಾತ್ಮಪ್ರತ್ಯಯೋಪನಿಬಂಧನವು.

ಈ ಎರಡುವಿಧವಾದ ಪ್ರತೀತ್ಯಸಮುತ್ಪಾದೋಪದೇಶಪ್ರಯೋಜನವು ಈ ಪ್ರಕಾರ ವೃದ್ಧಿಯಾಗಿರುವುದು. ವಿಜ್ಞಾನಕ್ಕಿಂತಲೂ ಬೇರೆ ಜೀವಾತ್ಮನಿಲ್ಲ, ಅದು ಬೇಕಾಗಿಲ್ಲ. ಪ್ರಕೃತಿಪುರುಷೇಶ್ವರ ಪರಮಾಣು ಮೊದಲಾದ ನಿತ್ಯವಸ್ತುಗಳಿಲ್ಲ, ಸರ್ವವೂ ಜನ್ಯ, ಕ್ಷಣಿಕ ಎಂದು ನಿರ್ಣಯವು. ಸ್ಕಂಧಪಂಚಕವೇ ಜೀವಸ್ಥಾನದಲ್ಲಿರುವುದು. ಇದೇ ಆತ್ಮನಿಲ್ಲವೆಂಬ ನೈರಾತ್ಮ್ಯವಾದವು, ವಿಜ್ಞಾನಾತ್ಮವಾದವು.

ಸಕಲವಸ್ತುಗಳೂ ಪ್ರತೀತ್ಯಸಮುತ್ಪಾದಕ್ಕೆ ಸೇರಿರುವುವು. ಪ್ರತೀತ್ಯಸಮುತ್ಪಾದ ಎಂಬ ಪದಕ್ಕೆ ಕಾರಣಗಳಿಂದ ಹುಟ್ಟಿದುದು ಎಂದು ಅರ್ಥ. ಇದಕ್ಕೆ ಪ್ರತಿಯಾಗಿರುವ ಪದ ನಿತ್ಯ ಶಾಶ್ವತ ಸ್ಥಿರ ಮೊದಲಾದುವು, ಕಾರಣವಿಲ್ಲದೇ ಇರುವ ವಸ್ತುವೆಂದರ್ಥವು. ತಾರ್ಕಿಕ ಮೊದಲಾದ ಮತಗಳಲ್ಲಿ ಪರಮಾಣು, ಪ್ರಕೃತಿ, ಈಶ್ವರ, ಮೊದಲಾದ ನಿತ್ಯವಾದ ಶಾಶ್ವತವಾದ ಪ್ರಪಂಚ ಮೂಲಕಾರಣವಾದ ವಸ್ತುಗಳುಂಟು. ಈ ಮತದಲ್ಲಿ ಅವುಗಳಿಲ್ಲವೆಂದು ತಾತ್ಪರ್ಯ.

ಈ ಪ್ರಕಾರ ಸ್ಕಂಧಪಂಚಕಕ್ಕೆ ಕಾರಣಸಮಾವೇಶವು ಸಮುದಯವೆನ್ನಲ್ಪಡುವುದು. ಈ ಸ್ಕಂಧಪಂಚಕವು ಆತ್ಯಂತಿಕವಿನಾಶವಾಗುವುದಕ್ಕೆ ನಿರೋಧವೆಂದು ಹೆಸರು. ಇದಕ್ಕೆ ಉಪಾಯವಾದ ವಿಶುದ್ಧಜ್ಞಾನವೇ ಮಾರ್ಗವು. ಹೀಗೆ ಆರ್ಯಸತ್ಯವೆಂಬ ದುಃಖ, ಸಮುದಯ, ಮಾರ್ಗ, ನಿರೋಧ ಈ ನಾಲ್ಕು ಪ್ರಮೇಯಗಳು ಮುಖ್ಯವಾಗಿ ನಿರೂಪಿಸಲ್ಪಟ್ಟುವು.

## ಕರ್ತವ್ಯಭಾವನೆಗಳು

ಬೌದ್ಧಸಿದ್ಧಾಂತದಲ್ಲಿ ಮುಖ್ಯವಾಗಿ ಮಾಡತಕ್ಕದ್ದು ನಾಲ್ಕು ವಿಧವಾದ ಭಾವನೆ—ಸರ್ವಂ ಸ್ವಲಕ್ಷಣಂ ಸ್ವಲಕ್ಷಣಂ, ಕ್ಷಣಿಕಂ ಕ್ಷಣಿಕಂ, ದುಃಖಂ ದುಃಖಂ, ಶೂನ್ಯಂ ಶೂನ್ಯಂ ಎಂದು. ಈ ಭಾವನೆಗಳಿಂದ ಅನು

ಗತ ಸ್ಥಿರ ಸುಖ ವಸ್ತು ಎಂಬ ಸಂಸಾರಕ್ಕೆ ಮೂಲಕಾರಣವಾದ ಭ್ರಾಂತಿ, ಅವಿದ್ಯೆ ತೊಲಗುವುದು. ಇದೇ ಬುದ್ಧನ ಮುಖ್ಯೋಪದೇಶವು. ಈ ನಾಲ್ಕು ವಿಧ ಭಾವನೆಗಳನ್ನೇ ಆರ್ಯಸತ್ಯಚತುಷ್ಟಯವೆಂದು ಭಾಸ್ಕರಭಾಷ್ಯಕಾರರು ಹೇಳುತ್ತಾರೆ. ಶೂನ್ಯತೋಪದೇಶದಿಂದಲೇ ಭ್ರಾಂತಿಯೆಲ್ಲವೂ ಹೋಗುವು ದಾದರೂ ಶಿಷ್ಯರ ಯೋಗ್ಯತೆಯನ್ನು ಅನುಸರಿಸಿ, ವೈದ್ಯರು ರೋಗಿಗಳ ಸ್ವಭಾವವನ್ನು ಅನುಸರಿಸಿ ಚಿಕಿತ್ಸೆ ಮಾಡುವಂತೆ, ಉಪದೇಶ ಮಾಡಿರುವರು. ಆದುದರಿಂದ ಈ ನಾಲ್ಕು ವಿಧ ಭಾವನೆಗಳು ಮುಖ್ಯ ಕರ್ತವ್ಯಗಳು. ಇವು ಗಳ ಸ್ವರೂಪಗಳು ಹೀಗಿರುವುದು.

## ಸ್ವಲಕ್ಷಣ

ವಸ್ತುಗಳೆಲ್ಲವೂ ಸ್ವಲಕ್ಷಣವು. ಎಂದರೆ ಸಾಮಾನ್ಯ ಲಕ್ಷಣವೆಂಬ ವಸ್ತುವೇ ಇಲ್ಲ. ಸಾಮಾನ್ಯವೆಂಬ ಜಾತಿಯನ್ನು ಸತ್ತೆಯೆಂದು ತಾರ್ಕಿಕರು ಹೇಳುತ್ತಾರೆ. ಅದು ನಿತ್ಯ ನಿರವಯವ ಶಾಶ್ವತವು. ವ್ಯಕ್ತಿಗಳು ವಿನಾಶ ವಾದರೂ ಜಾತಿ ವಿನಾಶವಾಗುವುದಿಲ್ಲ. ಇಂತಹ ಅಭಿಪ್ರಾಯವು ಸಂಸಾ ರಕ್ಕೆ ಮೂಲಕಾರಣವೆಂದು ತಾತ್ಪರ್ಯವು.

ಸತ್ತೆಯೆಂಬ ಜಾತಿಯನ್ನೇ ಸಾಮಾನ್ಯವಾಗಿ ವೈಯಾಕರಣರೂ ಪ್ರಾಚೀನ ವೇದಾಂತಿಗಳಲ್ಲಿ ಮಂಡನಮಿಶ್ರ ಮೊದಲಾದವರೂ ಆತ್ಮ, ಬ್ರಹ್ಮ ಎನ್ನುತ್ತಾರೆ. ಇವೇ ಸರ್ವಾನುಗತ ಸಾಮಾನ್ಯರೂಪಬ್ರಹ್ಮವಾದವು. ಈ ಸ್ವಲಕ್ಷಣಬ್ರಹ್ಮವಾದವನ್ನು ಯಾದವಪ್ರಕಾಶ ಎಂಬುವರು ಆಶ್ರಯಿಸಿರು ತ್ತಾರೆ. ಇಂತಹ ಸಾಮಾನ್ಯಲಕ್ಷಣವಸ್ತುವಾದವು ಸ್ವಲಕ್ಷಣವಸ್ತುಭಾವನೆ ಯಿಂದ ನಿರಾಕೃತವಾದಾಗ ಮಾತ್ರ ವೈರಾಗ್ಯವು ಸಿದ್ಧಿಸುವುದೆಂದು ಅಭಿ ಪ್ರಾಯ.

## ಕ್ಷಣಿಕವಾದ

ಪ್ರಪಂಚದಲ್ಲಿ ಗೋಚರವಾಗುವ ಹೊರಗಿನ ಒಳಗಿನ ಎಲ್ಲ ವಸ್ತುಗಳೂ ಕ್ಷಣಿಕಗಳು. ಯಾವ ಕಾಲಾಂಶವನ್ನು ಒಡೆಯಲು ಸಾಧ್ಯವಿಲ್ಲವೋ ಅಂತಹ ಸೂಕ್ಷ್ಮಕಾಲಕ್ಕೆ ಕ್ಷಣವೆಂದು ಹೆಸರು! ಪ್ರತಿಯೊಂದು ವಸ್ತುವು ಅಷ್ಟೇ

ಕಾಲ ಇರುವುದೆಂದರ್ಥವು! ಹಿಂದಿನದು ಹೋಗುವುದು, ಹೊಸದು ಬರುವುದು! ನದೀಪ್ರವಾಹದಲ್ಲಿ ಪ್ರತಿಯೊಂದು ಜಲಪರಮಾಣುವೂ ಮುಂದೆ ಹೊರಟುಹೋಗುವುದು, ಹೊಸದು ಬರುವುದು! ಆ ಪ್ರವಾಹವು ನಿಂತಿರುವ ಕೆರೆಯಂತೆ ದೂರದಲ್ಲಿ ಕಾಣುವುದು! ದೀಪದ ಜ್ವಾಲೆಯ ಕಣಗಳು ಪ್ರತಿಕ್ಷಣದಲ್ಲೂ ಬಂದುಹೋಗುತ್ತಿದ್ದರೂ ಸ್ಥಿರವಾಗಿ ನಿಂತಿರುವ ಹಾಗೆ ಕಾಣುವುದು! ಅದರಂತೆ ಪ್ರತಿಯೊಂದು ವಸ್ತುವೂ ಪ್ರವಹಿಸುತ್ತಿರುವುದು. ವಸ್ತುಗಳು ಪ್ರತಿಕ್ಷಣದಲ್ಲೂ ಹುಟ್ಟಿ ಉತ್ತರಕ್ಷಣದಲ್ಲಿ ವಿನಾಶವನ್ನು ಹೊಂದುವುದೆಂದು ಹೇಳುವುದರಿಂದ ಈ ಸಿದ್ಧಾಂತಕ್ಕೆ ವೈನಾಶಿಕ ಸಿದ್ಧಾಂತವೆಂದು ಪ್ರಸಿದ್ಧಿ.

ಹಿಂದಿನ ಕಾಲದೇಶದಲ್ಲಿರುವ ವಸ್ತುಗಳು ಅನಂತರ ಕಾಲದೇಶಗಳಲ್ಲಿ ಇರುವ ಹಾಗೆ "ಅದೇ ಇದು" ಎಂದು ಸರ್ವಾನುಭವವಿರುತ್ತದೆ. ಇದಕ್ಕೆ ಪ್ರತ್ಯಭಿಜ್ಞೆ ಎಂದು ಹೆಸರು. ಇಂತಹ ಅನುಭವದಿಂದ ಸಕಲವಸ್ತುಗಳನ್ನು ಕ್ಷಣಿಕವೆಂದು ಹೇಳುವುದು ಅಯುಕ್ತವಲ್ಲವೇ? ಎಂದು ಕೇಳಿದರೆ ಉತ್ತರ—"ಅದೇ ಇದು" ಎಂಬ ಜ್ಞಾನವು ಒಂದೇ? ಎರಡೇ? ಅದು ಎಂಬ ಜ್ಞಾನವೇ ಬೇರೆ. ಇದು ಎಂಬ ಜ್ಞಾನವೇ ಬೇರೆ. ಈ ಎರಡು ಜ್ಞಾನಗಳೂ ಎಡಬಿಡದೆ ಎಂದರೆ ಮಧ್ಯೆ ಬೆರಕೆಯಿಲ್ಲದೆ ಬರುವುದರಿಂದ ಇವುಗಳನ್ನು ಒಂದೇಜ್ಞಾನವೆಂದು ಭ್ರಮಿಸಿಕೊಂಡು ವಸ್ತುಗಳನ್ನು ಸ್ಥಿರಗಳೆನ್ನುತ್ತಾರೆ. ಆ ಜ್ಞಾನಗಳನ್ನು ಬೇರೆ ಬೇರೆ ಮಾಡಿದರೆ ವಸ್ತುಗಳೆಲ್ಲವೂ ಕ್ಷಣಿಕವಾಗುವುವು.

ಕ್ಷಣಿಕವಾದಕ್ಕೆ ಇದೊಂದು ಯುಕ್ತಿ — ಪ್ರಪಂಚದಲ್ಲಿ ವಿನಾಶವೆಂಬುದು ಶಾಶ್ವತವು. ವಿನಾಶಕ್ಕೆ ಉತ್ಪತ್ತಿಯಿಲ್ಲ, ವಿನಾಶವಿಲ್ಲ, ಸ್ವತಸ್ಸಿದ್ಧವು. ವಸ್ತುಗಳು ಹುಟ್ಟಿದ ಉತ್ತರಕ್ಷಣದಲ್ಲೇ ವಿನಾಶಕ್ಕೆ ಗ್ರಾಸವಾಗುತ್ತವೆ, ತುತ್ತಾಗುತ್ತವೆ. ದೀಪಜ್ವಾಲೆಯು ಪ್ರತಿಕ್ಷಣದಲ್ಲೂ ವಿನಾಶವಾಗುವ ಹಾಗೆ ಸಕಲವಸ್ತುಗಳೂ ಪ್ರತಿಕ್ಷಣದಲ್ಲೂ ವಿನಾಶವನ್ನು ಹೊಂದುವುವು. ಆದರೂ ಅದು ಕಾಣುವುದಿಲ್ಲ. ವಸ್ತುವು ಇದ್ದುದು ಇದ್ದಹಾಗೆಯೇ ಕಾಣುತ್ತದೆ. ಇದು ಸೂಕ್ಷ್ಮವಿನಾಶವು. ಬಟ್ಟೆಯನ್ನು ಸುಟ್ಟರೆ ಬೂದಿಯಾಗುತ್ತದೆ. ಮಡಕೆಯನ್ನು ಒಡೆದರೆ ಚೂರಾಗುತ್ತದೆ. ಈ ವಿನಾಶವು ಸ್ಥೂಲ

ವಿನಾಶವು. ಅಂಧಕಾರದಲ್ಲಿರುವ ವಸ್ತುಗಳಿಗೆ ದೀಪದ ಬೆಳಕು ಪ್ರಕಾಶವೇ ಹೊರತು ಉತ್ಪಾದಕವಲ್ಲ—ವ್ಯಂಜಕವು, ಕಾರಕವಲ್ಲ. ಹಾಗೆ ಸ್ವತಸ್ಸಿದ್ಧವಾದ ಸೂಕ್ಷ್ಮಸ್ಥೂಲ ವಿನಾಶಗಳಿಗೆ ಅಗ್ನಿ ಜಲ ವಾಯು ಮೊದಲಾದುವು ಪ್ರಕಾಶಕವು. ಆದುದರಿಂದ ಸರ್ವಂ ಕ್ಷಣಿಕಂ.

ಮತ್ತೊಂದು ಯುಕ್ತಿಯು—ವಸ್ತುಗಳು ಸ್ಥಿರವೆಂಬ ಭಾವನೆಯೇ ದುಃಖಮಯವಾದ ಸಂಸಾರಕ್ಕೆ ಮೂಲಕಾರಣ. ಕ್ಷಣಿಕವೆಂಬ ಭಾವನೆಯೇ ಪರಮವೈರಾಗ್ಯಕ್ಕೆ ಮೂಲ, ಇಲ್ಲಿ ಸ್ಥಿರವೆಂಬ ಪದಕ್ಕೆ ಯಾವತ್ಕಾಲವೂ ಇರುವುದೆಂದರ್ಥವಲ್ಲ. ಎರಡು ಮೂರು ಕ್ಷಣಕಾಲವಿರುವ ವಸ್ತುಗಳೂ ಸ್ಥಿರಗಳೆಂದು ಅಭಿಪ್ರಾಯ. ಕ್ಷಣಿಕವೆಂದರೆ—ಹುಟ್ಟಿದ ಕ್ಷಣದಲ್ಲಿದ್ದು ಎರಡನೆಯ ಕ್ಷಣದಲ್ಲಿ ವಿನಾಶವಾಗುವಂಥಾದ್ದು. ಕ್ಷಣಿಕವೆಂಬುದಕ್ಕೆ ಯುಕ್ತಿಯು ಹೇಗೆಂದರೆ–ಬತ್ತದ ಬೀಜವು ಕಣಜದಲ್ಲಿರುವಾಗ ಅಂಕುರವನ್ನು ಉಂಟುಮಾಡುವುದಿಲ್ಲ; ಗದ್ದೆಯಲ್ಲಿ ಬಿದ್ದಾಗ ಅಂಕುರವನ್ನು ಉಂಟುಮಾಡುತ್ತದೆ. ಒಂದು ವಸ್ತುವಿನಲ್ಲಿ ಸಾಮರ್ಥ್ಯವೂ ಅಸಾಮರ್ಥ್ಯವೂ ವಿರುದ್ಧವಾದುದರಿಂದ ಅವು ಇರಲಾರವು. ಆದುದರಿಂದ ಮನೆಯಲ್ಲಿದ್ದ ಬೀಜವೂ ಗದ್ದೆಯಲ್ಲಿರುವ ಬೀಜವೂ ಬೇರೆ ಬೇರೆ ವಸ್ತುಗಳು. ಹೀಗೆ ದೇಶವಿರೋಧ ಕಾಲವಿರೋಧ ಧರ್ಮವಿರೋಧ ಮೊದಲಾದ ವಿರೋಧಗಳನ್ನು ತೋರಿಸಿ ಪ್ರತಿಕ್ಷಣದಲ್ಲೂ ವಸ್ತುಗಳು ಬೇರೆ ಎಂದು ತಿಳಿಯಬೇಕು.

ಇದಕ್ಕೆ ಸ್ಥಿರವಾದಿಗಳ ಸಮಾಧಾನ—ಒಂದೇ ಬೀಜವಾದರೂ ಸಹಕಾರಿ ಸಮವಧಾನ ಅಸಮವಧಾನಗಳಿಂದ ಸಾಮರ್ಥ್ಯ ಅಸಾಮರ್ಥ್ಯಗಳು ಕಾಲಭೇದದಿಂದ ಇರಬಹುದು. ಸಹಕಾರಿಸಮವಧಾನವೆಂದರೆ—ಮಣ್ಣು ಜಲ ಮೊದಲಾದ ಸಹಾಯಸಂಪತ್ತಿ. ಒಂದು ಕಾರ್ಯಕ್ಕೆ ಅನೇಕ ಕಾರಣಗಳು ಬೇಕು. ಒಂದು ಕಾರಣಮಾತ್ರದಿಂದ ಕಾರ್ಯಸಿದ್ಧಿಯು ಇಲ್ಲವಷ್ಟೆ? ಇದಕ್ಕೆ ಸಹಕಾರವಾದವೆಂದು ಹೆಸರು. ಕ್ಷಣಿಕವಾದಕ್ಕೆ ಪ್ರತಿಪಕ್ಷವಾದ ವಾದ ಇದು.

ಇದರ ಮೇಲೆ ಅವರು ಹೇಳುವುದೆಂತೆಂದರೆ — ಸಹಕಾರಿ ಲಾಭಾಲಾಭಗಳು ಅನ್ಯೋನ್ಯವಿರುದ್ಧಗಳಾದುದರಿಂದ ಒಂದು ಬೀಜಕ್ಕೆ ಅದು ಹೇಗೆಂದು ಕೇಳುತ್ತಾರೆ. ಅವರ ಸಾಮಾಗ್ರೀಭೇದದಿಂದ ಅದೂ ಆಗಬಹು





ದೆಂದು ಸಹಕಾರ ವಾದ ಯುಕ್ತಿಯನ್ನೇ ಹೇಳುವರು.

ವೈರಾಗ್ಯಕ್ಕೆ ಕ್ಷಣಿಕೋಪದೇಶವೇ ಆವಶ್ಯಕವಿಲ್ಲ. ಅನಿತ್ಯವು ಅಶಾಶ್ವತವು, ನಶ್ವರವು ಎಂದು ತಿಳಿದರೂ ಭಾಗ್ಯಶಾಲಿಗಳು ವಿರಕ್ತರಾಗುತ್ತಾರೆ. ದೌರ್ಭಾಗ್ಯವಂತರಿಗೆ ಎಷ್ಟು ಕ್ಷಣವಾದದ ಉಪದೇಶವಾದರೂ ಉಪಯೋಗವಿಲ್ಲವೆಂದು ಸ್ಥಿರವಾದಿಗಳ ಅಭಿಪ್ರಾಯ.

ಸಾಂಖ್ಯರೇ ಮೊದಲಾದವರು, ಪ್ರಾಯಶಃ ಸಕಲವಸ್ತುಗಳಿಗೂ ಪರಿಣಾಮವನ್ನು ಹೇಳುವವರು, ವಾದಿಗಳು. ಪರಿಣಾಮವೆಂದರೆ ಬದಲಾವಣೆ. ಇದನ್ನೇ ವಿಕಾರ, ಅವಸ್ಥೆ, ದಸೆ, ಉತ್ಪತ್ತಿ ಮೊದಲಾದ ಶಬ್ದಗಳಿಂದ ಹೇಳುವರು. ಮೂಲವಸ್ತುಗಳು ಇತರ ವಸ್ತುಗಳ ಸಹಾಯದಿಂದ ಬದಲಾವಣೆಯನ್ನು ಹೊಂದುವುವೇ ಹೊರತು ಹೊಸದಾಗಿ ಯಾವ ವಸ್ತುವೂ ಹುಟ್ಟುವುದೂ ಇಲ್ಲ, ನಾಶವಾಗುವುದೂ ಇಲ್ಲ. ಈ ಪರಿಣಾಮವು ಪ್ರತಿಕ್ಷಣದಲ್ಲೂ ಪ್ರತಿವಸ್ತುವಿನಲ್ಲೂ ನಡೆಯುತ್ತದೆ. ಸ್ಥೂಲವಾದ ಪರಿಣಾಮದಿಂದ ಉತ್ಪತ್ತಿ ವಿನಾಶವನ್ನು ಸಾಮಾನ್ಯ ಜನರು ತಿಳಿಯುವರು.

ಒಂದು ಬೀಜ ಮೊಳಕೆಯಾಗಿ ಎಲೆಯಾಗಿ ದಂಟಾಗಿ ಪುಷ್ಪವಾಗಿ ಫಲವಾಗುವುದು—ಇದೇ ಪರಿಣಾಮವು. ಈ ಪರಿಣಾಮ ಪರಂಪರೆಗೆ ಕಾರ್ಯಕಾರಣ ಭಾವವೆಂದು ಹೆಸರು.

ಕೆಲವರು ಆತ್ಮ ಎಂಬ ವಸ್ತುವನ್ನು ಶಾಶ್ವತ, ನಿತ್ಯ, ಯಾವ ವಿಧವಾದ ಪರಿಣಾಮಿಯಲ್ಲವೆಂದು ಹೇಳುತ್ತಾರೆ. ಕೆಲವರು ಅದನ್ನು ಪರಿಣಾಮಿಯೆಂದು ತಿಳಿಯುವರು. ಈ ದೃಷ್ಟಿಯಿಂದ ಕ್ಷಣವಾದವು ಸರ್ವಸಿದ್ಧಾಂತದಲ್ಲೂ ಇರುತ್ತದೆಂದು ಕೆಲವರ ನಿರ್ಣಯ.

## ಶೂನ್ಯವಾದ

ದುಃಖಸ್ವರೂಪವು ಆರ್ಯಸತ್ಯದಲ್ಲಿ ನಿರೂಪಿಸಲ್ಪಟ್ಟಿರುವುದರಿಂದ ನಾಲ್ಕನೆಯ ಭಾವನೆಯು ವಿವರಿಸಲ್ಪಡುವುದು. ಶೂನ್ಯತೋಪದೇಶವೆಂಬುದು ಸಕಲವಿಧ ರಾಗದ್ವೇಷಗಳನ್ನೂ ಆಗ್ರಹಗಳನ್ನೂ ದೃಷ್ಟಿಗಳನ್ನೂ ಕಲ್ಪನೆಗಳನ್ನೂ ನಿರ್ಮೂಲ ಮಾಡುವುದಕ್ಕೆಂದು ಸ್ಪಷ್ಟವು. ಶೂನ್ಯತಾಸ್ವರೂಪವನ್ನು ನಿರೂಪಿಸುವುದರಲ್ಲಿ ಅನೇಕ ಸಂಪ್ರದಾಯಗಳು, ಮಾರ್ಗಗಳು ಹೊರ

ಟಿರುವುವು. ಕೆಲವರು ಸರ್ವಧರ್ಮನಿಸ್ಸ್ವಭಾವವೆನ್ನುತ್ತಾರೆ. ಧರ್ಮವೆಂದರೆ ವಸ್ತುಗಳು, ಅವುಗಳ ಸ್ವಭಾವಗಳು. ಯಾವ ವಸ್ತುವೂ ಇಲ್ಲ: ವಸ್ತುವಿಗೆ ಯಾವ ಸ್ವಭಾವವೂ ಇಲ್ಲವೆಂದರ್ಥವು; ಕೆಲವರು ಸರ್ವೋಪಶಮವನ್ನು ಶೂನ್ಯತೆ ಎನ್ನುತ್ತಾರೆ. ಉಪಶಮವೆಂದರೆ ವಿನಾಶವು. ಕೆಲವರು ದುರ್ನಿರೂಪವೆನ್ನುತ್ತಾರೆ. ಯಾವುದನ್ನೂ ಯಾವ ರೀತಿಯಲ್ಲೂ ನಿರ್ಣಯಿಸಲು ಸಾಧ್ಯವಿಲ್ಲ ಎಂದರ್ಥ. ಕೆಲವರು ಹೇಗೆ ಹೇಗೆ ನಿರೂಪಣೆ ಮಾಡಿದರೆ ಹಾಗೆ ಹಾಗೆ ಬರುತ್ತದೆ. ಯಾವ ಪಕ್ಷದಲ್ಲೂ ನಿಲ್ಲುವುದಿಲ್ಲ. ಅದೇ ಶೂನ್ಯತೆ ಎನ್ನುತ್ತಾರೆ. ಎಲ್ಲರ ಅಭಿಪ್ರಾಯದಲ್ಲೂ ಸರ್ವಕಲ್ಪನಾನಿವೃತ್ತಿಯೇ ಶೂನ್ಯತೆಯೆಂದು ಸಾಮಾನ್ಯವಾದ ನಿಷ್ಕರ್ಷವು. ಶೂನ್ಯವೇ ತತ್ತ್ವವೆಂದರೆ ತತ್ತ್ವವೆಂಬುದಿಲ್ಲವೇ ಇಲ್ಲವೆಂದು ನಿರ್ಣಯವು. ಸರ್ವತತ್ತ್ವನಿಷೇಧವೇ ಶೂನ್ಯತೆ.

ಈ ಪ್ರಕಾರ ಸರ್ವಕಲ್ಪನಾನಿವೃತ್ತಿಯೇ ಶೂನ್ಯತೋಪದೇಶ ಪ್ರಯೋಜನವೆಂದರೆ ಯಾವುದೂ ಇಲ್ಲವೆಂಬ ಶೂನ್ಯತಾಭಾವನೆಯೇ ಒಂದು ವಿಧವಾದ ಕಲ್ಪನೆಯಾದುದರಿಂದ ಸರ್ವಕಲ್ಪನಾನಿವೃತ್ತಿಯು ಹೇಗಾಯಿತೆಂದು ಆಕ್ಷೇಪ ಬರುತ್ತದೆ. ಅದಕ್ಕೆ ಈ ಶೂನ್ಯತಾ ಭಾವನೆಯು ಸರ್ವಭಾವನೆಯನ್ನು ವಿನಾಶಪಡಿಸಿ ತಾನೂ ವಿನಾಶವಾಗುತ್ತದೆ; ಆದುದರಿಂದಲೇ ಶೂನ್ಯತಾಭಾವನೆಯಿಂದ ಸರ್ವಭಾವನೆಗಳು ನಿವೃತ್ತವಾದರೂ ಈ ನಿವರ್ತಕ ಭಾವನೆಯು ನಿನ್ನ ಅನುಗ್ರಹದಿಂದ ನಿವೃತ್ತಿಯಾಗಬೇಕೆಂದು ಬುದ್ಧನನ್ನು ಕೆಲವರು ಪ್ರಾರ್ಥಿಸಿರುತ್ತಾರೆ.

ಸರ್ವಸಂಕಲ್ಪಹಾನಾಯ ಶೂನ್ಯತಾಮೃತದೇಶನಾ
ಯಸ್ಯ ತಸ್ಯಾಮಪಿ ಗ್ರಾಹಃ ತ್ವಯಾ ಸಾವವಸಾದಿತಃ ।

(ನಾಗಾರ್ಜುನ ಜೇತಸ್ತವ).

ಶೂನ್ಯವಾದಕ್ಕೆ ಯುಕ್ತಿ ಯಾವುದೆಂದರೆ—ಪ್ರಪಂಚವು ಸತ್ತಾಗಿದ್ದರೆ ಸತ್ತಾದ ಆಕಾಶವು ಹಾಗೆ ಕಾರಣಾಪೇಕ್ಷೆಯು ಇರಲಾರದು,—ಅಸತ್ತಾದರೋ ಆಕಾಶಪುಷ್ಪದಂತೆ ಕಾರಣಾಪೇಕ್ಷೆ ಇರಲಾರದು. ಆದುದರಿಂದ ಸತ್ತಲ್ಲ, ಅಸತ್ತಲ್ಲ. ವಿರುದ್ಧವಾದುದರಿಂದ ಉಭಯಾತ್ಮಕವಲ್ಲ, ಅನುಭಯಾತ್ಮಕವೂ ಅಲ್ಲ. ಈ ನಾಲ್ಕು ಪ್ರಕಾರದಲ್ಲೂ ಸೇರದೆ ಇರುವಿಕೆಯೆ ಶೂನ್ಯವೆಂದು ಹೇಳಲ್ಪಡುವುದು. ಇದು ಸ್ವತಸ್ಸಿದ್ಧವಾದುದರಿಂದ ಇದಕ್ಕೆ

ಕಾರಣವಿಲ್ಲ, ವಿನಾಶವೂ ಇಲ್ಲ, ಇದೇ ತತ್ತ್ವವು.

ಮತ್ತು—ಒಬ್ಬ ಮನುಷ್ಯನು ಸ್ವಪ್ನದಲ್ಲಿ ಅನೇಕ ವಸ್ತುಗಳನ್ನು ನೋಡಿ ಎಚ್ಚರಗೊಂಡು ತಾನು ಯಾವುದನ್ನೂ ನೋಡಲಿಲ್ಲವೆಂದು ತಿಳಿಯುತ್ತಾನೆ. ಮತ್ತು, ಗಾಢನಿದ್ರಾವಸ್ಥೆಯಲ್ಲಿದ್ದವನು ಎಚ್ಚರಗೊಂಡು ಸರ್ವವೂ ಶೂನ್ಯ ವಾಗಿತ್ತೆಂದು ತಿಳಿಯುತ್ತಾನೆ. ಹಾಗೆ ಜಾಗ್ರತೆಯಲ್ಲೂ ಮಂಕುಬೆಳಕಿನಲ್ಲಿ ಹಗ್ಗವನ್ನು ನೋಡಿ ಇದು ಸರ್ಪವೆಂದು ತಿಳಿದು ಭಯಪಟ್ಟು ಅನಂತರ ಸರ್ಪವಲ್ಲವೆಂದು ತಿಳಿದು ತಾನು ಸರ್ಪವನ್ನು ನೋಡಲಿಲ್ಲವೆಂದು ತಿಳಿಯು ತ್ತಾನೆ. ಈ ವಿಷಯಗಳಲ್ಲಿ ಐದು ಅಂಶಗಳಿವೆ. ನಾನು ಎಂಬುದು ನೋಡ ತಕ್ಕವನು. ಇದು ಎಂಬುದು ಆಶ್ರಯವು—ಅಧಿಷ್ಠಾನವೆಂದು ಹೆಸರು. ಸರ್ಪವೆಂಬುದು ತಿಳಿಯಲ್ಪಡುವ ವಸ್ತುವು—ಅಧ್ಯಸ್ತವು. ಇದು ಸರ್ಪವೆಂದು ಅಧಿಷ್ಠಾನಕ್ಕೂ ಅಧ್ಯಸ್ತಕ್ಕೂ ತೋರುವ ಸಂಬಂಧವು. ನೋಡು ಎಂಬುದು ಜ್ಞಾನ. ಇಲ್ಲ ಎಂಬುದು ನಿಷೇಧ. ಈ ಐದು ಅಂಶಗಳಲ್ಲಿ ಜ್ಞಾನ ಮಾತ್ರ ನಿಜ. ಬಾಕಿ ನಾಲ್ಕು ಸುಳ್ಳೆಂದು ಕೆಲವರು ಹೇಳುತ್ತಾರೆ. ನಾನು ಎಂಬುದು ಮಾತ್ರ ನಿಜ. ಬಾಕಿ ಎಲ್ಲವೂ ಸುಳ್ಳೆಂದು ಕೆಲವರು. ಇದು ಎಂಬುದು ಮಾತ್ರ ನಿಜವೆಂದು ಕೆಲವರು, ಅಧ್ಯಸ್ತ ಮಾತ್ರ ಸುಳ್ಳು ಎಂದು ಕೆಲವರು. ಈ ಪ್ರಕಾರ ವಿವಾದಗಳಲ್ಲಿ ಐದು ಅಂಶಗಳೂ ನಿಜವೆಂದು ಯಾರೂ ಹೇಳುವು ದಿಲ್ಲ. ಇಲ್ಲದಿರುವ ಅಂಶವು ತೋರತಕ್ಕದ್ದುಂಟೆಂದು ಎಲ್ಲರೂ ಹೇಳುವರು. ಇಲ್ಲಿ ಮಾಧ್ಯಮಿಕರು ಹೇಳುವುದೇನೆಂದರೆ – ಐದು ಅಂಶಗಳೂ ಇಲ್ಲದೆಯೇ ತೋರುತ್ತದೆಂದು ಹೇಳಬಹುದಲ್ಲಾ. ಅರ್ಧ ಜರತೀಯ ರೀತಿಯು ಏತಕ್ಕೆ? (ಅರ್ಧ ಜರತೀಯವೆಂದರೆ—ಒಂದು ಕೋಳಿಯಲ್ಲಿ ಅರ್ಧ ಪಾಕಕ್ಕೂ ಅರ್ಧ ಪ್ರಸವಕ್ಕೂ ಇರಲೆಂದು ಒಬ್ಬನು ಹೇಳಿದನಂತೆ. ಅದರಂತೆ ಎಲ್ಲವೂ ಸುಳ್ಳು ಎಂದು ಹೇಳುವುದು ಯುಕ್ತವೆಂದೂ ಅದೇ ಶೂನ್ಯವಾದವೆಂದೂ ಹೇಳುವರು.

ಇದಕ್ಕಾಗಿಯೇ ಸಾಂಖ್ಯರು ಇಲ್ಲದೇ ಇರುವ ವಸ್ತುವನ್ನು ಗ್ರಹಿಸು ವಂತಹ ಜ್ಞಾನವೇ ಇಲ್ಲವೆಂದು ಹೇಳುವುದರಿಂದ ಯಥಾರ್ಥಖ್ಯಾತಿವಾದಿ ಗಳಾದರು. ಅದರ ಸ್ವರೂಪವು ಮುಂದಿರುವುದು.

ಮತ್ತು ಬುದ್ಧ್ಯಾದಿವಿವೇಚನವು ಶೂನ್ಯವಾದಕ್ಕೆ ಯುಕ್ತಿಯು.

ಹೇಗೆಂದರೆ-ಒಂದು ವಸ್ತ್ರವನ್ನು ತೆಗೆದುಕೊಂಡು ಒಂದೊಂದು ತಂತುವಾಗಿ ವಿವೇಚನೆ ಮಾಡಿದರೆ, ವಿಭಾಗ ಮಾಡಿದರೆ, ತಂತುಗಳಿಗಿಂತ ವಸ್ತ್ರವು ಬೇರೆ ವಸ್ತುವೆಂದು ಗೋಚರವಾಗುವುದಿಲ್ಲ. ವಸ್ತ್ರವೆಂಬ ಬುದ್ಧಿಗೆ ವಿಷಯವೇ ಇಲ್ಲ. ವಿಷಯವಿಲ್ಲದೆಯೇ ವಸ್ತ್ರವೆಂಬ ಬುದ್ಧಿಯು ಬರುತ್ತದೆಂದು ತಿಳಿಯಬೇಕು. ಹೀಗೆ ಸಕಲವಸ್ತುಗಳಲ್ಲೂ ಬುದ್ಧ್ಯಾವಿವೇಚನೆ ಮಾಡಿದರೆ ಸ್ತ್ರೀಪುರುಷ ಮೊದಲಾದ ಸಕಲಜ್ಞಾನವು ಮಿಥ್ಯಾಜ್ಞಾನವು, ವಿಷಯವಿಲ್ಲದ ಜ್ಞಾನವು. ಹೀಗೆ ತಂತುವನ್ನು ವಿವೇಚನೆ ಮಾಡಿದರೆ ಅದೂ ಇಲ್ಲವೆಂದು ತಿಳಿಯುತ್ತದೆ. ಕೊನೆಗೆ ಪರಮಾಣುವನ್ನು ಬುದ್ಧ್ಯಾವಿವೇಚನೆ ಮಾಡಿದರೆ ಅದೂ ಶೂನ್ಯವಾಗಿ ಮಾಯವಾಗುತ್ತದೆ.

ನಿರನ್ವಯೋತ್ಪತ್ತಿವಿನಾಶವೆಂಬುದು ಮತ್ತೊಂದು ಯುಕ್ತಿಯು— ದೀಪ ಜ್ವಾಲೆಯು ಯಾವ ವಿಧವಾದ ಸೂಕ್ಷ್ಮಸನ್ನಿವೇಶವೂ ತಿಳಿಯದೆ ಹಠಾತ್ತಾಗಿ ಹೊರಬೀಳುವುದು. ಹಾಗೆ ಯಾವ ಸೂಕ್ಷ್ಮಾಂಶವೂ ಉಳಿಯದೆ ಥಟ್ಟನೆ ಆರಿಹೋಗುವುದು. ಇದಕ್ಕೆ ನಿರನ್ವಯೋತ್ಪತ್ತಿವಿನಾಶವೆಂದು ಹೆಸರು. ಹೀಗೆ ಬೀಜದಿಂದ ವಿಲಕ್ಷಣವಾದ ಅಂಕುರವು ಹುಟ್ಟಿ ಮಾಯವಾಗಿ ವಿನಾಶವಾಗುವುದು. ಪ್ರಪಂಚಕ್ಕೆ ಹೀಗೆ ಪರಿಸಮಾಪ್ತಿಯೆಂದು ತಿಳಿಯುವರು.

ಇನ್ದ್ರಿಯೈರುಪಲಬ್ಧಂ ಯತ್ ತತ್ ತತ್ತ್ವೇನ ಭವೇದ್ಯದಿ
ಜಾತಾಃ ತತ್ತ್ವವಿದೋ ಬಾಲಾಃ ತತ್ತ್ವಜ್ಞಾನೇನ ಕಿಂ ತದಾ ॥

ಲೋಕಾನುಭವದಿಂದ ತಿಳಿಯಲ್ಪಡುವ ವಸ್ತುಗಳು ತತ್ತ್ವವಲ್ಲ. ಅವೇ ತತ್ತ್ವಗಳಾದರೆ ಪ್ರಪಂಚದಲ್ಲಿರುವವರೆಲ್ಲರೂ ತತ್ತ್ವಜ್ಞರಾಗುವರು. ಅಂತಹ ತತ್ತ್ವಜ್ಞಾನದಿಂದ ಯಾವ ಉಪಯೋಗವೂ ಇಲ್ಲ. ಆದುದರಿಂದ ತತ್ತ್ವಜ್ಞಾನವೆಂಬುದು ಲೋಕಾನುಭವಕ್ಕೆ ಗೋಚರವಾಗಲಾರದು ಎಂದು ನಿರ್ಣಯವು.

## ನೈರಾತ್ಮ್ಯವಾದ

ಅಹಂ, ನಾನು ಎಂಬ ಅಹಂಕಾರವೇ ಮಹಾಮೋಹವು, ದೊಡ್ಡ ಪಿಶಾಚಿಯು. ಅದು ಹಿಡಿದಿರುವವರೆಗೂ ಮಮ, ನನ್ನದು ಎಂಬ ಮಮಕಾರ ಪಿಶಾಚಿಯು ಬಿಡಲಾರದು. ನಾನೇ ಇಲ್ಲವೆಂಬ ನೈರಾತ್ಮ್ಯ ಭಾವನೆಯು

ಬಂದರೆ, ನಾನೇ ಇಲ್ಲವಂತೆ, ನನಗೆ ಯಾವುದು ಬೇಕು ಎಂಬ ಮಮಕಾರ ನಿವೃತ್ತಿಯು ಬರುತ್ತದೆ. ಅಹಂಕಾರ ಮಮಕಾರನಿವೃತ್ತಿಯೆಂಬ ನೈರಾತ್ಮ್ಯ ದರ್ಶನವೇ ನಿರ್ವಾಣವೆಂಬ ಮೋಕ್ಷ ದ್ವಾರ. ಎಣ್ಣೆ ತೀರಿಹೋದರೆ ದೀಪ ಆರಿಹೋಗುವ ಹಾಗೆ ವಿಜ್ಞಾನವೆಂಬ ಆತ್ಮನು, ರಾಗವೆಂಬ ಆಶೆಯು ತೀರಿ ಹೋದರೆ ಆರಿಹೋಗುವುದು ಆದುದರಿಂದ ಮೋಕ್ಷಕ್ಕೆ ನಿರ್ವಾಣವೆಂದು ಹೆಸರು. ನಿರ್ವಾಣವೆಂದರೆ ಶಾಂತವಾಗುವುದು.

ಅಹಂಕಾರನಿವೃತ್ತಿಗೋಸ್ಕರವೆ ಈ ದರ್ಶನದಲ್ಲಿ ಧಾತುದ್ರವ್ಯವೆಂಬ ಶಾಶ್ವತವಾದ ಆತ್ಮನನ್ನು ಅಂಗೀಕರಿಸುವುದಿಲ್ಲ. ದೇಹ, ಇಂದ್ರಿಯ, ಮನಸ್ಸು, ವೇದನ, ಬುದ್ಧಿ ಇವುಗಳ ಸಂಘಾತದಲ್ಲಿ ಅಹಂ ಎಂಬ ಆತ್ಮ ಭಾವವನ್ನು ತಿಳಿಯುವರು, ಬೇರೆ ಆತ್ಮನೆಂಬ ವಸ್ತು ಇದ್ದರೆ, ಅಹಂಕಾರ ವೆಂಬ ಅಹಂಭಾವಕ್ಕೆ ಆಸ್ಪದನಾಗುವನು. ಅಹಂಕಾರವಿದ್ದಲ್ಲಿ ವೈರಾಗ್ಯ ಬರುವುದಿಲ್ಲ, ಇದಕ್ಕಾಗಿಯೇ ಸಾಂಖ್ಯ, ಪಾತಂಜಲ, ಅದ್ವೈತ ಮೊದ ಲಾದ ದಾರ್ಶನಿಕರು, ಅಹಂಕಾರವೆಂಬುದು ಆತ್ಮನಲ್ಲ, ಅಂತಃಕರಣವು; ಅದು ನಿರ್ಮೂಲವಾಗಲೇ ಬೇಕು; ಆತ್ಮನು ಬೇರೆ ಇರುವನು; ಇವೆರಡೂ ಬೆರೆತಿರುವುದರಿಂದ ದುಃಖ; ಇವುಗಳ ವಿವೇಕಮೂಲಕ ವೈರಾಗ್ಯವನ್ನು ಪಡೆಯಬೇಕು; ದೇಹದೊಡನೆ ಆತ್ಮನನ್ನು ಬೆರೆಸಿಕೊಂಡು ಚಾರ್ವಾಕರು ಕಷ್ಟಪಡುವಹಾಗೆ ಕಷ್ಟಪಡಬಾರದು—ಎಂದು ಅಭಿಪ್ರಾಯಪಡುವರು.

ತಾರ್ಕಿಕರು, ಮೀಮಾಂಸಕರು, ಇನ್ನೂ ಕೆಲವರು ವೇದಾಂತಿಗಳು ಅಹಂಕಾರವನ್ನೇ ಆತ್ಮನೆಂದು ಒಪ್ಪಿರುವರು. ಕೇವಲ ಅಹಂಕಾರವೆಂಬುದು ಅನರ್ಥಕರವಲ್ಲ. ಮಮಕಾರದೊಡನೆ ಕೂಡಿರುವ ಅಥವಾ ನಾನೇ ಸ್ವತಂತ್ರನು, ನಾನೇ ಸರ್ವೇಶ್ವರನು ಎಂಬ ಅಹಂಭಾವವೇ ಅನರ್ಥಕರವು. ನನಗೂ ಪ್ರಪಂಚಕ್ಕೂ ಸಂಬಂಧವಿಲ್ಲ, ನಾನು ಸರ್ವೇಶ್ವರನಿಗೆ ಪರತಂತ್ರನು ಎಂಬ ಭಾವನೆಯೊಡನೆ ನಾನು ಎಂಬ ಅಹಂಭಾವವು ದುಃಖನಿವೃತ್ತಿಗೆ ಕಾರಣವಾದ ಪ್ರಯತ್ನಕ್ಕೆ ಮೂಲವಾಗಿರುವುದು. ಈ ಅಹಂಭಾವವು ಸಾಧಕವೇ ಹೊರತು ಬಾಧಕವಲ್ಲವೆಂದು ಅಭಿಪ್ರಾಯಪಡುವರು.

ಈ ಶೂನ್ಯವಾದವು ಅತಿವಾದವಾದರೂ ಇವರ ಗ್ರಂಥಗಳಿಂದ ಶಾಂತಿ ಯೆಂಬುದು ಮೂರ್ತೀಕರಿಸಿ ಮನಸ್ಸಿಗೆ ಗೋಚರವಾಗುತ್ತದೆ. ಅದರಲ್ಲಿ

ಮುಖ್ಯವಾಗಿ ಒಂದು ಮಾತನ್ನು ಬರೆಯುತ್ತೇನೆ—

ಏವಂ ಶೂನ್ಯೇಷು ಧರ್ಮೇಷು ಕಿಂ ಲಬ್ಧಂ ಕಿಂ ಹೃತಂ ಭವೇತ್
ಸತ್ಕೃತಃ ಪರಿಭೂತೋ ವಾ ಕೇನ ಕಃ ಸಂಭವಿಷ್ಯತಿ ॥

ಸಕಲವಸ್ತುಸ್ವಭಾವಗಳು ಶೂನ್ಯವು, ಅಭಾವವು. ಆದುದರಿಂದ ಬಂದದ್ದು ಯಾವುದು, ಹೋದದ್ದು ಯಾವುದು, ಯಾರಿಂದ ಯಾರಿಗೆ ಪುರಸ್ಕಾರ ತಿರಸ್ಕಾರಗಳು, ಏತಕ್ಕೆ ವೃಥಾ ರಾಗದ್ವೇಷಗಳು ಎಂದು ಶೂನ್ಯವಾದದ ಸಮಾಪ್ತಿಯಲ್ಲಿ ಹೇಳಿರುತ್ತಾರೆ. ಏವಂಚ ಶೂನ್ಯವಾದಕ್ಕೆ ಶಾಂತಿಯೇ ಉದ್ದೇಶವೆಂಬುದು ಸ್ಪಷ್ಟ.

ಇತರರಲ್ಲಿ ಕೆಲವರು ಆಯಾವಸ್ತುಸ್ವಭಾವದಿಂದ ಸುಖದುಃಖಗಳು ಬರುತ್ತಿವೆಯಾದಕಾರಣ ಪರರಲ್ಲಿ ರಾಗದ್ವೇಷ ಮೊದಲಾದುದು ಕೂಡದು ಎಂದು ಶಾಂತಿಯನ್ನು ಉಪದೇಶಿಸುತ್ತಾರೆ. ಕೆಲವರು ಸುಖದುಃಖಾದಿಗಳು ನಮ್ಮ ಪ್ರಾಚೀನ ಕರ್ಮ ಮೂಲಕವೆಂದು ಶಾಂತಿಯನ್ನು ಉಪದೇಶಿಸುತ್ತಾರೆ. ಕೆಲವರು ಸರ್ವಸ್ವತಂತ್ರನಾದ ಪರಮೇಶ್ವರನ ಸಂಕಲ್ಪ ಮೂಲಕವೆನ್ನುತ್ತಾರೆ. ಕೆಲವರು ಕ್ಷಣಿಕೋಪದೇಶದಿಂದ, ಕೆಲವರು ಪ್ರಪಂಚವು ಮಿಥ್ಯಾ ಎಂಬ ಉಪದೇಶದಿಂದ ಹೇಳುತ್ತಾರೆ. ದರ್ಶನಗಳಲ್ಲಿ ಶಾಂತಿಯನ್ನು ನಾನಾಮುಖವಾಗಿ ಉಪದೇಶಿಸಿರುವುದರಿಂದ ಯಾವುದೊಂದು ಮಾರ್ಗದಿಂದಲಾದರೂ ಶಾಂತಿ ಸಂಪಾದನೆಯೇ ಮುಖ್ಯವಾದುದು.

## ಅನುಷ್ಠಾನ

ಪ್ರಪಂಚವು ಸುಖಮಯ ಎಂಬ ಭಾವನೆ ಸಂಸಾರಬಂಧಕ್ಕೆ ಮೂಲಕಾರಣ. ಈ ಭಾವನೆಯು ಶಾಂತವಾಗಬೇಕಾದರೆ ದುಃಖಂ ದುಃಖಂ ಎಂಬ ಭಾವನೆಯು ದೀರ್ಘಕಾಲದ ಆದರ, ನಿರಂತರ ಅಭ್ಯಾಸಪಾಟವ ಮೊದಲಾದ ಸಾಮಗ್ರಿಯಿಂದ ಸಾಕ್ಷಾತ್ಕಾರವನ್ನುಂಟುಮಾಡುವುದು. ಈ ಸಾಕ್ಷಾತ್ಕಾರವೆಂಬ ಭಾವನೆಯು ವೇದಾಂತಿಗಳ ಶ್ರವಣ ಮನನ ನಿಧಿಧ್ಯಾಸಗಳಂತೆ ಶ್ರುತಿಮಯೀ, ಚಿಂತಾಮಯೀ, ಭಾವನಾಮಯೀ ಎಂಬ ಕ್ರಮದಿಂದ ಪ್ರಜ್ಞಾಪಾರಮಿತಾ ಎಂಬ ನಾಮಧೇಯದಿಂದ ಪ್ರಸಿದ್ಧವಾಗಿರುವುದು. ಪಾರಮಿತಾ ಎಂದರೆ ಪರಾಕಾಷ್ಠೆಯು, ಅಭ್ಯಾಸ ಸಮಾಪ್ತಿಯೆಂದರ್ಥ.

ಇದರಲ್ಲಿ ದಯಾಪಾರಮಿತಾ, ದಾನಪಾರಮಿತಾ, ಶೀಲಪಾರಮಿತಾ ಮೊದಲಾದ ಸದಾಚಾರಗಳನ್ನು ಸಂಗ್ರಹಿಸಿರುವರು.

''ಬೋಧಿಸತ್ತ್ವಪದವನ್ನು ಅಪೇಕ್ಷಿಸುವವರು ಮೊದಲು ಪ್ರಯತ್ನಶೀಲರಾಗಬೇಕು. ತನ್ನ ಅಪರಾಧಗಳನ್ನೆಲ್ಲ ಮಹಾತ್ಮರಲ್ಲಿ ವಿಜ್ಞಾಪಿಸಿ ಕ್ಷಮೆ ಬೇಡಬೇಕು. ಮನಸ್ಸನ್ನು ದಮನಮಾಡಿ ಸ್ವಾಧೀನದಲ್ಲಿಡಬೇಕು. ಅಪಕಾರವನ್ನು ಪರಿಹರಿಸಬೇಕು. ಶಾಂತಿಯನ್ನು ಸಂಪಾದಿಸಬೇಕು. ಜೀವನ್ಮುಕ್ತರಾಗಿಯೇ ಇರಬೇಕು. ಈ ಆರು ಅಂಶಗಳ ಪ್ರಕಾರವು ದರ್ಶನೋದಯದಲ್ಲಿ ಸಂಗ್ರಹಿಸಲ್ಪಟ್ಟಿರುವುದು. ಇವುಗಳಲ್ಲಿ ಒಂದು ಉದಾಹರಣೆ: ಬುದ್ಧಶಿಷ್ಯನು ಪ್ರತಿದಿನವಲ್ಲೂ ಭೋಜನಕಾಲದಲ್ಲಿ ಈ ಭೋಜನದಿಂದ ಈ ದೇಹದಲ್ಲಿರುವ ಎಂಬತ್ತು ಸಹಸ್ರ ಜಾತಿಕ್ರಿಮಿಗಳನ್ನು ಪೋಷಿಸುತ್ತೇನೆ. ಬೋಧಿಸತ್ತ್ವನಾದ ಮೇಲೆ ಜ್ಞಾನದಿಂದ ಸಕಲ ಪ್ರಾಣಿಗಳನ್ನುದ್ಧರಿಸುವ ಪ್ರಯತ್ನಮಾಡುತ್ತೇನೆ ಎಂಬ ಭಾವನೆಯಲ್ಲಿರಬೇಕು—ಎಂದು. ಹೀಗೆ ಪಾರಾರ್ಥ್ಯಪರಾಕಾಷ್ಠೆಯು ವಿಚಿತ್ರವಾಗಿ ನಿರೂಪಿಸಲ್ಪಟ್ಟಿರುವುದು.

ಸಕಲ ಪ್ರಾಣಿಗಳ ಸುಖದುಃಖ ನಿವಾರಣೆಯಲ್ಲಿ ನಿರತರಾಗಿ ಅವರ ಬಂಧಗಳನ್ನು ಬಿಡಿಸುವುದರಿಂದ ಉಂಟಾಗುವ ಆನಂದಾನುಭವವು ಸಾಕಲ್ಲವೇ? ಇದಕ್ಕಿಂತಲೂ ಶೂನ್ಯತೆಯಲ್ಲಿ, ನಿರ್ವಾಣವೆಂಬ ಮೋಕ್ಷದಲ್ಲಿ ಏನು ರಸವಿದೆ? ಕೈಕಾಲುಗಳೆಂಬ ಭೇದದಿಂದ ಬಹುವಿಧವಾಗಿದ್ದರೂ ದೇಹವನ್ನು ಒಂದೇ ಎಂಬ ಭಾವನೆಯಿಂದ ಅಭಿಮಾನಮೂಲಕವಾಗಿ ಕಾಪಾಡುವ ಹಾಗೆ ಪ್ರಪಂಚವು ನಾನಾವಿಧಭೇದದಿಂದ ಕೂಡಿದ್ದರೂ ಸುಖದುಃಖವಿಷಯದಲ್ಲಿ ಒಂದೇ ಎಂಬ ಭಾವನೆಯಿಂದ ಜಗದುದ್ಧಾರದಲ್ಲಿ ನಿರತರಾಗಿರಬೇಕು.

ಒಬ್ಬನ ಕಷ್ಟದಿಂದ ಜಗತ್ತಿನ ಕಷ್ಟವು ಪರಿಹಾರವಾಗುವ ಪಕ್ಷದಲ್ಲಿ ದಯಾಶಾಲಿಯಾದ ಮನುಷ್ಯನಿಗೆ ಅದು ಕಷ್ಟವಾಗಿರುವುದೇ? ಪರಮಸುಖವಲ್ಲವೇ? ಇದೇ ಮಹಾಯಾನ ಶಬ್ದದ ಅರ್ಥವು. ಪ್ರತ್ಯೇಕಯಾನ ಎಂದರೆ ತಮ್ಮ ತಮ್ಮ ದುಃಖನಿವಾರಣಕ್ಕಾಗಿ ಪ್ರಯತ್ನಪಡುವ ಮಾರ್ಗ. ಪರದುಃಖ ನಿವಾರಣಕ್ಕಾಗಿ ಪ್ರಪಂಚದಲ್ಲಿ ಎಷ್ಟುಕಾಲವಿದ್ದರೂ ಅದೇ ಮೋಕ್ಷಸುಖ. ಇದಕ್ಕಾಗಿ ಸಕಲ ಬೋಧಿಸತ್ತ್ವರು, ಮಹಾಯಾನಮಾರ್ಗದಲ್ಲಿರುವವರು, ಯಾವತ್ಕಾಲವೂ ಸಕಲ ಪ್ರಾಣಿಗಳೂ ಮೋಕ್ಷವನ್ನು ಹೊಂದುವ

ವರೆಗೂ ಪ್ರಪಂಚದಲ್ಲೇ ಇರಬೇಕೆಂದು ಇತರರನ್ನು ಪ್ರಾರ್ಥಿಸುತ್ತಾರೆ. ಬುದ್ಧನು ಭೂವ್ಯಾಕಾಶಗಳು ಇರುವ ಪರ್ಯಂತರ ಲೋಕಪಾಪಗಳನ್ನು ಹೋಗಲಾಡಿಸುವುದಕ್ಕಾಗಿ ತಾನಿರಬೇಕೆಂದು ಹೇಳಿದನೆಂದೂ ಸಕಲ ಪ್ರಾಣಿಗಳ ಪಾಪವೆಲ್ಲವೂ ನನ್ನ ತಲೆಯ ಮೇಲೆ ಬೀಳಲಿ, ಸರ್ವರೂ ಮುಕ್ತರಾಗಲಿ ಎಂದು ಪ್ರಾರ್ಥಿಸಿದನೆಂದೂ ಪ್ರಾಚೀನರು ಬರೆಯುತ್ತಾರೆ.

ಆಕಾಶಸ್ಯ ಸ್ಥಿತಿರ್ಯಾವತ್ ಯಾವದಪ್ಯವನೇಃ ಸ್ಥಿತಿಃ
ತಾವನ್ಮಮ ಸ್ಥಿತಿರ್ಭೂಯಾತ್ ಲೋಕಪಾಪಾನಿ ನಿಘ್ನತಃ ॥

ಎಂದು ವೇದಾಂತಿಗಳಾದ ಭಾಸ್ಕರಾಚಾರ್ಯರು ಭಾಷ್ಯದಲ್ಲಿ ಬುದ್ಧವಚನವನ್ನು ಅನುವಾದ ಮಾಡುತ್ತಾರೆ.

ಕಲಿಕಲುಷಕೃತಾನಿ ಯಾನಿ ಲೋಕೇ
ಮಯಿ ನಿಪತನ್ತು ವಿಮುಚ್ಯತಾಂ ಹಿ ಲೋಕಃ ।

ಎಂದು ಬುದ್ಧವಾಕ್ಯವನ್ನು ಕುಮಾರಿಲಭಟ್ಟಾಚಾರ್ಯರು 'ತಂತ್ರವಾರ್ತಿಕ' ದಲ್ಲಿ ಅನುವಾದ ಮಾಡಿದ್ದಾರೆ.

ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ

ಎಂದು ಉಪನಿಷತ್ತೂ ಹೇಳುತ್ತದೆ. ಇವರೇ ಜೀವನ್ಮುಕ್ತರು.

ಈ ಬೋಧಿಸತ್ತ್ವರಿಗೆ ಪೂರ್ವಪುಣ್ಯಜ್ಞಾನಸಂಭಾರವೇಗಾತಿಶಯದಿಂದ ಶುದ್ಧೋದರನಾದ ಎಂದರೆ ಆಹಾರಶುದ್ಧಿಯುಳ್ಳ ಶ್ರೀಮಂತರಾದ ಮಹಾತ್ಮರ ಕುಲದಲ್ಲಿ ಜನ್ಮವೂ, ಉಪದೇಶವೂ ಜಗದನುಗ್ರಹಕ್ಕಾಗಿ ಬರುವುವು. ಸಕಲ ರಾಗಾದಿಕ್ಲೇಶಾವರಣವೂ, ಜ್ಞೇಯಾವರಣವೂ ಹೋಗಿ ಸರ್ವಜ್ಞತ್ವವು ಬಂದು ಸಕಲಪ್ರಾಣಿದುಃಖನಿರಾಕರಣ ಪ್ರವಣಕರುಣಾಮಯವಾದ ಬುದ್ಧಪದವಿಯು ಪ್ರಾಪ್ತವಾಗುವುದು. ಇದೇ ಪರಮಪದ. ಇದೇ ಪರಮಾನಂದ. ಶೂನ್ಯತೆಯೆಂಬ ನಿರ್ವಾಣವು ನಿಸ್ಸಾರ ಎಂದು ಒಂದು ವಿಧವಾದ ಪರಿಷ್ಕಾರವಿದೆ.

## ಉಪದೇಶವಿಚಾರ

ಈ ಪರಮಾರ್ಥವಾದ ಶೂನ್ಯತತ್ತ್ವವನ್ನು ಅನಭಿಲಪ್ಯ, ಅನಾಜ್ಞೇಯ, ಅವಿಜ್ಞೇಯ, ಅಪರಿಜ್ಞೇಯ, ಅದೇಶಿಕ, ಅಪ್ರಕಾಶಿತ, ಅವಿಷಯ, ಅಕಾರಣ, ಅಕಾರ್ಯ, ಅಲಾಭ, ನಾಲಾಭ, ಅಸುಖ, ಅದುಃಖ, ನಯಶಃ

ನಾಯುಶಃ, ಅರೂಪ, ನಾರೂಪ, ಅವಿಧಿ, ಅಪ್ರತಿಷೇಧ ಇತ್ಯಾದಿ ಶಬ್ದಗಳಿಂದ ಉಪದೇಶಿಸುವರು. ಮಾಂಡೂಕ್ಯೋಪನಿಷತ್ತಿನಲ್ಲಿಯೂ ' ನಾನ್ತಃ ಪ್ರಜ್ಞಾ, ನಬಹಿಃಪ್ರಜ್ಞಾ, ನೋಭಯತಃ ಪ್ರಜ್ಞಾ'' ಮೊದಲಾದ ಶಬ್ದಗಳಿಂದ ಆತ್ಮಸ್ವರೂಪವನ್ನು ಉಪದೇಶಮಾಡಿರುವರು.

ತತ್ತ್ವವು ಈ ರೀತಿಯಾಗಿ ಅನಕ್ಷರವಾದರೆ ಅದರ ಉಪದೇಶ ಹೇಗೆಂದು ಪ್ರಶ್ನೆಬರುತ್ತದೆ. ಇದಕ್ಕೆ ಅಧ್ಯಾರೋಪಾಪವಾದನ್ಯಾಯದಿಂದ ಸಮಾಧಾನವು.

ಅನಕ್ಷರಸ್ಯ ಧರ್ಮಸ್ಯ ಶ್ರುತಿಃ ಕಾ ದೇಶನಾ ಚ ಕಾ
ಶ್ರೂಯತೆ ದೇಶ್ಯತೆ ಚಾರ್ಥಃ ಸಮಾರೋಪಾದನನ್ತರಃ ॥ ಎಂದು.

ಅದು ಹೇಗೆಂದರೆ–ಇದು ಹೀಗಿದೆ ಹಾಗಿದೆ ಎಂದು ವಿಧಿರೂಪವಾಗಿ ಉಪದೇಶವಿಲ್ಲ. ಹೀಗಿಲ್ಲ ಹಾಗಿಲ್ಲವೆಂದು ನಿಷೇಧವೇ ಉಪದೇಶದ ಮಾರ್ಗವು. ''ಅಥಾತ ಆದೇಶೋ ನೇತಿ ನೇತಿ'' ಎಂದು ಉಪನಿಷತ್ತಿನಲ್ಲಿಯೂ ಇದೆಯೆಂದು ಅಭಿಪ್ರಾಯವು.

ಈ ನಿಷೇಧದೃಷ್ಟಿಯಿಂದ ಮಾಡತಕ್ಕ ಉಪದೇಶವು ಯಾವ ಅಂಶವನ್ನು ನಿಷೇಧಿಸುತ್ತದೆ ಎಂದು ವಿಚಾರಿಸಿದರೆ ಕಲ್ಪಿತಾಂಶವನ್ನು ನಿವಾರಣೆ ಮಾಡುತ್ತದೆ. ಉದಾಹರಣೆ–''ಏನಪ್ಪಾ ಅತ್ತಾ ಇತ್ತಾ ನೋಡುತ್ತೀಯೇ?'' ಎಂದು ಕುರುಡನನ್ನು ಕಣ್ಣುಳ್ಳವನು ಕೇಳುವನು. ಅದಕ್ಕೆ ಕುರುಡನ ಎಲ್ಲಿ ನೋಡಿದರೂ ಕೇಶೋಂಡ್ರಕಗಳು, ಕೂದಲಿನ ಉಂಡೆಗಳು ಕಾಣುತ್ತಿವೆಯೆಂದು ಹೇಳಿದಮೇಲೆ ಕಣ್ಣುಳ್ಳವನು ಹೇಳುವನು–ನಿನಗೆ ಕಣ್ಣಿನ ದೋಷದಿಂದ ಹಾಗೆ ಕಾಣುತ್ತದೆ. ವಸ್ತುತಃ ಕೂದಲಿನ ಉಂಡೆಗಳು ಇಲ್ಲವೆಂದು ನಿಷೇಧಮಾಡುವನು. ಹೀಗೆ ಬಾಲರಿಗೆ ಅವಿದ್ಯಾದೋಷದಿಂದ ಕಾಣಲ್ಪಡುವ ಪ್ರಪಂಚವನ್ನು ಜ್ಞಾನಿಯು ಯಾವುದೂ ಇಲ್ಲವೆಂದೂ ಶೂನ್ಯತೆಯನ್ನು ಉಪದೇಶಮಾಡುತ್ತಾನೆ. ಇಲ್ಲಿ ವಿಧಿಯೂ ಇಲ್ಲ, ನಿಷೇಧವೂ ಇಲ್ಲವೆಂದು ಶೂನ್ಯವಾದದ ತಾತ್ಪರ್ಯ.

ಕೆಲವು ಬೌದ್ಧಗ್ರಂಥಗಳಲ್ಲಿ ಇಂತಹ ಅದ್ಭುತಗಳು ತಿಳಿಯಲ್ಪಡುವುವು. —ಬುದ್ಧನನ್ನು ಕೆಲವು ಶಿಷ್ಯರು ಕೆಲವು ಸಂದರ್ಭಗಳಲ್ಲಿ ನಾನಾವಿಧ ಪ್ರಶ್ನೆಗಳನ್ನು ಕೇಳಿದಾಗ ಉತ್ತರಗಳು ಬುದ್ಧನ ತಲೆಯ ಮೇಲಿರುವ ಟೋಪಿ

ಯಿಂದಲೂ ಗೊಂಡೆಯ ಮೇಲೆ ಕಟ್ಟಿರುವ ಜಾಡರ ನೂಲುಗಳಿಂದಲೂ ಆಕಾಶದಿಂದಲೂ ಪಾತ್ರೆಪದಾರ್ಥಗಳಿಂದಲೂ ವಿಚಿತ್ರವಾಗಿ ಬರುತ್ತಿದ್ದವು. ಅಂತಹ ಪ್ರಶ್ನೋತ್ತರಗಳಿಂದ ಸ್ವಸಿದ್ಧಾಂತಸ್ಥಾಪನೆಯನ್ನು ಮತ್ತು ಪರ ಸಿದ್ಧಾಂತ ನಿರಾಕರಣವನ್ನು ಕೆಲವು ಗ್ರಂಥಕಾರರು ಬರೆದಿರುತ್ತಾರೆ. ಅಂತಹ ವುಗಳನ್ನು ಕುಮಾರಿಲಭಟ್ಟಾಚಾರ್ಯರು ಸೂಚಿಸಿ ವಸ್ತುಸ್ವಭಾವವಿರುದ್ಧ ವಾದ ಕಥೆಗಳು ಶ್ರದ್ಧಾಜಡರಿಗೆ, ಮೂಢಾತ್ಮರಿಗೆ ಸರಿಯೇಹೊರತು ಯುಕ್ತಿ ಯಲ್ಲೂ, ವಸ್ತುಸ್ವಭಾವದಲ್ಲೂ ದೃಷ್ಟಿಯಿರುವ ಪ್ರತಿವಾದಿಗಳಿಗೆ ಸರಿಯಲ್ಲ ವೆಂದು ಹೇಳಿರುತ್ತಾರೆ. ಆದುದರಿಂದ ಅಂತಹ ಅದ್ಭುತಮಾರ್ಗಗಳು ಈ ಕಾಲಕ್ಕೆ ಉಪಯೋಗವಿಲ್ಲವೆಂದು ತಿಳಿದು ವಿಸ್ತರಿಸಲ್ಪಡಲಿಲ್ಲ.



## ಸಾರಾಂಶ

ವಿಜ್ಞಾನವಾದೋದಯ ರಹಸ್ಯವು ಹೀಗಿರಬಹುದು—ಯಾವ ವಸ್ತು ಇದ್ದರೂ ಬುದ್ಧಿಗೆ ಗೋಚರವಾಗದೇ ಇದ್ದರೆ ಇದ್ದುದಕ್ಕೂ ಇಲ್ಲದಿರುವು ದಿಕ್ಕೂ ವ್ಯತ್ಯಾಸವಿಲ್ಲ. ವಸ್ತುವಿಲ್ಲದಿದ್ದರೂ ಭ್ರಾಂತನು ಹಗ್ಗವನ್ನು ಸರ್ಪ ವೆಂದು ತಿಳಿದು ಭಯಪಡುವನು. ಸ್ವಪ್ನದಲ್ಲಿ ವಸ್ತುವಿಲ್ಲದಿದ್ದರೂ ಬರಿಜ್ಞಾನ ದಿಂದ ಸಂತೋಷ ವ್ಯಸನಗಳು ಉಂಟಾಗುವುದು ಸರ್ವಾನುಭವಸಿದ್ಧವು. ಆದುದರಿಂದ ಜ್ಞಾನವೇ ವಸ್ತುವು, ವಸ್ತುವೆಂಬುದೇ ಬೇರೆಯಿಲ್ಲವೆಂದು ಜ್ಞಾನಪ್ರಾಧಾನ್ಯವಾದವು ಪ್ರಾರಂಭವಾಗಿರಬಹುದು. ಅದು ಬರುತ ಬರುತ ಯುಕ್ತಿಗಳಿಂದ ವೃದ್ಧಿಯಾಗಿ ಗ್ರಂಥಗಳಾಯಿತು. ಆದರೂ ಲೋಕವ್ಯವ ಹಾರದಲ್ಲಿ ಇತರರು ಇರುವ ಹಾಗೆಯೆ ಅವಿದ್ಯಾಸಂವೃತಿ, ಮಾಯಾ ಭ್ರಾಂತಿ ಯೆಂದು ಹೇಳಿಕೊಂಡು ವ್ಯವಹರಿಸುತ್ತಿರುವರು. ವ್ಯವಹಾರಾವಸ್ಥೆಯನ್ನು ಯಾರೂ ಅತಿಕ್ರಮಿಸಲಿಲ್ಲ. ಇವರ ಅವಿದ್ಯೆಗೂ ಇತರರ ಅವಿದ್ಯೆಗೂ ಗ್ರಂಥ ಕಾರರು ಹೇಳಿರುವ ವ್ಯತ್ಯಾಸವಿದು—ಇಲ್ಲದಿರುವ ವಸ್ತುವನ್ನು ತೋರಿಸು ವುದು ಅವಿದ್ಯೆಯೆಂದು ಬೌದ್ಧರ ಭಾವವು. ಇಲ್ಲಿ ಇಲ್ಲದಿದ್ದರೂ ಬೇರೆ ಸ್ಥಲದಲ್ಲಿರುವ ವಸ್ತುಗಳನ್ನು ತೋರಿಸುವುದು ಅವಿದ್ಯೆಯೆಂದು ತಾರ್ಕಿಕರು ಮೊದಲಾದವರ ಭಾವವು. ವಿಶುದ್ಧಾದ್ವೈತಿಗಳು ಹೇಳುವುದು ಹೇಗೆಂದರೆ —ಮಿಥ್ಯಾವಸ್ತುಗಳನ್ನು ತೋರಿಸುವುದು ಅವಿದ್ಯೆಯೆನ್ನುತ್ತಾರೆ. ಎಂದರೆ,

ಅಷ್ಟು ಶೂನ್ಯವೂ ಅಲ್ಲ, ಅಷ್ಟು ಸತ್ಯವೂ ಅಲ್ಲ, ಮಧ್ಯಸ್ಥವಾಗಿರುವುದು. ಇದೊಂದು ವಿಧವಾದ ಸಾಮರಸ್ಯಮಾರ್ಗವು.

ಕ್ಷಣಿಕವಾದ ರಹಸ್ಯವಿದು—ಪ್ರತಿಯೊಂದು ವಸ್ತುವೂ ಸೂಕ್ಷ್ಮಶೋಧನೆಯಿಂದ ಪ್ರತಿಕ್ಷಣದಲ್ಲೂ ಬದಲಾವಣೆಯಾಗುತ್ತಿರುವುದನ್ನು ಎಲ್ಲರೂ ನಂಬುವರು. ಆದರೆ, ಅದೇ ಇದು ಎಂಬ ಪ್ರಾಮಾಣಿಕ ಅನುಭವಕ್ಕೆ ಕಾರಣವಾಗಿರುವ ಅಂಶವು ವಸ್ತುವಿನಲ್ಲಿ ಇದ್ದೇ ಇರುತ್ತದೆ. ಇದನ್ನು ಸಾದೃಶ್ಯದಿಂದ ಕ್ಷಣವಾದಿಗಳು ನಿರಾಕರಿಸುತ್ತಾರೆ. ಆರಿಸಿ ಹತ್ತಿಸಿದ ದೀಪಜ್ವಾಲೆ, ಕತ್ತರಿಸಿ ಪುನಃ ಬೆಳೆದ ಕೇಶನಖ ಮೊದಲಾದ ದೃಷ್ಟಾಂತಗಳಿಂದ ಪ್ರತ್ಯಭಿಜ್ಞೆ ಎಂಬ ಅನುಭವವು ಭ್ರಾಂತಿ ಎಂದು ಹೇಳುತ್ತಾರೆ. ಆ ಅಂಶವು ದ್ರವ್ಯ—ಧರ್ಮಿ ಎಂದು ಸ್ಥಿರವಾದಿಗಳು ಹೇಳುವರು. ಪ್ರತಿಪ್ರಾಣಿಯಲ್ಲೂ ಬಾಲ್ಯದ ಮೊದಲು ಅದು ಜೀವಿಸಿರುವವರೆಗೂ ಅದೇ ಇದು ಎಂಬ ಪ್ರತ್ಯಭಿಜ್ಞೆಗೆ ವಿಷಯವಾದ ಒಂದು ಚಹರೆಯು. ಆಕಾರವು ಇರುವುದು. ಅದನ್ನು ಮುಂದಿಟ್ಟು ವಸ್ತುವು ಸ್ಥಿರವೆಂದು ತಿಳಿಯುವರು. ಅದನ್ನು ಅಪಲಾಪ ಮಾಡಿದರೆ ಲೋಕವ್ಯವಹಾರವೇ ಹಾಳಾಗುವುದು. ಮುಖ್ಯವಾಗಿ ಎಲ್ಲರೂ ವೈರಾಗ್ಯೋಪದೇಶಕ್ಕಾಗಿ ಹೊಟಿರುವುದರಿಂದ ಕ್ಷಣವಾದಕ್ಕೆ ಇದು ಮೂಲವಾಗಿರಬಹುದು. ಲೋಕದಲ್ಲಿ ನಶ್ವರವಾಗಿರುವ ಶಾಶ್ವತವಲ್ಲದ ವಸ್ತುಗಳನ್ನು ಅತಿಶಯೋಕ್ತಿಯಿಂದ ಕ್ಷಣಿಕವೆಂದೂ ಮನುಷ್ಯಜೀವನವು ಮಿಂಚಿನಂತೆ ಇರುವುದೆಂದೂ ಲೋಕಪ್ರವಾದವಿರುತ್ತದೆ. ನಿತ್ಯ ಶಾಶ್ವತ ಸ್ಥಿರ ಮೊದಲಾದ ಪದಗಳು ಒಂದೇ ಅರ್ಥದಲ್ಲಿರುವುವು. ಕ್ಷಣಿಕ ಅನಿತ್ಯ ಅಸ್ಥಿರ ವಿನಾಶಿ ಮೊದಲಾದ ಪದಗಳು ಅವಕ್ಕೆ ಪ್ರತಿಯಾಗಿರುವುವು, ಈಗಿನ ಗ್ರಂಥಗಳಲ್ಲಿ ವಾದಿಗಳು ನಿತ್ಯ ಸ್ಥಿರ ಕ್ಷಣಿಕ ಎಂದು ಮೂರು ವಿಭಾಗ ಮಾಡಿರುವರು. ಒಂದನೆಯದು ಸಾಂಖ್ಯರಿಗೆ ಸೇರಿದುದು. ಎರಡನೆಯದು ತಾರ್ಕಿಕರಿಗೆ ಸೇರಿದುದು. ಮೂರನೆಯದು ಬೌದ್ಧರಿಗೆ ಸೇರಿದುದು. ಎರಡು ಮೂರು ಕ್ಷಣಕಾಲವಿದ್ದರೂ ಅದನ್ನು ಸ್ಥಿರವೆಂದು ತಾರ್ಕಿಕರು ಹೇಳುತ್ತಾರೆ. ಕ್ಷಣಿಕವೆಂಬ ಸಾಮಾನ್ಯೋಪದೇಶವನ್ನು ಯೌಕ್ತಿಕರು ಪರ್ವತವನ್ನಾಗಿ ಮಾಡಿ ಗ್ರಂಥಗಳಿಂದ ಪರಾಕ್ರಮಿಸುತ್ತಿರುವರು.

ಶೂನ್ಯವಾದೋದಯ ರಹಸ್ಯವಿದು—ಪ್ರಪಂಚದಲ್ಲಿ ಸಾಮಾನ್ಯವಾಗಿ

ನೋಡಿದರೆ ಮನೆ ಮಠ ಧನ ಧಾನ್ಯ ಪಶು ಪಕ್ಷಿ ಮೃಗ ಮನುಷ್ಯ ಮೊದಲಾದ ಸಕಲವಸ್ತುಗಳು ನೋಡುತ್ತಿರುವಾಗಲೇ ನಾಶವಾಗಿ, ವಸ್ತುಗಳು ಇದ್ದದ್ದಕ್ಕೂ ಇಲ್ಲದಿದ್ದಕ್ಕೂ ವ್ಯತಾಸವಿಲ್ಲದೆ ಮಾಯಾಪ್ರಾಯವಾಗಿರುವುವೆಂದು ಲೋಕಾನುಭವದಲ್ಲಿದೆ. ಇದಕ್ಕೆ ದೃಷ್ಟ-ನಷ್ಟವೆಂದು ಹೆಸರು. ಎಂದರೆ ಕಣ್ಣಿಗೆ ಕಾಣಿಸಿ ಮಾಯವಾಗುವುದೆಂದು ಅರ್ಥವು. ಇದಕ್ಕೆ ಮಿಂಚು ಮೊದಲಾದುವುಗಳು ನಿದರ್ಶನಗಳು. ಈ ರೀತಿಯಾದ ಪರ್ಯವಸಾನ, ಕೊನೆ ಎಂಬ ಸ್ಥಿತಿಯನ್ನು ವಿಚಾರಿಸಿದರೆ ಸರ್ವವೂ ನಶ್ವರಸ್ವಭಾವದಲ್ಲಿರುವುವು. ವಿನಾಶವೇ ಶೂನ್ಯವೆಂದು ಲೋಕಪ್ರಸಿದ್ಧಿಯು.

ಹೀಗೆ ವಸ್ತುಗಳ ಕೊನೆಯ ಸ್ವಭಾವವನ್ನು ಯೋಚಿಸಿ ಸರ್ವವೂ ಶೂನ್ಯ ಎಂಬ ಅಭಿಪ್ರಾಯವು ಮೊದಲು ಉದಯಿಸಿರಬಹುದು. ಅದನ್ನು ವಿಚಿತ್ರವಾಗಿ ಪರಿಷ್ಕರಿಸಿ ಪ್ರಬಂಧಗಳು ಪ್ರಾರಂಭವಾಗಿರುವುವು. ಆದರಿಂದ ಶೂನ್ಯವಾದವೆಂದು ಒಂದು ಸಿದ್ಧಾಂತವಾಯಿತು.

## ಮುಖ್ಯ ಸಾರಾಂಶ

ಕ್ಷಣವಾದಿಗಳು ವಸ್ತುಗಳು ಸ್ಥಿತಿಯನ್ನು ನೋಡಿ "ಸರ್ವಂ ಕ್ಷಣಿಕಂ" ಎಂದರು. ವಿಜ್ಞಾನವಾದಿಗಳು ಜ್ಞಾನವಿಲ್ಲದೆ ಬರಿ ವಸ್ತುವಿನ ವಿಚಾರದಿಂದ ಯಾವ ಉಪಯೋಗವೂ ಇಲ್ಲ, ಜ್ಞಾನವೇ ಮುಖ್ಯ ಎಂದು ವಸ್ತುವಿನ ಪೂರ್ವದಶೆಯನ್ನು ನೋಡಿ ವಿಜ್ಞಾನವಾದಿಗಳಾದರು. ಶೂನ್ಯವಾದಿಗಳು ವಸ್ತುಗಳ ಪರ್ಯವಸಾನವನ್ನು ನೋಡಿ ಸರ್ವಂ ಶೂನ್ಯಂ ಎಂದು ತಿಳಿದರು. ಈ ಮೂರು ಮಾರ್ಗಗಳು ದೃಷ್ಟಿಭೇದದಿಂದ ಹುಟ್ಟಿರುವುವು. ತತ್ತ್ವದಲ್ಲಿ ಒಂದೇ ಮಾರ್ಗವಾಗುವುದು.

ಈ ಪ್ರಕಾರ ಸಾಮಾನ್ಯವಾಗಿ ಮುಖ್ಯವೆಂದು ತಿಳಿಯಲ್ಪಡುವ ಕೆಲವು ವಿಷಯಗಳನ್ನು ಸಂಗ್ರಹಮಾಡಿ ಬುದ್ಧದರ್ಶನವು ನಿರೂಪಿಸಲ್ಪಟ್ಟಿತು. ಈ ದರ್ಶನದಲ್ಲಿ ಬಹುವಿಧ ಪ್ರಭೇದಗಳಿರುವುವು. ಒಂದು ವಿಧವನ್ನು ಮಾತ್ರ ನೋಡಿದವರು ಇತರ ಭಾಗಗಳನ್ನು ನೋಡಿ ಹೇಳುವವರಿಗೆ ಅಥವಾ ಬರೆದಿರುವವರಿಗೆ ಬೌದ್ಧಸಿದ್ಧಾಂತ ತಿಳಿಯದೆಂದು ಹೇಳುತ್ತಾರೆ. ಇದು ಜನರ ಸಹಜ ಸ್ವಭಾವ. ಅನೇಕ ಭಾಗಗಳನ್ನು ನೋಡಿದವರು ಇಂತಹ ಸಾಹ

ಸೋಕ್ತಿಗಳನ್ನು ಹೇಳಲಾರರು. ಬೌದ್ಧದರ್ಶನಕ್ಕೂ ಇತರ ದರ್ಶನಗಳಿಗೂ ಬಹುವಿಧ ಸಾಮೀಪ್ಯವಿದ್ದರೂ ಬಹುವಿಧ ವೈರೂಪ್ಯವೂ ಇರುತ್ತದೆ. ನಾನಾ ದರ್ಶನಜ್ಞಾನವು ಸಾಮಾನ್ಯವಾಗಿ ಶಾಂತಿಗೆ ಕಾರಣವಾಗಿರುವುದರಿಂದ ನಿಧಾನವಾಗಿ ಸರ್ವದರ್ಶನಗಳನ್ನೂ ವಿಚಾರಿಸುವುದು ಮುಖ್ಯ.

## ಆಧುನಿಕ ವಿವಾದ

ಈ ಬೌದ್ಧಮತದಲ್ಲಿ ಶೂನ್ಯವಾದವೆಂಬುದು ಒಂದು ವಿಧವಾದ ವಸ್ತುವಾದವೇ ಹೊರತು ಕೇವಲ ಅಭಾವವೆಂಬ ಅವಸ್ತುವಾದವಲ್ಲ ಎಂದು ಕೆಲವರು ಅಭಿಪ್ರಾಯಪಡುವರು. ಇದು ನಿರ್ಮೂಲವಲ್ಲ. ನಮ್ಮವರು ಸಹ ನಿತ್ಯವಾದ ತತ್ತ್ವವು ಬುದ್ಧನಿಂದ ಉಪದೇಶಿಸಲ್ಪಟ್ಟಿರುವುದು "ನಿತ್ಯ ಮಪಿ ಕಿಂಚಿತ್ತತ್ತ್ವಂ ಬುದ್ಧೋಪದಿಷ್ಟಮ್" ಎಂದು ಉದಾಹರಿಸುತ್ತಾರೆ ಬುದ್ಧಮತದಲ್ಲಿ ನಿತ್ಯತತ್ತ್ವವಾದವೂ ಒಂದಿರಬಹುದು. ಶೂನ್ಯತತ್ತ್ವ ವಾದವೂ ಇರಬಹುದು. ಬೌದ್ಧಮತವೆಲ್ಲಾ ಒಂದೆಂದು ತಿಳಿದು ಶೂನ್ಯ ವಾದವೂ ವಸ್ತುವಾದವೆಂದು ಭ್ರಾಂತಿಗೆ ಅವಕಾಶವಾಗುವುದು. ಶೂನ್ಯ ತತ್ತ್ವವಾದವೇ ಬೇರೆ. ನಿತ್ಯತತ್ತ್ವವಾದವೇ ಬೇರೆ. ಒಂದೇ ಮತದಲ್ಲಿ ವಿಚಿತ್ರಾಭಿಪ್ರಾಯಗಳು ಸರ್ವದರ್ಶನಗಳಲ್ಲೂ ಇರುವುವು.

ಶೂನ್ಯಂ ತತ್ತ್ವಂ ಎಂದರೆ ತತ್ತ್ವವಿಲ್ಲವೇ ಇಲ್ಲವೆಂದರ್ಥವು. ಈ ವಾದಕ್ಕೆ ಅಸದ್ವಾದವೆಂದು ಹೆಸರು. ಬಾಕಿ ದರ್ಶನಗಳಿಗೆಲ್ಲಾ ಸದ್ವಾದ ಗಳೆಂದು ಹೆಸರು. ಈ ಸತ್ ಅಸತ್ ಎಂಬ ಪದಗಳಿಗೆ ಉಂಟು ಇಲ್ಲ, ವಸ್ತು ಅವಸ್ತು, ಸತ್ಯಂ ಶೂನ್ಯಂ ಎಂದು ಅರ್ಥ. ಅಸದ್ವಾದವೂ ವಸ್ತು ವಾದವೆಂದರೆ ಸದಸತ್ಯದ ಪದಾರ್ಥಗಳ ವ್ಯುತ್ಪತ್ತಿ ಸಂಸ್ಕಾರವು ಸಾಲದೆಂದು ತಿಳಿದುಬರುತ್ತದೆ.

ಶೂನ್ಯವಾದದಲ್ಲಿ ಸರ್ವವಿಧವಾದ ಕಲ್ಪನಾ ಸಂಕಲ್ಪದೃಷ್ಟಿ ವಾಸನಾ ಭಾವನಾ ಗ್ರಾಹ ಎಂಬ ಪದಗಳಿಂದ ಹೇಳಲ್ಪಡುವ ಅಭಿನಿವೇಶದ ನಿವೃ ತ್ತಿಯೇ ಶೂನ್ಯತಾ ಪ್ರಯೋಜನವು. ಇದೇ ಪರಮಪುರುಷಾರ್ಥ. ಭಾವಾ ಭಿನಿವೇಶವಾಗಲಿ ಅಭಾವಾಭಿನಿವೇಶವಾಗಲಿ ಏನು ವಿಶೇಷವು ? ಎರಡೂ ಕಲ್ಪನಾ ರೂಪವಲ್ಲವೇ ಎಂದು ನಿರ್ಣಯಿಸಿರುವರು. ಇಂತಹ ಪ್ರಪಂಚವಿ

ನಿವೃತ್ತಿ ಪ್ರಪಂಚೋಪಶಮು, ಸರ್ವಸಂಕಲ್ಪಹಾನಿ, ಮೊದಲಾದ ಪದಗಳಿಂದ ಹೇಳಲ್ಪಡುವಶೂನ್ಯತೆಯನ್ನು ಸದಾ ಭಾವಿಸಿದರೆ ಈ ಶೂನ್ಯತಾಭಾವನೆಯೇ ಒಂದು ಅಭಿನಿವೇಶವಾಗಿರುವಲ್ಲಿ ಸರ್ವಭಾವನಾನಿವೃತ್ತಿ ಹೇಗೆಂದು ಶಂಕಿಸಿ ಸರ್ವಭಾವನೆಯಲ್ಲಿ ಈ ಭಾವನೆಯೂ ಸೇರಿರುವುದರಿಂದ ನಿವೃತ್ತಿಯಾಗುತ್ತದೆ ಎಂದು ಕೆಲವರು; ಬುದ್ಧನ ಅನುಗ್ರಹದಿಂದ ನಿವೃತ್ತಿಯಾಗುತ್ತದೆ ಎಂದು ಕೆಲವರು; ಸಕಲಭಾವನೆಗಳನ್ನು ನಿವೃತ್ತಿಮಾಡಿ ಕೊನೆಯಲ್ಲಿ ತಾನೂ ನಿವೃತ್ತಿಯಾಗುತ್ತದೆಂದು ಕೆಲವರು ಹೇಳುವರು.

ಏವಂಚ ಸರ್ವನಿವೃತ್ತಿರೂಪವಾದ ಶೂನ್ಯತೆಯಲ್ಲಿ ಶೂನ್ಯತಾದೃಷ್ಟಿ, ನಾಸ್ತಿತಾಕಲ್ಪನೆ ಎಂಬ ಅಭಿನಿವೇಶ ಕೂಡದೆಂದು ವಚನಗಳಿರುವುವು. ಅವುಗಳಿಗೆ ಯಥಾಶ್ರುತವಾಗಿ ಅದು ಶೂನ್ಯಸ್ವರೂಪವಲ್ಲ ನಾಸ್ತಿಸ್ವರೂಪವಲ್ಲ ಎಂದು ಭ್ರಮಿಸಿ ಶೂನ್ಯತತ್ತ್ವವು ವಸ್ತುರೂಪವೆಂದು ವಾದವು ಹೊರಟಿರಬಹುದು. ಆ ವಚನಗಳು—

ಪ್ರಪಂಚವಿನಿವೃತ್ತ್ಯೇಕಸ್ವಭಾವಯಾಂ ಚ ಶೂನ್ಯತಾ
ತಸ್ಯಾಂತು ಶೂನ್ಯತಾದೃಷ್ಟಿರಮಲಾಯಂ ನ ಶೋಭತೇ ॥

ಎಂದು ದೃಷ್ಟಿಯೆಂಬ ಅಭಿನಿವೇಶವನ್ನು ನಿಷೇಧಿಸಿರುತ್ತದೆ, ಶೂನ್ಯತೆಯನ್ನಲ್ಲ ಹೀಗೆ—

ಪ್ರಪಂಚೋಪಶಮಾಯೈವ ವ ಶೂನ್ಯತಾ ಸೂಪದಿಶ್ಯತೇ
ತಸ್ಮಾತ್ಪ್ರಪಞ್ಚೋಪಶಮಂ ಶೂನ್ಯತಾಯಾಂ ಪ್ರಯೋಜನಮ್ ॥
ಶೂನ್ಯತ್ವಂ ನಾಸ್ತಿತಾರೂಪಂ ಜೀವಾಂಸ್ತು ಪರಿಕಲ್ಪಯನ್
ಪ್ರಪಂಚಂ ವರ್ಧಯನ್ನೇವ ನ ಚ ವೇತ್ತಿ ಪ್ರಯೋಜನಮ್ ॥

ಎಂಬ ವಚನದಲ್ಲಿ ಪರಿಕಲ್ಪನೆಯೆಂಬ ಅಭಿನಿವೇಶಕ್ಕೆ ನಿಷೇಧವೇ ಹೊರತು ನಾಸ್ತಿತಾರೂಪಕ್ಕೆ ನಿಷೇಧವಿಲ್ಲ. ಆದುದರಿಂದ ವಚನಾರ್ಥವನ್ನು ಚೆನ್ನಾಗಿ ವಿಮರ್ಶಿಸಿದರೆ ವಿವಾದಕ್ಕೆ ಅವಕಾಶವಿರಲಾರದು.

ಶೂನ್ಯತಾವಾಸನಾಧಾನಾತ್ ಹೀಯತೇ ಭಾವವಾಸನಾ
ಕಿಂಚಿನ್ನಾಸ್ತೀತಿ ಚಾಭ್ಯಾಸಾತ್ ಸಾಪಿ ಪಶ್ಚಾತ್ ಪ್ರಹೀಯತೇ ॥

ಶೂನ್ಯಭಾವನೆಯಿಂದ ಭಾವವಾಸನೆಗಳೆಲ್ಲವೂ ಶಾಂತವಾಗುತ್ತವೆ. ಯಾವುದೂ ಇಲ್ಲವೆಂದು ಅಭ್ಯಾಸವಾದರೆ ಶೂನ್ಯ ಭಾವನೆಯೆಂಬ ಭಾವವೂ ವಿನಾಶವಾಗುವುದೆಂದು ಹೇಳಿರುವರು. ಹೀಗಿರುವಲ್ಲಿ ಶೂನ್ಯವೆಂಬುದು ವಸ್ತುರೂಪವೆಂದು ಹೇಳುವುದನ್ನು ವಿಚಾರಪರರು ಒಪ್ಪಲಾರರು.

೪

# ಸಾಂಖ್ಯದರ್ಶನ

## ಸಂಪ್ರದಾಯ

ಸಾಂಖ್ಯಶಬ್ದಾರ್ಥ—ವಸ್ತುಗಳನ್ನು ಸಂಖ್ಯೆಮಾಡಿ ತತ್ತ್ವಗಳು ಇಪ್ಪತ್ತೈದು, ಪದಾರ್ಥಗಳು ಅರುವತ್ತು ಎಂದು ನಿರ್ಣಯಮಾಡಿರುವುದರಿಂದ ಇವರಿಗೆ ಮೊದಲು ಸಾಂಖ್ಯರೆಂಬ ಹೆಸರು ಬಂದಿತು. ಕರ್ಮಶಾಸ್ತ್ರವೆಂಬ ಜೈಮಿನಿ ಸಿದ್ಧಾಂತಕ್ಕೆ ಪ್ರತಿಪಕ್ಷಿಯಾಗಿ ಕರ್ಮಮಾರ್ಗವನ್ನು ಪರಿತ್ಯಾಗ ಮಾಡಿ ಜ್ಞಾನಮಾರ್ಗವನ್ನೇ ಆಶ್ರಯಿಸಬೇಕೆಂದು ಸಿದ್ಧಾಂತಮಾಡಿರುವುದರಿಂದಲೂ ಸಂಖ್ಯಾ ಎಂಬ ಪದಕ್ಕೆ ಜ್ಞಾನ ಎಂದರ್ಥವಿರುವುದರಿಂದಲೂ ಸಾಂಖ್ಯರು ಎಂದರೆ ಜ್ಞಾನಶಾಸ್ತ್ರವಾದಿಗಳು ಎಂದು ಪ್ರಸಿದ್ಧಿ ಬಂದಿರುತ್ತದೆ. ಇವರು ಯುಕ್ತಿಯಿಂದಲೂ, ಮೂಲಪುರುಷರಾದ ಕಪಿಲಮಹರ್ಷಿಯು ಮಾಡಿದ 'ಷಷ್ಟಿತಂತ್ರ' ಎಂಬ ಆಗಮಗ್ರಂಥಮೂಲಕವಾಗಿಯೂ ಸಿದ್ಧಾಂತವನ್ನು ಸ್ಥಾಪಿಸಿರುತ್ತಾರೆ. ಆದುದರಿಂದ ಕಾಪಿಲಸಿದ್ಧಾಂತವೆಂದು ಸಾಂಖ್ಯವನ್ನು ಕರೆಯುತ್ತಾರೆ. ಆ 'ಷಷ್ಟಿತಂತ್ರ'ವೆಂಬ ಆಗಮವು ಲುಪ್ತವಾಗಿರುವುದು. ಅದರ ಸಾರಾಂಶವನ್ನು ಆಸುರಿ, ಪಂಚಶಿಖಾಚಾರ್ಯ ಮೊದಲಾದವರು ಗುರುಶಿಷ್ಯಪರಂಪರೆಯಿಂದ ಸಂಗ್ರಹವಾಗಿ ಬರೆದಿರುವರು...'ಸಾಂಖ್ಯ ಪ್ರವಚನ' ಎಂಬ ಆರು ಅಧ್ಯಾಯವುಳ್ಳ ಸೂತ್ರಗ್ರಂಥವೂ ಅದರ ಭಾಷ್ಯ ವಾರ್ತಿಕ ಮೊದಲಾದುವೂ ವಿಜ್ಞಾನಭಿಕ್ಷು ಬರೆದ ಗ್ರಂಥಗಳೂ ಪ್ರಾಚೀನ ಪಂಡಿತರಿಂದಲೂ,ಪೂರ್ವಾಚಾರ್ಯರಿಂದಲೂ ಉದಹರಿಸಲ್ಪಡಲಿಲ್ಲವಾದುದರಿಂದ ಇದು ಆಧುನಿಕಮಾರ್ಗ, ಪರಿಗ್ರಾಹ್ಯವಲ್ಲ ಎಂದು ವಿಚಾರಪರರು ತಿಳಿಯುವರು. ಪಾತಂಜಲ ಸಿದ್ಧಾಂತವನ್ನು 'ಸಾಂಖ್ಯಪ್ರವಚನ' ಎಂದು ಪ್ರಾಚೀನರು ಹೇಳುವರು.

### ಈಶ್ವರ

ಈಶ್ವರವಾದಿಗಳೆಲ್ಲರೂ ನಿತ್ಯಸರ್ವಜ್ಞನಾದ, ಸರ್ವಸ್ವತಂತ್ರನಾದ ಒಂದು ವ್ಯಕ್ತಿಯನ್ನಂಗೀಕರಿಸಿ ಅನಂತಕೋಟಿ ಬ್ರಹ್ಮಾಂಡಗಳ ಸೃಷ್ಟಿಸ್ಥಿತಿ

ಸಂಹಾರ ವ್ಯಾಪಾರಗಳನ್ನೂ ಅನಂತ ಜೀವಾತ್ಮೋದ್ಧಾರಭಾರವನ್ನು ಅವನ ಮೇಲೆ ಹೊರಿಸಿ ಅಪಾರ ಸಾಮರ್ಥ್ಯವನ್ನೂ ಕೊಟ್ಟು ಅವನು ಪ್ರಪಂಚಾನುಗ್ರಹನಿರತನಾಗಿರುವನು ಎಂದು ಅಭಿಪ್ರಾಯಪಡುವರು.

ನಿರೀಶ್ವರವಾದಿಗಳಾದ ಸಾಂಖ್ಯ ಬೌದ್ಧ ಮೊದಲಾದವರು ಪ್ರತಿ ಕಲ್ಪಕ್ಕೂ ಪ್ರತಿಪ್ರಪಂಚಕ್ಕೂ ನಿರ್ವಾಹಕರಾದ ಕಪಿಲಾದಿಯೋಗಸಿದ್ಧರನ್ನೂ ಬೋಧಿ ಸತ್ತ್ವರನ್ನೂ ಅಂಗೀಕರಿಸಿ ಪ್ರಪಂಚಾನುಗ್ರಹವನ್ನು ನಿರ್ವಹಿಸುತ್ತಾರೆ.

ಏವಂಚ ಏಕೇಶ್ವರವಾದಿಗಳು ಕೆಲವರು, ಪ್ರವಾಹೇಶ್ವರವಾದಿಗಳು ಕೆಲವರು. ಉದ್ದೇಶವು ಎಲ್ಲರಿಗೂ ಸಮ. ಅನೇಕೇಶ್ವರವಾದದಲ್ಲಿ ಪರಸ್ಪರ ಈರ್ಷ್ಯಾಸೂಯೆಗಳಿಗೆ ಅವಕಾಶವಿರಬಹುದೆಂದು ಏಕೇಶ್ವರವಾದದವರು ಹೇಳುವರು. ಏಕೇಶ್ವರವಾದದಲ್ಲಿ ನಿತ್ಯರಾದ, ಮುಕ್ತರಾದ ಅನಂತ ಜೀವಾತ್ಮರು ಇದ್ದರೂ ಅವರಲ್ಲಿ ಪರಸ್ಪರ ಹೇಗೆ ಸೌಹಾರ್ದವಿರುವುದೊ ಹಾಗೆಯೇ ಸ್ವಾರ್ಥವಿಲ್ಲದ ದಯಾಶಾಲಿಗಳಾದ ಎಷ್ಟು ಈಶ್ವರರಿದ್ದರೂ ಬಾಧಕವಿರಲಾರದು. ದೋಷದೃಷ್ಟಿಯನ್ನು ಸರ್ವತ್ರ ಪ್ರಸರಿಸುವ ಹಾಗೆ ಗುಣದೃಷ್ಟಿಯನ್ನೂ ಪ್ರಸರಿಸಿದರೆ ಯಾವ ವಿವಾದವೂ ಇರಲಾರದು.

ಈಶ್ವರವಿಷಯದಲ್ಲಿ ಒಬ್ಬ ಸಾಂಖ್ಯಗ್ರಂಥಕಾರರು ಹೀಗೆ ಬರೆಯುತ್ತಾರೆ—"ಶಾಶ್ವತನಾದ ಪರಮೇಶ್ವರನೊಬ್ಬನಿದ್ದರೆ ದೇವಾಧಿದೇವನಿಗೂ ಅವನನ್ನು ನೋಡಿ ಬಹು ದುಃಖ ಹುಟ್ಟುತ್ತದೆ" ಎಂದು. ಇದರಿಂದ ನಿತ್ಯೇಶ್ವರನಿಲ್ಲದಿದ್ದರೆ ಯಾರು ಬೇಕಾದರೂ ಸಿದ್ಧರಾಗಿ ಈಶ್ವರರಾಗಬಹುದು ಎಂಬ ಅಭಿಪ್ರಾಯ ತೋರುತ್ತದೆ.

ಹಿಂದೆ ಹೇಳಿದ ಕಪಿಲಮಹರ್ಷಿಯು ಅಣಿಮಾದಿಸಿದ್ಧಿಯುಳ್ಳ ಮಹಾಪುರುಷನು. ಲೋಕಾನುಗ್ರಹಕ್ಕಾಗಿ ಕಲ್ಪಾದಿಯಲ್ಲಿ ವೇದಾದಿ ಆಗಮಗಳನ್ನು ಅವನು ಪ್ರಕಾಶಪಡಿಸಿದ್ದುದರಿಂದ ಅವನು ಈಶ್ವರಸ್ಥಾನದಲ್ಲಿರುವನು. ಇಂತಹ ಸಿದ್ಧಪುರುಷರು ಪ್ರತಿಕಲ್ಪದಲ್ಲೂ ಒಬ್ಬರು ಬರುತ್ತಾರೆ. ಹಿಂದಿನವರು ಮುಕ್ತರಾಗುತ್ತಾರೆ. ಶಾಶ್ವತವಾದ ಒಬ್ಬ ಈಶ್ವರನಿಲ್ಲವೆಂದು ಸಿದ್ಧಾಂತವಾದುದರಿಂದ ಇವರಿಗೆ ನಿರೀಶ್ವರವಾದಿಗಳು, ಪ್ರವಾಹೇಶ್ವರವಾದಿಗಳೆಂದು ಪ್ರಸಿದ್ಧಿ. ಇವರಲ್ಲಿ ಕೆಲವರು ಶಾಶ್ವತವಾದ ಈಶ್ವರನನ್ನು

ಅಂಗೀಕರಿಸಿರುವುದರಿಂದ ಸೇಶ್ವರಸಾಂಖ್ಯರೆಂದು ಅವರಿಗೆ ಪ್ರಸಿದ್ಧಿ. ಈಗ ಪಾತಂಜಲರೆಂಬ ಯೋಗಸಿದ್ಧಾಂತದವರಿಗೆ ಸೇಶ್ವರಸಾಂಖ್ಯರೆಂಬ ಹೆಸರಿದೆ.

ಇತಿಹಾಸಪುರಾಣಗಳಲ್ಲಿ ಸಾಂಖ್ಯಮತವನ್ನು ಬಹುವಾಗಿ ಹೇಳಿರುವುದರಿಂದ ಇದಕ್ಕೆ ವೇದಾಂತಸಿದ್ಧಾಂತ ಎಂದು ಹಿಂದೆ ಪ್ರಸಿದ್ಧಿ ಇರಬಹುದು. ಅನುಮಾನಗಳಿಂದ ಸಿದ್ಧವಾದ ಪ್ರಕೃತಿಕಾರಣತ್ವವನ್ನೇ ಉಪನಿಷತ್ತುಗಳೂ ಅನುವಾದಮಾಡುತ್ತವೆ ಎಂದು ಸಾಂಖ್ಯರ ಅಭಿಪ್ರಾಯ. ಬಾದರಾಯಣಾಚಾರ್ಯರು ಬ್ರಹ್ಮಸೂತ್ರದಲ್ಲಿ ಉಪನಿಷತ್ತುಗಳಿಗೆ ಸಾಂಖ್ಯಮತಭಿಪ್ರಾಯವು ಇಲ್ಲವೆಂದು ಬಹುವಾಗಿ ಹೇಳುವುದರಿಂದಲೂ ಈ ಅಭಿಪ್ರಾಯವು ಸೂಚಿತವಾಗುತ್ತದೆ. ಅನೇಕ ದಾರ್ಶನಿಕರು ಸಾಂಖ್ಯಮತಪ್ರಕ್ರಿಯೆಯನ್ನು ಅನುಸರಿಸಿರುವುದರಿಂದ ಇದನ್ನು ಬಹು ಪ್ರಾಚೀನದರ್ಶನವೆಂದು ತಿಳಿಯಬಹುದು.

## ಪ್ರತಿಮತ

ಅಭಿಪ್ರಾಯಗಳು ಅನಾದಿಗಳಾಗಿದ್ದರೂ ವಿಚಾರಕ್ಕೆ ಒಂದು ಕ್ರಮವನ್ನಾಶ್ರಯಿಸಬೇಕು. ಒಂದು ದರ್ಶನವನ್ನು ತಿಳಿಯಬೇಕಾದರೆ ಪ್ರತಿಯಾಗಿರುವ ಮತ್ತೊಂದು ದರ್ಶನದ ಅಭಿಪ್ರಾಯವನ್ನು ಅಲ್ಲಲ್ಲಿ ಸೂಚಿಸುತ್ತ ಇರಬೇಕು. ಇದರಿಂದ ಆ ದರ್ಶನದ ವಿಷಯ ಬುದ್ಧಿಯಲ್ಲಿ ಸ್ಥಿರವಾಗಿ ನಿಲ್ಲುವುದು. ಸಾಂಖ್ಯಮತಕ್ಕೂ ಬೌದ್ಧಮತಕ್ಕೂ ಇರುವ ವ್ಯತ್ಯಾಸಗಳನ್ನು ವಿಚಾರಿಸಿದರೆ ಸರ್ವಾಂಶದಲ್ಲೂ ಕಕ್ಷಿಪ್ರತಿಕಕ್ಷಿಗಳು ತೋರಿಬರುವುವು. ಆದುದರಿಂದ ಸಾಂಖ್ಯಮತವನ್ನು ಬೌದ್ಧಮತದ ಸಹಾಯದಿಂದ ಸ್ಪಷ್ಟವಾಗಿ ತಿಳಿಯಬೇಕಾಗುತ್ತದೆ. ಅಲ್ಲದೆ ಬೌದ್ಧಮತಜ್ಞಾನವು ಸರ್ವಮತಗಳಿಗೂ ಬೇಕಾಗಿರುವುದರಿಂದ ಆ ಮತವನ್ನು ಮೊದಲು ನಿರೂಪಿಸಿ ಅನಂತರ ಸಾಂಖ್ಯಮತವನ್ನು ನಿರೂಪಿಸಲಾಗುವುದು.

ಸರ್ವ ವಸ್ತುಗಳು ಸತ್ ಎಂದು ಸಾಂಖ್ಯಮತವು. ಸತ್ ಎಂದರೆ ಅಸ್ತಿ ಎಂಬ ವ್ಯವಹಾರಕ್ಕೆ ಗೋಚರವಾದ ಸತ್ತೆಯು, ಇರುವಿಕೆಯು. ಸತ್ತ್ವವೆಂಬ ಭಾವವು ಸರ್ವ ವಸ್ತುಗಳಿಗೂ ಉಂಟು. ಅಸತ್ತ್ವವೆಂಬ ಸ್ವಭಾವವುಳ್ಳ ವಸ್ತುವೇ ಇಲ್ಲವೆಂದು ಅಭಿಪ್ರಾಯ. ಬೌದ್ಧರು ಇದಕ್ಕೆ

ಪ್ರತಿಯಾಗಿ ಸರ್ವವೂ ಅಸತ್ಯೆಂದು ಹೇಳುವರು. ಸಾಂಖ್ಯರು ಸತ್ಯವಾದಿಗಳು, ಬೌದ್ಧರು ಶೂನ್ಯವಾದಿಗಳು. ಹೀಗೆ ಸರ್ವವೂ ನಿತ್ಯವೆಂದೂ ಅನಿತ್ಯವೆಂದೂ, ಸ್ಥಿರವೆಂದೂ ಕ್ಷಣಿಕವೆಂದೂ, ಅಭಿವ್ಯಕ್ತಿಯೆಂದೂ ಉತ್ಪತ್ತಿಯೆಂದೂ, ಸತ್ಕಾರ್ಯವೆಂದೂ ಅಸತ್ಕಾರ್ಯವೆಂದೂ, ಭಾವವೆಂದೂ ಅಭಾವವೆಂದೂ. ಜ್ಞಾನವೆಲ್ಲ ಯಥಾರ್ಥವೆಂದೂ ಭ್ರಾಂತಿಯೆಂದೂ ಹೀಗೆ ಸರ್ವ ವಿಷಯದಲ್ಲೂ ಕಕ್ಷಿಪ್ರತಿಕಕ್ಷಿಗಳಿರುವುವು.

## ಅಖ್ಯಾತಿ

ಅಖ್ಯಾತಿ ಎಂದರೆ ವಸ್ತುವನ್ನು ಸರಿಯಾಗಿ ತಿಳಿದುಕೊಳ್ಳದೆ ಇರುವ ಭ್ರಾಂತಿ ಎಂದರ್ಥ. ಮುಖ್ಯವಾದ ಈ ಅಂಶವನ್ನು ವಿವರಿಸಬಹುದು— ಸಾಂಖ್ಯರು ಸರ್ವಜ್ಞಾನವನ್ನು ಸತ್ಯ, ಯಥಾರ್ಥ ಎನ್ನುತ್ತಾರೆ. ಬೌದ್ಧರು ಅಸತ್ಯ, ಅಯಥಾರ್ಥ ಎನ್ನುತ್ತಾರೆ. ಇದರಿಂದ ಬೌದ್ಧರ ಜ್ಞಾನವೆಲ್ಲವೂ ಭ್ರಮೆಯಾಯಿತು. ವ್ಯವಹಾರದಲ್ಲಿ ಅವಿದ್ಯೆಯಿಂದ ಉಂಟಾದ ಸತ್ಯ ಅಸತ್ಯ ಎಂಬ ವಿಭಾಗವಿರುವುದು. ಪರಮಾರ್ಥದಲ್ಲಿ ಸರ್ವವೂ ಭ್ರಾಂತಿ. ಸಾಂಖ್ಯರಿಗೆ ಭ್ರಮೆಯೆಂಬುದೇ ಇಲ್ಲವೇ, ಎಂದರೆ ಭ್ರಮೆ ಎಂಬ ವ್ಯವಹಾರವುಂಟು. ಒಂದು ವಸ್ತುವನ್ನು ಮತ್ತೊಂದು ವಸ್ತುವಾಗಿ ತಿಳಿಯುವುದು ಭ್ರಮೆ. ಅಂತಹ ಭ್ರಮೆಯೆಂಬ ಒಂದು ಜ್ಞಾನವನ್ನು ಸಾಂಖ್ಯರು ಒಪ್ಪುವುದಿಲ್ಲ. ಎಂದರೆ, ಇತರರು ಒಂದು ವಸ್ತುವನ್ನು ಮತ್ತೊಂದು ವಸ್ತುವಾಗಿ ತಿಳಿಯುವುದು ಎಂಬ ಭ್ರಾಂತಿಯನ್ನು ಎಲ್ಲಿ ಹೇಳುತ್ತಾರೋ ಅಲ್ಲಿ ಇವರು ಆ ಎರಡು ವಸ್ತುಗಳಿಗೂ ಇರುವ ವ್ಯತ್ಯಾಸವನ್ನು ತಿಳಿಯದೆ ಇರುವುದೇ ಭ್ರಮೆ ಎಂದು ಹೇಳುತ್ತಾರೆ. ಇದೇ ಅಖ್ಯಾತಿವಾದ. ಎಂದರೆ, ವಸ್ತುಗಳಿಗಿರುವ ಪರಸ್ಪರ ವ್ಯತ್ಯಾಸವನ್ನು ತಿಳಿಯಲಿಲ್ಲ ಎಂದು ಅರ್ಥ. ಹಗ್ಗವನ್ನು ಸರ್ಪವಾಗಿ ತಿಳಿದುಕೊಳ್ಳುವುದನ್ನು ಭ್ರಾಂತಿ, ಅಧ್ಯಾಸ ಅಥವಾ ಅನ್ಯಥಾಖ್ಯಾತಿ ಎಂದು ಕರೆಯುವರು. ಹಗ್ಗಕ್ಕೂ ಸರ್ಪಕ್ಕೂ ಇರುವ ವ್ಯತ್ಯಾಸವನ್ನು ತಿಳಿಯದಿರುವುದನ್ನು ಅಖ್ಯಾತಿ ಎಂದು ಕರೆಯುವರು.

ವಿಪಂಚ ಭ್ರಾಂತಿ ಎಂಬ ಶಬ್ದಕ್ಕೆ ಸಾಂಖ್ಯರ ಅರ್ಥ ಯಾವುದೆಂದರೆ, ಎದುರಿಗಿರುವ ಒಂದು ವಸ್ತುವಿನಲ್ಲಿ ಮುಖ್ಯವಾಗಿರುವ ಅಂಶವನ್ನು ಗ್ರಹಿಸದೆ

ಸಾಧಾರಣವಾದ ಅಂಶವನ್ನು ಗ್ರಹಿಸುವ ಪ್ರತ್ಯಕ್ಷ ಎಂದು. ಎದುರಿಗಿರುವ ವಸ್ತುವಿಗೆ ಸಮಾನವಾದ ಬೇರೊಂದು ವಸ್ತುವಿನ ಸ್ಮರಣೆ ಬೆರೆತು ಭ್ರಾಂತಿ ಎಂದು ವ್ಯವಹರಿಸಲ್ಪಡುವುದು.

ಎಂದರೆ, ಸ್ವಲ್ಪ ಬೆಳಕಿನಲ್ಲಿ, ವಾರುದ್ಧವಾಗಿಯೂ ಒಂದು ಕಡೆ ದಪ್ಪವಾಗಿಯೂ ಮತ್ತೊಂದು ಕಡೆ ಸಣ್ಣನಾಗಿಯೂ, ಸೊಟ್ಟಸೊಟ್ಟವಾಗಿಯೂ, ಬಿದ್ದಿರುವ ಹಗ್ಗವನ್ನು ನೋಡಿ ಸರ್ಪವೆಂದು ಒಬ್ಬನು ಭಯಪಡುತ್ತಾನೆ ; ಅನಂತರ ಪರೀಕ್ಷಿಸಿ ಧೈರ್ಯವನ್ನು ಹೊಂದುತ್ತಾನೆ. ಇಲ್ಲಿ ಸರ್ಪಕ್ಕೂ ಹಗ್ಗಕ್ಕೂ ಇರುವ ಸಾಧಾರಣ ಅಂಶಗಳು, ದೀರ್ಘ ವಕ್ರ ಮೊದಲಾದುವು. ಇವುಗಳನ್ನು ಮಾತ್ರ ಗ್ರಹಿಸಿ ಸಮಾನವಾದ ಸರ್ಪಸ್ಮರಣೆ ಬಂದರೆ ಅವನು ಭಯಪಡುತ್ತಾನೆ. ಇದೇ ಅಖ್ಯಾತಿವಾದದ ಸಾರಾಂಸ. ಪ್ರಭಾಕರ ಮೀಮಾಂಸಕರೂ ರಾಮಾನುಜೀಯರೂ ಈ ಮಾರ್ಗವನ್ನು ಆಶ್ರಯಿಸಿರುವರು. ಇದೇ ಯಥಾರ್ಥಖ್ಯಾತಿವಾದ. ಇಲ್ಲಿ ಮತ್ತೊಂದು ಅಂಶವನ್ನೂ ತಿಳಿಯಬೇಕು. ಸಾದೃಶ್ಯದಿಂದ ಸರ್ಪ ಸ್ಮರಣೆ ಬಂದರೆ ಗಾಬರಿಯಲ್ಲಿ ಅದು ಸ್ಮರಣೆಯೆಂದೂ ತಿಳಿದುಬರಲಿಲ್ಲ. ಯಥಾರ್ಥವಾದ ಸರ್ಪವನ್ನು ನೋಡಿದರೆ ಏನೇನು ಆಗಬೇಕೋ ಅವೆಲ್ಲವೂ ಆಗುತ್ತದೆ ಎಂದು ಭಾವ.

ಇತರರು ಹೇಳುವುದು ಏನೆಂದರೆ—ಹಗ್ಗದಲ್ಲಿ ಸಾಧಾರಣವಾದ ಅಂಶಗಳನ್ನು ನೋಡಿ ಸರ್ಪವನ್ನು ಸ್ಮರಿಸುವವನಿಗೆ ಇದು ಸರ್ಪವು ಎಂಬ ಮೂರನೆಯ ಜ್ಞಾನ ಹುಟ್ಟುತ್ತದೆ. ಅದೇ ಭ್ರಮೆ. ಪ್ರತ್ಯಕ್ಷಸ್ಮರಣೆಗಳು ಇದಕ್ಕೆ ಕಾರಣವು. ಇಂತಹ ಭ್ರಮೆಯಿಂದ ಭಯ. ಪರೀಕ್ಷಿಸಿ ಇದು ಸರ್ಪವಲ್ಲ, ಅಥವಾ ಇದು ಹಗ್ಗ ಎಂಬ ಜ್ಞಾನದಿಂದ ಭಯನಿವೃತ್ತಿ ಆಗುವುದು. ಗ್ರಹಣಸ್ಮರಣೆಗಳಲ್ಲದೆ ಭ್ರಮೆ ಎಂಬ ಮೂರನೆ ಜ್ಞಾನವನ್ನು ಸ್ವೀಕರಿಸುವರು. ಇವರು ಭ್ರಾಂತಿವಾದಿಗಳು. ಇವರಲ್ಲಿ ಅವಾಂತರ ಕಲಹಗಳು ಬೇಕಾದಷ್ಟಿರುವುವು. ಅವುಗಳ ವಿವರಣೆಗೆ ಇಲ್ಲಿ ಅವಕಾಶ ಸಾಲದು. ಈ ರೀತಿಯಾದ ಅಭಿಪ್ರಾಯಭೇದಕ್ಕೆ ಪ್ರಯೋಜನವೇನೆಂದರೆ ಭ್ರಾಂತಿಯೆಂಬ ಜ್ಞಾನವಿದ್ದರೆ ವಸ್ತುವಿಲ್ಲದೆ ಜ್ಞಾನವೆಂಬುದೊಂದು ಉಂಟೆಂದು ಸಿದ್ಧವಾಗುತ್ತದೆ. ಆಗ ಸರಿಯಾದ ಜ್ಞಾನವು ಸಹ ವಸ್ತುವಿಲ್ಲದೆ ಹುಟ್ಟುವುದು ಎಂದು ಶೂನ್ಯವಾದಕ್ಕೆ ಅವಕಾಶವಾಗುತ್ತದೆ. ಮತ್ತು

ವಸ್ತುವಿದೆಯೋ ಇಲ್ಲವೋ ಸತ್ಯವೋ ಶೂನ್ಯವೋ ಎಂಬ ಸಂಶಯ ಸಿದ್ಧಾಂತಕ್ಕೆ, ಅನಿರ್ವಚನೀಯ ಸಿದ್ಧಾಂತಕ್ಕೆ ಅವಕಾಶವಾಗುತ್ತದೆ. ಆಗ ಬೌದ್ಧರಿಗೂ ಮಿಥ್ಯಾವಾದಿಗಳಿಗೂ ವಿಜಯವಾಗುತ್ತದೆ. ವಿಷಯವಿಲ್ಲದೆ ಜ್ಞಾನವೇ ಇಲ್ಲವೆಂಬ ಯಥಾರ್ಥಖ್ಯಾತಿವಾದದಲ್ಲಿ, ಅಖ್ಯಾತಿವಾದದಲ್ಲಿ ಅವರಿಗೆ ಪರಾಜಯವಾಗುತ್ತದೆ. ಶೂನ್ಯವಾದಕ್ಕೆ ಪ್ರತಿಪಕ್ಷವಾಗಿಯೇ ಅಖ್ಯಾತಿವಾದ ಉದಯಿಸಿತು. ಈ ರಹಸ್ಯವನ್ನು 'ನ್ಯಾಯಮಂಜರಿ'ಯಲ್ಲಿ ಜಯಂತ ಭಟ್ಟಾಚಾರ್ಯರು ಸೂಚಿಸಿರುತ್ತಾರೆ.

ಈ ಅಖ್ಯಾತಿಗೆ ಅವಿವೇಕ ಅಭಿಮಾನ ಎಂದು ಹೆಸರು. ಪ್ರಕೃತಿ ಪುರುಷರ ಅವಿವೇಕವೇ ಸಂಸಾರ ಕಾರಣವು. ವಿವೇಕಖ್ಯಾತಿಯು, ಸತ್ತ್ವ ಪುರುಷಾನ್ಯತಾಖ್ಯಾತಿಯು ಸಾಕ್ಷಾತ್ಕಾರದಶೆಯನ್ನು ಹೊಂದಿ ಅವಿವೇಕ ದಿಂದ ಬಂದಿರುವ ಸಂಸಾರವನ್ನು ನಿವೃತ್ತಿಪಡಿಸುವುದು. ಸತ್ತ್ವವೆಂದರೆ ಪ್ರಕೃತಿ, ಪುರುಷನೆಂದರೆ ಆತ್ಮ, ಅನ್ಯತಾಖ್ಯಾತಿಯೆಂದರೆ ಪರಸ್ಪರವಿರುವ ವ್ಯತ್ಯಾಸ ನಿಶ್ಚಯ.

## ಜ್ಞಾನ ಪ್ರಕಾಶ

ಮೊಟ್ಟಮೊದಲು ಜ್ಞಾನವೆಂಬ ವಸ್ತು ಅಥವಾ ಶಕ್ತಿ ಇದೆಯೇ, ಇರಬೇಕೇ ? ಎಂದು ವಿಚಾರಿಸಿದರೆ—ಒಂದು ಸ್ಥಲದಲ್ಲಿರುವ ಅನೇಕ ಜನ ರಲ್ಲಿ ಒಬ್ಬನು ಸರ್ಪವನ್ನು ಕಂಡರೆ ತಕ್ಷಣದಲ್ಲಿ ಭಯದಿಂದೆದ್ದು ಓಡುತ್ತಾನೆ. ಇತರರು ಸರ್ಪವನ್ನು ನೋಡುವವರೆಗೂ ಅಥವಾ ಕೇಳುವವರೆಗೂ ಅಲ್ಲೇ ಕುಳಿತಿರುವವರು. ಹೀಗೆ ಪರಿತ್ಯಾಗಕ್ಕೆ ಜ್ಞಾನ ಬೇಕಾದರೆ ಪರಿಗ್ರಹಕ್ಕೂ ಜ್ಞಾನ ಬೇಕಾಗುವುದು. ತಾನು ತೆಗೆದುಕೊಳ್ಳುವುದಕ್ಕೆ ಸಾಧ್ಯವಾದ ಒಂದು ವಸ್ತುವನ್ನು ಕಂಡವನು ಅದನ್ನು ತೆಗೆದುಕೊಳ್ಳುವನು ; ಕಾಣದೇ ಇರು ವವನು ಸುಮ್ಮನಿರುವನು. ಹೀಗೆ ಪ್ರವೃತ್ತಿಗೂ ನಿವೃತ್ತಿಗೂ ಮುಖ್ಯವಾಗಿ ಇಷ್ಟಾನಿಷ್ಟಜ್ಞಾನ ಬೇಕು. ಇದೇ ಹೇಯೋಪಾದೇಯವಿಜ್ಞಾನ ; ರಾಗ ದ್ವೇಷಗಳಿಗೆ ಕಾರಣ. ಬೇಕೆಂಬ ಇಚ್ಛೆಯೇ ರಾಗ, ಬೇಡವೆಂಬ ಇಚ್ಛೆಯೇ ದ್ವೇಷ. ಇವೆರಡೂ ಇಲ್ಲದಿದ್ದರೆ ಉಪೇಕ್ಷೆ ಎಂದು ಹೆಸರು. ವಸ್ತು ಅನು ಕೂಲವಾಗಿದ್ದರೆ ರಾಗ, ಪ್ರತಿಕೂಲವಾಗಿದ್ದರೆ ದ್ವೇಷ, ಉದಾಸೀನವಾಗಿದ್ದರೆ ಉಪೇಕ್ಷೆ.

ಇಂತಹ ಸಕಲ ವ್ಯಾಪಾರವನ್ನು ವ್ಯವಹಾರ ಲೋಕಯಾತ್ರೆ ಅಥವಾ ಜಗದ್ವ್ಯಾಪಾರ ಎನ್ನುವರು. ಇಂತಹ ವ್ಯವಹಾರಕ್ಕೆ ಮುಖ್ಯವಾಗಿ ಬೇಕಾಗಿರುವುದು ಜ್ಞಾನವೆಂಬ ಶಕ್ತಿ, ಪ್ರಕಾಶ. ಇದರ ಸ್ವರೂಪದಲ್ಲೂ, ಆಶ್ರಯದಲ್ಲೂ ಉತ್ಪತ್ತಿಯಲ್ಲೂ ಇತರ ಅಂಶಗಳಲ್ಲೂ ಬಹುವಿಧ ಅಭಿಪ್ರಾಯಭೇದಗಳಿರುವುದಾದರೂ ಜ್ಞಾನ ವೆಂಬ ಪ್ರಕಾಶವುಂಟು. ಆ ಪ್ರಕಾಶಕ್ಕೆ ಪ್ರಕಾಶವು ಬೇಕೇ ಅಥವಾ ಬೇಡವೇ ಎಂಬ ವಿಚಾರವೇ ಸ್ವಯಂಪ್ರಕಾಶ, ಪರಪ್ರಕಾಶವೆಂಬ ವಿವಾದ.

ಬೆಂಕಿ ಮೊದಲಾದ ವಸ್ತುಗಳು ಬೆಂಕಿಯೆಂದು ಗೊತ್ತಾಗದಿದ್ದರೂ ಮುಟ್ಟಿದರೆ ಸುಡುವುವು. ಕಣ್ಣು ಕಿವಿ ಮೊದಲಾದ ವಸ್ತುಗಳು ಮನುಷ್ಯ ಪ್ರಾಣಿಗಳಿಗೆ ಗೊತ್ತಾಗದೆಯೇ ರೂಪ ಶಬ್ದ ಮೊದಲಾದುವುಗಳ ಜ್ಞಾನವನ್ನುಂಟುಮಾಡುತ್ತವೆ. ಇವುಗಳಿಗೆ ಕಾರಕಹೇತುಗಳೆಂದು ಹೆಸರು. ಹೊಗೆ ಕಂಡರೆ ಮಾತ್ರ ಇಲ್ಲಿ ಬೆಂಕಿಯಿದೆ ಎಂದು ತಿಳಿಯುತ್ತದೆ, ವಾಸನೆ ಗೋಚರವಾದರೆ ಪೊದೆಯಲ್ಲಿ ಪುಷ್ಪವಿದೆಯೆಂದು ತಿಳಿಯುತ್ತದೆ. ಇವುಗಳಿಗೆ ಜ್ಞಾಪಕ ಹೇತುಗಳೆಂದು ಹೆಸರು.

ಜ್ಞಾನ ವ್ಯವಹಾರಕ್ಕೆ ಕಾರಣವಾದರೆ ಆ ಜ್ಞಾನ ಕಾರಕವೇ ಅಥವಾ ಜ್ಞಾಪಕವೇ ಎಂದು ವಿಚಾರ ಬರುತ್ತದೆ. ಜ್ಞಾನಕ್ಕೆ ಜ್ಞಾನಬೇಕಾದರೆ ಅದಕ್ಕೆ ಮತ್ತೊಂದು ಜ್ಞಾನ ಬೇಕಾಗುವುದು. ಹೀಗೆ ಅನವಸ್ಥೆಯು ಬರುವುದಲ್ಲದೆ ಜ್ಞಾನಗಳನ್ನು ತಿಳಿದುಕೊಳ್ಳುವುದರಲ್ಲೇ ಯಾವತ್ಕಾಲವೂ ಕಳೆದರೆ ವಸ್ತುವ್ಯವಹಾರವೇ ಇಲ್ಲದೇಹೋಗಬೇಕಾಗುತ್ತದೆ ಎಂದು ಸಾಂಖ್ಯ ತಾರ್ಕಿಕ ಮೀಮಾಂಸಕರೇ ಮೊದಲಾದವರು ಜ್ಞಾನವನ್ನು ಕಾರಕಹೇತು ಎಂದು ಒಪ್ಪಿದರು, ಬೌದ್ಧರು, ವೇದಾಂತಿಗಳು, ಮತ್ತು ಪ್ರಾಚೀನ ಮೀಮಾಂಸಕರೇ ಮೊದಲಾದವರು ಜ್ಞಾಪಕ ಎನ್ನುತ್ತಾರೆ.

ಜ್ಞಾಪಕಪಕ್ಷದಲ್ಲಿ : ವ್ಯವಹಾರಕ್ಕೆ ಮೊದಲು ಜ್ಞಾನವು ಬೇಕು. ಆ ಜ್ಞಾನವೆಂಬ ಪ್ರಕಾಶವು ಸ್ವಪರನಿರ್ವಾಹಕರೀತಿಯಲ್ಲಿ ತಾನೂ ತಿಳಿಯುತ್ತಾ ವಸ್ತುಗಳನ್ನು ತಿಳಿಯಿಸುವುದು. ಸ್ವಪರನಿರ್ವಾಹಕವೆಂದರೆ—ದೀಪವು ಅಂಧಕಾರದಲ್ಲಿ ತಾನು ತಿಳಿಯುತ್ತ ವಸ್ತುಗಳನ್ನೂ ತಿಳಿಯಿಸುತ್ತದೆ. ದೀಪ ಪ್ರಕಾಶಕ್ಕೆ ಮತ್ತೊಂದು ದೀಪದ ಆವಶ್ಯಕತೆಯಿಲ್ಲ. ಶಬ್ದವೆಂಬ ಶಬ್ದವು

ಸಕಲ ಶಬ್ದಗಳೊಡನೆ ತನ್ನನ್ನು ಬೋಧಿಸುವುದು. ಮನಸ್ಸು ಇತರ ವಸ್ತುಗಳಂತೆ ತನ್ನನ್ನು ತಿಳಿದುಕೊಳ್ಳುವುದು. ಸರ್ವಜ್ಞನ ಜ್ಞಾನವು ತನ್ನನ್ನು ತಿಳಿಯದೇ ಹೋದರೆ ಅವನು ಸರ್ವಜ್ಞನೇ ಆಗಲಾರನು. ನಾನು ಸತ್ಯವಾಗಿ ಹೇಳುತ್ತೇನೆಂಬ ವಾಕ್ಯದಲ್ಲಿ ಈ ವಾಕ್ಯವು ಸೇರಿರುತ್ತದೆ. ಇವು ಸ್ವಪರನಿರ್ವಾಹಕಗಳು. ಹೀಗಿರುವಲ್ಲಿ ಜ್ಞಾನವೆಂಬ ಪ್ರಕಾಶವು ಸ್ವಪರ ನಿರ್ವಾಹಕರೀತಿಯಲ್ಲಿ ಜ್ಞಾಪಕವೆಂದು ಕೆಲವರು ಅಭಿಪ್ರಾಯಪಡುವರು.

ಆದರೆ, ಹುಡುಗ ಎಷ್ಟು ಶಿಕ್ಷಿತನಾದರೂ ತನ್ನ ಭುಜದ ಮೇಲೆ ತಾನು ಹತ್ತಲಾರನು. ಬೆರಳಿನ ತುದಿ ಎಲ್ಲವನ್ನು ಮುಟ್ಟಿದರೂ ತನ್ನನ್ನು ತಾನು ಮುಟ್ಟಲಾರದು. ಹೀಗೆ ಪ್ರತಿನಿದರ್ಶನಗಳು ಬೇಕಾದಷ್ಟಿರುವುವು. ಆದ್ದರಿಂದ ಕರ್ತೃವಿಗೂ ಕರ್ಮಕ್ಕೂ ಭೇದವಿರಬೇಕೆಂದು ತೋರುತ್ತದೆ. ಎಂದರೆ, ಕರ್ತೃಕರ್ಮಕ್ರಿಯೆಗಳಲ್ಲಿ ಕೆಲವು ಕರ್ತೃಗಳು ಕಾರಕಗಳಾಗಿಯೂ ಕೆಲವು ಜ್ಞಾಪಕಗಳಾಗಿಯೂ ಇರುವುವು. ಇಲ್ಲಿ ಪ್ರತಿನಿದರ್ಶನಗಳು ಕಾರಕಕ್ಕೆ ಸೇರುತ್ತವೆ. ಕಾರಕಸ್ಥಲದಲ್ಲಿ ಕರ್ತೃಕರ್ಮ ಭೇದವಿರಬೇಕು. ಜ್ಞಾಪಕಸ್ಥಲದಲ್ಲಿ ಭೇದವಿರಬೇಕೆಂದು ನಿಯಮವಿಲ್ಲ. ತನ್ನನ್ನು ತಾನೇ ನೋಡುತ್ತಾನೆ, ಎಂಬುದು ಸತ್ಯವಲ್ಲವೇ ? ಆದುದರಿಂದ ಜ್ಞಾಪಕಪಕ್ಷದಲ್ಲಿ, ಜ್ಞಾನ ಸ್ವಪರನಿರ್ವಾಹಕಮಾರ್ಗದಲ್ಲಿ ಸ್ವಯಂ ಪ್ರಕಾಶವಾಗಿರಬಹುದು.

ಮತ್ತು ಜ್ಞಾನವು ಸ್ವಯಂಪ್ರಕಾಶವಲ್ಲದಿದ್ದರೆ ತನ್ನ ಜ್ಞಾನಕ್ಕೂ ಇತರರ ಜ್ಞಾನಕ್ಕೂ ವ್ಯತ್ಯಾಸವಿಲ್ಲ. ಇತರರ ಜ್ಞಾನದಿಂದಲೂ ತಾನು ವ್ಯವಹಾರವನ್ನು ಮಾಡಬೇಕಾಗುತ್ತದೆ. ಆದುದರಿಂದ ತನ್ನ ಸುಖವು, ದುಃಖವು ತನಗೆ ತಿಳಿಯುವ ಹಾಗೆ ಜ್ಞಾನವು ಹುಟ್ಟುವಾಗಲೇ ತಿಳಿಯುತ್ತ ಹುಟ್ಟುತ್ತದೆ ಎಂದು ಹೇಳುವರು.

ಸ್ವಪ್ರಕಾಶವಲ್ಲ ಎಂಬ ವಾದದ ರಹಸ್ಯವನ್ನು 'ನ್ಯಾಯಮಂಜರೀ' ಕಾರರು ಸೂಚಿಸಿರುವರು. ಹೇಗೆಂದರೆ, ವಿಜ್ಞಾನವಾದದಲ್ಲಿ ಹೊರಗಿನ ವಸ್ತುವೆಲ್ಲವೂ ಒಳಗಿನ ಜ್ಞಾನವೇ ಎಂದು ನಿರ್ಣಯ, ಜ್ಞಾನವು ತನ್ನನ್ನು ತಾನು ತಿಳಿಯುವುದಾದರೆ ಹೊರಗೆ ವಸ್ತುವಿರಬೇಕಾಗಿಲ್ಲ. ತಾನೇ ತನಗೆ ವಿಷಯ ಎಂದು ವಿಜ್ಞಾನವಾದ ಜಯಿಸುವುದು. ಜ್ಞಾನ ಸ್ವಯಂಪ್ರಕಾಶ ವಲ್ಲ, ಹೊರಗಿನ ವಸ್ತುಗಳನ್ನು ಮಾತ್ರಗ್ರಹಿಸುವುದು ಎಂಬ ಸಿದ್ಧಾಂತದಲ್ಲಿ

ಹೊರಗೆ ವಸ್ತುಗಳು ಬೇಕಾಗುವುವು. ಜ್ಞಾನವನ್ನು ತಿಳಿದುಕೊಳ್ಳುವ ಮಾರ್ಗಗಳು ಬಹು ವಿಧಗಳಾಗಿರುವುವು. ಏವಂಚ ಬೌದ್ಧಶಿಕ್ಷೆಗೋಸ್ಕರವೇ ಸ್ವಯಂಪ್ರಕಾಶವಲ್ಲವೆಂಬ ವಾದವಾಗಿದೆ ಎಂದು ಸ್ಪಷ್ಟ.

## ತತ್ವಗಳು

ಪ್ರಕೃತಿ ಮಹತ್ ಅಹಂಕಾರ, ಕಣ್ಣು ಮೊದಲಾದ ಜ್ಞಾನೇಂದ್ರಿಯಗಳು ಐದು, ವಾಕ್ಕು ಮೊದಲಾದ ಕರ್ಮೇಂದ್ರಿಯಗಳು ಐದು, ಉಭಯ ಸ್ವರೂಪವಾದ ಮನಸ್ಸು, ತನ್ಮಾತ್ರೆಗಳು ಐದು, ಆಕಾಶಾದಿಭೂತಗಳು ಐದು, ಜೀವಾತ್ಮನೂ ಸೇರಿ ಇಪ್ಪತ್ತೈದು ತತ್ತ್ವಗಳು. ಇವನ್ನು ಭೂತಪಂಚಕ, ತನ್ಮಾತ್ರಪಂಚಕ ಜ್ಞಾನೇಂದ್ರಿಯಪಂಚಕ ಕರ್ಮೇಂದ್ರಿಯಪಂಚಕ ಅವಿಶಿಷ್ಟಪಂಚಕವೆಂದು ಐದು ಪಂಚಕವಾಗಿ ವಿಭಜಿಸುವರು. ಈ ಮೂಲ ಪ್ರಕೃತಿ ಎಂಬುದು ಮೊದಲನೆಯ ತತ್ವವು. ತತ್ತ್ವವೆಂದರೆ ಒಂದೊಂದು ಹೊಸಸ್ವಭಾವವುಳ್ಳ ವಸ್ತು. ಎಂದರೆ ಕಾರ್ಯವಸ್ತುವಿನಲ್ಲಿ ತೋರಿಬರುವ ಸ್ವಭಾವವು ಕಾರಣವಸ್ತುವಿನಲ್ಲಿ ಸೂಕ್ಷ್ಮದಿಂದಿರಬೇಕು ಎಂದರೆ, ಪ್ರಕೃತಿಯಲ್ಲಿಲ್ಲದೇ ಇರುವ ಅಧ್ಯವಸಾಯವೆಂಬ ಕ್ರಿಯಾಶಕ್ತಿಯು ಮಹತ್ತಿನಲ್ಲಿ ಅಭಿವ್ಯಕ್ತವಾಗುವುದು. ಹೀಗೆ ಅಭಿಮಾನ ಸಂಕಲ್ಪ ಆಲೋಚನೆ ಶಬ್ದಾದಿ ಸ್ವಭಾವಗಳು ಹೊಸಹೊಸದು ಬರುವುವು. ಈ ಪ್ರಕೃತಿಗೆ ಪ್ರಧಾನವೆಂದು ಹೆಸರು. ಇದರಲ್ಲಿ ಸತ್ತ್ವ ರಜಸ್ಸು ತಮಸ್ಸು ಎಂಬ ಮೂರು ಗುಣಗಳಿರುವುದರಿಂದ ಇದನ್ನು ತ್ರಿಗುಣವೆಂದು ಹೇಳುತ್ತಾರೆ. ಈ ಪ್ರಕೃತಿ ಮಹಾ ಸಮುದ್ರದಂತೆ ಸರ್ವದೇಶ ಸರ್ವಕಾಲ ಸರ್ವವಸ್ತುಗಳನ್ನು ವ್ಯಾಪಿಸಿಕೊಂಡಿರುವುದರಿಂದ ಇದೇ ಬ್ರಹ್ಮ ಪದಕ್ಕೆ ಅರ್ಥ. ಬ್ರಹ್ಮವೆಂದರೆ ಸರ್ವ ಪ್ರಕಾರದಲ್ಲೂ ದೊಡ್ಡದಾಗಿರತಕ್ಕದ್ದು. ಈ ಪ್ರಕೃತಿಯಲ್ಲಿ ಅನಂತಕೋಟಿ ಬ್ರಹ್ಮಾಂಡಗಳು ಸಮುದ್ರದಲ್ಲಿ ಗುಳ್ಳೆಗಳ ಹಾಗೆ ಹುಟ್ಟಿ ನಾಶವಾಗುವುವು. ಈ ಮೂರುಗುಣಗಳು ಆಯಾ ಭಾಗದಲ್ಲಿ ಸಮಾವಸ್ಥೆಯಲ್ಲಿದ್ದರೆ ಪ್ರಳಯ; ವಿಷಮಾವಸ್ಥೆಯಲ್ಲಿದ್ದರೆ ಸೃಷ್ಟಿ. ಮನುಷ್ಯರ ದೇಹದಲ್ಲಿ ವಾತ ಪಿತ್ತ ಶ್ಲೇಷ್ಮಗಳೆಂಬ ಮೂರು ಧಾತುಗಳು ವಿಷಮದಲ್ಲಿದ್ದರೆ ಜೀವ, ಸಮದಲ್ಲಿದ್ದರೆ ಅಪಾಯ ಎಂದು ವೈದ್ಯಶಾಸ್ತ್ರ ಹೇಳುತ್ತದೆ.

ಇಂತಹ ಪ್ರಕೃತಿಯಲ್ಲಿ ಬುದ್ಧಿ ಎಂಬ ಮಹತ್ತತ್ತ್ವವು ಹುಟ್ಟುವುದು. ಪರಿಣಾಮವೇ ಉತ್ಪತ್ತಿ ಎಂದು ವ್ಯವಹಾರ, ಆ ಬುದ್ಧಿ ಎಂಬ ಸಮುದ್ರ ದಲ್ಲಿ ಗುಳ್ಳೆಗಳಂತ ಅಹಂಕಾರವೆಂಬ ಮೂರನೆಯ ತತ್ತ್ವವು ಹೊರಬೀಳು ವುದು. ಅದು ಸಾತ್ತ್ವಿಕ ರಾಜಸ ತಾಮಸ ಎಂದು ಮೂರು ವಿಧ. ಸಾತ್ತ್ವಿಕ ಅಹಂಕಾರದಿಂದ ಮನಸ್ಸು ಸೇರಿ ಹನ್ನೊಂದು ಇಂದ್ರಿಯಗಳು ಹುಟ್ಟುವುವು. ತಾಮಸಾಹಂಕಾರದಿಂದ ಪಂಚಭೂತಗಳಿಗೆ ಸೂಕ್ಷ್ಮಾವಸ್ಥೆ ಗಳೆಂಬ ಪಂಚತನ್ಮಾತ್ರೆಗಳು ಹುಟ್ಟುವುವು. ರಾಜಸ ಅಹಂಕಾರವು ಸಾತ್ತ್ವಿಕ ತಾಮಸ ಅಹಂಕಾರಗಳಿಗೆ ಸಹಾಯವಾಗಿರುವುದು. ಪಂಚ ತನ್ಮಾತ್ರೆಗಳಿಂದ ಆಕಾಶ, ವಾಯು, ತೇಜಸ್ಸು, ಜಲ, ಪೃಥ್ವಿ ಎಂಬ ಪಂಚ ಮಹಾಭೂತಗಳು ಹುಟ್ಟುವುವು. ಬುದ್ಧಿ ಮೊದಲಾದ ತನ್ಮಾತ್ರೆಗಳ ಪರ್ಯಂತ ಹದಿನೆಂಟು ತತ್ತ್ವಗಳು ಪ್ರತಿ ಪ್ರಾಣಿಗೂ ಲಿಂಗಶರೀರವಾಗ ಬೇಕಾಗಿರುವುದರಿಂದ ಅನೇಕ ಜಾತಿಯ ಧಾನ್ಯ ರಾಶಿಗಳಂತೆ ಅಸಂಖ್ಯಾತ ವ್ಯಕ್ತಿಗಳಾಗಿದ್ದರೂ ಜಾತಿದೃಷ್ಟಿಯಿಂದ ಸಂಖ್ಯಾನಿವೇಶವಿದೆ.

## ಯುಕ್ತಿವಿಚಾರ

ಈ ಪ್ರಕಾರ ಇಪ್ಪತ್ತುನಾಲ್ಕು ತತ್ತ್ವಗಳನ್ನು ಪ್ರತ್ಯಕ್ಷದಿಂದಲೂ, ಯುಕ್ತಿಯಿಂದಲೂ ಸ್ವೀಕರಿಸಬೇಕು. ಪೃಥ್ವಿ ಮೊದಲಾದ ನಾಲ್ಕು ಭೂತ ಗಳು ಸರ್ವರಿಗೂ ಪ್ರತ್ಯಕ್ಷವು. ಆಕಾಶವೆಂಬುದು ಶಬ್ದಕ್ಕೆ ಆಶ್ರಯವಾದ ಅಥವಾ ಶಬ್ದವೇ ಎಂಬ ಒಂದು ಭೂತವು, ಇಂತಹ ಪಂಚವಿಧ ಭೂತ ಭೌತಿಕವಸ್ತುಗಳಿಗೂ ಪುರುಷನೆಂಬ ಆತ್ಮನಿಗೂ ದೃಗ್ದೃಶ್ಯ ಸಂಬಂಧವು ಸಾಕ್ಷಾತ್ತಾಗಿ ಸಹಜವಾಗಿ ಇದ್ದರೆ ಪುರುಷನಿಗೆ ಮೋಕ್ಷವೆಂಬ ಸರ್ವದುಃಖ ನಿವೃತ್ತಿಯು ಎಂದಿಗೂ ಆಗಲಾರದು ; ಮತ್ತು ದೃಷ್ಟಾದೃಷ್ಟವ್ಯವಸ್ಥೆಯು ಇರಲಾರದು. ಎಂದರೆ, ಪುರುಷನಿಗೆ ಒಂದು ಕಾಲದಲ್ಲಿ ಒಂದು ವಸ್ತುವು ತಿಳಿಯಿತು ಅಥವಾ ತಿಳಿಯಲಿಲ್ಲ ಎಂಬ ವ್ಯವಸ್ಥೆಯು. ಇದಕ್ಕಾಗಿ ನಡುವೆ ಇಂದ್ರಿಯವೆಂಬ ಮಾರ್ಗವನ್ನು ಅಂಗೀಕರಿಸಬೇಕು. ಕಣ್ಣು ಮೊದಲಾದ ಇಂದ್ರಿಯಗಳ ಮೂಲಕ ಪುರುಷನು ವಸ್ತುಗಳನ್ನು ತಿಳಿದುಕೊಳ್ಳುತ್ತಾನೆ. ಇಂದ್ರಿಯವೆಂಬ ಮಾರ್ಗವಿಲ್ಲದಿದ್ದರೆ ತಿಳಿದುಕೊಳ್ಳುವುದಿಲ್ಲವೆಂದು ವ್ಯವ

ಸ್ಥಿಯು. ಇಂದ್ರಿಯಗಳ ವ್ಯಾಪಾರಕ್ಕೆ ಆಲೋಚನೆಯೆಂದು ಹೆಸರು. ಇದೊಂದು ವಸ್ತು ಎಂಬ ಸಾಮಾನ್ಯಜ್ಞಾನವು. ಒಂದು ಸಮಯದಲ್ಲಿ ವಸ್ತುವಿಗೂ ಪುರುಷನಿಗೂ ಇಂದ್ರಿಯವೆಂಬ ಮಾರ್ಗವಿದ್ದರೂ ವಸ್ತು ತಿಳಿಯುವುದಿಲ್ಲ. ಅದಕ್ಕೆ ಮನಸ್ಸು ಎಂಬ ಮತ್ತೊಂದು ದಾರಿಯು ಬೇಕು. ಆ ಮನಸ್ಸು ಬೇರೆ ವಿಷಯದಲ್ಲಿ ಇದ್ದರೆ ಬರಿ ಇಂದ್ರಿಯದಿಂದ ಜ್ಞಾನವು ಬರುವುದಿಲ್ಲ. ಮನಸ್ಸಿನ ವ್ಯಾಪಾರವು ಹಿಂದುಮುಂದು ಸಂಸ್ಕಾರ ಸಹಿತ ಸಂಕಲ್ಪ ವಿಕಲ್ಪಗಳೆಂಬ ವಿಶೇಷಜ್ಞಾನವು. ಮನಸ್ಸೆಂಬ ದ್ವಾರ ವಿದ್ದರೂ ಸ್ವಪ್ನದಲ್ಲಿ ನಾನು ವ್ಯಾಘ್ರನು, ವರಾಹನು ಎಂಬ ಅಭಿಮಾನ ಬರುತ್ತದೆ ; ಇದೇ ನಾನು ನನ್ನದು ಎಂಬ ಅಹಂಕಾರಮಮಕಾರ. ಇಂದ್ರಿಯ ಮನಸ್ಸುಗಳ ವ್ಯಾಪಾರವು ಸ್ವಪ್ನಾವಸ್ಥೆಯಲ್ಲಿರುವುದಿಲ್ಲ. ಅದಕ್ಕಾಗಿ ಅಹಂ ಕಾರವೆಂಬ ತತ್ತ್ವವು ಬೇಕು. ಸುಷುಪ್ತಿಯೆಂಬ ಗಾಢನಿದ್ರಾವಸ್ಥೆಯಲ್ಲಿ ಇವುಗಳ ವ್ಯಾಪಾರವಿಲ್ಲದೆ ಉಚ್ಛ್ವಾಸನಿಃಶ್ವಾಸಗಳು ನಡೆಯುತ್ತವೆ. ಅದಕ್ಕೆ ಬುದ್ಧಿಯೆಂಬ ತತ್ತ್ವವು ಬೇಕು. ಅದರ ವ್ಯಾಪಾರವು ಅಧ್ಯವಸಾಯ ಎಂಬ ಪ್ರಯತ್ನವು. ಮನಸ್ಸು ಅಹಂಕಾರ ಬುದ್ಧಿ ಈ ಮೂರೂ ಅಂತಃಕರಣಗಳು. ಇವುಗಳ ಒಟ್ಟು ವ್ಯಾಪಾರವು ಪಂಚಪ್ರಾಣಗಳ ವ್ಯಾಪಾರವೆಂಬ ಜೀವನವು. ಈ ತತ್ತ್ವಗಳೆಲ್ಲವೂ ಬೇರೆ ಬೇರೆಯಾಗಿಯೂ ಪರಿಮಿತವಾಗಿಯೂ ಜನ್ಯ ವಾಗಿಯೂ ಇರುವುದರಿಂದ ಇವಕ್ಕೆ ಪ್ರತಿಯಾಗಿ ಮೂಲಕಾರಣವಿರಬೇಕು ; ಅದಕ್ಕೆ ಸರ್ವಶಕ್ತಿಯೂ ಇರಬೇಕು. ಅದು ಅನಾದಿ ಜನ್ಯವಲ್ಲವೆಂದು ಹೇಳಿದರೆ ವ್ಯವಸ್ಥೆಯು ಸಿದ್ಧಿಸುತ್ತಿರುವಲ್ಲಿ ಅದಕ್ಕೊಂದು ಕಾರಣವೆಂಬ ಕಲ್ಪನೆಯಲ್ಲಿ ಪರ್ಯವಸಾನವಿಲ್ಲ. ಅನವಸ್ಥಾದೋಷ ಬರುತ್ತದೆ. ಪ್ರಕೃತಿ ಯಲ್ಲಿ ವಿಶ್ರಾಂತಿಯಾದರೆ ಅದೇ ಮೂಲಪ್ರಕೃತಿ. ಅದು ವಿಶ್ವ ರೂಪವನ್ನೂ, ಸರ್ವ ಶಕ್ತಿಯನ್ನೂ ಉಳ್ಳದು, ವಿಚಿತ್ರ ಪರಿಣಾಮಸ್ವಭಾವವುಳ್ಳದು ; ಅಂಚಿತ್ಯ, ಅತ್ಯದ್ಭುತ.

'ಷಷ್ಟಿತಂತ್ರ'ದ ಪ್ರಕಾರ ಅರುವತ್ತು ಪದಾರ್ಥಗಳು ತಿಳಿಯಲು ತಕ್ಕುವು. ಇವುಗಳಲ್ಲಿ ಶುಭಗಳು ಪರಿಗ್ರಾಹ್ಯಗಳು, ಅಶುಭಗಳು ಪರಿತ್ಯಾಜ್ಯ ಗಳು. ಇವು ತತ್ತ್ವಗಳ ಧರ್ಮವಾದುದರಿಂದ ಪದಾರ್ಥಗಳೆಂದು ಕರೆಯ ಲ್ಪಡುವುವು, ಇವುಗಳಲ್ಲಿ ಮೂಲಭೂತಗಳಾದ ಪ್ರಕೃತಿಧರ್ಮಗಳು ಹತ್ತು:—

ಅಸ್ತಿತ್ವ ಏಕತ್ವ ಅರ್ಥವತ್ತ್ವ ಅನ್ಯತ್ವ ಪರಾರ್ಥತ್ವ ಭೇದ ಸಂಯೋಗ ವಿಯೋಗ ಶೇಷತ್ವ ಅಕರ್ತೃತ್ವ—ಇವುಗಳು. ಉಳಿದ ಐವತ್ತು ಪದಾರ್ಥಗಳು ಪ್ರತ್ಯಯಸರ್ಗಕ್ಕೆ ಸೇರಿದವು. ವಿಪರ್ಯಯಗಳು ಐದು, ತುಷ್ಟಿಗಳು ಒಂಬತ್ತು, ವಧಗಳೆಂಬ ಅಶಕ್ತಿಗಳು ಇಪ್ಪತ್ತೆಂಟು, ಸಿದ್ಧಿಗಳು ಎಂಟು, ಅಂತೂ ಐವತ್ತು. ಇವುಗಳ ಸ್ವರೂಪವನ್ನು 'ಪ್ರತ್ಯಯಸೃಷ್ಟಿ'ಯಲ್ಲಿ ನಿರೂಪಿಸಿದೆ.

## ಆತ್ಮ

ಈ ಪ್ರಪಂಚದಲ್ಲಿ ಪಂಡಿತಪಾಮರಾದಿ ಸಕಲ ಮನುಷ್ಯರೂ ನಾನು ಎಂದು ವ್ಯವಹರಿಸುತ್ತಿರುವರು. ಸಂಸ್ಕೃತಭಾಷೆಯಲ್ಲಿ ಅಹಂ ಎಂದು ಅದಕ್ಕೆ ಹೆಸರಿಸುವುದು. ಅದೇ ಚೈತನ್ಯ ಅಥವಾ ಅದಕ್ಕೆ ಚೈತನ್ಯವೆಂಬ ಶಕ್ತಿ ಇರಬೇಕು. ಅದಿಲ್ಲದಿದ್ದರೆ ಪ್ರಪಂಚದಲ್ಲಿ ಯಾವ ಕೆಲಸವೂ ನಡೆಯ ಲಾರದು. ಲೋಕವು ಮೂಕವಾಗುವುದು. ಅದು ಪೂರ್ವಾಪರ ಸಂಬಂಧ ದಿಂದ ಸ್ಮರಣೆಯೆಂಬ ಆಕಾರದಿಂದ ಕೃಷಿವಾಣಿಜ್ಯ ಲೇವಾದೇವಿ ಅಧಿಕಾರ ವಿದ್ಯಾಭ್ಯಾಸ ಶಿಲ್ಪ ಮೊದಲಾದ ಸಕಲವ್ಯಾಪಾರಗಳನ್ನು ನಿರ್ವಹಿಸುತ್ತದೆ. ಇಚ್ಛಾದ್ವೇಷ ಪ್ರಯತ್ನ ಸುಖ ದುಃಖ ಮೊದಲಾದ ಸಕಲ ಒಳಗಿನ ವಸ್ತುಗಳು ಅದೇ ಆಗಿರುವುದು. ಆ ಆತ್ಮನಿಗೇ ಪುಣ್ಯ ಪಾಪ ಸ್ವರ್ಗ ನರಕ ಜನ್ಮಾಂತರ ಸಂಸಾರ ಬಂಧ ಮೋಕ್ಷ ವಿಧಿ ನಿಷೇಧ ಮೊದಲಾದುವನ್ನು ಸಾಮಾನ್ಯವಾಗಿ ಎಲ್ಲರೂ ಹೇಳುವರು.

ಹೀಗಿರುವಲ್ಲಿ ಆತ್ಮನೆಂಬ ಚೈತನ್ಯವು ಭೌತಿಕಶಕ್ತಿಯೇ ಹೊರತು ಬೇರೆ ವಸ್ತುವಲ್ಲ. ಆದುದರಿಂದಲೇ ಸರ್ವವ್ಯವಹಾರವೂ ನಿರ್ವಾಹವಾಗು ತ್ತದೆಂದು ಚಾರ್ವಾಕರು ಅಭಿಪ್ರಾಯ ಪಡುವರು. ಸಾಂಖ್ಯರು ಹೇಳುವುದೇ ನೆಂದರೆ — ಅದು ಭೌತಿಕಶಕ್ತಿಯಲ್ಲ. ಪೃಥಿವಿ ಜಲ ತೇಜಸ್ಸು ವಾಯು ಎಂಬ ನಾಲ್ಕು ತತ್ತ್ವಗಳು ಬೇರೆ ಬೇರೆ ಏತಕ್ಕೆ ? ಒಂದೇ ತತ್ತ್ವಕ್ಕೆ ನಾಲ್ಕು ಸ್ವಭಾವಗಳನ್ನು ಅಥವಾ ನಾಲ್ಕು ಶಕ್ತಿಗಳನ್ನು ಸ್ವೀಕರಿಸಬಹುದಲ್ಲವೆ ? ಶಕ್ತಿಯೋ ಸ್ವಭಾವವೋ ತತ್ತ್ವವೋ ಏನೇ ಆಗಲಿ ನಾಮಭೇದವೇ ಹೊರತು ವಸ್ತುಭೇದವಿಲ್ಲ, ಪ್ರಯೋಜನ ಭೇದವಿಲ್ಲ. ಆ ಚೈತನ್ಯಶಕ್ತಿಗೇ

ಪುರುಷನೆಂದು ಹೆಸರು, ಚೈತನ್ಯ ಚೇತನ ಪುರುಷ ಚಿಚ್ಛಕ್ತಿ ಆತ್ಮಾ ಮೊದ ಲಾದ ಪದಗಳು ಒಂದೇ ಅರ್ಥದಲ್ಲಿರುವುವು. ಬುದ್ಧಿ ಜ್ಞಾನ ಅನುಭವ ಎಂಬ ಪದಗಳು ಬೇರೆ ಬೇರೆ ಅರ್ಥದಲ್ಲಿರುವುವು. ಇದರ ವಿವರಣೆ ಮುಂದಿರುವುದು.

ಈ ಆತ್ಮನೆಂಬುದು ಬೇರೆ ವಸ್ತುವಾದರೂ ಅದರಲ್ಲಿ ಯಾವ ವಿಧ ವಾದ ಗುಣವೂ ಇಲ್ಲ, ದೋಷವೂ ಇಲ್ಲ, ಶಕ್ತಿಯೂ ಇಲ್ಲ, ಸಾಮರ್ಥ್ಯವೂ ಇಲ್ಲ, ವಿಶೇಷವೂ ಇಲ್ಲ ; ಶುದ್ಧವಾದ ಕನ್ನಡಿಯಂತಿರುವುದು, ನಿರ್ವಿಕಾರ, ಅವನು ಕೂಟಸ್ಥನು, ಮಧ್ಯಸ್ಥನು. ಇದಕ್ಕೆ ನಿರತಿಶಯವಸ್ತುವೆಂದು ಹೆಸರು. ಇದಕ್ಕೆ ಬೌದ್ಧರ ಸ್ವಲಕ್ಷಣವಸ್ತುವನ್ನೂ ವೇದಾಂತಿಗಳ ನಿರ್ವಿ ಶೇಷ ಬ್ರಹ್ಮನನ್ನೂ ಹೋಲಿಸಬಹುದು.

ಇಂತಹ ಚಿತಿಶಕ್ತಿಗಳೆಂಬ ಜೀವಾತ್ಮರು ಅಸಂಖ್ಯಾತಗಳಾಗಿರುವರು. ಹಿಂದೆಯೂ ಮುಂದೆಯೂ ಎಷ್ಟು ಜೀವಾತ್ಮರು ಮುಕ್ತರಾದರೂ ಉಳಿಯು ವರಲ್ಲಿ ಸಂಖ್ಯೆ ಇರುವುದಿಲ್ಲ. ಇದೇ ಅಸಂಖ್ಯಾತ ಅನಂತ ಪದಗಳ ಅರ್ಥ. ಆದುದರಿಂದ ಪ್ರಕೃತಿಯಿಂದ ಆಗುವ ಸೃಷ್ಟಿಪ್ರಳಯಗಳಿಗೆ ಸಮಾಪ್ತಿಯಿಲ್ಲ. ಸೃಷ್ಟಿ ಪ್ರಳಯಪ್ರವಾಹವು ನಿಂತುಹೋಗಲಿ ಎಂದು ಮತ್ತೊಂದು ಅಭಿ ಪ್ರಾಯ.

## ಶರೀರ

ಇಂತಹ ಪ್ರತಿ ಜೀವಾತ್ಮನಿಗೂ ಪ್ರಕೃತಿ ಪರಿಣಾಮಗಳಾದ ಅನೇಕ ವಸ್ತುಗಳು ಸೇರಿ ಶರೀರವೆಂಬ ಆಶ್ರಯವು ಸೃಷ್ಟಿಕಾಲದಲ್ಲೇ ಉಂಟಾಗು ವುದು, ಪ್ರಳಯ ಪರ್ಯಂತರ ಇರುವುದು. ಅದೇ ಲಿಂಗಶರೀರವು ಸೂಕ್ಷ್ಮ ಶರೀರವೂ. ಮಹತ್ ಅಹಂಕಾರ ಏಕಾದಶೇಂದ್ರಿಯಗಳೂ ಪಂಚ ತನ್ಮಾತ್ರ ಳಗೂ. ಸೇರಿ ಹದಿನೆಂಟು ತತ್ತ್ವಗಳು ಅದರಲ್ಲಿ ಕೂಡಿರುವುವು. ಆ ಲಿಂಗ ಶರೀರವು, ನರ್ತಕನು ವೇಷಗಳನ್ನು ಧರಿಸುವ ಹಾಗೆ ಷಟ್‌ಕೋಶವೆಂಬ ವಿಚಿತ್ರ ಸ್ಥೂಲಶರೀರವಾಗಿ ಪರಿಣಮಿಸುತ್ತದೆ. ಆರು ಕೋಶಗಳು ಯಾವು ವೆಂದರೆ—ಪಿತೃಶರೀರದಿಂದ ಬರುವ ಅಸ್ಥಿ ಸ್ನಾಯು ಮಜ್ಜ, ಮಾತೃಶರೀರ ದಿಂದ ಬರುವ ರೋಮ ಮಾಂಸ ರಕ್ತ. ಇದೇ ಭೌತಿಕದೇಹವೆನಿಸುವುದು.

ಇದರಲ್ಲಿರುವ ಮಹತ್ತತ್ತ್ವವೆಂಬ ಬುದ್ಧಿ ಜಡವಾದ ಅಂತಃಕರಣ. ಇದನ್ನೇ ಇವರು ಇತರರ ಜೀವಾತ್ಮನಂತೆ ಪರಿಷ್ಕರಿಸಿರುವರು. ಲಿಂಗದೇಹದಲ್ಲಿ ಅನೇಕ ತತ್ತ್ವಗಳಿದ್ದರೂ ಬುದ್ಧಿಯನ್ನೇ ಮುಖ್ಯವಾಗಿಟ್ಟುಕೊಂಡಿರುವುದ ರಿಂದ ಬುದ್ಧಿಯೆಂದರೆ ಸಮುದಾಯ ಎಂದು ತಿಳಿಯಬೇಕು. ಚಾರ್ವಾಕರು ಭೂತಾತ್ಮವಾದಿಗಳಾದರೆ ಇವರು ಬುದ್ಧ್ಯಾತ್ಮವಾದಿಗಳಾಗುತ್ತಾರೆ. ಹೇಗೆಂದರೆ, ಆ ಬುದ್ಧಿಗೇ ಸುಖ ದುಃಖ ಜ್ಞಾನ ಇಚ್ಛಾರಾಗ ದ್ವೇಷ ಮೊದಲಾದುವು ; ಅದಕ್ಕೇನೇ ಪುಣ್ಯ ಪಾಪ ಸ್ವರ್ಗ ನರಕ ಬಂಧ ಮೋಕ್ಷ ; ಇದರಲ್ಲೇ ಧರ್ಮ ಅಧರ್ಮ ಜ್ಞಾನ ಅಜ್ಞಾನ ಐಶ್ವರ್ಯ ಅನೈಶ್ವರ್ಯ ವೈರಾಗ್ಯ ಅವೈರಾಗ್ಯವೆಂಬ ಭಾವಾಷ್ಟಕವಿರುವುದು. ಇತರ ದಾರ್ಶನಿಕರು ಆತ್ಮನಿಗೆ ಯಾವ ಯಾವ ಸ್ವಭಾವಗಳನ್ನು ಹೇಳುವರೋ ಅದೆಲ್ಲವನ್ನೂ ಬುದ್ಧಿಗೇಯೇ ಇವರು ಹೇಳುವರು. ಅದುದರಿಂದ ಚಾರ್ವಾಕಮತ ಪರಿಷ್ಕಾರವೇ ಇದೆಂದು ಇತರರು ತಿಳಿಯುವರು. ಹೀಗೆ ಬೇರೆ ತತ್ತ್ವವಾಗಿ ಸ್ವೀಕರಿಸಲ್ಪಟ್ಟಿರುವ ಜೀವಾತ್ಮನಿಗೆ ಹಿಂದೆ ಹೇಳಿದ ಬುದ್ಧಿಯನ್ನು ತೋರುತ್ತಿರುವ ಸ್ವಭಾವ ಎಂದರೆ ಸಾಕ್ಷಿತ್ವವು ಇರುವುದರಿಂದ ಇವನು ದ್ರಷ್ಟಾ, ಇತರ ವಸ್ತುಗಳು ದೃಶ್ಯ. ಈ ದ್ರಷ್ಟೃದೃಶ್ಯ ಭಾವಸಂಬಂಧವೇ ಭೋಕ್ತೃಭೋಗ್ಯ ಭಾವ ವೆಂದೂ ಹೇಳಬಹುದು.

ಪುರುಷನಿಗೆ ಕೈವಲ್ಯ ಬೇಕಾಗಿರುವುದರಿಂದ ಪ್ರಕೃತಿ ಪ್ರಾಕೃತ ವಸ್ತು ಗಳಿರಬೇಕು. ಆ ವಸ್ತುಗಳು ಭೋಗ್ಯಗಳಾದುದರಿಂದ ಭೋಕ್ತನು ಬೇಕು.

## ಇತರ ದರ್ಶನದೃಷ್ಟಿ

ಇತರ ದರ್ಶನದೃಷ್ಟಿಯಿಂದ ವಿಚಾರಿಸಿದರೆ ಪ್ರತ್ಯಕ್ಷ ಅನುಮಾನ ಆಗಮವೆಂದು ಮೂರು ಪ್ರಮಾಣಗಳನ್ನು ಅಂಗೀಕರಿಸಿರುವರು. ದ್ರವ್ಯ ಗುಣ ಕರ್ಮಗಳೆಂಬ ಮೂರು ಪದಾರ್ಥಗಳಲ್ಲಿ ಗುಣ ಕರ್ಮಗಳು ದ್ರವ್ಯ ದಲ್ಲೇ ಅಂತರ್ಭೂತವಾದುದರಿಂದ ಬೇರೆ ಪದಾರ್ಥಗಳಲ್ಲ, ಸಾದೃಶ್ಯವೇ ಸಾಮಾನ್ಯ ಸ್ಥಾನದಲ್ಲಿರುವುದು. ಸರ್ವವೂ ಅವಿಶೇಷವಾದುದರಿಂದ ವಿಶೇಷ ಬೇಕಾಗಿಲ್ಲ. ಅತ್ಯಂತ ಭೇದವಿಲ್ಲದಿರುವುದರಿಂದ ಸಮವಾಯ ಅನಾವಶ್ಯಕ. ವಸ್ತುಗಳು ಪ್ರತಿಕ್ಷಣ ಪರಿಣಾಮಿಗಳಾದುದರಿಂದ ಆಯಾ ದೇಶಕಾಲದ

ವಸ್ತುಗಳೇ ಇತರ ವಸ್ತುಗಳ ಅಭಾವಗಳಾಗುವುವು. ಇಂತಹ ಭಾವಾಂತರವೇ ಅಭಾವ ವ್ಯವಹಾರವೆಂಬ ಅಸದ್ವ್ಯವಹಾರವನ್ನು ನಿರ್ವಹಿಸುವುದು. ಕಾಲ ದಿಕ್ಕು ಈಶ್ವರ ಎಂಬ ಪದಾರ್ಥಗಳಿಲ್ಲದೆ ಯಾವ ಅನುಪಪತ್ತಿಯೂ ಇಲ್ಲ.

ಧರ್ಮಧರ್ಮಿಗಳಿಗೆ ಭೇದವಿಲ್ಲದಿದ್ದರೂ ವನದಲ್ಲಿ ವೃಕ್ಷಗಳು ಎಂಬಂತೆ ಕಲ್ಪಿತಭೇದದಿಂದ ಆಶ್ರಯಾಶ್ರಯಿ ವ್ಯವಹಾರ ಸಿದ್ಧಿಸುವುದು. ಇವರ ಕಲ್ಪನೆಗಳೆಲ್ಲವೂ ಅಭಿಮಾನ ಎಂಬ ಅವಿವೇಕ, ಅಖ್ಯಾತಿ.

## ಬುದ್ಧಿ ಜ್ಞಾನ ವಿಭಾಗ

ಬುದ್ಧಿ, ಅಹಂಕಾರ, ಮನಸ್ಸು ಎಂದು ಮೂರು ಅಂತಃಕರಣಗಳು. ಬುದ್ಧಿಯು ಸ್ವಚ್ಛವಾದ ದ್ರವದ್ರವ್ಯವಾದುದರಿಂದ ಅಹಂಕಾರ ಮನಸ್ಸು ಚಕ್ಷುಸ್ಸು ಮೊದಲಾದುವುಗಳ ದ್ವಾರದಿಂದ ಘಟಪಟಾದಿ ವಸ್ತುಗಳನ್ನು ಸೇರಿ ಆಯಾ ವಸ್ತುಗಳ ಆಕಾರವನ್ನು, ಕೆರೆಯ ನೀರು ಕಾಲುವೆಗಳ ಮೂಲಕ ಗದ್ದೆಗಳ ಆಕಾರವನ್ನು ಹೊಂದುವ ಹಾಗೆ, ಹೊಂದುವುದು. ಈ ಬುದ್ಧಿಯ ಆಕಾರಕ್ಕೆ, ಪರಿಣಾಮಕ್ಕೆ ಜ್ಞಾನ ಎಂದು ಹೆಸರು. ಇಂತಹ ಆಕಾರಸಹಿತವಾದ ಬುದ್ಧಿಯನ್ನು ನೋಡುವುದೇ, ಇದರಲ್ಲಿ ಪ್ರತಿಫಲಿಸುವುದೇ ಪುರುಷನಿಗೆ ಉಪಲಬ್ಧಿ, ಅನುಭವ. ಆದುದರಿಂದ ಬುದ್ಧಿ ಜ್ಞಾನ ಉಪಲಬ್ಧಿ ಎಂದು ಬೇರೆ ಬೇರ ಪದಾರ್ಥಗಳಾದುವು. ತಾರ್ಕಿಕರು ಮೊದಲಾದವರು ಈ ಮೂರೂ ಒಂದೇ ಪದಾರ್ಥ, ಪುರುಷನಲ್ಲಿರುವ ಗುಣ ಎಂದು ತಿಳಿಯುವರು.

ಇವರಲ್ಲಿ ಜ್ಞಾನೋತ್ಪತ್ತಿಯಾಗುವ ಕ್ರಮ ಹೇಗೆಂದರೆ — ವಸ್ತುಗಳು ತಮ್ಮ ಆಕಾರಗಳನ್ನು ಚಕ್ಷುರಾದಿ ಇಂದ್ರಿಯಗಳಿಗೆ ಸಮರ್ಪಿಸುತ್ತವೆ. ಇಂದ್ರಿಯಗಳು ಮನಸ್ಸಿಗೆ ಸಮರ್ಪಿಸುವುವು, ಮನಸ್ಸು ಬುದ್ಧಿಗೆ ಸಮರ್ಪಿಸುವುದು. ಏವಂಚ ಬುದ್ಧಿಯು ವಸ್ತ್ವಾಕಾರವನ್ನು ಹೊಂದುವುದು. ಇದರಿಂದ ಹೊರಗಿನ ವಸ್ತುಗಳ ಮೂಲಕ ಜ್ಞಾನೋತ್ಪತ್ತಿಯಾಯಿತು. ತಾರ್ಕಿಕರು ಆತ್ಮನ ಮೂಲಕ ಜ್ಞಾನೋತ್ಪತ್ತಿಯನ್ನು ಹೇಳುತ್ತಾರೆ. ಎಂದರೆ, ಆತ್ಮನು ಮನಸ್ಸಿನೊಡನೆ ಸೇರುತ್ತಾನೆ, ಮನಸ್ಸು ಕಣ್ಣು ಮೊದಲಾದ

ಇಂದ್ರಿಯಗಳೊಡನೆ ಸೇರುವುದು, ಇಂದ್ರಿಯಗಳು ವಸ್ತುಗಳೊಡನೆ ಸೇರುವುವು. ಇದಾದ ಮೇಲೆ ಆತ್ಮನಲ್ಲಿ ಜ್ಞಾನವೆಂಬ ಗುಣವು ಉದಯಿಸುವುದು. ಎಂದು ತಿಳಿಯುವರು, ಪ್ರಪಂಚ ಕ್ರಮದಲ್ಲಿ ವ್ಯತ್ಯಾಸವೇ ಹೊರತು ಇವುಗಳ ಪರಸ್ಪರಾನುಕೂಲ್ಯವು ಬೇಕು ಎಂಬುದು ಸಮ. ಆದುದರಿಂದಲೇ ಮನಸ್ಸು ಬೇರೆ ವಸ್ತುವಿನಲ್ಲಿರುವಾಗ ಜ್ಞಾನವು ಹುಟ್ಟುವುದಿಲ್ಲ.

ಹೀಗೆಯೇ ಪ್ರಮಾಣ ಫಲಗಳ ವಿಭಾಗವೂ ಇರುವುದು. ಹೇಗೆಂದರೆ —ಬುದ್ಧಿಯ ವಿಷಯಾಕಾರವೇ ಸತ್ತ್ವಗುಣದ ಸಮುದ್ರೇಕದಿಂದ ಜ್ಞಾನವೆಂಬ ಪ್ರಮಾಣವಾಗುವುದು. ಇದರಿಂದ ಬರುವ ಪ್ರಬೋಧವೇ ಪ್ರಮಾಣ ಫಲವು. ಪ್ರಬೋಧವೆಂದರೆ ಅನುಗ್ರಹ. ಎಂದರೆ, ಬುದ್ಧಿಯಲ್ಲಿ ಚೇತನನ ಪ್ರತಿಬಿಂಬವಾದರೆ ಬುದ್ಧಿಯು ಪುರುಷನಾಗುವುದು, ಚೇತನವಾಗುವುದು. ಪುರುಷನು ಬುದ್ಧಿಯಾಗುವನು, ಕರ್ತೃವಾಗುವನು. ಇದರಿಂದ ಪುರುಷನು ಸುಖದುಃಖವುಳ್ಳವನ ಹಾಗೆ ಆಗುವನು. ಇದೇ ಬುದ್ಧಿಗೆ ಪುರುಷೋಪರಾಗ, ಸಂಬಂಧ. ವಿಷಯಾಕಾರವೇ ವಿಷಯೋಪರಾಗ. ಅಧ್ಯವಸಾಯವೇ ವ್ಯಾಪಾರಾವೇಶ. ಇದರಿಂದ ಬುದ್ಧಿಗೆ ಮೂರು ಅಂಶಗಳಿರುವುವು. ವಿಜ್ಞಾನವಾದಿಗಳ ಅಭಿಪ್ರಾಯದಲ್ಲಿ ಬುದ್ಧಿಯು ಭ್ರಾಂತಿಯಿಂದ ಜ್ಞಾತೃಜ್ಞೇಯ ಜ್ಞಾನವೆಂದು ಮೂರು ವಿಧವಾಗಿ ತೋರುವುದು. ಎಂದರೆ, ಒಂದು ಮೂರಾಗುವುದು : ಇವರ ಅಭಿಪ್ರಾಯದಲ್ಲಿ ಮೂರು ಒಂದಾಗುವುದು. ಇಲ್ಲಿ ಬುದ್ಧಿಗೆ ಪುರುಷೋಪರಾಗವು, ದರ್ಪಣಕ್ಕೆ ಮುಖೋಪರಾಗದಂತೆ, ವಾಸ್ತವವಲ್ಲ. ಬುದ್ಧಿಗೆ ವಿಷಯೋಪರಾಗವು, ನಿಃಶ್ವಾಸದಿಂದ ದರ್ಪಣಕ್ಕೆ ಮಾಲಿನ್ಯವು ಬರುವಂತೆ, ವಾಸ್ತವವು. ಪುರುಷನಿಗೆ ವಿಷಯಸಂಬಂಧವು, ದರ್ಪಣಮಾಲಿನ್ಯದಿಂದ ಮುಖಕ್ಕೆ ಮಾಲಿನ್ಯ ಹೇಗೆ, ಆಗುವುದಿಲ್ಲವೊ ಹಾಗೆ, ವಾಸ್ತವವಲ್ಲ ಎಂದು ತಿಳಿಯಬೇಕು,

## ಸಾರ್ವಾತ್ಮ್ಯ

ಈ ದರ್ಶನದಲ್ಲಿ ಸರ್ವ ವಸ್ತುಗಳೂ ಸರ್ವಸ್ವಭಾವವುಳ್ಳವು. ಎಂದರೆ ತ್ರಿಗುಣಮಯವು ; ಸುಖದುಃಖಮೋಹಸ್ವಭಾವಗಳುಳ್ಳವು. ತ್ರಿಗುಣವಾದ ಅಂತಃಕರಣದಲ್ಲೂ ಪ್ರಾಚೀನ ವಾಸನೆಯೆಂಬ ಕರ್ಮಾಧೀನವಾಗಿ ಆಯಾ

ಕಾಲದಲ್ಲಿ ಒಂದೊಂದು ಗುಣವು ಉತ್ಕಟವಾಗಿ ಪ್ರಬಲವಾಗುವುದು, ಇತರ ಗುಣಗಳು ವಿರುದ್ಧಸ್ವಭಾವಗಳಾದರೂ ಬೆಂಕಿ ಎಣ್ಣೆ ಬತ್ತಿಗಳಂತೆ ಒಂದ ಕ್ಕೊಂದು ಅನುಕೂಲ್ಯದಿಂದ ಪ್ರದೀಪವಾಗಿ ಅಂಧಕಾರನಿವೃತ್ತಿಯನ್ನು ಮಾಡುವ ಹಾಗೆ, ಸುಖವೋ ದುಃಖವೋ ಮೋಹವೋ ಒಂದು ಕಾರ್ಯಕ್ಕೆ ಅನುಕೂಲಗಳಾಗಿರುವುದು. ಅಂತಃಕರಣ ಸ್ವಭಾವಾನುಸಾರವಾಗಿ ಹೊರ ಗಿನ ವಸ್ತುಗಳಲ್ಲೂ ಆಯಾ ಗುಣವು ಪ್ರಬಲವಾಗಿ ಸುಖಾದಿಕಾರ್ಯಕರ ವಾಗುವುವು.

**ಉದಾಹರಣೆ**—ಒಂದು ಮಹಿಳಾ ವ್ಯಕ್ತಿಯು ವಿರಕ್ತ ಸನ್ಯಾಸಿಗೆ ಶವದಂತೆಯೂ, ನಾಯಿಗೆ ಭಕ್ಷ್ಯವಾದ ಮಾಂಸದ ಮುದ್ದೆಯಂತೆಯೂ, ಸವತಿಗೆ ಅಸೂಯಾಮಯವಾಗಿಯೂ, ಕಾಮುಕನಿಗೆ ಮೋಹಿನಿಯಾ ಗಿಯೂ, ನಾಯಕನಿಗೆ ಪರಮ ಪ್ರೇಮಾಸ್ಪದ ವಸ್ತುವಾಗಿಯೂ ಕಾಣುವುದು. ಒಂದೇ ವ್ಯಕ್ತಿಯು ವಿಚಿತ್ರವಾಗಿ ಕಾಣಬೇಕಾದರೆ ಸಕಲ ಸ್ವಭಾವಗಳೂ ಆ ವ್ಯಕ್ತಿಯಲ್ಲಿರುವುವು. ಅಂತಃಕರಣದ ಪ್ರಬಲಸ್ವಭಾವದಂತೆ ವಸ್ತುಸ್ವಭಾ ವವೂ ವ್ಯಕ್ತವಾಗುವುದು. ಇದರಿಂದ ಸರ್ವವೂ ನಿಸ್ಸ್ವಭಾವವು ಎಂಬ ಬೌದ್ಧ ಸಿದ್ಧಾಂತವು ಸರ್ವವೂ ಸರ್ವ ಸ್ವಭಾವವುಳ್ಳದ್ದು ಎಂಬ ಉಪ ಪಾದನೆಯಿಂದ ನಿರಾಕೃತವಾಯಿತು.

## ಸೃಷ್ಟಿ

ಪ್ರಕೃತಿಯು ಅಚೇತನವಾದುದರಿಂದ ಇಚ್ಛಾಶಕ್ತಿಯಿಲ್ಲದೆ ಅಂಧ ಸ್ಥಾನದಲ್ಲೂ ಪುರುಷನು ಕ್ರಿಯಾಶಕ್ತಿಯಿಲ್ಲದೆ ಪಂಗುಸ್ಥಾನದಲ್ಲೂ ಇದ್ದು ಅಂಧಪಂಗು ನ್ಯಾಯದಿಂದ ಸೃಷ್ಟ್ಯಾದಿ ಸಕಲ ವ್ಯಾಪಾರಗಳೂ ನಡೆಯು ವುವು ಅಂಧಪಂಗು ನ್ಯಾಯವೆಂದರೆ—ಒಂದು ಮಹಾರಣ್ಯದಲ್ಲಿ ಕುಂಟನೂ ಕುರುಡನೂ ಸೇರಿ ಕುರುಡನ ಮೇಲೆ ಕುಂಟನು ಕೂತು ದಾರಿ ತೋರಿಸುತ್ತಾ ಕುರುಡನು ನಡೆಯುತ್ತ ಗ್ರಾಮಕ್ಕೆ ಬಂದು ಸೇರಿದಂತೆ. ಈ ಪ್ರಕೃತಿಪುರು ಷರ ಸ್ವಭಾವವನ್ನು ತಿಳಿದು ಇವುಗಳಿಗೆ ಪ್ರೇರಕನಾಗಿ ಮತ್ತೊಬ್ಬ ಪುರು ಷೋತ್ತಮನು ಬೇಕಾಗಿಲ್ಲ. ಇದರಿಂದ ಬೌದ್ಧರು ಪ್ರತೀತ್ಯ ಸಮುತ್ಪಾದದಲ್ಲಿ ಜೀವಾತ್ಮನನ್ನು ನಿರಾಕರಿಸುವ ಯುಕ್ತಿಯಿಂದಲೇ ಇವರು ಈಶ್ವರನನ್ನು ನಿರಾಕರಿಸುತ್ತಾರೆ.

ಲೋಕದಲ್ಲಿ ಮನುಷ್ಯನು ತನ್ನ ಆಶಾಪೂರ್ತಿಗಾಗಿ ಸ್ವತಃ ಪ್ರಯತ್ನ ಪಡುವ ಹಾಗೂ, ಆಕಳಲ್ಲಿರುವ ಹಾಲು ಕರುವಿನ ಉಪಯೋಗಕ್ಕಾಗಿ ಪ್ರವೃತ್ತಿಸುವ ಹಾಗೂ, ಅಚೇತನವಾದರೂ ಪುರುಷಾರ್ಥಕ್ಕಾಗಿ, ಪುರುಷರ ಭೋಗ ಮೋಕ್ಷಗಳಿಗಾಗಿ, ಪ್ರಕೃತಿಯು ಸೃಷ್ಟಿಪ್ರಳಯ ವ್ಯಾಪಾರದಲ್ಲಿ ಸ್ವಾಭಾವಿಕವಾಗಿ ನಿರತವಾಗಿರುವುದು.

ಇಲ್ಲಿ ಪರಮೇಶ್ವರನ ಇಚ್ಛಾಶಕ್ತಿಯಿಂದಲೇ ಮನುಷ್ಯಪ್ರವೃತ್ತಿಯೂ ಕ್ಷೀರಪ್ರವೃತ್ತಿಯೂ ಎಂದು ಈಶ್ವರವಾದಿಗಳು ಹೇಳುವರು.

ಸಾಂಖ್ಯರ ಅಭಿಪ್ರಾಯ ಇದು— ಲೋಕದಲ್ಲಿ ಬುದ್ಧಿಪೂರ್ವಕ ಪುರುಷರ ಪ್ರಯತ್ನ ಸ್ವಾರ್ಥ, ಅಥವಾ ದಯೆಯಿಂದ ಪರಾರ್ಥ. ಪರಮೇಶ್ವರನು ಪರಿಪೂರ್ಣ, ಸ್ವಾರ್ಥನಲ್ಲ. ಪರಾರ್ಥವೆಂದರೆ—ಸೃಷ್ಟಿಕಾಲಕ್ಕೆ ಪೂರ್ವದಲ್ಲಿ ಜೀವಾತ್ಮರಿಗೆ ಕರಣಕಳೇಬರ ಮೊದಲಾದ ಯಾವ ಸಾಧನಗಳಿಲ್ಲದಿರುವುದರಿಂದ ದುಃಖವಿಲ್ಲ. ಯಾವ ದುಃಖವನ್ನು ನೋಡಿ ಅದರ ನಿವಾರಣಕ್ಕಾಗಿ ದಯೆ? ಸೃಷ್ಟಿಯಾದ ಮೇಲೆ ಕರುಣೆಯೆಂದರೆ, ಕರುಣೆಯಿಂದ ಸೃಷ್ಟಿಯಲ್ಲ. ಕರುಣೆಯಿಂದ ಸೃಷ್ಟಿಯಾದರೆ ಪ್ರಪಂಚವು ಸುಖಮಯವಾಗಿರಬೇಕು. ವಿಚಿತ್ರವಾಗಿರುವುದು ನ್ಯಾಯವಲ್ಲ. ಅವರವರ ಕರ್ಮಾಧೀನವಾಗಿ ವೈಚಿತ್ರ್ಯವೆಂದರೆ ಪ್ರಲಯಕಾಲದಲ್ಲಿ ಸುಖದುಃಖ ಮೊದಲಾದುವು ಯಾವುದೂ ಇಲ್ಲದೆ ಮುಕ್ತಪ್ರಾಯರಾಗಿರುವಂತಹವರಿಗೆ ದೇಹೇಂದ್ರಿಯಾದಿಗಳನ್ನು ಕೊಟ್ಟು ದುಃಖಪಡಿಸುವುದು ಯುಕ್ತವೇ ? ಆದುದರಿಂದ ಈಶ್ವರ ಸೃಷ್ಟಿಯಲ್ಲಿ ಬಹು ದೋಷ ಕಂಡುಬರುತ್ತದೆ.

ಸ್ವಾಭಾವಿಕ ಪ್ರಕೃತಿ ಸೃಷ್ಟಿಯಲ್ಲಿ ಪ್ರಕೃತಿಯು ಅಚೇತನವಾದುದರಿಂದ ಸ್ವಾರ್ಥವೇ ಅಥವಾ ಪರಾರ್ಥವೇ ಎಂಬ ಪ್ರಯೋಜನ ಪ್ರಶ್ನೆಗೆ ಅವಕಾಶವಿಲ್ಲ. ಪ್ರತಿ ಪುರುಷನೂ ಕ್ರಮಕ್ರಮವಾಗಿ ಭೋಗದಿಂದ ವಿರಕ್ತನಾಗಿ ಮೋಕ್ಷವನ್ನು ಪಡೆಯುವುದಕ್ಕಾಗಿಯೇ ಪ್ರಕೃತಿಯ ವ್ಯಾಪಾರವು. ಎಂದರೆ ಬುದ್ಧಿಪೂರ್ವಕ ಪರಾರ್ಥವಲ್ಲ. ವಸ್ತುತಃ ಪರಾರ್ಥದಲ್ಲಿ ಪರ್ಯವಸಾನವಾಗುವುದೆಂದು ಭಾವವು. ಕರ್ಮವಾಸನೆಯೂ ಪ್ರಕೃತಿಯಲ್ಲೇ ಇರುವುದರಿಂದ ಅದಕ್ಕೆ ಅನುಸಾರವಾಗಿ ಪ್ರಪಂಚದಲ್ಲಿ ನಡೆಯುವ ಸಕಲ ವ್ಯಾಪಾರಗಳು ತ್ರಿಗುಣ ಪ್ರಕೃತಿಯ ರಜೋಗುಣಸ್ವಭಾವವು.

ಈ ಪಾದದಲ್ಲಿ ಸೃಷ್ಟಿ ವಿಷಯಕವಾದ ಆಕ್ಷೇಪವಿಲ್ಲ, ಪುರುಷಾರ್ಥಕ್ಕೆ ಲೋಪವಿಲ್ಲವೆಂಬುದು ತಾತ್ಪರ್ಯವಾಗುತ್ತದೆ. ಬಾದರಾಯಣ ಸಿದ್ಧಾಂತ ದಲ್ಲೂ ಇದೇ ತಾತ್ಪರ್ಯವು. ಲೋಕದಲ್ಲಿ ನಡೆಯುವ ಅಚೇತನ ವಸ್ತು ಗಳ ವ್ಯಾಪಾರಗಳು ಬಹುವಾಗಿ ಚೇತನನ ಬುದ್ಧಿಪೂರ್ವಕವಾಗಿರುವುದರಿಂದ ಸೃಷ್ಟಿ ಮೊದಲಾದ ಪ್ರಕೃತಿಯ ಮಹಾಮಹಾ ವ್ಯಾಪಾರಗಳೂ ಪರಮೇಶ್ವ ರನ ಬುದ್ಧಿಪೂರ್ವಕವೆಂದು ಹೇಳಬಹುದು.

ಆದರೆ ಆ ವ್ಯಾಪಾರಗಳನ್ನು ಲೀಲೆ ಎಂದುಕೊಳ್ಳುತ್ತಾರೆ. ಲೀಲೆ ಯೆಂದರ ಸ್ವಾರ್ಥವಾಗಲಿ ಪರಾರ್ಥವಾಗಲಿ ಬೇರೊಂದು ಪ್ರಯೋಜನವನ್ನು ಉದ್ದೇಶಿಸಿದೆ ತಾನೇ ಪ್ರಯೋಜನರೂಪವಾದ ಸಂತೋಷ ವ್ಯಾಪಾರ. ಸರ್ವೈಶ್ವರ್ಯ ಸಂಪನ್ನರಾದ ರಾಜಾಧಿರಾಜರಲ್ಲಿ ಇಂತಹ ವ್ಯಾಪಾರವು ಪ್ರತ್ಯಕ್ಷ. ಯಾರಿಗೆ ಯಾವುದು ಇಷ್ಟವೋ ಅದೇ ಅವರಿಗೆ ಪ್ರಯೋಜನ. ಪ್ರಯೋಜನಕ್ಕೆ ಬೇರೆ ಪ್ರಯೋಜನವಿಲ್ಲವಾದುದರಿಂದ ಇದು ಸ್ವಾರ್ಥವೇ ಪರಾರ್ಥವೆ ? ಎಂದು ಬೇರೆ ಪ್ರಯೋಜನ ಪ್ರಶ್ನೆಗೆ ಅವಕಾಶವಿಲ್ಲ. ಆದು ದರಿಂದ ಪ್ರಕೃತಿಯ ವ್ಯಾಪಾರದಂತೆ ಪರಮೇಶ್ವರನ ವ್ಯಾಪಾರವೂ ಇರು ವುದು.

ಆದರೆ ಈ ಲೀಲಾರೂಪವಾದ ಆನಂದವು ಅವಾಪ್ತ ಸಮಸ್ತ ಕಾಮ ನಿಗೆ ಹೇಗೆಂದರೆ, ಅವಾಪ ಸಮಸ್ತ ಕಾಮ ಪದಕ್ಕೆ ಪ್ರಾಪ್ತಿಗೆ ಅರ್ಹವಾದ ಸಮಸ್ತಾಪೇಕ್ಷೆಯುಳ್ಳವನು, ಅವನ ಯಾವ ಅಪೇಕ್ಷೆಯೂ ಸಿದ್ಧಿಸದೆ ಇರ ತಕ್ಕುದ್ದಲ್ಲ ಎಂದು ಅರ್ಥ. ಆದುದರಿಂದ ಈಶ್ವರನಿಗೆ ಲೀಲಾರಸಾನುಭವ ವುಂಟು. ಇದೇ ಲೀಲಾಕೈವಲ್ಯಾಧಿಕರಣ ಎಂಬುದರ ತಾತ್ಪರ್ಯ.

## ಸೃಷ್ಟಿವಿಭಾಗ

ಸ್ಥೂಲವಾದ ಭೂತಭೌತಿಕ ಸೃಷ್ಟಿಯೂ ಈ ಪ್ರಕಾರವಿದ್ದರೂ ಮತ್ತು ಎರಡೂ ವಿಧವಾದ ಸೃಷ್ಟಿಯು ಅವಶ್ಯ ತಿಳಿಯಲ್ಪಡಬೇಕು. ಅದು ಲಿಂಗಸರ್ಗವೆಂದೂ, ಪ್ರತ್ಯಯ ಸ್ವರ್ಗವೆಂದೂ ಎರಡು ವಿಧ. ಬಾಹ್ಯ ಆಂತರ ವೆಂದು ಫಲಿತಾರ್ಥ. ಲಿಂಗಸರ್ಗವೆಂದರೆ ಸೂಕ್ಷ್ಮಸ್ಥೂಲಶರೀರಗಳೆಂಬ ಭೋಗಾಯತನ, ಇಂದ್ರಿಯಗಳೆಂಬ ಭೋಗೋಪಕರಣಗಳು ಮತ್ತು ಶಬ್ದಾ

ದಿಗಳೆಂಬ ಭೋಗ್ಯವಸ್ತುಗಳು. ಇವೆಲ್ಲವೂ ಹೊರಗಿನ ವಸ್ತುಗಳು. ಪ್ರತ್ಯಯಸರ್ಗವೆಂದರೆ ಬುದ್ಧಿ ಇಂದ್ರಿಯಗಳಲ್ಲಿ ಬರುವ ಸ್ವಭಾವಗಳು. ವಿಪರ್ಯಯಗಳು ಐದು, ಅಶಕ್ತಿಗಳು ಇಪ್ಪತ್ತೆಂಟು, ತುಷ್ಟಿಗಳು ಒಂಬತ್ತು, ಸಿದ್ಧಿಗಳು ಎಂಟೂ ಸೇರಿ ಒಟ್ಟು ಐವತ್ತು. ಭಾವಾಷ್ಟಕವು ಇದರಲ್ಲೇ ಅಂತರ್ಭೂತವಾಗಿರುವುದು. ಲಿಂಗಸರ್ಗವಿಲ್ಲದೆ ಪ್ರತ್ಯಯಸರ್ಗದ ಸ್ವರೂಪವೂ ಪ್ರಯೋಜನವೂ ಇಲ್ಲ. ಹಾಗೆ ಪ್ರತ್ಯಯಸರ್ಗವಿಲ್ಲದೆ ಲಿಂಗಸರ್ಗದ ಸ್ವರೂಪವೂಪ್ರಯೋಜನವೂ ಇಲ್ಲ. ಪ್ರಯೋಜನವೆಂದರೆ ತ್ರಿವರ್ಗವೆಂಬ ಭೋಗ, ಅಪವರ್ಗವೆಂಬ ಮೋಕ್ಷ, ಇವುಗಳ ಸಾಧನೆಗಳೂ ಸೇರಿರುವುವು.

## ಪ್ರತ್ಯಯಸರ್ಗವಿವರಣೆ

ಅವಿದ್ಯೆ ಅಸ್ಮಿತೆ ರಾಗ ದ್ವೇಷ ಅಭಿನಿವೇಶಗಳೆಂಬ ಐದು ಕ್ಲೇಶಗಳು ವಿಪರ್ಯಯಗಳು. ಶರೀರಾತ್ಮಭ್ರಮೆಗಳು ಅವಿದ್ಯೆ ; ಬುದ್ಧಿಗೂ ಆತ್ಮನಿಗೂ ವಿವೇಕವಿಲ್ಲದೆ ನಾನು ಎಂಬ ಅಭಿಮಾನ ಅಸ್ಮಿತೆ ; ರಾಗ ಅಥವಾ ಇಚ್ಛೆಯು ಪ್ರವೃತ್ತಿಕಾರಣ. ದ್ವೇಷ ಅಥವಾ ಅನಿಚ್ಛೆಯು ನಿವೃತ್ತಿಕಾರಣ: ಅಭಿನಿವೇಶವೆಂದರೆ ಮರಣಾದಿ ಭಯ.

ಶಾಸ್ತ್ರಾಭ್ಯಾಸ, ಶಾಸ್ತ್ರಜ್ಞಾನವಿಚಾರ, ಗುರುಶಿಷ್ಯ ಸಹವಾಸ, ಸದಾ ಮುದಿತ ವಿವೇಕಖ್ಯಾತಿ ಪ್ರಮೋದ ಮುದಿತ ಮೋದಮಾನಗಳೆಂಬುವು ಅಷ್ಟಸಿದ್ಧಿಗಳು,

ನವತುಷ್ಟಿಗಳು—ವಿವೇಕಸಾಕ್ಷಾತ್ಕಾರವನ್ನು ಪ್ರಕೃತಿಯೇ ಮಾಡುತ್ತದೆ. ನಾವೇಕೆ ಶ್ರಮಪಡಬೇಕೆಂಬ ತೃಪ್ತಿಯೊಂದು. ಇದಕ್ಕೆ ಅಂಭಸ್ಸೆಂದು ಹೆಸರು. ಸನ್ಯಾಸದಿಂದ ತತ್ತ್ವಜ್ಞಾನವು ಬರುತ್ತದೆ ಎಂಬ ತಾತ್ಪರ್ಯ ಎರಡನೆಯದು ; ಇದರ ಹೆಸರು ಸಲಿಲ. ಕಾಲ ಬಂದರೆ ಆಗುತ್ತದೆ ಎಂದು ತಿಳಿಯುವುದು ಮೂರನೆಯದು, ಓಘವೆಂದು ಇದಕ್ಕೆ ಹೆಸರು. ವೃಷ್ಟಿಯು ನಾಲ್ಕನೆಯದು, ಭಾಗ್ಯ ಬಂದರೆ ಆಗುತ್ತದೆ ಎಂದು ಭಾವ. ಪಾರ ಎಂದರೆ ದ್ರವ್ಯಾರ್ಜನೆ ಐದನೆಯದು, ಸುಪಾರ ಎಂದರೆ ಅದರ ರಕ್ಷಣೆ ಆರನೆಯದು, ಪಾರಾಪಾರ ಎಂದರೆ ಅದರ ವ್ಯಯ ಏಳನೆಯದು, ಅನುತ್ತಮಾಂಭ ಎಂದರೆ ಕಾಮವೃದ್ಧಿ ಎಳನೆಯದು, ಉತ್ತಮಾಂಭ ಎಂದರೆ ಪ್ರಾಣಿ

ಹಿಂಸೆಯಿಲ್ಲದೆ ಸಂಖವಿಲ್ಲವೆಂದು ತಿಳಿದು ವೈರಾಗ್ಯವನ್ನು ಪಡೆಯುವುದು ಒಂಬತ್ತನೆಯದು.

ಈ ನವತುಷ್ಟಿಗಳು ಬುದ್ಧಿಗೆ ಸೇರಿದುವು. ಏಕಾದಶೇಂದ್ರಿಯಗಳ ಅಸಾಮರ್ಥ್ಯಗಳು, ಅಂಧತ್ವಪಂಗುತ್ವಾದಿಗಳು ಹನ್ನೊಂದು. ಅಷ್ಟಸಿದ್ಧಿ ನವತುಷ್ಟಿ ಇವುಗಳ ವಿಪರ್ಯಗಳು, ಪ್ರತಿಪಕ್ಷಗಳು ಹದಿನೇಳು ಸೇರಿ ಇಪ್ಪತ್ತೆಂಟು ಅಶಕ್ತಿಗಳು. ಒಟ್ಟು ಐವತ್ತು ವಿಧ ಪ್ರತ್ಯಯಸರ್ಗವು. ಇವುಗಳ ಅವಾಂತರ ಭೇದಗಳು ಅಸಂಖ್ಯಾತಗಳಾಗಿರುವುವು. ಈ ನಿರೂಪಣೆಯು ಕೆಟ್ಟ ಅಂಶಗಳನ್ನು ಬಿಡುವುದಕ್ಕೂ ಒಳ್ಳೆಯ ಅಂಶಗಳನ್ನು ಪರಿಗ್ರಹಿಸುವುದಕ್ಕೂ ಬೇಕಾಗುವುದೆಂದು ಭಾವವು.

## ಪುರುಷಾರ್ಥ

ಪುರುಷಾರ್ಥವೆಂಬ ಪದವು ಸಾಂಖ್ಯದರ್ಶನದಲ್ಲೇ ಪ್ರಾರಂಭವಾಯಿತು. ಇದಕ್ಕೆ ಪ್ರತಿಯಾದ ಪದವು ಸ್ವಾರ್ಥವೆಂಬುದು. ಪುರುಷಾರ್ಥವೆಂಬ ಪದವು ನಮ್ಮ ಪ್ರಸಿದ್ಧ ಉಪನಿಷತ್ತುಗಳಲ್ಲಿಲ್ಲ; ಸಾಂಖ್ಯಗ್ರಂಥಗಳಲ್ಲಿ ಹೆಚ್ಚಾಗಿ ವಾಡಿಕೆಯಲ್ಲಿರುವುದು. ಅಲ್ಲಿಂದ ಪುರಾಣಗಳಿಗೆ ಬಂದಿರಬಹುದು. ಪ್ರಕೃತಿ ಎಂಬ ಮೂಲತತ್ತ್ವವು ಸ್ವಾರ್ಥಕ್ಕಾಗಿ ಯಾವ ವ್ಯಾಪಾರವನ್ನೂ ಮಾಡುವುದಿಲ್ಲ, ಪುರುಷಾರ್ಥಕ್ಕಾಗಿಯೂ ಪರಾರ್ಥಕ್ಕಾಗಿಯೂ ಮಾಡುತ್ತದೆ. ಲೋಕದಲ್ಲಿ ಸಂಘಾತವಾಗಿ ಎಂದರೆ ಒಟ್ಟುಕೂಡಿರುವ ವಸ್ತುಗಳ ಪ್ರಯೋಜನ ಪರಾರ್ಥವಾಗಿರುವುದು. ಮನೆ ಮಠ ವಸ್ತ್ರ ಪಾತ್ರ ಶಯನ ಆಸನ ಮೊದಲಾದ ವಸ್ತುಗಳು ಸಂಘಾತವಾಗಿ ಉಪಯೋಗವಾಗುವುವು. ಆ ಉಪಯೋಗವು ಅವುಗಳಿಗಲ್ಲ, ಪರಾರ್ಥವು. ಆದ್ದರಿಂದಲೇ ಪುರುಷನೆಂಬ ಜೀವಾತ್ಮನು ಇರಬೇಕು. ಸುಖದುಃಖಮೋಹಮಯವಾಗಿರುವ ಪ್ರಪಂಚಕ್ಕೆ, ರಥಗಳಿಗೆ ಸಾರಥಿಯಂತೆ, ಅಧಿಷ್ಠಾತನು ಒಬ್ಬನಿರಬೇಕು. ಇಲ್ಲಿ ಪುರುಷನ ಸಾನಿಧ್ಯವೇ ಅಧಿಷ್ಠಾನವು. ಸುಖದುಃಖಗಳು ಸರ್ವಲೋಕ ಪ್ರತ್ಯಕ್ಷವು. ಅವುಗಳನ್ನು ಅನುಕೂಲವಾಗಿಯೂ ಪ್ರತಿಕೂಲವಾಗಿಯೂ ತಿಳಿಯುವವನು ಬೇಕು. ಸರ್ವವೂ ದೃಶ್ಯವಾಗಿರುವುದರಿಂದ ದ್ರಷ್ಟಾ ಬೇಕು. ಇದೇ ಮೊದಲಾದ ಕಾರಣಗಳಿಂದ ಜೀವಾತ್ಮನೆಂಬ ಪುರುಷ

ನಿರುವನು. ಅವನ ಭೋಗಕ್ಕೂ ಮೋಕ್ಷಕ್ಕೂ ಸಕಲ ವಸ್ತುಗಳೂ ಇರು ವುವು. ಆ ಜೀವಾತ್ಮರು ಅಸಂಖ್ಯಾತರಾಗಿರುವುದರಿಂದ ಸುಖ ದುಃಖ, ಜ್ಞಾನ ಅಜ್ಞಾನ, ಕುಂಟ ಕುರುಡ, ಪಂಡಿತ ಪಾಮರ, ಚಿಕ್ಕ ದೊಡ್ಡ, ಜಾತ ಮೃತ, ಧನಿಕ ದರಿದ್ರ ಮೊದಲಾದ ಲೋಕವ್ಯವಸ್ಥೆ ಸರಿಹೋಗು ವುದು.

## ತತ್ತ್ವಜ್ಞಾನ

ಮೂಲಪ್ರಕೃತಿಯಲ್ಲಿರುವ ಮೂರು ಗುಣಗಳು ಸಕಲ ವಸ್ತುಗಳಲ್ಲೂ ಇರುವುವು. ಸತ್ತ್ವದಿಂದ ಸುಖವೂ ರಜಸ್ಸಿನಿಂದ ದುಃಖವೂ ತಮಸ್ಸಿನಿಂದ ಮೋಹವೂ ಬರುವುವು. ರಜಸ್ಸಿನಿಂದ ಬರುವ ದುಃಖವು ಆಧ್ಯಾತ್ಮಿಕ, ಆಧಿಭೌತಿಕ ಆಧಿದೈವಿಕವೆಂದು ಮೂರು ವಿಧ. ಲೋಕದಲ್ಲೂ ಶಾಸ್ತ್ರದಲ್ಲೂ ಇವನ್ನು ತಾಪತ್ರಯವೆನ್ನುತ್ತಾರೆ. ಆಧ್ಯಾತ್ಮಿಕವೆಂದರೆ ಶರೀರದಲ್ಲಿರುವ ವಾತಪಿತ್ತಶ್ಲೇಷ್ಮಗಳ ವ್ಯತ್ಯಾಸದಿಂದ ಬರುವ ಜ್ವರ ಜರೆ ಮರಣ ಮೊದ ಲಾದುದು ಮತ್ತು ಮಾನಸಿಕವಾದ ಕಾಮ ಕ್ರೋಧ ಭಯಾಸೂಯಾದಿಗಳಿಂ ದುಂಟಾಗುವ ಸಂಕಟ. ಆಧಿಭೌತಿಕವೆಂದರೆ ಶತ್ರು ವ್ಯಾಘ್ರ ಸರ್ಪವೃಶ್ಚಿಕ ಮೊದಲಾದ ದುಷ್ಟಜಂತುಗಳಿಂದ ಬರುವ ಹಿಂಸೆ. ಆಧಿದೈವಿಕವೆಂದರೆ, ಯಕ್ಷ ರಾಕ್ಷಸ ಪಿಶಾಚ ಭೂತಪ್ರೇತ ಮೊದಲಾದುವುಗಳ ಆವೇಶದಿಂದುಂಟಾ ಗುವ ತೊಂದರೆ. ಇವುಗಳು ಸರ್ವಲೋಕಾನುಭವ ಸಿದ್ಧಗಳು. ಇವು ಗಳ ಪರಿಹಾರ ಮಾರ್ಗವನ್ನು ವಿಚಾರಿಸಬೇಕಾಗಿರುವುದು.

ಲೋಕದಲ್ಲಿ ವೈದ್ಯಶಾಸ್ತ್ರ ನೀತಿಶಾಸ್ತ್ರ ಮಂತ್ರಶಾಸ್ತ್ರಗಳು ಈ ಮೂರು ವಿಧವಾದ ದುಃಖನಿವೃತ್ತಿಗೆ ಉಪಾಯಗಳು ಎಂದು ತಿಳಿದುಬರುತ್ತದೆ. ಆದರೂ ಆ ಉಪಾಯಗಳು ಕೆಲವು ಸಂದರ್ಭಗಳಲ್ಲಿ ವ್ಯರ್ಥಗಳಾಗುವುವು. ಸಾರ್ಥಕಗಳಾದರೂ ನಿಶ್ಶೇಷನಿವೃತ್ತಿಗೆ ಸಾಧನಗಳಾಗುವುದಿಲ್ಲ.

ವೇದೋಕ್ತವಾದ ಯಜ್ಞಯಾಗಾದಿ ಕರ್ಮಗಳು ದುಃಖನಿವೃತ್ತಿಗೆ ಸಾಧನಗಳೆಂದು ತಿಳಿದರೂ ಆ ಕರ್ಮಗಳಲ್ಲಿ ಪ್ರಾಣಹಿಂಸೆಯು ಸಂಬಂಧವಿರು ವುದರಿಂದ ಆ ಪಾಪಕ್ಕೆ ನರಕಾನುಭವವು ಬರುವುದಲ್ಲದೆ, ಆ ದುಃಖವೃತ್ತಿ ಯೆಂಬ ಸ್ವರ್ಗ ಸುಖಾನುಭವದಲ್ಲಿ ತಾರತಮ್ಯವೂ ವೃದ್ಧಿಕ್ಷಯವೂ ಇರುವು ದರಿಂದ ಈರ್ಷ್ಯಾಸೂಯೆ ಭಯಗಳು ಇದ್ದೇ ಇರುವುವು. ಶಾಶ್ವತದುಃಖ

ನಿವೃತ್ತಿಯೂ ಆಗಲಾರದು. ಆದುದರಿಂದಲೇ ಅನೇಕ ಜನ್ಮಾಭ್ಯಾಸ ಅಭ್ಯಾಸಗಳಿಂದ ಪರಿಪೂರ್ಣವಾದ ತತ್ತ್ವಜ್ಞಾನವೆಂಬ ಸಾಧನವೇ ಅವಿವೇಕದಿಂದುಂಟಾದ ದುಃಖವನ್ನು ನಿಶ್ಶೇಷವಾಗಿ ನಿವೃತ್ತಿಮಾಡುವುದು.

ಯಾಗದಲ್ಲಿ ಬರುವ ಪ್ರಾಣಿಹಿಂಸೆಯ ವಿಷಯದಲ್ಲಿ ವೈದಿಕರು ಹೇಳುವುದೇನೆಂದರೆ—ವೇದದಲ್ಲೇ ಒಂದು ಕಡೆ ಪ್ರಾಣಿಹಿಂಸೆ ಸ್ವರ್ಗಸಾಧನವೆಂದೂ ಮತ್ತೊಂದು ಕಡೆ ನರಕಸಾಧನವೆಂದೂ ಹೇಳುವುದರಿಂದ ವಿರೋಧವಿರುತ್ತದೆ. ಯಾಗಕ್ಕೆ ಬೇಕಾದ ಪ್ರಾಣಿಹಿಂಸೆಯನ್ನು ಬಿಟ್ಟು ಇತರ ಪ್ರಾಣಿಹಿಂಸೆ ನರಕಕ್ಕೆ ಕಾರಣವೆಂದು ತಿಳಿಯಬೇಕು. ಯಜ್ಞದಲ್ಲಿ ಪಶುಹಿಂಸೆ ಹಿಂಸೆಯಲ್ಲವೆಂದು ನಿರ್ಣಯ.

ಸಾಂಖ್ಯರ ಅಭಿಪ್ರಾಯವೇನೆಂದರೆ : ಕೆಟ್ಟ ಕೆಲಸವೆಂಬುದು ಎಲ್ಲೂ ಕೆಟ್ಟದ್ದೇ. ಯಜ್ಞಕ್ಕೆ ಬೇಕಾಗಿರುವುದರಿಂದ ಅದು ದೋಷವಲ್ಲವೆಂದರೆ ಯಜ್ಞಕ್ಕೆ ಬೇಕಾಗಿರುವ ದುಡ್ಡು ಮೊದಲಾದುವುಗಳನ್ನು ಸಂಪಾದಿಸುವುದಕ್ಕಾಗಿ ಮಾಡುವ ಕಳ್ಳತನ ಮೊದಲಾದುವು ದೋಷವಲ್ಲವೆಂದು ತಿಳಿಯಬೇಕಾಗುತ್ತದೆ. ಪಶುಹಿಂಸೆ ಯಜ್ಞಕ್ಕೆ ಉಪಕಾರಮಾಡಲಿ, ನರಕವನ್ನುಂಟುಮಾಡಲಿ ವಿರೋಧ ಎಲ್ಲಿ ? ಆದುದರಿಂದ ಕರ್ಮದಲ್ಲಿ ದೋಷವಿದೆ. ಈ ಅಭಿಪ್ರಾಯವನ್ನು "ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ" ಎಂದು ಭಗವದ್ಗೀತೆಯಲ್ಲೂ ಅನುವಾದಮಾಡಿರುತ್ತದೆ. ಅನಂತರದಲ್ಲಿ ಆಸುರಿ ಎಂಬ ಮಹರ್ಷಿಯು ಯಜ್ಞದಲ್ಲಿ ಪ್ರಾಣಿಹಿಂಸೆ ಸ್ವಲ್ಪ ದೋಷ, ಅಷ್ಟು ದೊಡ್ಡ ದೋಷವಲ್ಲವೆಂದು ಹೇಳುತ್ತಾನೆ. ಮತ್ತೆ ಕೆಲವರು ಹೇಳುವುದೇನೆಂದರೆ ; ಯಜ್ಞದಲ್ಲಿ ಸಂಹಾರದಿಂದ ಪ್ರಾಣಿಗಳಿಗೆ ಸ್ವರ್ಗ ಬರುತ್ತದೆ. ಅದು ಅದಕ್ಕೆ ಉಪಕಾರವೇ ಹೊರತು ಅಪಕಾರವಲ್ಲ, ದೋಷವಲ್ಲ ಎಂದು ಸಮರ್ಥನೆಮಾಡಬಹುದು. ಈ ವಿಚಾರವನ್ನು ಹಿಂದೆಯೂ ವಿಸ್ತರಿಸಿದೆ.

## ತತ್ತ್ವಜ್ಞಾನಾಭ್ಯಾಸ

ಪ್ರತ್ಯಕ್ಷಾನುಮಾನ ಪ್ರಮಾಣಗಳಿಂದಲೂ, ಶ್ರುತಿಸ್ಮೃತಿಪುರಾಣಗಳ ಶ್ರವಣದಿಂದಲೂ, ಪ್ರಪಂಚಸ್ವಭಾವವನ್ನು ಮೂಲಕಾರಣವಾದ ಪ್ರಕೃ

ತಿಯ ಸ್ವಭಾವವನ್ನೂ ವಿಚಾರಿಸಿ ಇವುಗಳು ಕೇವಲ ಪರಾರ್ಥಗಳಾಗಿಯೇ ಇರುವುದರಿಂದ ಪರನೆಂಬ ಪುರುಷನು ಚೈತನ್ಯಸ್ವರೂಪನಾಗಿರಬೇಕು, ಪುಣ್ಯ ಪಾಪ ಸುಖ ದುಃಖ ಬಂಧ ಮೋಕ್ಷ ಮೊದಲಾದ ವ್ಯವಸ್ಥೆ ಇರಬೇಕಾಗಿರುವುದರಿಂದ ಅಸಂಖ್ಯಾತ ಪುರುಷರಿರಬೇಕು. ಪ್ರಕೃತಿ ಪುರುಷರ ಸಂಬಂಧವನ್ನು ಪರಿಶೋಧಿಸಿ, ವಿವೇಕವನ್ನು ವಿಮರ್ಶಿಸಿ, ದೀರ್ಘಕಾಲ ನಿರಂತರ ಪ್ರೀತಿಪೂರ್ವಕ ಅಭ್ಯಾಸಪಾಟವದಿಂದ ಭಾವನೆಯನ್ನು ಸಾಕ್ಷಾತ್ಕಾರಸ್ಥಿತಿಯಲ್ಲಿ ತಂದು, ವಿಶುದ್ಧ ವಿಜ್ಞಾನವೆಂಬ ಪ್ರಕೃತಿಪುರುಷ ವಿವೇಕಖ್ಯಾತಿಯಿಂದ ಅವಿವೇಕಖ್ಯಾತಿ ಮೂಲಕವಾದ ಅಹಂಕಾರ ಮಮಕಾರಗಳನ್ನು ನಿಶ್ಶೇಷ ನಿವೃತ್ತಿಮಾಡಿ, ವಿವೇಕ ಖ್ಯಾತಿಪಾದದಲ್ಲಿ ವಿವರಿಸಿದೆ.

ಸಾಕ್ಷಾತ್ಕಾರರೂಪವಾದ ತತ್ತ್ವಜ್ಞಾನ ಹುಟ್ಟಿದರೂ ಕೆಲವುಕಾಲ ಶರೀರಧಾರಣೆ, ದಂಡವನ್ನು ತೆಗೆದರೂ ಕುಲಾಲಚಕ್ರಕ್ಕೆ ಇನ್ನೂ ಭ್ರಮಣವಿರುವಂತೆ, ಇರುವುದು. ಕರ್ಮಬೀಜಗಳು ಜ್ಞಾನಾಗ್ನಿಯಿಂದ ದಗ್ಧಪ್ರಾಯವಾದುದರಿಂದ ಬುದ್ಧಿಯೆಂಬ ಕ್ಷೇತ್ರದಲ್ಲಿ ಸುಖದುಃಖಗಳೆಂಬ ಅಂಕುರಜನನಸಮರ್ಥಗಳಾಗಲಾರವು. ದೇಹಪಾತಾನಂತರ ಕೈವಲ್ಯವೆಂಬ ಮೋಕ್ಷಸಿದ್ಧ. ಕೈವಲ್ಯವೆಂದರೆ ಪ್ರಕೃತಿಯಿಂದ ಅಗಲುವುದು. ಇದು ಶಾಶ್ವತವಾದರೆ ಮೋಕ್ಷ. ಬಂಧವೆಂದರೆ ಪ್ರಕೃತಿಯೊಡನೆ ಸೇರಿರುವುದು, ಸಂಯೋಗ. ಅದಕ್ಕೆ ಮೂಲ ಅವಿವೇಕ, ಅದರಿಂದಲೇ ಅಹಂಕಾರ ಮಮಕಾರ ಮೊದಲಾದುವು. ಇವುಗಳು ನಿವೃತ್ತಿಯಾಗಿ ಪುರುಷನು ಉಳಿಯಬೇಕು. ನಾನೆಂಬುದು ಪ್ರಕೃತಿ ಪುರುಷನಲ್ಲವೆಂಬ ಭಾವನೆಯಿಂದ ಅಹಂಕಾರನಿವೃತ್ತಿ, ಕರ್ತೃತ್ವವಿಲ್ಲದಿರುವುದರಿಂದ ಸುಖದುಃಖಾದಿ ಭೋಗಗಳು ಸ್ವಾಭಾವಿಕವಲ್ಲ ಎಂಬ ಭಾವನೆಯಿಂದ ಮಮಕಾರನಿವೃತ್ತಿ.

ಯೋಗಶಾಸ್ತ್ರದಲ್ಲಿ ಹೇಳುವಂತೆ ಸಮಾಧಿವಿಶೇಷನಿಂದ ಸಿದ್ಧರಾಗಿ ಸರ್ವಜ್ಞರಾಗಿ ಕಪಿಲಾದಿಗಳಂತೆ ಲೋಕಾನುಗ್ರಹಕ್ಕಾದರೂ ಲೋಕಪಾಲಕರಂತೆ ಸುಖಾಭವಕ್ಕಾದರೂ ಕೆಲವು ಕಾಲವಿದ್ದರೂ ವಿರಕ್ತರಾಗಿ ಮುಕ್ತರಾಗುವರು, ಕೇವಲರಾಗುವರು.

## ಬಂಧ

ಬಂಧವೆಂದರೆ ಪ್ರಕೃತಿ ಬೇರೆ ಪುರುಷನು ಬೇರೆ ಎಂದು ತಿಳಿಯದಿರುವಿಕೆಯೆಂಬ ಅವಿವೇಕಮೂಲಕ ಪ್ರಕೃತಿಪುರುಷರ ಸಂಯೋಗವೆಂಬ ಭೋಗ ಬಂಧನ. ಪ್ರಕೃತಿ ಜಡವಾಗಿಯೂ, ಪುರುಷನು ಪ್ರಕಾಶವಸ್ತುವಾಗಿಯೂ ಇರುವುದರಿಂದ ದೃಶ್ಯದ್ರಷ್ಟೃಭಾವಸಂಬಂಧವೆಂದು ನವೀನ ಸಾಂಖ್ಯರ ಅಭಿಪ್ರಾಯ. ಭೋಗವೆಂದರೆ ಅದೊಂದು ವಿಧವಾದ ಪರಿಣಾಮ. ಕೂಟಸ್ಥನಾದ ನಿರ್ವಿಕಾರನಾದ ಪುರುಷನಿಗೆ ಪರಿಣಾಮ ಕೂಡದೆಂದು ನವೀನರ ಹೃದಯ. ಪರಿಣಾಮ ಎರಡು ವಿಧ. ವಸ್ತುವಿನ ಸ್ವರೂಪವೇ ಬದಲಾಯಿಸಿ ಬೀಜ ಅಂಕುರವಾಗುವ ಹಾಗೆ ಬೇರೆ ಸ್ವರೂಪ ಬರುವುದೊಂದು. ಸ್ವರೂಪ ಬದಲಾಯಿಸದೆ ಸರ್ಪವು ಋಜು ಕುಂಡಲ ವಕ್ರ ಭಾವಗಳನ್ನು ಹೊಂದುವ ರೀತಿಯಲ್ಲಿ ಆಗುವ ಪರಿಣಾಮವೊಂದು. ಎರಡನೆಯ ಪರಿಣಾಮ ವಿಕಾರವಲ್ಲ, ನಿರ್ವಿಕಾರತೆಗೆ ಬಾಧಕವಿಲ್ಲ ಎಂದು ಪ್ರಾಚೀನರ ಹೃದಯ. ಇದು ಪಾತಂಜಲರ ಅಭಿಪ್ರಾಯವೆಂದೂ ಹೇಳಬಹುದು.

ಈ ರೀತಿಯಾದ ಸಂಬಂಧವನ್ನು ವ್ಯಂಗ್ಯವ್ಯಂಜಕಭಾವವೆಂದೂ ಬಿಂಬ ಪ್ರತಿಬಿಂಬವೆಂದೂ ಸಂಸರ್ಗವೆಂದೂ ಬುಧ್ಯಾರೋಪಕ್ಕಾಗಿ ನಾನಾ ಶಬ್ದಗಳಿಂದ ನಿರೂಪಿಸಿರುವರು.

ಪ್ರಕೃತಿಪರಿಣಾಮವಾದ ಬುದ್ಧಿಯಲ್ಲಿ ಪುಣ್ಯಪಾಪ ಕಾಮಕ್ರೋಧ ದಯಾದಾಕ್ಷಿಣ್ಯ ಸುಖದುಃಖ ಮೊದಲಾದ ಸರ್ವಭಾವವೂ ಇರುವುದರಿಂದ ಬಂಧಮೋಕ್ಷವು ಸಹ ಪ್ರಕೃತಿಗೇ ಇರುವುದು. ಕನ್ನಡಿಯಲ್ಲಿರುವ ಗುಣದೋಷಗಳು ಪ್ರತಿಬಿಂಬದಲ್ಲಿರುವಂತೆ ತಿಳಿಯುವ ಹಾಗೆ ಪುರುಷನಲ್ಲಿರುವಂತೆ ತಿಳಿದ ಹಾಗಾಯಿತು. ಇದರಿಂದ ಪುರುಷನಿಗೆ ಬಂಧಮೋಕ್ಷವ್ಯವಹಾರ. ಯುದ್ಧದಲ್ಲಿ ಜಯಪರಾಜಯಗಳು, ಸಂತೋಷ ವ್ಯಸನಗಳು ಸಾಕ್ಷಾತ್ ಭೃತ್ಯರಲ್ಲಿದ್ದರೂ ಸ್ವಾಮಿಯಾದ ರಾಜನಲ್ಲಿರುವ ಹಾಗೆ ಪುರುಷನಲ್ಲಿರುವುದು ಎಂದು ಸಿದ್ಧಾಂತ.

ಇದರಿಂದ ಪುರುಷನೇ ಇಲ್ಲವೆಂಬ ಬೌದ್ಧಸಿದ್ಧಾಂತಕ್ಕೂ, ಪುರುಷನಿದ್ದರೂ ವಸ್ತುತಃ ಅವನಲ್ಲಿ ಯಾವುದೂ ಇಲ್ಲವೆಂಬ ಸಾಂಖ್ಯಸಿದ್ಧಾಂತಕ್ಕೂ ವ್ಯತ್ಯಾಸ ತಿಳಿಯಿತು. ಅವಿವೇಕಪದಕ್ಕೆ ಅಧ್ಯಾಸ ಭ್ರಾಂತಿ ಅವಿದ್ಯೆ ಎಂಬ

ಭಾವನೆಯಿಂದ ವಿಶುದ್ಧಾದ್ವೈತಸಿದ್ಧಾಂತವೂ ಈ ಮಾರ್ಗದಲ್ಲೇ ಮಧ್ಯಸ್ಥವಾಗಿ ಇರುವುದು. ಈ ಅಂಶವನ್ನು ಗೌಡಪಾದಾಚಾರ್ಯರು ಸೂಚಿಸಿರುವರು —

ನ ವಿರೋಧೋ ನ ಚೋತ್ಪತ್ತಿಃ ನ ಬದ್ಧೋ ನ ಚ ಸಾಧಕಃ
ನ ಮುಮುಕ್ಷುಃ ನ ವೈ ಮುಕ್ತಃ ಇತ್ಯೇಷಾ ಪರಮಾರ್ಥತಾ ॥

ಎಂದು ಸಕಲವ್ಯವಹಾರವೂ ಅವಿದ್ಯಕವೇ ಹೊರತು ವಾಸ್ತವವಲ್ಲವೆಂದು ಅಭಿಪ್ರಾಯ.

## ಉಪಸಂಹಾರ

ಚಾರ್ವಾಕಮತವನ್ನೂ ಬೌದ್ಧಮತವನ್ನೂ ಸೇರಿಸಿದರೆ ಸಾಂಖ್ಯಮತವಾಗುತ್ತದೆ. ಚಾರ್ವಾಕರು ಬಾಹ್ಯವಸ್ತುಗಳನ್ನು ಮಾತ್ರ ಅಂಗೀಕರಿಸಿದರು. ಯೋಗಾಚಾರರು ಅಂತರವಸ್ತುಗಳನ್ನು ಮಾತ್ರ ಅಂಗೀಕರಿಸಿದರು ಇವರು ವಸ್ತುಗಳನ್ನು ಬಾಹ್ಯ ಆಂತರವೆಂದು ವಿಭಾಗಮಾಡಿ ಅಂತರಕ್ಕೆ ಪ್ರತ್ಯಯಸರ್ಗವೆಂದೂ, ಬಾಹ್ಯಕ್ಕೆ ಲಿಂಗಸರ್ಗವೆಂದೂ ಎರಡು ಸೃಷ್ಟಿಯನ್ನು ಹೇಳಿರುವರು. ಚಾರ್ವಾಕರು ಜೀವಾತ್ಮನನ್ನು ನಿರಾಕರಿಸುವ ರೀತಿಯಲ್ಲಿ ಇವರು ಪರಮಾತ್ಮನನ್ನು ನಿರಾಕರಿಸುತ್ತಾರೆ. ವಿಶುದ್ಧಾದ್ವೈತದವರು ಪರಮಾತ್ಮನನ್ನಿಟ್ಟಿರುವ ರೀತಿಯಲ್ಲಿ ಇವರು ಜೀವಾತ್ಮನನ್ನಿಟ್ಟಿರುವರು. ಅವರು ಅಧ್ಯಾಸದಿಂದ (ಭ್ರಾಂತಿ) ಎಲ್ಲವನ್ನೂ ಉಪಪಾದನೆ ಮಾಡುವ ರೀತಿಯಲ್ಲಿ ಇವರು ಅವಿವೇಕದಿಂದ (ಅಖ್ಯಾತಿ) ಉಪಪಾದನೆ ಮಾಡುತ್ತಾರೆ. ಅವರಿಗೆ ಸಕಲವೂ ಕಲ್ಪಿತ ; ಇವರಿಗೆ ಸಕಲವೂ ವಾಸ್ತವ.

ಸಾಂಖ್ಯದರ್ಶನವನ್ನು ಲೋಕದೃಷ್ಟಿಯಿಂದ ನೋಡಿ ಒಬ್ಬ ರಾಜನ ರಾಜ್ಯಭಾರವನ್ನು ಅದಕ್ಕೆ ನಿದರ್ಶನವಾಗಿ ತಿಳಿಯಬಹುದು. ಹೇಗೆಂದರೆ— ಪುರುಷಪದಕ್ಕೆ ಪುರಿ ಶಯನ ಎಂಬ ಅರ್ಥದಿಂದ ಒಬ್ಬನಗರಾಧಿಪತಿ ತೋರುತ್ತಾನೆ. ಅವನು ಮಂತ್ರಿಸ್ಥಾನದಲ್ಲಿರುವ ಬುದ್ಧಿಗೆ ಸರ್ವಾಧಿಕಾರವನ್ನು ಒಪ್ಪಿಸಿ ಉದಾಸೀನನಾಗಿ ನಿರ್ಲಿಪ್ತನಾಗಿ ಸರ್ವಸಾಕ್ಷಿಯಾಗಿ ಸರ್ವಭೋಗಕ್ಕೂ ಸ್ವಾಮಿಯಾಗಿ ತಾನು ಯಾವ ಕೆಲಸವನ್ನೂ ಮಾಡದಿರುವುದರಿಂದ ಅಕರ್ತನಾಗಿ ಯಾರೊಡನೆಯೂ ಸೇರದಿರುವುದರಿಂದ ಕೇವಲನಾಗಿಯೂ ಇರುವನು.

ಸರ್ವಾಧಿಕಾರಿಯಾದ ಬುದ್ಧಿ ಎಂಬ ಮಂತ್ರಿ ಸಾಕ್ಷಾತ್ ಸರ್ವಕಾರ್ಯ ಕರ್ತನಾಗಿ ಸರ್ವವಿಧಭಾವವನ್ನೂ ಸಿದ್ಧಿಯನ್ನೂ ತುಷ್ಟಿಯನ್ನೂ ಅಶಕ್ತಿಯನ್ನೂ ಹೊಂದಿ ಇವುಗಳನ್ನೆಲ್ಲಾ ಪುರುಷನೆಂಬ ರಾಜನಿಗೆ ಅರಿಕೆಮಾಡುವನು. ಕೈಕೆಳಗೆ ಇರುವ ಇಪ್ಪತ್ತೆರಡು ಅಧಿಕಾರಿಗಳು ಅವರವರ ವ್ಯಾಪಾರಗಳು ಒಟ್ಟುಗೂಡಿ, ಮಾಡತಕ್ಕ ವ್ಯಾಪಾರಗಳು ಅನಂತಗಳಾಗಿದ್ದರೂ ಮಂತ್ರಿಯ ಶಕ್ತಿಯಿಂದಲೇ ನಡೆಯುವುದಾದುದರಿಂದ ಅವನೇ ಪ್ರಧಾನಿಯಾಗಿ ನಿರ್ವಹಿಸುವನು.

ಇಂತಹ ಮಂತ್ರಿಗೂ ತನಗೂ ರಾಜನು ಭೇದವನ್ನು ತಿಳಿಯದಿರುವುದರಿಂದ ರಾಜನು ತಾನೇ ಮಂತ್ರಿಯೆಂಬುದಾಗಿಯೂ, ಮಂತ್ರಿ ತಾನೇ ರಾಜನೆಂಬುದಾಗಿಯೂ ಬರುವ ಭಾವವು ಅವಿಚ್ಛಿನ್ನವಾಗಿ ನಡೆಯುತ್ತಿರುವುದು. ಇಂತಹ ರಾಜ್ಯಭಾರದಲ್ಲಿ ಸ್ವಲ್ಪ ಬೇಸರಿಕೆಯುಂಟಾದರೆ ರಾಜ ಮಂತ್ರಿಗಳಿಗೆ ಅಲ್ಪಸ್ವಲ್ಪ ಭೇದಭಾವವು ಹುಟ್ಟುವುದು. ಹೀಗೆ ಭೇದಬುದ್ಧಿ ಪ್ರಬಲವಾದರೆ, ಮಂತ್ರಿ ಸರ್ವಶಕ್ತನಾಗಿರುವುದರಿಂದ ರಾಜನನ್ನು ಪದಚ್ಯುತಿಮಾಡಿ ಯಾವತ್ಕಾಲವೂ ಮೋಕ್ಷವೆಂಬ ಮಹಾಂಧಕಾರಸದೃಶವಾದ ಕಾರಾಗೃಹದಲ್ಲಿ ಇರಿಸುವನು, ಕೊನೆಯಲ್ಲಿ ತಾನೂ ನಿರ್ಮೂಲನಾಗಿ ನಿರ್ನಾಮವಾಗುವನು.

ಮತ್ತೊಂದು ನಿದರ್ಶನ— ಕಾಳಿದಾಸನಂತೆ ಶೃಂಗಾರರಸಿಕನಾದ ಈಶ್ವರ ಕೃಷ್ಣನು ಮಾಡಿರುವ 'ಸಾಂಖ್ಯಸಪ್ತತಿ'ಯಿಂದ ತಿಳಿಯಬಹುದು— ಪುರುಷನು ಪುಲ್ಲಿಂಗ, ಬುದ್ಧಿ ಸ್ತ್ರೀಲಿಂಗ. ಈ ಬುದ್ಧಿ ಪುರುಷಸಂಬಂಧವನ್ನು ವಹಿಸಿ ತನ್ನ ಕೈಕೆಳಗಿರುವ ಸಕಲ ಪರಿವಾರಗಳಿಂದ ಸಕಲ ವ್ಯಾಪಾರಗಳನ್ನು ನಡಸುತ್ತಾ ಸದಾ ಪುರುಷನ ಸಂತೋಷವನ್ನು ನಿರೀಕ್ಷಿಸುತ್ತ ಅವನ ಭೋಗಕ್ಕೆ ದುಡಿಯುತ್ತಿರುವುದು. ರಂಗಸ್ಥಲದಲ್ಲಿ ನರ್ತಕಿ ವಿಚಿತ್ರ ವೇಷಗಳಿಂದ ತನ್ನ ಸಾಮರ್ಥ್ಯವನ್ನು ತೋರಿಸುವಹಾಗೆ ಬುದ್ಧಿಯು ನರ್ತನವೆಲ್ಲವೂ ಪುರುಷಾರ್ಥವಾಗಿರುವುದು. ಹೀಗಿರುವ ಸಂಸಾರದಲ್ಲಿ ಬುದ್ಧಿ ಅನೇಕ ಪ್ರಸವಗಳನ್ನು ಪಡೆದು ಜೀರ್ಣಾವಸ್ಥೆಯಲ್ಲಿರುವಾಗ ಭೋಗವೆಲ್ಲಾ ಆದ ಮೇಲೆ ಜಿಹಾಸೆಯಿಂದ ವಿರಕ್ತನಾಗಿ ಇವಳ ಸಂಬಂಧವನ್ನು ಬಿಟ್ಟು ಸಂನ್ಯಾಸಿಯಾಗಿ ಒಂಟಿಗಾರನಾಗುವ ಕೈವಲ್ಯವನ್ನು ಹೊಂದುವನು. ಮುಂದಕ್ಕೆ

ಕುಟುಂಬಕ್ಕೂ ಇವನಿಗೂ ಆಗಬಹುದಾದ ಸಂದರ್ಭಗಳು ಸರ್ವಾನುಭವ ಸಿದ್ಧಗಳು. ಈ ನಿದರ್ಶನಗಳನ್ನು ಲೋಕಾನುಭವಶಾಲಿಗಳಿಗೆ ವಿಸ್ತರಿಸ ಬೇಕಾಗಿಲ್ಲ. ಒಂದು ರಾಜ್ಯಭಾರ, ಮತ್ತೊಂದು ಕುಟುಂಬಭಾರ, ಆದ್ದ ರಿಂದಲೇ ಸಾಂಖ್ಯರು ಭೋಗವೈರಾಗ್ಯವಂತರು, ಭೋಗದಿಂದ ವೈರಾಗ್ಯ ವನ್ನು ಪಡೆಯುತಕ್ಕವರು. ಇತರರು ತ್ಯಾಗವೈರಾಗ್ಯವಂತರು, ತ್ಯಾಗದಿಂದ ವೈರಾಗ್ಯವನ್ನು ಪಡೆಯುತಕ್ಕವರು.

ಸಾಂಖ್ಯಸಿದ್ಧಾಂತದ ವಿಷಯಗಳೆಲ್ಲವನ್ನೂ ಹೇಳಲು ಸಾಧ್ಯವಿಲ್ಲ. ವಿಸ್ತರ ಭೀತಿಯಿಂದ ಮುಖ್ಯವೆಂದು ತೋರುವ ಕೆಲವು ವಿಷಯಗಳನ್ನು ಸಂಗ್ರಹಿಸಿ ಮುಂದೆ ಜೈನದರ್ಶನವನ್ನು ಆರಂಭಿಸುತ್ತೇವೆ.

———

೫

# ಜೈನದರ್ಶನ

## ಸಂಪ್ರದಾಯ

ಈ ಸಿದ್ಧಾಂತದ ಪ್ರಚಾರಕರು ಬಹುಕಾಲದಿಂದ ಬಂದ ಇಪ್ಪತ್ತು ನಾಲ್ಕು ತೀರ್ಥಂಕರರು ಎಂದು ಜೈನರ ಗ್ರಂಥಗಳಿಂದ ತಿಳಿದುಬರುತ್ತದೆ. ತೀರ್ಥಂಕರರೆಂದರೆ, ಪ್ರವಚನ–ಶಾಸ್ತ್ರಪ್ರವರ್ತಕರು. ವೈದಿಕ ಗ್ರಂಥಗಳಿಂದ ದಿಗಂಬರರು, ಶ್ರಮಣರು, ಪಾಣಿಪಾತ್ರರು, ಮಹರ್ಷಿಗಳು, ವಾತರಶನರು ಇರುತ್ತಿದ್ದರೆಂದು ತಿಳಿದುಬರುವುದರಿಂದ ಈ ಸಂಪ್ರದಾಯವು ಅನಾದಿ ಕಾಲದ್ದು ಎಂದು ತಿಳಿಯಬಹುದು. ಈ ತೀರ್ಥಂಕರರಲ್ಲಿ ಇಪ್ಪತ್ತು ಮೂರನೆಯವರು ಪಾರ್ಶ್ವನಾಥನೆಂಬವರು. ಇಪ್ಪತ್ತುನಾಲ್ಕನೆಯವರೇ ಮಹಾವೀರ ವರ್ಧಮಾನ ಜಿನೇಶ್ವರರು. ಇವರೇ ಅರ್ಹಂತರು ಮತ್ತು ಪರಮ ಜಿನಮುನಿಗಳು. ಈ ತೀರ್ಥಂಕರರಿಗೆ ದೇವಸ್ಥಾನಗಳೂ ವಿಗ್ರಹಗಳೂ ಪ್ರತಿಷ್ಠಾಪೂಜಾದಿಗಳೂ ಬಹುವಿಧಾಗಮ ಮೂಲಕ ನಡೆದುಬರುವುದರಿಂದ ಪೂಜ್ಯಾರ್ಥಕವಾದ "ಅರ್ಹನ್" ಎಂದೂ, ಈ ಮತಕ್ಕೆ ಆರ್ಹತ ಮತವೆಂದೂ ಪ್ರಸಿದ್ಧಿ ಬಂದಿತು. ಮತ್ತು ಈ ತೀರ್ಥಂಕರರು ಮಹಾ ವಿರಕ್ತರಾಗಿ ಗೃಹಸ್ಥರಲ್ಲದೆ ಸಂನ್ಯಾಸಾಶ್ರಮದಲ್ಲಿದ್ದುದರಿಂದ ಸಂಸಾರವನ್ನೂ ಕರ್ಮವನ್ನೂ ಜಯಿಸಿದವರೆಂಬ ಅರ್ಥದ ಮೂಲಕ ಜಿನರೆಂಬುದಾಗಿಯೂ ಮತಕ್ಕೆ ಜೈನಮತವೆಂಬುದಾಗಿಯೂ ಪ್ರಸಿದ್ಧಿ ಇರುವುದು.

ಈ ಮತದಲ್ಲಿ ಸಿದ್ಧಮುಕ್ತರಾದ ಆತ್ಮರಿಗೆ ಸಹಜವಾದ ವೀರ್ಯ ಸುಖ ಜ್ಞಾನಾದಿಗಳು ನಿರತಿಶಯಾಭಿವ್ಯಕ್ತಿಯನ್ನು ಹೊಂದಿರುವುದರಿಂದ ವಿಗ್ರಹಗಳಲ್ಲಿ ಅನುಪ್ರವೇಶವೂ ಆರಾಧಕರಿಗೆ ಅನುಗ್ರಹವೂ ಸಂಭವಿಸುವುದೆಂದು ವಿಗ್ರಹಾರಾಧನೆ ಮುಖ್ಯವಾಗಿ ಅನುಷ್ಠಾನಕ್ಕೆ ಬಂದಿರುತ್ತದೆ.

ಬೌದ್ಧರೂ ಜೈನ್ಯರೂ ಸಂನ್ಯಾಸಿಗಳಾಗಿ ಬಹುವಿರಕ್ತರಾಗಿದ್ದುದರಿಂದಲೂ ಮಂತ್ರ ತಂತ್ರ ಔಷಧ ಮೊದಲಾದುವುಗಳಿಂದ ಜನಾನುರಾಗ

ವನ್ನು ಸಂಪಾದಿಸುತ್ತಿದ್ದುದರಿಂದಲೂ, "ಅಹಿಂಸಾ ಪರಮೋಧರ್ಮಃ ಹಿಂಸಾ ಚಾತ್ಮ ಪ್ರಪೀಡನಮ್" ಎಂದು ಪ್ರಾಣಿಸಾಮಾನ್ಯದಲ್ಲೂ ಆತ್ಮ ಪೀಡನವು ಕೂಡದೆಂದು ಅಹಿಂಸಾ ಧರ್ಮವನ್ನು ಸ್ಥಾಪಿಸಿ ಯಾಗಗಳಲ್ಲಿ ಪಶುಹಿಂಸೆಯನ್ನು ತಡೆಯುತ್ತಿದ್ದುದರಿಂದಲೂ ಜನಾನುರಾಗವು ವೃದ್ಧಿ ಯಾಗಿ ಸಂಘವು ಪ್ರಬಲವಾಯಿತು.

ಈ ವೈರಾಗ್ಯ ಮಾರ್ಗವನ್ನು ರಾಜರು ಅಭಿಮಾನಿಸಿದರು. ಇದೊಂದು ಮುಖ್ಯವಾದ ಗುಣಾಂಶವು ಪರಿಗ್ರಾಹ್ಯವೆಂದು ತಿಳಿದು ವೈದಿಕರಾದ ವೇದಾಂತಿ ಗಳ ಸಂಪ್ರದಾಯದಲ್ಲೂ ಸಂನ್ಯಾಸಾಶ್ರಮ ಸಂಪ್ರದಾಯ ಹರಡಿತೆಂದು ಕೆಲವರು ಹೇಳುವುದಕ್ಕೆ ಇದೊಂದು ಸೂಚಕವಾಗಿಯೂ ಇರಬಹುದು. ಅವುದೆಂದರೆ—ವೈದಿಕಶಿರೋಮಣಿಗಳಾದ ಭಟ್ಟಪ್ರಾಭಾಕರರು ಸಂನ್ಯಾಸ ವಿಷಯದಲ್ಲಿ "ಸಂನ್ಯಾಸವು ವೇದೋಕ್ತವಲ್ಲ, ಸ್ಮೃತಿಗಳಲ್ಲಿ ಯಾವುದೊಂದು ನಿಮಿತ್ತದಿಂದ ಹೇಳಲ್ಪಟ್ಟಿರುವುದೋ ಅದೂ ಗೃಹಸ್ಥಾಶ್ರಮಕ್ಕೆ ಅಯೋಗ್ಯ ರಾದ ಕುಂಟ ಕುರುಡ ಮೂಗ ಮೊದಲಾದವರಿಗೆ ಜೀವನೋಪಾಯಕ್ಕೆ ಮಾತ್ರ. ಗೃಹಸ್ಥಾಶ್ರಮವೇ ಆಶ್ರಮ, ಸಂನ್ಯಾಸ ಪರಿಗ್ರಾಹ್ಯವಲ್ಲ" ಎಂದು ಬರೆಯುತ್ತಾರೆ. ಶ್ರೀ ಶಂಕರಾಚಾರ್ಯರೂ ಬ್ರಾಹ್ಮಣೇತರರಿಗೆ ಸಂನ್ಯಾ ಸವು ಕೂಡದೆಂದು ನಿರ್ಣಯಿಸಿರುತ್ತಾರೆ. ಈ ಪ್ರಕಾರ ಸಂನ್ಯಾಸದಲ್ಲಿ ಅಧಿ ಕಾರಿ, ಕಾಲ ದೇಶ ವೇಷ ಕಾರಣ ಮೊದಲಾದ ವಿವಾದಗಳು ಅಪರಿಮಿತ ಗಳಾಗಿರುವುವು.

ಕ್ರಿಸ್ತಪೂರ್ವ ಐದನೆಯ ಶತಮಾನದ ಮಹಾವೀರ ಮೊದಲುಗೊಂಡು ಕ್ರಿಸ್ತಶಕ ಒಂದನೆಯ ಶತಮಾನದ ವರೆಗೆ ಪ್ರಾಯಃ ಈ ಸಿದ್ಧಾಂತಪ್ರವರ್ತ ಕರು ಉಪದೇಶಕರಾಗಿದ್ದರೇ ಹೊರತು ಗ್ರಂಥಕರ್ತರಾಗಿದ್ದರೆಂದೂ ತಿಳಿದು ಬರುವುದಿಲ್ಲ. ಇವರ ಉಪದೇಶ ವಾಕ್ಯಗಳನ್ನು ಸಂಗ್ರಹಮಾಡಿ 'ಅರ್ಹತ್ಪ್ರ ವಚನ ಸಂಗ್ರಹ ಪರಮಾಗಮಸಾರ' ಎಂಬುದೊಂದು ಗ್ರಂಥವು ಪ್ರಸಿದ್ಧ ವಾಗಿರುತ್ತದೆ. ಇವರ ದ್ವಾದಶಾಂಗ ಸೂತ್ರಗಳೆಂಬ ಗ್ರಂಥಗಳು ಪ್ರಾಯಶಃ ಪ್ರಾಕೃತ ಭಾಷೆಯಲ್ಲೇ ಇದ್ದು ಕಾಲಕ್ರಮದಲ್ಲಿ ಸಂಸ್ಕೃತಕ್ಕೆ ವ್ಯಾಪಿಸಿ ದುವು. ಆದುದರಿಂದಲೇ ಪೂಜಾನುಷ್ಠಾನ ಮಂತ್ರಗಳು ಪ್ರಾಕೃತ ಭಾಷೆ ಯಲ್ಲೂ ಇರುವುವು. ಕ್ರಿಸ್ತ ಪ್ರಥಮ ಶತಕದಲ್ಲಿ ಸಮಂತಭದ್ರರೆಂಬ ಆಚಾ

ರ್ಯರು ಸಂಸ್ಕೃತದಲ್ಲಿ ಮಹಾ ಪಂಡಿತರಾಗಿಯೂ ಕವೀಶ್ವರರಾಗಿಯೂ ಇದ್ದರು. ಅವರನ್ನು ಸರ್ವ ಪಂಡಿತರೂ 'ಸ್ತೋತ್ರಮಾಡಿರುವರು. ಅವರ ಕಾಲದಲ್ಲೋ ಅಥವಾ ಸ್ವಲ್ಪ ಹಿಂದುಮುಂದೋ ಇತರ ದರ್ಶನಗಳ ಸೂತ್ರ ಪ್ರಚಾರ ಸಮಯದಲ್ಲಿ ಉಮಾಸ್ವಾಮಿ(ತಿ)ಯೆಂಬ ಮಹಾ ವಿದ್ವಾಂಸರು 'ತತ್ತ್ವಾರ್ಥಾಧಿಗಮ ಸೂತ್ರ'ವೆಂಬ ಹತ್ತು ಅಧ್ಯಾಯವುಳ್ಳ ಮೋಕ್ಷ ಶಾಸ್ತ್ರವನ್ನು ರಚಿಸಿದರು. ಅನಂತರ ಎಂಟನೆಯ ಶತಮಾನದಲ್ಲಿ ದಕ್ಷಿಣ ದೇಶದ ಕಾಂಚೀ ನಗರದಲ್ಲಿ ಭಟ್ಟಾಕಲಂಕರೆಂಬ ಮಹಾ ಪಂಡಿತರು ಉದಯಿಸಿ ಉಮಾಸ್ವಾಮಿಯವರ ಸೂತ್ರಕ್ಕೆ 'ರಾಜವಾರ್ತಿಕ'ವೆಂಬ ವಿಪುಲವಾದ ವ್ಯಾಖ್ಯಾನವನ್ನೂ 'ನ್ಯಾಯವಿನಿಶ್ಚಯ' ಮೊದಲಾದ ಬಹು ಗ್ರಂಥಗಳನ್ನೂ ಬರೆದು ಪ್ರಸಿದ್ಧ ವಿದ್ವಾಂಸರಾಗಿ ಅನೇಕ ರಾಜಸಭಾ ಸ್ಥಾನಗಳಲ್ಲಿ ಜಯಶೀಲರಾಗಿದ್ದರು.

ಪ್ರಾಯಶಃ ಈ ಭಟ್ಟಾಕಲಂಕರ ಸಮೀಪ ಸಮಯದಲ್ಲೇ ಮಾಣಿಕ್ಯನಂದಿ, ವಿದ್ಯಾನಂದ, ಪ್ರಭಾಚಂದ್ರ ಮೊದಲಾದವರು ಕರ್ಣಾಟ ದೇಶದಲ್ಲಿ ಉದಯಿಸಿ ಬಹು ಗ್ರಂಥಗಳನ್ನು ಮಾಡಿ ಈಸಿದ್ಧಾಂತಪ್ರವರ್ತಕರಾಗಿದ್ದರು. ಇವರ ಗ್ರಂಥಗಳು ಈಗ ಪ್ರಚಾರದಲ್ಲಿರುವುವು. ಪ್ರಾಯಃ ಈ ಸಿದ್ಧಾಂತ ಪ್ರವರ್ತಕರು ಶ್ರೀಮಂತರಾಗಿಯೂ, ಪ್ರಭುಗಳಾಗಿಯೂ ಕ್ಷತ್ರಿಯ ಕುಲೀನರಾಗಿಯೂ ಇದ್ದರೆಂದು ತಿಳಿದುಬರುವುದು. ಬೌದ್ಧ ಸಿದ್ಧಾಂತವೂ ಇದೇ ರೀತಿಯಲ್ಲಿರುವುದೆಂದು ಸರ್ವ ಸಮ್ಮತವು.

ಈ ಸಂಪ್ರದಾಯದಲ್ಲಿ ದಿಗಂಬರ, ಶ್ವೇತಾಂಬರ ಎಂಬ ಪ್ರಭೇದವಿದ್ದರೂ ಬೌದ್ಧರ ಮಹಾ ಸಾಂಘಿಕರಂತೆ ನಂದಿಸಂಘ ಗಣಸಂಘ ದೇವಸಂಘಪ್ರಭೇದಗಳಿದ್ದರೂ ಈ ಗ್ರಂಥಗಳು ಸರ್ವಸಮ್ಮತಗಳಾಗಿರುವುವು. ಅಲ್ಪಾಲ್ಪ ವ್ಯತ್ಯಾಸಗಳಿದ್ದರೂ ಮುಖ್ಯಾಂಶಗಳಲ್ಲಿ ವಿವಾದವಿಲ್ಲ.

ಶ್ರೀ ಭಟ್ಟಾಕಲಂಕನ ಒಂದು ಶ್ಲೋಕದ ತಾತ್ಪರ್ಯವಿದು—ಬೌದ್ಧ ಮತದ ನೈರಾತ್ಮ್ಯವಾದವನ್ನು ಜನರು ನಂಬಿ ಹಾಳಾಗಿಹೋಗುತ್ತಿರುವುದನ್ನು ಕಂಡು ಕೇವಲ ದಯೆಯಿಂದ ಮಹಾಮೇಧಾವಿಯಾದ ಹಿಮಶೀತಲನೆಂಬ ಮಹಾರಾಜನ ಸಭೆಯಲ್ಲಿ ಬೌದ್ಧ ಸಂಘಗಳನ್ನು ನಿರಾಕರಿಸಿ ಆ ಘಟವನ್ನು ಕಾಲಿನಿಂದ ಒದೆದಿರುವೆನು. ಇದು ಅಹಂಕಾರವಲ್ಲ, ದ್ವೇಷವೂ

ಅಲ್ಲ, ಲೋಕಾನುಗ್ರಹದ ದಯೆ.

ನಾಹಂಕಾರವಶೀಕೃತೇನ ಮನಸಾ ನ ದ್ವೇಷಿಣಾ ಕೇವಲಂ
ನೈರಾತ್ಮ್ಯಂ ಪ್ರತಿಪದ್ಯ ನಶ್ಯತಿ ಜನೇ ಕಾರುಣ್ಯಬುದ್ಧ್ಯಾ ಮಯಾ
ರಾಜ್ಞಃ ಶ್ರೀಹಿಮಶೀತಲಸ್ಯ ಸದಸಿ ಪ್ರಾಯೋ ವಿದಗ್ಧಾತ್ಮನೋ
ಬೌದ್ಧಾನ್ ಸಕಲಾನ್ವಿಜಿತ್ಯ ಸ ಘಟಃ ಪಾದೇವ ವಿಸ್ಫೋಟಿತಃ ॥

ಈ ಶ್ಲೋಕವು 'ತತ್ವಾರ್ಥ ರಾಜವಾರ್ತಿಕ'ದ ಉಪೋದ್ಘಾತದಲ್ಲಿರುವುದು.

ಮಹಾರಾಷ್ಟ್ರ ಕರ್ಣಾಟಾಧೀಶ್ವರನಾದ ದಂತಿದುರ್ಗ (ಕ್ರಿ.ಶ. ೭೫೩) ಮಹಾರಾಜನ ಸಭೆಯಲ್ಲೂ ರಾಷ್ಟ್ರಕೂಟ ವಂಶೀಯನಾದ ಸಾಹಸತುಂಗ ಮಹಾರಾಜನ ಸಭೆಯಲ್ಲೂ ಆತನು ಜಯಶೀಲನಾಗಿದ್ದನು. ಆ ಸಾಹಸತುಂಗನಿಗೆ ಶುಭತುಂಗ, ಕೃಷ್ಣರಾಜ (ಕ್ರಿ.ಶ. ೭೬೦) ಮೊದಲಾದ ಹೆಸರುಗಳಿದ್ದುವು. ಅವನ ಮಗನೇ ದ್ವಿತೀಯ ಗೋವಿಂದನಂತೆ. (ಕ್ರಿ.ಶ ೭೭೫,೭೭೯)

## ಸಿದ್ಧಾಂತ ಸ್ವರೂಪ

ಈ ಸಿದ್ಧಾಂತವು ಸೌಗತಸಾಂಖ್ಯ ಸಿದ್ಧಾಂತಗಳ ಕಲಹವನ್ನು ಶಮನ ಮಾಡುವುದಾಗಿರುವುದು. ಪ್ರಾಯಃ ಲೋಕದಲ್ಲಿ ಒಂದೊಂದು ಪಕ್ಷವನ್ನೇ ಹಿಡಿದು ವಾದಿಸುವವರು ಕೆಲವರು. ಎರಡು ಪಕ್ಷಗಳನ್ನು ಸಂಧಾನಿಸುವವರು ಕೆಲವರು. ಎರಡು ಪಕ್ಷವನ್ನೂ ನಿರಾಕರಿಸುವವರು ಕೆಲವರು. ಈ ದೃಷ್ಟಿಯಿಂದ ನೋಡಿ ಸಾಂಖ್ಯರಿಗೆ "ಸರ್ವಂ ಸತ್," ಸೌಗತರಿಗೆ "ಸರ್ವಂ ಅಸತ್," ಆರ್ಹತಪಾತಂಜಲರಿಗೆ "ಸರ್ವಂ ಸದಸತ್," ವಿಶುದ್ಧಾದ್ವೈತರಿಗೆ "ಸದಸದ್ವಿಲಕ್ಷಣ." ಇದು ಮಾನವರ ಸಹಜಸ್ವಭಾವ.

ಕುಮಾರಿಲಭಟ್ಟಾಚಾರ್ಯರು 'ಶ್ಲೋಕವಾರ್ತಿಕ'ದಲ್ಲಿ ಒಂದು ಸಂದರ್ಭದಲ್ಲಿ "ಎರಡು ಪಕ್ಷಗಳಲ್ಲೂ ಸಾಧನ ದೂಷಣಗಳು ಬೇಕಾದಷ್ಟಿರುವುವು. ಬಲಾಬಲ ನಿರ್ಣಯ ಯಾರಿಂದಲೂ ಸಾಧ್ಯವಲ್ಲ. ಮಧ್ಯಸ್ಥವಾಗಿರುವುದೇ ಯುಕ್ತ" ಎಂದು ಹೇಳಿ ದ್ರವ್ಯಗುಣಗಳಿಗೂ ಜಾತಿವ್ಯಕ್ತಿಗಳಿಗೂ ಅವಯವಾವಯವಿಗಳಿಗೂ ಭೇದಾಭೇದವನ್ನು ಆಶ್ರಯಿಸಿರುವರು. ಇದಕ್ಕೆ ಆರ್ಹತ ಮತವೇ ಮೂಲವಾಗಿರಬೇಕು.

ಇವರು ಪ್ರಾರಂಭದಲ್ಲಿ ಸದಸದ್ವಾದಗಳನ್ನು ಸುಧಾರಿಸಿದರೂ ಕಾಲ ಕ್ರಮದಲ್ಲಿ ಸಕಲ ವಾದಗಳನ್ನೂ ಸುಧಾರಿಸುವ ಅಭಿಪ್ರಾಯದಲ್ಲಿ ಇವರಸಪ್ತ ಭಂಗೀ ನ್ಯಾಯ ಉದಯಿಸಿತು, ಸಪ್ತಭಂಗೀ ನ್ಯಾಯವೆಂದರೆ ವಾದ ಕಾಲ ದಲ್ಲಿ ಸಕಲ ವಾದಿಗಳನ್ನೂ ಸುಧಾರಿಸುವುದೆಂದು ಅಭಿಪ್ರಾಯ. ಈ ಪ್ರಪಂಚ ದಲ್ಲಿ ತತ್ತ್ವ ವಿಚಾರದಲ್ಲಿರುವ ಅಭಿಪ್ರಾಯಗಳು ಏಳೇ ರಾಶಿಯಾಗುವುವು. ಪ್ರಪಂಚಕ್ಕೆ ಸತ್ತ್ವವನ್ನು ಹೇಳುವರು ಕೆಲವರು, ಅಸತ್ತ್ವವನ್ನು ಕೆಲವರು, ಉಭಯವನ್ನು ಕೆಲವರು, ಉಭಯವೂ ಅಲ್ಲವೆಂದು ಕೆಲವರು. ಹೀಗೆ ನಾಲ್ಕು ರಾಶಿಯಾದುವು. ನಾಲ್ಕನೆಯ ಪಕ್ಷವಾದ ಅನಿರ್ವಚನೀಯ ವಾದ ದಲ್ಲಿ ಮುಂದಕ್ಕೆ ಮೂರು ರಾಶಿಗಳಾದುವು. ಹೇಗೆಂದರೆ, ಅನಿರ್ವಚನೀಯ ವಾದರೂ ಕಾಲಭೇದದಿಂದ ಸತ್ತ್ವಮಾತ್ರವುಂಟೆಂದು ಕೆಲವರು, ಅಸತ್ತ್ವ ಮಾತ್ರವುಂಟೆಂದು ಕೆಲವರು, ಉಭಯವೂ ಉಂಟೆಂದು ಕೆಲವರು ವಾದಿ ಸುತ್ತಿದ್ದರು. ಹೀಗೆ ಏಳು ಪಕ್ಷಗಳಾದುವು. ಇಲ್ಲಿ ಎಂಟನೆಯ ಒಂಬತ್ತ ನೆಯ ಪಕ್ಷಗಳನ್ನು ಕಲ್ಪಿಸಬಹುದು. ಆದರೂ ಅವು ಏಳರಲ್ಲೇ ಅಂತ. ರ್ಭೂತವಾಗುವುದರಿಂದ ಮಿಶ್ರವಲ್ಲದ ಪಕ್ಷಗಳು ಏಳುವಿಧವೆಂದು ತಾತ್ಪರ್ಯ, ಈ ನ್ಯಾಯವು, ತತ್ತ್ವವು ನಿತ್ಯವೇ ಅನಿತ್ಯವೇ, ಭಿನ್ನವೇ ಅಭಿನ್ನವೇ ಕ್ಷಣಿಕವೇ ಸ್ಥಿರವೇ, ಸತ್ಯವೇ ಮಿಥ್ಯೆಯೇ, ಎಂದು ಸಕಲ ವಿವಾದದಲ್ಲೂ ಸಂಚರಿಸಬಹುದು. ಇದರಿಂದ ಸರ್ವ ವಿವಾದಗಳಲ್ಲೂ ವಿಜಯವೆಂದು ತಾತ್ಪರ್ಯ.

ಪ್ರತಿವಾದಿಯು "ಕಿಂ ಘಟಃ ಅಸ್ತಿ" ಎಂದು ಕೇಳಿದರೆ "ಸ್ಯಾತ್ ಘಟೋಽಸ್ತಿ"ಎಂದು ಉತ್ತರಕೊಡಬೇಕು. ಸ್ಯಾತ್ ಎಂದರೆ ಸ್ವಲ್ಪವೆಂದರ್ಥ ಎಂದು ಕೆಲವರು ಹೇಳುವರು. ಕಥಂಚಿತ್–ಹೇಗಾದರೂ ಎಂದು ಅರ್ಥ ಎಂಬುದಾಗಿ ಕೆಲವರು. ಸ್ವಲ್ಪವಿದೆಯೆಂದರೂ, ಹೇಗಾದರೂ ಇದೆಯೆಂದರೂ ತಾತ್ಪರ್ಯದಲ್ಲಿ ವ್ಯತ್ಯಾಸವಿಲ್ಲ. ಸ್ಯಾದ್ಘಟೋಽಸ್ತಿ ಎಂದರೆ ಪ್ರಮಾಣ ವಾಗುತ್ತದೆ. ಇತರ ಪಕ್ಷಗಳಲ್ಲೂ ತಾತ್ಪರ್ಯ ತೋರುತ್ತದೆ. ಘಟೋಽಸ್ತಿ ಯೆಂದೂ ಹೇಳಬಹುದು. ಇದಕ್ಕೆ ನಯವೆಂದು ಹೆಸರು. ಸಮಗ್ರ ಪದಾರ್ಥವನ್ನು ತಿಳಿಯುವುದು ಪ್ರಮಾಣ ; ಏಕದೇಶವನ್ನು ತಿಳಿಯುವುದು ನಯ ಎಂದು ಪರಿಭಾಷೆ. ಆದುದರಿಂದ ಪ್ರಮಾಣನಯಗಳ ಮೂಲಕ

ವ್ಯವಹಾರವನ್ನೂ ವಾದವನ್ನೂ ಮಾಡಬೇಕೆಂದು ಉಪದೇಶ. ಘಟೋಽಸ್ತ್ಯೇವ ಎಂದು ಹೇಳಬಾರದು, ದುರ್ಣಯವಾಗುತ್ತದೆ. ಪ್ರಮಾಣನಯಗಳಿಂದ ಉತ್ತರ ಹೇಳಿದರೆ ವಾದಿಗೆ ಮುಂದೆ ಅವಕಾಶವೇ ಇಲ್ಲ, ಇವರಿಗೆ ವಿಜಯ ವಾಯಿತೆಂದು ಭಾವ. ಆದುದರಿಂದಲೇ ವೀತರಾಗರೆಂದು ಇವರಿಗೆ ಪ್ರಸಿದ್ಧಿ. ಅಭಿನಿವೇಶವಿಲ್ಲದವರೆಂದರ್ಥ. ಇದೇ ಸಪ್ತಭಂಗೀರಹಸ್ಯ.

## ವಿರೋಧವಿಚಾರ

ಲೋಕದಲ್ಲಿ ಕೆಲವು ವಸ್ತುಗಳಿಗೂ ಕೆಲವು ಸ್ವಭಾವಗಳಿಗೂ ಪರಸ್ಪರ ವಿರೋಧವಿರುವುದು. ಅಗ್ನಿಜಲಗಳಿಗೂ, ತಮಃಪ್ರಕಾಶಗಳಿಗೂ ಇರುವ ವಿರೋಧನಾಶ್ಯನಾಶಕ ಭಾವವಿರೋಧವೆಂದು ಹೇಳಲ್ಪಡುವುದು. ಗೋತ್ವಾಶ್ವತ್ವಗಳಿಗೂ ಸ್ತ್ರೀತ್ವಪುಂಸ್ತ್ವಗಳಿಗೂ ಇರುವ ವಿರೋಧ ಒಂದು ಸ್ಥಲದಲ್ಲಿ ಎರಡೂ ಇರಲಾರದೆಂಬ ವಿರೋಧ. ಈ ವಸ್ತುವಿರೋಧ ಮೂಲಕ ಮನುಷ್ಯರ ಅಭಿಪ್ರಾಯಗಳಲ್ಲೂ ಪರಸ್ಪರ ವಿರೋಧ ಬರುವುದು. ಆದರಿಂದ ರಾಗದ್ವೇಷಗಳು ಪ್ರಸಿದ್ಧಗಳು ಎಂಬ ವಾದಕ್ಕೆ ಸಮಾಧಾನ— ವಸ್ತುಗಳ ವಿರೋಧವನ್ನು ವಸ್ತುಗಳಂತೆ ಪ್ರಮಾಣ ಮೂಲಕವಾಗಿ ತಿಳಿಯಬೇಕು. ಪ್ರಮಾಣವು ಅವಿರೋಧವನ್ನೂ ತಿಳಿಸಿದರೆ ವಿರೋಧವನ್ನೇ ಮುಂದಿಡುವ ವೃಥಾ ಆಯಾಸವೇತಕ್ಕೆ ? ಸಾಂಖ್ಯಸೌಗತರು ವಿರೋಧವನ್ನೇ ಪ್ರಧಾನವಾಗಿಟ್ಟುಕೊಂಡು ಶಾಂತಿಯನ್ನುಪದೇಶಮಾಡಿದರೆ ರಾಗದ್ವೇಷಾಸೂಯಾಭಿವೃದ್ಧಿಯೇ ಹೊರತು ಶಾಂತಿಸಿದ್ಧಿಯಿಲ್ಲ. ಪ್ರಮಾಣ ಪರಿಶೋಧನೆ ಮಾಡಿದರೆ ವಿರೋಧವೆಂಬ ತತ್ತ್ವವೇ ಇಲ್ಲವೆಂದು ಅಭಿಪ್ರಾಯವಾಗುತ್ತದೆ. ಇತರ ಸಿದ್ಧಾಂತಗಳೆಲ್ಲವೂ ವಿರೋಧತತ್ತ್ವ ಮೂಲಕವಾದುವು. ಈ ಸಿದ್ಧಾಂತವು ವಿರೋಧತತ್ತ್ವವನ್ನೇ ನಿರ್ಮೂಲಮಾಡಿ ಶಾಂತಿತ್ತ್ವ ಮೂಲಕವಾಗಿರುವುದು. ಇದಕ್ಕೆ ಅನೇಕಾಂತವಾದವೆಂದು ಹೆಸರು. ಏಕಾಂತವೆಂದರೆ ಒಂದೇ ಸ್ವಭಾವದಲ್ಲಿರುವುದು. ಸರ್ವ ಸ್ವಭಾವಧರ್ಮದಲ್ಲೂ ಇರುವುದಕ್ಕೆ ಅನೇಕಾಂತವೆಂದು ಅರ್ಥ. ಎಂದರೆ ಸಾರ್ವಾತ್ಮ್ಯವಾದವೆಂದು ನಿರ್ಣಯ, ವಸ್ತುಗಳಿಗೆ ಸರ್ವ ಸ್ವಭಾವವನ್ನೂ ಸ್ವೀಕರಿಸುವ ಸಿದ್ಧಾಂತ. ಸಾಂಖ್ಯರ ಸಾರ್ವಾತ್ಮ್ಯವಾದಕ್ಕೂ ಈ ಸಾರ್ವಾತ್ಮ್ಯವಾದಕ್ಕೂ ಇರುವ

ವ್ಯತ್ಯಾಸವೇನೆಂದರೆ—ಸಾಂಖ್ಯರು ಸರ್ವ ವಸ್ತುಗಳಿಗೂ ಸರ್ವ ಸ್ವಭಾವವನ್ನೂ ಹೇಳಿದರೂ ವಿರುದ್ಧ ಸ್ವಭಾವವನ್ನು ಹೇಳುವುದಿಲ್ಲ. ಸರ್ವವೂ ನಿತ್ಯವೆಂದು ಹೇಳುತ್ತಾರೆ. ಸರ್ವವೂ ಅನಿತ್ಯವೆಂದು ಹೇಳುವುದಿಲ್ಲ. ಸೌಗತರು ಸಾಂಖ್ಯಕ್ಕೆ ಪ್ರತಿಪಕ್ಷದಲ್ಲಿರುವರು. ಅವರದು ನೈರಾತ್ಮ್ಯವಾದ. ಇವರು ಎರಡನ್ನೂ ಹೇಳುತ್ತಾರೆ. ಹೀಗೆ ಸತ್ತ್ವ ದ್ರವ್ಯತ್ವ ಕಾರ್ಯತ್ವ ಕಾರಣತ್ವ ಮೊದಲಾದ ಸರ್ವ ವಿಷಯದಲ್ಲೂ ಅನೇಕಾಂತವಾದವಿರುವುದು.

ಕುಮಾರಿಲಭಟ್ಟಾಚಾರ್ಯರು ಸ್ವೀಕರಿಸಿರುವ ಅನೇಕಾಂತವೆಂಬ ಸಾರ್ವಾತ್ಮ್ಯವಾದಕ್ಕೂ ಆರ್ಹತಸಾರ್ವಾತ್ಮ್ಯವಾದಕ್ಕೂ ಇರುವ ವ್ಯತ್ಯಾಸವೇನೆಂದರೆ—ಸರ್ವವಸ್ತುಗಳಿಗೂ ಸತ್ತ್ವಸ್ವಭಾವವನ್ನೂ ಅಸತ್ತ್ವಸ್ವಭಾವವನ್ನೂ ಅಂಗೀಕರಿಸಿದರೂ ಕೂಡ ಸರ್ವವಸ್ತುಗಳಿಗೂ ಸತ್ತ್ವವೂ ಅಸತ್ತ್ವವೂ ಉಂಟೆಂಬ ಜ್ಞಾನವು ಏಕಾಂತ-ಅನೇಕಾಂತವಲ್ಲ; ಪ್ರಮಾಣ, ಅಪ್ರಮಾಣವಲ್ಲ. ಆರ್ಹತಮತದಲ್ಲಿ ಇದೂ ಅನೇಕಾಂತ. ಎಂದರೆ, ಸರ್ವವಸ್ತುಗಳಿಗೂ ಸರ್ವಸ್ವಭಾವಗಳಿರುವುವು ಎಂಬ ಜ್ಞಾನಕ್ಕೆ ಸತ್ತ್ವವೂ ಅಸತ್ತ್ವವೂ ಉಂಟು : ಪ್ರಾಮಾಣ್ಯವೂ ಅಪ್ರಾಮಾಣ್ಯವೂ ಉಂಟೆಂದಭಿಪ್ರಾಯ.

ಈ ಅಂಶದಲ್ಲೇ ಬಾದರಾಯಣಾಚಾರ್ಯರ 'ಬ್ರಹ್ಮಸೂತ್ರಭಾಷ್ಯ'ದಲ್ಲಿ ಭಾಷ್ಯಕಾರರು ಆಕ್ಷೇಪಿಸಿರುತ್ತಾರೆ—ಸರ್ವವೂ ಅನೇಕಾಂತವೆಂಬ ಸಿದ್ಧಾಂತವು ಏಕಾಂತವೇ ಅನೇಕಾಂತವೇ : ಏಕಾಂತವಾದರೆ ಸರ್ವವೂ ಅನೇಕಾಂತವಾಗಲಿಲ್ಲ. ಸಿದ್ಧಾಂತವು ಸರ್ವದಲ್ಲಿ ಸೇರಿ ಏಕಾಂತವಾಗಿರುತ್ತದೆ. ಅನೇಕಾಂತವಾದರೆ ಸರ್ವವೂ ಏಕಾಂತವಾಯಿತು. ಸಿದ್ಧಾಂತವು ವ್ಯವಸ್ಥಾಪಕವಾಗಲಿಲ್ಲವೆಂದು ಆಕ್ಷೇಪಣೆ.

ಇದಕ್ಕೆ ಸಮಾಧಾನವೇನೆಂದರೆ : ಶೂನ್ಯವಾದದಲ್ಲಿ ಶೂನ್ಯತಾಭಾವನೆ ಸರ್ವಭಾವನೆಯನ್ನೂ ಹೋಗಲಾಡಿಸಿ ತಾನೂ ಹೋಗುವಂತೆ, ವಿಶುದ್ಧಾದ್ವೈತ ಸಿದ್ಧಾಂತದಲ್ಲಿ "ಬ್ರಹ್ಮ ಸತ್ಯಂ, ಜಗನ್ಮಿಥ್ಯಾ" ಎಂಬ ಸಾಕ್ಷಾತ್ಕಾರವು ಸರ್ವವನ್ನೂ ನಿವೃತ್ತಿ ಮಾಡಿ ತಾನೂ ನಿವೃತ್ತಿಯಾಗುವಂತೆ, ಮಿಥ್ಯಾತ್ವ ಸಿದ್ಧಾಂತವು ಸರ್ವಕ್ಕೂ ಮಿಥ್ಯಾತ್ವವನ್ನು ಸ್ಥಾಪಿಸಿ ತಾನೂ ಮಿಥ್ಯೆಯಾಗುವಂತೆ, ಅನೇಕಾಂತಸಿದ್ಧಾಂತವು ಸರ್ವಕ್ಕೂ ಅನೇಕಾಂತವನ್ನು ತೋರಿಸಿ

ತಾನೂ ಅನೇಕಾಂತವಾಗುತ್ತದೆ ಎಂದಭಿಪ್ರಾಯ.

ಸರ್ವವೂ ಅನೇಕಾಂತವಾದರೆ ವ್ಯವಹಾರವ್ಯವಸ್ಥೆ ಹೇಗೆ ಎಂಬ ಪ್ರಶ್ನೆಗೆ ಉತ್ತರವಿದು—ಪ್ರಮಾಣದಿಂದ ಸಿದ್ಧಾಂತವು ಹೀಗಾದರೂ ವ್ಯವಹಾರವ್ಯವಸ್ಥೆಗೆ ನಯವೆಂಬ ಮತ್ತೊಂದು ಮಾರ್ಗವಿರುವುದು. ಒಂದಂಶವನ್ನು ಮಾತ್ರ ಪರಿಗ್ರಹಿಸಿ ವ್ಯವಹರಿಸುವುದು ನಯಮಾರ್ಗವು. ಈ ದೃಷ್ಟಿಯಿಂದ ಅವ್ಯವಸ್ಥೆ ಇಲ್ಲವೆಂದು ತಿಳಿಬೇಕು ವೈಯಾಕರಣಸಿದ್ಧಾಂತದಲ್ಲಿ ಸರ್ವಶಬ್ದಗಳಿಗೂ ಸರ್ವಾರ್ಥಬೋಧಸಾಮರ್ಥ್ಯವನ್ನು ಹೇಳಿ ವ್ಯವಹಾರವ್ಯವಸ್ಥೆಯನ್ನು ನಿಯಮದಿಂದ ನಿರ್ವಹಿಸುತ್ತಾರೆ. ಅದರಂತೆ ಒಂದು ದೃಷ್ಟಿಯಿಂದ ವ್ಯವಹಾರನಿರ್ವಾಹವಾಗುವುದು. ಆದುದರಿಂದಲೇ ಇದು ಸಂಶಯ ಸಿದ್ಧಾಂತವಲ್ಲ, ಎರಡಂಶವನ್ನೂ ದೃಢವಾಗಿ ಒಪ್ಪುವ ಸಿದ್ಧಾಂತ.

## ತತ್ತ್ವ

ಈ ಸಿದ್ಧಾಂತದಲ್ಲಿ ಸತ್ತ್ವವೇ ತತ್ತ್ವ. ಸತ್ತ್ವವೆಂದರೆ ಉತ್ಪಾದವ್ಯಯ ಧ್ರೌವ್ಯವು. ಉತ್ಪತ್ತಿ, ವಿನಾಶ, ಸ್ಥಿರತ್ವ ಈ ಮೂರು ಸ್ವಭಾವವುಳ್ಳುದೆಂದರ್ಥ. ಹೇಗೆಂದರೆ, ಆತ್ಮಾದಿಸಕಲವಸ್ತುಗಳಿಗೂ ಉತ್ಪತ್ತಿಯುಂಟು. ವಿನಾಶವುಂಟು, ಸ್ಥಿರತ್ವವೂ ಉಂಟು. ಒಂದು ಪಾರ್ಥಿವದ್ರವ್ಯವಾದ ಬೀಜವು ಅಂಕುರವಾದರೆ ಅಂಕುರಾಕಾರವು ಹೊಸದಾಗಿ ಬಂದುದರಿಂದ ಉತ್ಪತ್ತಿಯಾಯಿತು. ಬೀಜದ ಪೂರ್ವಾಕಾರವು ಹೋದುದರಿಂದ ವಿನಾಶವಾಯಿತು. ಪಾರ್ಥಿವಾಂಶವು ಸ್ಥಿರವಾಗಿರುವುದರಿಂದ ಸ್ಥಿರವೆಂದೂ ಆಯಿತು. ಹೀಗೆ ಸುವರ್ಣಕ್ಕೆ ಕಟಕ ಮುಕುಟ ಅಂಗುಲೀಯಕ ಮೊದಲಾದ ಆಕಾರಗಳಿಂದ ಉತ್ಪತ್ತಿವಿನಾಶಗಳು. ಸುವರ್ಣಾಂಶವು ಸ್ಥಿರವಾಗಿರುವುದು. ಹೀಗೆ ಆತ್ಮನಿಗೂ ಸ್ವರ್ಗಸುಕೃತ ಬಂದರೆ ಮನುಷ್ಯಭಾವವು ಹೋಗುವುದು, ದೇವ ಭಾವವು ಬರುವುದು. ಉಭಯಾವಸ್ಥೆಯಲ್ಲಿಯೂ ಆತ್ಮಭಾವವು ಸ್ಥಿರವಾಗಿರುವುದು. ಸಹಜಜ್ಞಾನಸ್ವಭಾವದಿಂದ ತತ್ತ್ವವೆಂಬ ಸತ್ತ್ವವನ್ನು ತಿಳಿಯಬೇಕು. ದ್ರವ್ಯಕ್ಕೆ ಬರುವ ಆಕಾರಗಳೇ ಪರ್ಯಾಯಗಳು. ಪರ್ಯಾಯಗಳನ್ನು 'ದ್ರವಂತಿ ಗಚ್ಛಂತಿ' ಹೊಂದುತ್ತವೆಯಾದುದರಿಂದ ವಸ್ತುವಿಗೆ ದ್ರವ್ಯವೆಂದು ಹೆಸರು. ''ಪರ್ಯೇತಿ ಪ್ರಾಪ್ನೋತಿ ಉತ್ಪತ್ತಿ

ವಿನಾಶೌ' ಎಂಬರ್ಥದಿಂದ ಆಕಾರಗಳಿಗೆ ಪರ್ಯಾಯಗಳೆಂಬ ಹೆಸರು. ಉತ್ಪಾದ, ತದ್ಭಾವ, ಪರಿಣಾಮ, ಅವಸ್ಥೆ, ಆಕಾರ ಎಂಬೀ ಪದಗಳು ಏಕಾರ್ಥಗಳು.

ಹೀಗೆ ದ್ರವ್ಯಾಂಶದಲ್ಲಿ ನಿತ್ಯತ್ವವೂ ಪರ್ಯಾಯಂಶದಲ್ಲಿ ಅನಿತ್ಯತ್ವವೂ ಇರುವುದರಿಂದ ಅನೇಕಾಂತವಾದವು. "ಒಂದಂಶದಲ್ಲಿ ಎರಡೂ ಇಲ್ಲವಲ್ಲಾ" ಎಂದು ಕೇಳಿದರೆ ದ್ರವ್ಯಕ್ಕೂ ಪರ್ಯಾಯಕ್ಕೂ ಭೇದಾಭೇದವನ್ನು ಅಂಗೀಕರಿಸಿರುವುದರಿಂದ ಅಭೇದದೃಷ್ಟಿಯಿಂದ ಒಂದಂಶದಲ್ಲೇ ಎರಡೂ ಇದ್ದಂತೆ ಆಯಿತು.

ಒಂದು ವಸ್ತುವಿನಲ್ಲಿ ವಿರುದ್ಧಾಂಶಗಳಿರಬಹುದೇ ಎಂದರೆ, ಅಪೇಕ್ಷಿಕವೆಂಬ ನಿರೂಪಕಭೇದದಿಂದ ಇರಬಹುದು. ಒಂದೇ ವಸ್ತುವಿನಲ್ಲಿ ದೀರ್ಘತ್ವವೂ ಹ್ರಸ್ವತ್ವವೂ, ಪೂರ್ವತ್ವವೂ ಪಶ್ಚಿಮತ್ವವೂ, ಜ್ಯೇಷ್ಠತ್ವವೂ ಕನಿಷ್ಠತ್ವವೂ ನಿರೂಪಕಭೇದದಿಂದಿರುವುವು. ಒಬ್ಬ ಮನುಷ್ಯನೇ ಪಿತಾ ಪುತ್ರ ಭ್ರಾತಾ ಜಾಮಾತಾ ಮಾತುಲ ಭಾಗಿನೇಯನಾಗಿ ವ್ಯವಹರಿಸಲ್ಪಡುವನು. ಒಂದು ವೃಕ್ಷವು ಕ್ರಿಯಾಭೇದದಿಂದ ಕರ್ತೃ ಕರ್ಮ ಕರಣ ಸಂಪ್ರದಾನ ಅಪಾದಾನ ಅಧಿಕರಣಗಳೆಂಬ ಆರು ಕಾರಕಗಳಾಗುತ್ತದೆ. ಉದಾಹರಣೆ—ಮರವಿದೆ. ಮರವನ್ನು ಕಡಿಯುತ್ತಾನೆ. ಮರದಿಂದ ದಾರಿಯನ್ನು ತಿಳಿಯುತ್ತಾನೆ. ಮರಕ್ಕೆ ನೀರು ಸುರಿಸುತ್ತಾನೆ. ಮರದಿಂದ ಎಲೆಗಳುದುರುತ್ತವೆ. ಮರದಲ್ಲಿ ಪಕ್ಷಿಗಳು ಇರುತ್ತವೆ. ಹೀಗೆ ಒಂದೇ ವಸ್ತುವು ದ್ರವ್ಯಪರ್ಯಾಯಭೇದದಿಂದ ಅನೇಕಾಂತವಾಗಿರುವುದರಲ್ಲಿ ಬಾಧಕವಿಲ್ಲವೆಂಬುದು ಸರ್ವಲೋಕಪ್ರತ್ಯಕ್ಷವಾಗಿರುವುದು. ಪ್ರಮಾಣದಿಂದ ವಿರೋಧಪರಿಹಾರವಾಗುತ್ತಿರುವಲ್ಲಿ ವೃಥಾ ಕಲಹದಿಂದ ಉಪಯೋಗವಿಲ್ಲವೆಂದು ತಾತ್ಪರ್ಯ.

"ಇಂತಹ ಅನೇಕಾಂತವಾದವು ಸರ್ವಸಮ್ಮತವಾಗಿಯೇ ಇರುವುದಲ್ಲಾ" ಎಂದರೆ—ದ್ರವ್ಯಪರ್ಯಾಯಗಳಿಂದ ಅನೇಕಾಂತವಾದವನ್ನು ಸಾಂಖ್ಯಸೌಗತ ತಾರ್ಕಿಕರು ಯಾರೂ ಒಪ್ಪುವುದಿಲ್ಲ. ಇತರರು ಒಪ್ಪಿದರೆ ನಮಗೆ ಸಂತೋಷವಲ್ಲವೇ ? ಆದುದರಿಂದ 'ಅನೇಕಾಂತಂ ಜಗತ್ಸರ್ವಂ ಹೇರಂಬನರಸಿಂಹವತ್'

## ತತ್ತ್ವವಿಭಾಗ

ಈ ದರ್ಶನದಲ್ಲಿ ವಿವಕ್ಷಾಭೇದದಿಂದಲೂ ಶಿಷ್ಯರ ಯೋಗ್ಯತಾತಾರ ತಮ್ಯದಿಂದಲೂ ಎರಡು ಐದು ಆರು ಏಳು ಒಂಬತ್ತು ಎಂದು ತತ್ತ್ವಗಳನ್ನು ವಿಭಾಗ ಮಾಡಿ ಗ್ರಂಥಗಳನ್ನು ಬರೆದಿರುವರು. ಚಿತ್ ಅಚಿತ್ ಎಂದು ಒಂದು ವಿಧ ವಿಭಾಗ. ಇದರಿಂದ ಅನಾದಿನಿತ್ಯೈಕೇಶ್ವರ ತತ್ತ್ವವಿಲ್ಲವೆಂದಭಿ ಪ್ರಾಯ. ಜೀವ ಅಜೀವ ಎಂದು ಮತ್ತೊಂದು ವಿಧ ವಿಭಾಗದಲ್ಲಿ ಅಜೀವ ತತ್ತ್ವವು ಧರ್ಮ ಅಧರ್ಮ ಆಕಾಶಕಾಲ ಪುದ್ಗಲವೆಂದು ಐದು ವಿಧವಾದರೆ ತತ್ತ್ವವು ಆರು ಪ್ರಕಾರವಾಯಿತು. ಬೋಧಾಬೋಧಸ್ವರೂಪವೆಂಬ ಜೀವಾ ಜೀವವಿಭಾಗದಲ್ಲಿ ಪ್ರಪಂಚವೆಲ್ಲವೂ ಜೀವಮಯವೆಂಬ ಹಿರಣ್ಯಗರ್ಭ ಸಿದ್ಧಾಂತವೂ, ಭೂತಮಯವೆಂಬ ಚಾರ್ವಕ ಸಿದ್ಧಾಂತವೂ ಹೃದಯದಲ್ಲಿ ರುವುವು. ಹೀಗೆ ವಿಭಾಗದಲ್ಲೇ ಉದ್ದೇಶ ಸೂಚಿತವಾಗುತ್ತದೆ. ದ್ರವ್ಯ ಅದ್ರವ್ಯವೆಂಬ ವಿಭಾಗವಿರುವುದು. ಅದ್ರವ್ಯವು ಗುಣ, ಪರ್ಯಾಯ ಎಂದು ಎರಡು ವಿಧ. ದ್ರವ್ಯಕ್ಕೆ ಸಹಜವಾಗಿರುವ ಸ್ವಭಾವವು ಗುಣ. ಆತ್ಮನಲ್ಲಿ ಸಹಜವಾಗಿರುವುದು ಜ್ಞಾನ ಸುಖ ಮೊದಲಾದುವು. ಆಗುಂತಕವಾಗಿ ಕ್ರಮವಾಗಿ ಬರುವ ಸ್ವಭಾವಗಳು ಪರ್ಯಾಯಗಳು. ಆತ್ಮನಲ್ಲೇ ಬರುವ ದೇವಮನುಷ್ಯಾದಿಸ್ವಭಾವಗಳು ಕಾಮ ಕ್ರೋಧ ದುಃಖ ಮೊದಲಾದುವೂ ಪರ್ಯಾಯಗಳು.

ಸಕಲದ್ರವ್ಯಗಳೂ ಸ್ವತಂತ್ರಗಳು, ತಂತಮ್ಮ ಸ್ವಭಾವದಲ್ಲಿರುವುವು, ಎಂದರೆ ಜೀವನಿಗೆ ಅಧೀನವಾಗಿ ಅಜೀವವೂ, ಅಜೀವಕ್ಕೆ ಅಧೀನವಾಗಿ ಜೀವವೂ, ಜೀವಾಜೀವಾತ್ಮಗಳಲ್ಲಿ ಒಂದಕೊಂದು ಅಧೀನವೆಂಬುದಿಲ್ಲ. ಈಶ್ವರ ವಾದದಲ್ಲಿ ಸರ್ವವೂ ಈಶ್ವರಾಧೀನವೆಂಬ ಭಾವವಿರುವುದು. ಪ್ರಾಯಃ ಸಾಂಖ್ಯರ ಅಭಿಪ್ರಾಯದಂತೆ ಸ್ವಭಾವವಾದದಲ್ಲಿರುವುದೆಂದು ತಿಳಿಯಬೇಕು.

ದ್ರವ್ಯಗಳು ಆರು ವಿಧಗಳೆಂದು ವಿಭಾಗಮಾಡಿರುವುದರಿಂದ ಪೃಥ್ವಿ ಜಲ ತೇಜಸ್ಸು ವಾಯು ಮನಸ್ಸು ಎಂಬ ಐದು ದ್ರವ್ಯಗಳು ಪುದ್ಗಲದಲ್ಲಿ ಸೇರಿದುವು. ದಿಕ್ಕು ಎಂಬುದು ಸೂರ್ಯನ ಉದಯಾಸ್ತಗಳಿಂದ ಆಕಾಶ ದಲ್ಲೇ ಸೇರಿತು. ಮನಸ್ಸು, ದ್ರವ್ಯ ಭಾವ ಎಂದು ಎರಡು ವಿಧ. ಮೊದ ಲನೆಯದು ಪುದ್ಗಲದಲ್ಲಿ ಸೇರಿದೆ. ಅದು ಇಂದ್ರಿಯಗಳಲ್ಲಿ ಸೇರುವುದಿಲ್ಲ.

ಕಣ್ಣು ಮೊದಲಾದುವು ಐದು ಇಂದ್ರಿಯಗಳು. ಭಾವ, ಮನಸೆಂಬುದ ಜೀವನದಲ್ಲಿ ಅಂತರ್ಭೂತ. ದೇಹೇಂದ್ರಿಯಾದಿಸಮಸ್ತವಸ್ತುಗಳು ಪುದ್ಗಲ ವೆಂಬ ಅಣುಸಂಘಾತಗಳು. ರೂಪ ರಸ ಗಂಧ ಸ್ಪರ್ಶ ಮೊದಲಾದ ಗುಣ ಗಳೂ ಕರ್ಮವೂ ಪುದ್ಗಲದ ಪರ್ಯಾಯಗಳು. ಸಾಮಾನ್ಯ ವಿಶೇಷ ಸಮವಾಯ ಅಭಾವವೆಂಬ ಅತಿರಿಕ್ತಪದಾರ್ಥಗಳಿಲ್ಲ. ವ್ಯವಹಾರವು ದ್ರವ್ಯ ಪರ್ಯಾಯಗಳಿಂದ ನಿರ್ವಾಹವಾಗುತ್ತದೆ.

ಜಾತಿಯೆಂಬ ಅತಿರಿಕ್ತಸಾಮಾನ್ಯವಿಲ್ಲ. ದ್ರವ್ಯಪರ್ಯಾಯಗಳೇ ಸಾಮಾನ್ಯವ್ಯವಹಾರಕ್ಕೆ ವಿಷಯಗಳು. ಅದರಲ್ಲಿ ತಿರ್ಯಕ್ಸಾಮಾನ್ಯ ಉರ್ಧ್ವತಾಸಾಮಾನ್ಯವೆಂದು ಎರಡು ಪ್ರಕಾರ. ತಿರ್ಯಕ್ಸಾಮಾನ್ಯವೆಂದರೆ ಗವಾಶ್ವಾದಿ ಜಾತಿಗಳಲ್ಲಿ ನಿಯತವಾಗಿ ಕಾಣುವ ಆಕಾರ, ಸಮಾನಪರಿ ಣಾಮ. ಅವೇ ಗೋತ್ವ ಅಶ್ವತ್ವ ಮೊದಲಾದವು. ಉರ್ಧ್ವತಾಸಾಮಾನ್ಯ ವೆಂದರೆ, ಸುವರ್ಣಭೂಷಣಗಳು ವಿಚಿತ್ರವಾದ ಆಕಾರಗಳಲ್ಲಿದ್ದರೂ ಎಲ್ಲವೂ ಸುವರ್ಣವೆಂಬ ಭಾವನೆ ಇರುವುದು. ಸುವರ್ಣದಲ್ಲಿ ನಿಯತವಾಗಿರುವ ಸ್ವಭಾವವು ವ್ಯತ್ಯಾಸವಾಗದೆ ಇರುವುದರಿಂದ ಆ ಭಾವನೆ ಬರುತ್ತದೆ. ಅದೇ ಊರ್ಧ್ವತಾಸಾಮಾನ್ಯವೆಂದು ಅಭಿಪ್ರಾಯ.

ಈ ದ್ರವ್ಯಗಳೆಲ್ಲವೂ ಸಾವಯವವಾಗಿರುವುವು. ಅಸಂಖ್ಯಾತಾಂಶ ಅಸಂಖ್ಯಾತಪ್ರದೇಶವುಳ್ಳವು ಎಂದರ್ಥ. ಅಣುಗಳ ಪುಂಜವೇ ಪುದ್ಗಲ ದ್ರವ್ಯವು. ಅದರಲ್ಲೂ ಅಸಂಖ್ಯಾತ ಅಂಶಗಳಿರುವುವು. ಅವುಗಳಿಗೆ ಪ್ರದೇಶ ವೆಂದು ಹೆಸರು. ಅವುಗಳಲ್ಲಿರುವ ಪರಮಾಣುಗಳು ಅಸಂಖ್ಯಾತಗಳು. ಆದರೂ ಪರಿಣಾಮ ತಾರತಮ್ಯವಿರುವುದು. ದೇಶವ್ಯಾಪ್ತಿಯಿಂದ ಅಣು ಮಹತ್ ಮಹತ್ತರ ಮೊದಲಾದ ವ್ಯವಹಾರಗಳು ಕೂಡುವುವು. ದೇಶ ವ್ಯಾಪ್ತಿಯೆಂದರೆ ಪರಮಾಣು ಎಷ್ಟು ಆಕಾಶಪ್ರದೇಶವನ್ನು ಆವರಿಸು ತ್ತದೆಯೋ ದ್ವ್ಯಣುಕವು ಅದಕ್ಕಿಂತಲೂ ಅಧಿಕಪ್ರದೇಶವನ್ನು ಆವರಿಸುತ್ತದೆ. ಇದೇ ದೇಶವಾಪ್ತಿಯಲ್ಲಿರುವ ತಾರತಮ್ಯ ಮತ್ತು ಕಾಲ, ದ್ರವ್ಯ ಇವುಗಳು ಹೊರತಾಗಿ ಉಳಿದ ಧರ್ಮ ಅಧರ್ಮ ಆಕಾಶ ಪುದ್ಗಲ ಜೀವ ಇವುಗಳಿಗೆ ಅಸ್ತಿಕಾಯವೆಂದು ಹೇಳುತ್ತಾರೆ. ಅಸ್ತಿಕಾಯವೆಂದರೆ ಬಹುಪ್ರದೇಶವುಳ್ಳ ವಸ್ತುವೆಂದರ್ಥ, ಕಾಲವು ಅಣುರೂಪವಾಗಿಯೇ ಇರುವುದರಿಂದ ಪ್ರದೇಶ

ವೆಂಬ ಅವಯವವಿಲ್ಲ. ಕಾಲಾಸ್ತಿಕಾಯವೆಂದು ವ್ಯವಹಾರವಿಲ್ಲ. ಜೀವಾಸ್ತಿಕಾಯ, ಧರ್ಮಾಸ್ತಿಕಾಯ, ಅಧರ್ಮಾಸ್ತಿಕಾಯ, ಆಕಾಶಾಸ್ತಿಕಾಯ ಪುದ್ಗಲಾಸ್ತಿಕಾಯ ಎಂದು ವ್ಯವಹಾರವಿರುವುದು. ಇವುಗಳಲ್ಲಿ ಜೀವ, ಧರ್ಮ, ಅಧರ್ಮ ಈ ಮೂರು ದ್ರವ್ಯಗಳಲ್ಲಿ ಅಸಂಖ್ಯಾತಗಳಾದ ಪ್ರದೇಶಗಳಿರುವುವು. ಆಕಾಶದಲ್ಲಿ ಅನಂತಗಳಾದ ಪ್ರದೇಶಗಳಿರುವುವು. ಪುದ್ಗಲದಲ್ಲಿ ಸಂಖ್ಯಾತ, ಅಸಂಖ್ಯಾತ, ಅನಂತಗಳೆಂಬ ಮೂರುವಿಧ ಪ್ರದೇಶಗಳಿರುವುವು. ಕಾಲದಲ್ಲಿ ಮಾತ್ರ ಯಾವ ಪ್ರದೇಶವೂ ಇಲ್ಲ. ಆದುದರಿಂದ ಅದು ಅಸ್ತಿಕಾಯವಲ್ಲ. ಉಳಿದ ಐದು ದ್ರವ್ಯಗಳ ಅಣುಗಳಲ್ಲಿ ಪ್ರದೇಶ ಭೇದವಿಲ್ಲದಿದ್ದರೂ ಸ್ಕಂಧಗಳ ಮೂಲಕ ಪರಂಪರೆಯಿಂದ ಉಪಚಾರದಿಂದ ಪ್ರದೇಶಭೇದವಿದೆಯೆಂದು ವ್ಯವಹಾರ.

ಈ ಆರು ದ್ರವ್ಯಗಳಲ್ಲಿ ಜೀವದ್ರವ್ಯವು ಜ್ಞಾನಸ್ವರೂಪವಾದುದರಿಂದ ಚೇತನ ದ್ರವ್ಯವು ; ಬಾಕಿ ಅಚೇತನದ್ರವ್ಯಗಳು. ಜೀವಪುದ್ಗಲಗಳೆರಡು ಕ್ರಿಯಾಶ್ರಯ ದ್ರವ್ಯಗಳು, ಪರಿಣಾಮಿದ್ರವ್ಯಗಳು , ಜೀವದ್ರವ್ಯವೊಂದೇ ಕರ್ತೃದ್ರವ್ಯವು. ಉಳಿದುವು ಕಾರಣದ್ರವ್ಯಗಳು. ಈ ಆರು ದ್ರವ್ಯಗಳು ಪರಸ್ಪರ ಪ್ರವೇಶಮಾಡಿ ಸಂಕೀರ್ಣವಾಗಿ ಸ್ವರೂಪಹಾನಿಮಾಡಿಕೊಳ್ಳುವಂತಹುವಲ್ಲ. ಪುಣ್ಯಪಾಪಗಳೆಂಬುವು ಪುದ್ಗಲದ್ರವ್ಯದಲ್ಲಿ ಸೇರುತ್ತವೆ. ಜೀವರ ಕರ್ಮಾಧೀನವಾಗಿ ಪುದ್ಗಲಪರಮಾಣುಗಳು ಪುಣ್ಯರೂಪವಾಗಿಯೂ ಪಾಪರೂಪವಾಗಿಯೂ ಪರಿಣಮಿಸಿ ಎಂದರೆ ಜೀವರಿಗೆ ಸುಖದುಃಖಗಳನ್ನುಂಟುಮಾಡುವ ಸ್ವಭಾವವುಳ್ಳವುಗಳಾಗಿ, ಜೀವರೊಡನೆ ಸೇರಿಕೊಳ್ಳುತ್ತವೆ. ಇವು ಕರ್ಮಾಣುಗಳೆಂದು ವ್ಯವಹರಿಸಲ್ಪಡುವುವು.

ಈ ಆರು ದ್ರವ್ಯಗಳಲ್ಲಿ ಪುದ್ಗಲದ್ರವ್ಯ ಮಾತ್ರ ಮೂರ್ತ ದ್ರವ್ಯ. ಉಳಿದ ಐದು ಅಮೂರ್ತದ್ರವ್ಯಗಳು. ಮೂರ್ತವೆಂದರೆ ಕಾಠಿನ್ಯವು ಮತ್ತು ಸ್ಪರ್ಶರೂಪಾದಿ ಗುಣಗಳು. ಆದುದರಿಂದ ಅಮೂರ್ತದ್ರವ್ಯವಾದ ಆಕಾಶದ್ರವ್ಯದಲ್ಲಿ ಉಳಿದ ಐದು ದ್ರವ್ಯಗಳು ಒಂದು ದೀಪದ ಪ್ರಕಾಶದಲ್ಲಿ ಅನೇಕ ದೀಪಗಳ ಪ್ರಕಾಶಗಳಿರುವ ಹಾಗೆ ತಡೆಯೆಂಬ ಸಪ್ರತಿಘತ್ವದೋಷವಿಲ್ಲದೆ ಇರುವುವು.

ಹೀಗೆ ಸಾಮಾನ್ಯವಾಗಿ ದ್ರವ್ಯಗಳ ಸಾಧರ್ಮ್ಯವೈಧರ್ಮ್ಯಗಳನ್ನು

ತಿಳಿದು ಪ್ರತ್ಯೇಕಸ್ವರೂಪವನ್ನು ತಿಳಿಯಬೇಕು. ಧರ್ಮ ಅಧರ್ಮ ಆಕಾಶ ಕಾಲ ಇವು ನಾಲ್ಕು ದ್ರವ್ಯಗಳು ಕ್ರಮವಾಗಿ ಗತಿ ಸ್ಥಿತಿ ಅವಗಾಹ ಪರಿವರ್ತನವೆಂಬ ಉಪಕಾರಗಳನ್ನು ಮಾಡುತ್ತಿರುವುವು. ಗತಿಯೆಂದರೆ ಗಮನಾಗಮನಕ್ರಿಯೆ. ಮತ್ಸ್ಯಗಳಿಗೆ ನೀರಿನಂತೆಯೂ ವೃದ್ಧರಿಗೆ ಕೈಯಲ್ಲಿರುವ ಕೋಲಿನಂತೆಯೂ ಗಮನಸಾಧನವಾಗಿರುವುದು ಧರ್ಮದ್ರವ್ಯದ ಉಪಕಾರ. ಸ್ಥಿತಿಯೆಂದರೆ ನಿಲ್ಲುವಿಕೆ, ಕೆಳಕ್ಕೆ ಬೀಳದಿರುವಿಕೆ. ಇದಕ್ಕೆ ಅಧರ್ಮದ್ರವ್ಯ ಸಹಾಯವಾಗಿರುವುದು. ಅವಗಾಹವೆಂದರೆ ಒಂದು ವಸ್ತುವಿನ ಅಂಶಗಳ ಮಧ್ಯದಲ್ಲಿ ಮತ್ತೊಂದು ವಸ್ತುವಿನ ಪ್ರವೇಶ. ಇದು ಆಕಾಶಕ್ಕೆ ಸಾಧ್ಯ. ಪರಿವರ್ತನವೆಂದರೆ ಬದಲಾವಣೆ. ಇದು ಕಾಲದ್ರವ್ಯ ಕೃತ್ಯ ; ಮತ್ತು ಈ ನಾಲ್ಕು ದ್ರವ್ಯಗಳು ಸರ್ವ ವ್ಯಾಪಕಗಳಾಗಿರುವುವು. ಆಕಾಶವು ಅನಂತ ಪ್ರದೇಶವೆಂದರೆ ಸೂಚ್ಯಗ್ರ ಪ್ರದೇಶವು ಸಹಸಕಲವಸ್ತುಗಳನ್ನು ಒಳಗೊಳ್ಳುವ ಆನಂತ್ಯವೆಂಬ ಸ್ವಭಾವವುಳ್ಳುದೆಂದರ್ಥ. ಆಕಾಶದಲ್ಲಿ ಲೋಕಾಕಾಶ ಅಲೋಕಾಕಾಶವೆಂದೆರಡು ವಿಧ. ಲೋಕಾಕಾಶದಲ್ಲೇ ಸಕಲವಸ್ತುಗಳೂ ಇರುವುವು. ಅಲೋಕಾಕಾಶದಲ್ಲಿ ಧರ್ಮದ್ರವ್ಯವಿಲ್ಲದಿರುವುದರಿಂದ ಅಲ್ಲಿ ಯಾವ ದ್ರವ್ಯವೂ ಇಲ್ಲ. ಮುಕ್ತರಾದ ಜೀವರುಗಳು ಲೋಕಾಕಾಶದಲ್ಲೇ ಸರ್ವೋರ್ಧ್ವ ಭಾಗದಲ್ಲಿ ಸಕಲಲೋಕಗಳ ಉಪರಿಸ್ಥಾನದಲ್ಲಿರುತ್ತಾರೆ. ಅದೇ ಪರಮಪದ. ಆದುದರಿಂದಲೇ ಅವರಿಗೆ ಪರಮೇಷ್ಠಿಗಳೆಂದು ಪ್ರಸಿದ್ಧಿ.

ಪುದ್ಗಲವೆಂದರೆ ಅಣುರೂಪವಾಗಿಯೂ ಸ್ಕಂಧರೂಪವಾಗಿಯೂ ಇರುವ ಭೂತಭೌತಿಕ ಪ್ರಪಂಚ ಮೂಲಕಾರಣ ದ್ರವ್ಯವು, ರೂಪ ರಸ ಗಂಧ ಸ್ಪರ್ಶ ಗುಣ ಸ್ವಭಾವುಳ್ಳದ್ದು. ಅಣುಗಳಿಂದ ಸ್ಕಂಧಗಳೂ ಸ್ಕಂಧಗಳಿಂದ ಅಣುಗಳೂ ಅಣುಸ್ಕಂಧಗಳಿಂದ ಸ್ಕಂಧಗಳೂ ಉದಯಿಸುವುವು. ಇದಕ್ಕೆ ಸೇರುವ, ಬಿಡುವ ಸ್ವಭಾವವಿರುವುದರಿಂದ "ಪೂರಯನ್ತಿ ಗಳನ್ತಿ" ಎಂಬ ವಿವರಣೆಯಿಂದ ಪುದ್ಗಲವೆಂದು ನಾಮದೇಯ.

ಕಾರ್ಯ ಕಾರಣಭಾವ ವಿಷಯದಲ್ಲಿ ತಾರ್ಕಿಕರು ಹೇಳುವಂತೆ ಹೊಸ ವಸ್ತುವಿನ ಆರಂಭವಿಲ್ಲ. ಸಾಂಖ್ಯರು ಹೇಳುವಂತೆ ಅಭಿವ್ಯಕ್ತಿಯಿಲ್ಲ. ಮತ್ತು ಅವಸ್ಥಾವಾದ ಎಂದರೆ ಪುಂಜವಾದ ಅಭಿಮತವಾಗಿದೆ. ಆದುದರಿಂದ ಪ್ರಪಂಚವು ಅಣುಸಮೂಹವೆಂದು ಹೇಳಬಹುದು. ತಾರ್ಕಿಕರು

ಪರಮಾಣುಗಳಂತೆ ನಾಲ್ಕು ವಿಧ ಪರಮಾಣುಗಳಿಲ್ಲ. ಪುದ್ಗಲಾಣುಗಳಲ್ಲೇ ಏಕದ್ವಿತ್ರಿ ಚತುರಾದಿಸ್ನಿಗ್ಧರೂಕ್ಷ ಸ್ವಭಾವಗಳುಳ್ಳ ಪರಮಾಣುಗಳಿಂದ ವಾಯು ಮೊದಲಾದ ನಾಲ್ಕು ಭೂತಗಳ ಪುಂಜಗಳಾಗಿ ಎಂದು ಅಭಿಪ್ರಾಯ. ಒಂದು ಚಿನ್ನದ ಸವರನ್ನಿಗೆ ಪೂರ್ವಾವಸ್ಥೆಯೆಂಬ ನಾಣ್ಯದ ಆಕಾರ ವಿನಾಶವಾಗಿ ಉತ್ತರಾವಸ್ಥೆಯೆಂಬ ಭೂಷಣಾಕಾರ ಬಂದರೆ ಭೂಷಣಕ್ಕೆ ಉತ್ಪತ್ತಿ, ಸವರನ್ನಿಗೆ ವಿನಾಶ. ಹೀಗೆ ಉತ್ತರೊತ್ತರಾವಸ್ಥೆಗಳಿಂದ ಉತ್ಪತ್ತಿ ವ್ಯವಹಾರಗಳು, ಪೂರ್ವಪೂರ್ವಾವಸ್ಥಾ ವಿನಾಶದಿಂದ ವಿನಾಶವ್ಯವಹಾರ. ಈ ಅವಸ್ಥಾಪರಂಪರೆ ಅನಾದಿಸಿದ್ಧ. ದ್ರವ್ಯಪರ್ಯಾಯ ವಿಚಾರದಲ್ಲಿ ಇದು ಸ್ಪಷ್ಟ. ಈ ದ್ರವ್ಯಗಳಲ್ಲಿ ದ್ರವ್ಯ, ಭಾವ ಎಂಬ ವಿಭಾಗವುಂಟು. ಮುಂದೆ ಬರುವ ಪರ್ಯಾಯ ದೃಷ್ಟಿಯಿಂದ ದ್ರವ್ಯವೆಂದು ವ್ಯವಹಾರ. ಈಗಿರುವ ಪರ್ಯಾಯ ದೃಷ್ಟಿಯಿಂದ ಭಾವವೆಂದು ವ್ಯವಹಾರ.

## ಜೀವ

ಜೀವನೆಂದರೆ-ಜ್ಞಾನದರ್ಶನಸ್ವರೂಪಿಯಾದ ಚೈತನ್ಯವಸ್ತು. ಜೀವನು ನಿತ್ಯ. ಕ್ಷಣಿಕನಾದರೆ ಕೃತಹಾನಾಕೃತಾಭ್ಯಾಗಮ ಪ್ರಸಂಗವೆಂಬ ಪುಣ್ಯಪಾಪ ವ್ಯವಸ್ಥಾನುಪಪತ್ತಿ, ಸ್ಮರಣಾನುಪಪತ್ತಿ, ಕರ್ತೃಭೋಕ್ತೃ ವ್ಯವಸ್ಥಾನುಪಪತ್ತಿ, ಗ್ರಾಹ್ಯಗ್ರಾಹಕಭಾವಾನುಪಪತ್ತಿ ಮೊದಲಾದ ದೋಷಗಳು ಸ್ಥಿರವಾದ ಒಂದು ವಸ್ತುವಿದ್ದರೇಯೇ ಪರಿಹಾರವಾಗುತ್ತದೆ. ಪ್ರದೀಪಪ್ರಭೆಯಂತೆ ಜ್ಞಾನವು ತನ್ನನ್ನೂ ಇತರ ವಸ್ತುಗಳನ್ನೂ ಪ್ರಕಾಶಪಡಿಸುವುದು. ಪ್ರಕಾಶವೆಂದರೆ ವ್ಯವಹಾರಕ್ಕೆ ಬೇಕಾದ ಯೋಗ್ಯತೆ. ಇದನ್ನು ತಾರ್ಕಿಕರು ವಿಷಯತೆ ಎನ್ನುವರು. ಮೀಮಾಂಸಕರು ಪ್ರಾಕಟ್ಯವೆನ್ನುವರು. ಜ್ಞಾನಕ್ಕೆ ವಿಚಿತ್ರಶಕ್ತಿಯೂ ವಿಚಿತ್ರವೇಗವೂ ಇರುವುದರಿಂದ ಅಂತರಬಾಹ್ಯವಸ್ತುಗಳ ಸಂಬಂಧವೇ ಪ್ರಕಾಶವೆಂದು ತಿಳಿಯಬೇಕು. ಆದುದರಿಂದ ಜ್ಞಾನಕ್ಕೂ ಜೀವನಿಗೂ ಭೇದ ಅಭೇದ ಭೇದಾಭೇದಗಳೆಂಬ ಮೂರುಪಕ್ಷಗಳೂ ಸಮ್ಮತವಾಗಿವೆ. ಈ ಜೀವನು ಪ್ರತಿಕ್ಷಣದಲ್ಲೂ ಚಲನೆಯೆಂಬ ವಿಕಾರವನ್ನು ಪೊಂದುತ್ತಿರುವನು. ಈ ವಿಕಾರವೇ ಪರ್ಯಾಯ. ಈ ಪರ್ಯಾಯಗಳಲ್ಲಿ ದುಃಖರಾಗ ದ್ವೇಷಾದಿ ಪರ್ಯಾಯಗಳು ಆಗಂತುಕಗಳು. ಜ್ಞಾನದರ್ಶನ

ಸುಖ ಮೊದಲಾದ ಪರ್ಯಾಯಗಳು ಸ್ವಾಭಾವಿಕಗಳು. ಆದುದರಿಂದ ಜ್ಞಾತಾ ದೃಷ್ಟಾ ಕರ್ತಾ ಭೋಕ್ತಾ ಸುಖೀ ದುಃಖೀ ಮೊದಲಾದ ಸಕಲ ವ್ಯವಹಾರಗಳೂ ಸಿದ್ಧವಾಗುವುವು.

ಇಂತಹ ಜ್ಞಾನಪ್ರಭೆಗೆ ಆವರಣಗಳಿರುವುವು. ಅವುಗಳ ಕ್ಷಯದಿಂದ ಸರ್ವಜ್ಞರಾದ ಮಹಾಪುರುಷರು ಅನಾದಿಕಾಲದಿಂದ ಪ್ರವಾಹರೂಪವಾಗಿ ಬಂದು ಪ್ರಪಂಚಾನುಗ್ರಹಕ್ಕಾಗಿ ತತ್ವೋಪದೇಶವನ್ನು ಮಾಡುತ್ತ ಇರುವರು. ಆದ್ದರಿಂದ ಅನಾದಿ ಸರ್ವಜ್ಞನೆಂಬ ಪರಮೇಶ್ವರನೊಬ್ಬನು ಬೇಕಾಗಿಲ್ಲ. ಪ್ರಪಂಚಕ್ಕೆ ಸೃಷ್ಟಿಪ್ರಲಯಗಳಿಲ್ಲವಾದುದರಿಂದ ಅಂತಹ ನಿತ್ಯ ಸರ್ವಶಕ್ತನು, ನಿತ್ಯಪರಮಕಾರುಣಿಕನು ಬೇಕಾಗಿಲ್ಲ. ಬೀಜಾಂಕುರನ್ಯಾಯದಿಂದಸರ್ವಜ್ಞಪರಂಪರೆಯೂ ಪ್ರವಚನಪರಂಪರೆಯೂ ಪ್ರಪಂಚೋದ್ಧಾರಪರಂಪರೆಯೂ ನಡೆಯುತ್ತವೆಂದು ನಿರ್ಣಯ.

ಸರ್ವತ್ರ ಅನೇಕಾಂತವಾದಿಗಳಿಗೆ ಪರಮೇಶ್ವರನ ವಿಷಯದಲ್ಲೂ ಅನೇಕಾಂತವಿದ್ದರೆ ಬಾಧಕವೇನೆಂದು ಕೇಳಿದರೆ ಪ್ರಸಿದ್ಧವಾದ ಸರ್ವಜ್ಞತ್ವದಲ್ಲಿ ನಿತ್ಯತ್ವವಿದೆಯೋ? ಇಲ್ಲವೆ? ಎಂದು ಕೇಳಿದಂತಾಯಿತು. ಚೈತನ್ಯಸಾಮಾನ್ಯ ದೃಷ್ಟಿಯಿಂದ ನಿತ್ಯತ್ವವಿರಬಹುದು. ವಿಶೇಷದೃಷ್ಟಿಯಿಂದ ನಿತ್ಯತ್ವವಿಲ್ಲದಿರಬಹುದು. ಹೀಗೆ ಗಗನಕುಸುಮವನ್ನಂಗೀಕರಿಸಬಹುದೆ ಎಂದರೂ ಕುಸುಮದಲ್ಲಿ ಗಗನಸಂಬಂಧವು ಸಾಮಾನ್ಯ ವಿಶೇಷದೃಷ್ಟಿಗಳಿಂದ ಇರಬಹುದು. ಇಲ್ಲದಿರಬಹುದೆಂದು ಕೇಳುವುದರಲ್ಲಿ ಬಾಧಕವಿಲ್ಲ.

ಇಂತಹ ಜೀವವಸ್ತುವಿಗೆ ಇತರ ವಸ್ತುಗಳನ್ನು ತಿಳಿಯುವ ಸಹಜ ಚಿದ್ರೂಪ ಪರಿಣಾಮಕ್ಕೆ ಜ್ಞಾನ, ದರ್ಶನ ಎಂದು ಎರಡು ವಿಧವಾಗಿಯೂ ವಿಭಾಗವಿರುವುದು, ಸಾಕಾರಪರಿಣಾಮವು ಮೊದಲನೆಯದು. ನಿರಾಕಾರಪರಿಣಾಮವು ಎರಡನೆಯದು. ಈ ಜ್ಞಾನದರ್ಶನಗಳಿಗೆ ಉಪಯೋಗವೆಂದು ಹೆಸರು. ಇದೇ ಜೀವನಿಗೆ ಮುಖ್ಯಲಕ್ಷಣ. ಹೇಗೆಂದರೆ, ಜೀವನಿಗೆ ಫಲಪ್ರದಾನಾವಸ್ಥೆಯಲ್ಲಿರುವ ಪುಣ್ಯಪಾಪವೆಂಬ ಕರ್ಮದ ಅಣುಗಳು ಜೀವದೊಡನೆ ಸೇರುತ್ತವೆ, ಬೆರೆಯುತ್ತವೆ. ಇದಕ್ಕೆ ಪ್ರದೇಶಬಂಧವೆಂದು ಹೆಸರು, ಕ್ಷೀರನೀರನ್ಯಾಯದಂತೆ ಜೀವನಿಗೂ ಕರ್ಮಾಣುಗಳಿಗೂ ಭೇದ ತಿಳಿಯುವುದಿಲ್ಲ. ಕರ್ಮಾಣುಗಳು ಪ್ರತಿಕ್ಷಣದಲ್ಲೂ ಪರಿಣಮಿಸುತ್ತಿದ್ದರೂ ಚಲಿಸು

ತ್ತಿದ್ದರೂ ಜ್ಞಾನರೂಪಪರಿಣಾಮವಿಲ್ಲದಿರುವುದರಿಂದ ಜ್ಞಾನದರ್ಶನಗಳೆಂಬ ಉಪಯೋಗವು, ಜೀವಪರಿಣಾಮವು ಜೀವಲಕ್ಷಣವಾಗುವುದು. ಇದೇ ಜೀವನ ಪರಿಣಾಮದಲ್ಲಿ ಐದನೆಯದಾದ ಪಾರಿಣಾಮಿಕ ಪರಿಣಾಮವೆಂದು ಕರೆಯಲ್ಪಡುವುದು.

## ಪರಿಣಾಮಗಳು

ಬಾಕಿ ನಾಲ್ಕು ಪರಿಣಾಮಗಳು ಔಪಶಮಿಕ, ಕ್ಷಾಯಿಕ, ಮಿಶ್ರ, ಔದಯಿಕಗಳು. ನೀರಿನ ಕಶ್ಮಲವು ಕತಕಬೀಜ ಚೂರ್ಣದಿಂದ ಅಡಗುವ ಹಾಗೆ ಕರ್ಮಪರಮಾಣುಗಳ ಶಕ್ತಿ ಅಡಗುವುದರಿಂದುಂಟಾಗುವ ಪರಿಣಾಮವು ಔಪಶಮಿಕ. ಶುದ್ಧಪಾತ್ರೆಯಲ್ಲಿ ಬಿದ್ದ ಮಳೆಯ ನೀರಿನಲ್ಲಿ ಕಶ್ಮಲವು ಇಲ್ಲದಿರುವ ಹಾಗೆ ಕರ್ಮಗಳು ವಿನಾಶವಾಗುವುದರಿಂದುಂಟಾಗುವ ಪರಿಣಾಮವು ಕ್ಷಾಯಿಕ. ಬಾವಿಯ ನೀರಿನ ಕಶ್ಮಲದಂತೆ ಎರಡು ವಿಧವಾಗಿಯೂ ಇರುವುದು ಮಿಶ್ರ. ನೀರಿನಲ್ಲಿ ಕೆಸರು ಮೇಲಕ್ಕೆ ಬರುವಹಾಗೆ ಕರ್ಮಫಲಗಳು ಉದಯಕ್ಕೆ ಬರುವಾಗ ಉಂಟಾಗುವ ಪರಿಣಾಮಭಾವಕ್ಕೆ ಔದಯಿಕವೆಂದು ಹೆಸರು. ತಪೋಬಲದಿಂದ ಕರ್ಮಕ್ಷಯೋಪಶಮ ಕಾಲದಲ್ಲಿ ಜೀವನಲ್ಲಿ ಬರುವ ಭಾವವು ಕ್ಷಾಯೋಪಶಮಿಕ ಅಥವಾ ಮಿಶ್ರಪರಿಣಾಮ. ಪಾರಿಣಾಮಿಕವೆಂಬ ಐದನೆಯ ಭಾವವು ಮೊದಲೇ ಸೂಚಿತವಾಗಿದೆ.

ಜೀವನಲ್ಲಿ ಭವ್ಯ, ಅಭವ್ಯವೆಂದು ವಿಭಾಗವುಂಟು. ರತ್ನತ್ರಯ ಪ್ರಾಪ್ತಿ ಯೋಗ್ಯತೆಯುಳ್ಳವನು ಮೊದಲನೆಯವನು. ಅದಿಲ್ಲದವನು ಎರಡನೆಯವನು. ಬದ್ಧ, ಮುಕ್ತ ಎಂದು ವಿಭಾಗವಿರುವುದು. ಜನ್ಮ ಪರಂಪರೆಯಲ್ಲಿರುವವನು ಮೊದಲನೆಯವನು; ಅದರಿಂದ ಬಿಡಲ್ಪಟ್ಟವನು ಮುಕ್ತನು.

## ಪ್ರಮಾಣ

ಸಮ್ಯಕ್‌ಜ್ಞಾನಂ ಪ್ರಮಾಣಂ—ತಾರ್ಕಿಕರು ಮೊದಲಾದವರು ಹೇಳುವ ಇಂದ್ರಿಯ, ಲಿಂಗ, ಶಬ್ದ ಮೊದಲಾದುವು ಪ್ರಮಾಣವಲ್ಲ. ಇವುಗಳಿಂದ ಹುಟ್ಟುವ ಜ್ಞಾನಗಳೇ ಪ್ರಮಾಣಗಳು. ಇವುಗಳಿಂದ ವಸ್ತುಗಳ ಅಜ್ಞಾನ ನಿವೃತ್ತಿಯೆಂಬ ಪ್ರಮಿತಿಯೇ ಫಲವು. ಇಂದ್ರಿಯಾದಿಗಳಲ್ಲಿ ಪ್ರಮಾಣ

ವ್ಯವಹಾರವು ಪರಂಪರೆಯಾಗಿ ಉಪಯೋಗವಾಗಿರುವುದರಿಂದ ಗೌಣವು.

ಪ್ರಮಾಣವು ಪ್ರತ್ಯಕ್ಷ, ಪರೋಕ್ಷವೆಂದು ಎರಡು ವಿಧ. ಮೊದಲನೆಯದು ನಿರ್ಮಲವಾದ ಸ್ಪಷ್ಟವಾದ ವಿಶದವಾದ ಜ್ಞಾನ. ಅವಿಶದವಾದ ಜ್ಞಾನ ಪರೋಕ್ಷ. ಒಂದನೆಯದರಲ್ಲಿ ಸಾಂವ್ಯವಹಾರಿಕ, ಪಾರಮಾರ್ಥಿಕ ಎಂದು ಎರಡು ವಿಧ. ಒಂದನೆಯದರಲ್ಲಿ ಅವಗ್ರಹ, ಈಹಾ, ಅವಾಯ, ಧಾರಣ ಎಂದು ನಾಲ್ಕು ವಿಧ. ಇವನು ಮನುಷ್ಯನು ಎಂಬ ಜ್ಞಾನ ಒಂದನೆಯದು. ದಾಕ್ಷಿಣಾತ್ಯನಾಗಿರಬಹುದು ಎಂಬುದು ಎರಡನೆಯದು. ವೇಷಭಾಷಾದಿಗಳಿಂದ ದಾಕ್ಷಿಣಾತ್ಯನೇ ಎಂಬುದು ಮೂರನೆಯದು. ಅನಂತರ ಯಾವಾಗ ನೋಡಿದರೂ ಗುರುತು ಹಿಡಿಯುವ, ಸ್ಮರಣೆಗೆ ಕಾರಣವಾದ ಜ್ಞಾನ ಧಾರಣೆ. ಮತಿ ಶ್ರುತ ಮೊದಲಾದ ಐದು ವಿಧ ಜ್ಞಾನಗಳಲ್ಲಿ ಮೊದಲನೆಯ ಎರಡು ಪರೋಕ್ಷಗಳು. ಬಾಕಿ ಮೂರು ಜ್ಞಾನಗಳು ಪ್ರತ್ಯಕ್ಷಗಳು. ಇವು ಕೇವಲ ಆತ್ಮ ಸಾಪೇಕ್ಷಿಕವಾಗಿ ಬರುವಂತಹವು.

## ಪರೋಕ್ಷ

ಸ್ಮೃತಿ, ಪ್ರತ್ಯಭಿಜ್ಞಾ, ತರ್ಕ, ಅನುಮಾನ, ಆಗಮ ಎಂದು ಐದು ವಿಧ. ಇವುಗಳು ಜ್ಞಾನಸ್ವರೂಪಗಳಾಗಿರುವುದರಿಂದ ಆಯಾ ವಿಷಯದಲ್ಲಿರುವ ಅಜ್ಞಾನ ನಿವೃತ್ತಿಯನ್ನು ಫಲವಾಗಿ ತಿಳಿಯಬೇಕು. ಇಲ್ಲಿ ತರ್ಕವೆಂದರೆ ಸಾಧ್ಯಸಾಧನಗಳಿಗೆ ಇರುವ ಸಂಬಂಧವೆಂಬ ವ್ಯಾಪ್ತಿ ವಿಷಯದಲ್ಲಿ ಅಜ್ಞಾನ ನಿವೃತ್ತಕವಾದ ಊಹೆ ಎಂಬ ಜ್ಞಾನವು. ವಹ್ನಿಧೂಮಗಳಿಗಿರುವ ನಿಯತ ಸಂಬಂಧ ಜ್ಞಾನ. ಸಾಧನ ಜ್ಞಾನಜನ್ಯ. ಸಾಧ್ಯಜ್ಞಾನವೇ ಅನುಮಾನ ಪ್ರಮಾಣ. ಧೂಮದಿಂದ ವಹ್ನಿಜ್ಞಾನವು. ಇಲ್ಲಿ ಅನುಭವದಿಂದ ಸ್ಮೃತಿಯೂ, ಈ ಎರಡರಿಂದ ಪ್ರತ್ಯಭಿಜ್ಞೆಯೂ ಈ ಮೂರರಿಂದ ತರ್ಕವೂ ಈ ನಾಲ್ಕರಿಂದ ಅನುಮಾನವೂ ಉಂಟಾಗುವುವು.

ಆಪ್ತವಾಕ್ಯ ಮೂಲಕವಾಗಿ ಬರುವ ವಾಕ್ಯಾರ್ಥಜ್ಞಾನವು ಆಗಮ. ಪ್ರತ್ಯಕ್ಷದಿಂದ ಸಕಲ ವಿಷಯಗಳನ್ನು ಸಾಕ್ಷಾತ್ಕರಿಸಿ ಪರಮಹಿತೋಪದೇಶ ಮಾಡುವವನು ಆಪ್ತನು. ಪುಣ್ಯಪಾಪ, ಸ್ವರ್ಗನರಕ, ಮೋಕ್ಷ ಸಾಧನ ಮೊದಲಾದ ವಿಷಯಗಳ ನಿಶ್ಚಯವು ವಾಕ್ಯಾರ್ಥಜ್ಞಾನ.

## ಜ್ಞಾನವಿಭಾಗ

ಈ ಆತ್ಮಪ್ರಭೆಯೆಂಬ ಜ್ಞಾನಕ್ಕೆ ಆವರಣವುಂಟು. ಅದಕ್ಕೆ ಜ್ಞಾನಾವರಣ ಕರ್ಮವೆಂದು ಹೆಸರು. ಅದು ಆತ್ಮನಲ್ಲಿ ಇರುವ ಪುದ್ಗಲಾಣುಗಳ ಸಮೂಹ. ಇದಕ್ಕೆ ಮನೋಗತ ಇಂದ್ರಿಯಗತ ವಸ್ತುಗತಗಳಾದ ಪ್ರಸಿದ್ಧ ದೋಷಗಳು ಸಹಕಾರಿಗಳು. ಇಂತಹ ಆವರಣವು ವಿಶೇಷವಾಗಿ ದೂರವಾಗುವುದು ಕ್ಷಯವು. ಅಡಗಿರುವುದು ಉಪಶಮವು. ಆವರಣದ ಕೆಲವಂಶಕ್ಕೆ ಕ್ಷಯವೂ ಮತ್ತೆ ಕೆಲವಂಶಕ್ಕೆ ಉಪಶಮವೂ ಆದರೆ ಯಥೋಚಿತವಾಗಿ ಜ್ಞಾನವು ಉದಯಿಸುವುದು. ಇಂದ್ರಿಯ ಮನಸ್ಸುಗಳಿಂದುಂಟಾಗುವ ಜ್ಞಾನಕ್ಕೆ ಮತಿಯೆಂದು ಹೆಸರು. ಇಲ್ಲಿ ಇಂದ್ರಿಯ ಮನಸ್ಸುಗಳ ಪುರಸ್ಕಾರವಿದ್ದರೂ ಅವುಗಳಿಂದ ಬರುವ ಜ್ಞಾನವೆಲ್ಲ ಪರೋಕ್ಷ ರೂಪವಾದುದು.

ಮತಿಜ್ಞಾನಪೂರ್ವಕವಾಗಿ ಉಂಟಾಗುವ ವಿಮರ್ಶಾತ್ಮಕಜ್ಞಾನವು ಶ್ರುತ.

ಅನಂತರ ದ್ರವ್ಯಕ್ಷೇತ್ರ ಕಾಲಭಾವ ಸಂದರ್ಭ ಸನ್ನಿವೇಶಾದಿಗಳ ಮೂಲಕ ಪರಿಚ್ಛಿನ್ನವಾಗಿ ಬರುವ ಜ್ಞಾನವು ಅವಧಿ. ದೇವತೆಗಳಿಗೆ ಇಂತಹ ಅವಧಿಜ್ಞಾನವಿರುವುದು. ಅವಧಿ ಜ್ಞಾನಾವರಣಕರ್ಮದ ಕ್ಷಯೋಪಶಮದಿಂದ ವಿಶಿಷ್ಟ ತಪಸ್ವಿಗಳಲ್ಲಿಯೂ ಇದು ಉಂಟಾಗುವುದು.



ಮನಃಪರ್ಯಯಜ್ಞಾನಾವರಣವೆಂಬ ಪ್ರತಿಬಂಧಕವು ಶಾಂತವಾದರೆ ಪರಮನೋಗತ ವಿಷಯವನ್ನು ತಿಳಿಯುವ ಜ್ಞಾನವು ಉದಯಿಸುವುದು. ಇದೇ ಮನಃಪರ್ಯಯ. ಇದು ಅಲೌಕಿಕಪ್ರತ್ಯಕ್ಷ.

ತಪೋಬಲದಿಂದ ಸಕಲಜ್ಞಾನ ಪ್ರತಿಬಂಧಕಗಳು ಕ್ಷಯವಾದರೆ ಇತರ ಜ್ಞಾನಗಳೊಡನೆ ಸಕಲ ದ್ರವ್ಯಪರ್ಯಾಯ ವಿಷಯಕವಾಗಿ ಬರುವ ಜ್ಞಾನವು ಕೇವಲವು. ಇದೇ ಸಮ್ಯಕ್ ತತ್ತ್ವಜ್ಞಾನ.

ಈ ಪ್ರಕಾರ ಜೀವಾತ್ಮನ ಜ್ಞಾನವೆಂಬ ಪ್ರಭೆ ಸರ್ವತ್ರ ವ್ಯಾಪಿಸುವಂತಹ ಶಕ್ತಿಯುಳ್ಳದಾದುದರಿಂದ ಸಕಲ ಜ್ಞಾನಾವರಣಗಳು ಕ್ಷಯವಾದರೆ ಸರ್ವಜ್ಞನಾಗುವನು. ಜ್ಞಾನವೆಂಬ ಪ್ರಭೆ ಬಹುಸೂಕ್ಷ್ಮ, ನಿರತಿಶಯ ವೇಗವುಳ್ಳದ್ದು. ಸಾಮಾನ್ಯವಾದ ಸೂರ್ಯಪ್ರಭೆ ಸೂರ್ಯೋದಯವಾದ ಕ್ಷಣದಲ್ಲೇ ಅನಂತಕೋಟಿಯೋಜನ ಪ್ರದೇಶವನ್ನು ವ್ಯಾಪಿಸುವುದು. ವಿಚಿತ್ರ

ಶಕ್ತಿಯುಳ್ಳ ಜ್ಞಾನಪ್ರಭೆಯು ವಿಷಯದಲ್ಲಿ ಯಾವ ಸಂದೇಹಕ್ಕೂ ಕಾರಣ ವಿಲ್ಲ. ಜ್ಞಾನಶಕ್ತಿಯ ತಾರತಮ್ಯವು ಸರ್ವಲೋಕ ಪ್ರತ್ಯಕ್ಷ. ತಾರತಮ್ಯ ವಿಶ್ರಾಂತಿಯೇ ಪರ್ಯಾವಸಾನವೇ ಸರ್ವಜ್ಞತ್ವ. ಈ ಅಂಶವು ಸರ್ವಜ್ಞರನ್ನು ಅಂಗೀಕರಿಸುವ ಸರ್ವದರ್ಶನಗಳಿಗೂ ಸಮ್ಮತ.

## ಮೋಕ್ಷಸಾಧನ

'ಅರ್ಹತ್ಪ್ರವಚನ ಸಂಗ್ರಹ'ವೆಂಬ ಪರಮಾಗಮಸಾರದಲ್ಲಿ ನಿರೂಪಿಸಲ್ಪಟ್ಟಿರುವ ಸಮ್ಯಗ್ದರ್ಶನ ಸಮ್ಯಕ್ ಜ್ಞಾನ ಸಮ್ಯಕ್ಚಾರಿತ್ರವೆಂಬ ರತ್ನತ್ರಯವು ಮೋಕ್ಷ ಮಾರ್ಗವು. ಒಳ್ಳೆಯ ದರ್ಶನವೆಂದರೆ ಜಿನೋಪದಿಷ್ಟವಾದ ಆತ್ಮ ಮೊದಲಾದ ವಸ್ತುಗಳಲ್ಲಿ ದುರಭಿನಿವೇಶವಿಲ್ಲದಿರುವ ಶ್ರದ್ಧೆ. ಇಂತಹ ಶ್ರದ್ಧೆ ಜನ್ಮಾಂತರ ಸುಕೃತದಿಂದಲೂ ಮಹಾತ್ಮರ ಅನುಗ್ರಹದಿಂದಲೂ ಬರುವಂತಹುದು. ಒಳ್ಳೆಯ ಜ್ಞಾನವೆಂಬುದು ಜಿನೋಕ್ತತತ್ತ್ವಗಳಲ್ಲಿ ನಿಶ್ಚಯವು. ಅದು ಮತಿ, ಶ್ರುತ, ಅವಧಿ, ಮನಃಪರ್ಯಾಯ, ಕೇವಲ ಎಂದು ಐದು ಪ್ರಕಾರ. ಇವುಗಳ ನಿರೂಪಣೆ ಜ್ಞಾನವಿಭಾಗದಲ್ಲಿ ಆಗಿರುತ್ತದೆ.

## ಸಮ್ಯಕ್ಚಾರಿತ್ರ

ಸಂಸಾರ ಬಂಧವೆಂಬ ಕರ್ಮದ ಛೇದನದಲ್ಲಿ ಪ್ರಯತ್ನಪಡುವ ಹಿಂದೆ ಹೇಳಿದ ಶ್ರದ್ಧಾಜ್ಞಾನವುಳ್ಳ ಪುರುಷನು ಪಾಪಪರಿಹಾರಕ್ಕಾಗಿ ಇರಬೇಕಾದ ಒಳ್ಳೆಯ ನಡತೆಗೆ ಸಮ್ಯಕ್ಚಾರಿತ್ರವೆಂದು ಹೆಸರು. ಒಳ್ಳೆಯ ಕೆಲಸಗಳನ್ನು ಮಾಡುವುದಕ್ಕಿಂತಲೂ ಕೆಟ್ಟಕೆಲಸಗಳನ್ನು ಬಿಡುವುದು ಉತ್ತಮವೆಂದು ಈ ದರ್ಶನದ ಅಭಿಪ್ರಾಯ. ಅದು, ಅಹಿಂಸೆ,ಸೂನೃತ,ಅಸ್ತೇಯ.ಬ್ರಹ್ಮಚರ್ಯ ಅಪರಿಗ್ರಹವೆಂದು ಐದು ಪ್ರಕಾರ. ಇದೇ ಮಹಾವ್ರತ. ಇದರಲ್ಲಿರುವವರು ಮಹಾ ವ್ರತೀಯರೆಂದು ಜೈನರಲ್ಲಿ ಪ್ರಸಿದ್ಧಿ.

ಅಹಿಂಸೆ—ಹಿಂಸೆಯನ್ನು ಬಿಡುವುದು ; ಮನುಷ್ಯ ಪಶು ಪಕ್ಷಿ ಕ್ರಿಮಿ ಕೀಟಮೊದಲಾದ ಜಂಗಮಜಂತುಗಳಿಗೂ, ವೃಕ್ಷ ಗುಲ್ಮಲತಾ ಮೊದಲಾದ ಸ್ಥಾವರ ಜಂತುಗಳಿಗೂ ಪ್ರಾಣಾಪಾಯವನ್ನು ಅಬುದ್ಧಿ ಪೂರ್ವಕವಾಗಿಯೂ ಮಾಡದಿರುವುದು.

ಸೂನೃತವೆಂದರೆ—ಒಳ್ಳೆಯ ಮಾತನ್ನಾಡುವುದು, ಕೇಳುವ ಕಾಲದಲ್ಲಿ ಪ್ರಿಯವಾಗಿಯೂ ಪರಿಣಾಮದಲ್ಲಿ ಹಿತವಾಗಿಯೂ ಸತ್ಯವಾಗಿಯೂ ಇರುವ ವಚನವನ್ನು ಹೇಳುವುದು ; ಅಪ್ರಿಯವಾಗಿಯೂ ಅಹಿತವಾಗಿಯೂ ಇರುವ ಸತ್ಯವಚನವೂ ಅಸತ್ಯವಾಗುತ್ತದೆ.

ಅಸ್ತೇಯವೆಂದರೆ— ಪರಕೀಯ ವಸ್ತುಗಳನ್ನು ಕದಿಯದಿರುವುದು ; ಹಣವೆಂದರೆ ಮನುಷ್ಯರಿಗೆ ಹೊರಗಿರುವ ಪ್ರಾಣ ; ಅದನ್ನು ಅಪಹರಿಸಿದರೆ ಆ ಪ್ರಾಣಾಪಹಾರವಾಗುತ್ತದೆ.

ಬ್ರಹ್ಮಚರ್ಯವೆಂದರೆ ಸ್ತ್ರೀ ವಿಷಯೋಪಭೋಗವಿಲ್ಲದಿರುವುದು ; ಅದರಲ್ಲೂ ಮಾಡುವುದು. ಮಾಡಿಸುವುದು, ಅನುಮತಿ ಕೊಡುವುದೆಂದು ಮೂರು ಪ್ರಕಾರ. ಅದರಲ್ಲೂ ಮನಸಾ ವಾಚಾ ಕರ್ಮಣಾ ಎಂದು ಮೂರು ವಿಧ. ಅಂತು ಒಂಬತ್ತು ವಿಧವಾದ ದುರಾಚಾರವನ್ನು ಬಿಡುವುದು ಬ್ರಹ್ಮ ಚರ್ಯ.

ಅಪರಿಗ್ರಹವೆಂದರೆ ಜೀವ ಅಜೀವ ಬಾಹ್ಯ ಅಂತರ ಮೊದಲಾದ ಸಕಲ ವಸ್ತುಗಳನ್ನು ಪರಿತ್ಯಾಗಮಾಡುವುದು.

ಇಂತಹ ಸಚ್ಚರಿತದಿಂದ, ತತ್ತ್ವಜ್ಞಾನದಿಂದ ಜೀವನು ಕೇವಲಿ ಯಾಗುವನು. ಇವನೇ ಮಹಾತ್ಮನು, ತೀರ್ಥಂಕರನು, ಜೀವನ್ಮುಕ್ತನು, ಉಪದೇಶಕನು, ಆತ್ಯಂತಿಕ ಕರ್ಮಬಂಧದಿಂದ ಬಿಡಲ್ಪಡುವವನು. ಮೋಕ್ಷ ವೆಂಬ ಪದದ ಮುಖ್ಯಾರ್ಥವಿದು. ಇಂತಹ ಮೂರು ರತ್ನಗಳು ಸಮುಚ್ಚಿತ್ಯ ಒಟ್ಟುಗೂಡಿ ಮೋಕ್ಷಸಾಮ್ರಾಜ್ಯಕ್ಕೆ ಸಾಧಕವೆಂದು ಸಾರಾರ್ಥ.

## ಬಂಧ

ಜೀವರುಗಳಿಗೆ ಐದು ವಿಧ ಶರೀರಗಳಿರುವುವು—ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ, ಕಾರ್ಮಣ ಎಂದು. ಪ್ರತ್ಯಕ್ಷವಾದ ಮನುಷ್ಯ ಪಶು ಪಕ್ಷಿ ಶರೀರಗಳೇ ಒಂದನೆಯದು. ಜೀವದ್ರವ್ಯಕ್ಕೆ ಸಂಕೋಚ ವಿಕಾಸ ಸ್ವಭಾವವು ಪ್ರದೀಪ ಪ್ರಭೆಯಂತೆ ಅಂಗೀಕರಿಸುವುದರಿಂದ ಆಯಾ ದೇಹಪರಿಮಾಣ ವನ್ನು ಅದು ಅಂಗೀಕರಿಸಿರುವುದು.

ಹೇಗೆ ಬೇಕಾದರೆ ಹಾಗೆ ಸಂಕೋಚ ವಿಸ್ತಾರಗಳನ್ನು ಮಾಡಿಕೊಳ್ಳುವ

ಸೂಕ್ಷ್ಮಶರೀರವು ಎರಡನೆಯದು. ಅದಕ್ಕಿಂತಲೂ ಸೂಕ್ಷ್ಮವಾಗಿ, ಸೂಕ್ಷ್ಮ ವಸ್ತುಗಳನ್ನು ತಿಳಿಯುವುದಕ್ಕಾಗಿ ಸ್ವೀಕರಿಸಲ್ಪಡುವುದು ಮೂರನೆಯದು. ತೇಜೋಮಯವು ನಾಲ್ಕನೆಯದು, ಕರ್ಮವೆಂಬ ಅಣುಗಳ ಆವರಣವೇ ಐದನೆಯದು. ಎಲ್ಲವೂ ಕರ್ಮಾಧೀನವಾಗಿದ್ದರೂ ವಿಶೇಷಾಭಿಪ್ರಾಯದಿಂದ ನಾಮಭೇದವು. ಪೃಥಿವೀಮಯ ಶರೀರದ ಹಾಗೆ ಜಲಮಯ ತೇಜೋಮಯ ವಾಯುಮಯ ಶರೀರಗಳೂ ಆಯಾ ಜೀವಕರ್ಮಾನುಸಾರ ಉಂಟು. ಕರ್ಮ ಸಂಬಂಧವೆಂಬ ಬಂಧವು ಪ್ರಕೃತಿ, ಸ್ಥಿತಿ, ಅನುಭಾಗ ಪ್ರವೇಶವೆಂದು ನಾಲ್ಕು ವಿಧ. ಕರ್ಮಾಣುಗಳ ಸ್ವಭಾವದಿಂದ ಉಂಟಾಗುವ ಬಂಧವು ಪ್ರಕೃತಿ ಬಂಧ ; ಆ ಕರ್ಮಾಣುಗಳು ಆತ್ಮನೊಡನೆ ಬೆರೆತಿರುವ ಕಾಲಪರಿಮಿತಿಯ ಬಂಧವೇ ಸ್ಥಿತಿ ಬಂಧ ; ಕರ್ಮಪುದ್ಗಲಗಳ ಫಲದಾನ ಸಾಮರ್ಥ್ಯದಿಂದ ಬಂಧವಾಗುವುದೇ ಅನುಭಾಗ ಬಂಧ ; ಕರ್ಮಪರಮಾಣುಗಳು ಆತ್ಮಪ್ರವೇಶಗಳಲ್ಲಿ ಸೇರುವುದು ಪ್ರದೇಶಬಂಧ.

ಮಿಥ್ಯಾದರ್ಶನ ಅವಿರತಿ ಪ್ರಮಾದ ಕಷಾಯ ಯೋಗಗಳು ಬಂಧ ಹೇತುಗಳು. ಇದರಲ್ಲಿ ನಾಲ್ಕು, ಸ್ಥಿತಿ ಅನುಭಾವ ಬಂಧ ಹೇತುಗಳು. ಯೋಗವೆಂಬ ಐದನೆಯ ಪ್ರಕೃತಿ ಪ್ರದೇಶಬಂಧಗಳಿಗೆ ಹೇತು.

## ಮೋಕ್ಷ

ಯೋಗವೆಂದರೆ–ಶರೀರ ವಾಕ್ ಮನೋಮೂಲಕವಾಗಿ ಜೀವಪ್ರದೇಶ ಚಲನೆ; ಅದೇ ಆಸ್ರವದ್ವಾರ. ಒದ್ದೆಯಾದ ವಸ್ತ್ರವು ಗಾಳಿಯಿಂದ ಬರುವ ಧೂಳಿಯನ್ನು ಎಳೆದುಕೊಳ್ಳುವ ಹಾಗೂ, ಕಾದ ಕಬ್ಬಿಣ ನೀರನ್ನು ಕುಡಿಯುವ ಹಾಗೂ, ಜೀವನು ಶುಭಯೋಗ ಮೂಲಕ ಪುಣ್ಯಪುದ್ಗಲವನ್ನೂ ಅಶುಭಯೋಗ ಮೂಲಕ ಪಾಪಪುದ್ಗಲವನ್ನೂ ಎಳೆದುಕೊಂಡು ಬೆರೆಯುವನು. ಅಹಿಂಸಾದಿ ಶುಭಯೋಗವು ಶಾರೀರವು ; ಸತ್ಯಮಿತಹಿತಭಾಷಣಾದಿಗಳು ವಾಚಕವು. ಪಂಚಪರಮೇಷ್ಠಿಭಕ್ತಿತಪಸ್ಸು ಶ್ರುತವಿನಯಾದಿಗಳು ಮಾನಸವು. ಅರ್ಹತ್, ಮುನಿ, (ಸಿದ್ಧ) ಆಚಾರ್ಯ, ಉಪಾಧ್ಯಾಯ, ಸಾಧು ಇವರು ಪಂಚಪರಮೇಷ್ಠಿಗಳು. ವಿಪರೀತ ಯೋಗವು ಅಶುಭವು. ಇಂಥ ಶುಭಾಶುಭ ಯೋಗಗಳಿಂದ ಸೂಕ್ಷ್ಮರೂಪಪುದ್ಗಲಗಳು ಬಂದು ಪುಣ್ಯಪಾಪಾಣುಗಳಾಗಿ

ಪರಿಣಮಿಸಿ ಜೀವಪ್ರದೇಶದಲ್ಲಿ ಕ್ಷೀರನೀರ ನ್ಯಾಯದಿಂದ ಮಿಶ್ರವಾಗುವುವು. ಇಂಥ ಆಸ್ರವವೆಂಬ ಯೋಗದ್ವಾರವನ್ನು ತಡೆಯುವುದೇ ಸಂವರವು, ಕಾಯ ವಾಙ್ಮನೋನಿಗ್ರಹವು. ಸಂಚಿತ ಕರ್ಮಗಳನ್ನು ತಪಸ್ಸು ಮೊದಲಾದ ಕಾಯ ಕ್ಲೇಶದಿಂದ ಜರಿಸುವುದೇ ನಿರ್ಜರೆ. ನಿರೋಧದಿಂದ ಹೊಸ ಕರ್ಮಬಂಧ ವಿಲ್ಲ. ಹೀಗೆ ನಿರೋಧ ನಿರ್ಜರೆಗಳಿಂದ ಆತ್ಯಂತಿಕ ಕರ್ಮಕ್ಷಯವಾದರೆ ಮುಕ್ತ ನಾಗುವನು. ಕರ್ಮಬಂಧದಿಂದ ಮುಕ್ತನಾಗುವುದೇ ಮೋಕ್ಷಶಬ್ದದ ಮುಖ್ಯಾರ್ಥ. ಮೋಕ್ಷಶಾಸ್ತ್ರಗಳಲ್ಲಿ ಆಸ್ರವಸಂವರ ನಿರ್ಜರ ಇವುಗಳ ಸ್ವರೂಪವನ್ನು ವಿಶದಪಡಿಸಿ ಆಸ್ರವ ಸಂವರ ನಿರ್ಜರೆಗಳೇ ಬಂಧಮೋಕ್ಷ ಕಾರಣವು, ಶಾಸ್ತ್ರ ಸಾರಾಂಶವೆಂದು ನಿರ್ಣಯವಿರುವುದು—

ಆಶ್ರವೋ ಭವಹೇತುಃಸ್ಯಾತ್ಸಂವರೋ ಮೋಕ್ಷಕಾರಣಮ್
ಇತೀಯಮಾರ್ಹತೀ ದೃಷ್ಟಿ : ಅನ್ಯದಸ್ಯಾಃ ಪ್ರಪಞ್ಚನಮ್ ॥

ಬಂಧವು ಘಾತಿಕರ್ಮಚತುಷ್ಟಯ, ಅಘಾತಿಕರ್ಮ ಚತುಷ್ಟಯ ಎಂದು ಎಂಟು ವಿಧವೆಂದು ಮತ್ತೊಂದು ವಿಭಾಗವಿರುವುದು. ಜೀವನಿಗೆ ಸ್ವಾಭಾವಿಕವಾಗಿರುವ ಜ್ಞಾನದರ್ಶನವೀರ್ಯ ಸುಖಗಳನ್ನು ತಡೆಮಾಡುವ ಕರ್ಮಗಳು ನಾಲ್ಕು. ಶರೀರಸಂಸ್ಥಾನ, ಅದರಲ್ಲಿ ಅಭಿಮಾನ, ಅದರ ಸ್ಥಿತಿ, ತತ್ಪ್ರಯುಕ್ತ ಸುಖದುಃಖಾನುಭವಗಳಿಗೆ ಕಾರಣವಾಗಿರುವುವು ನಾಲ್ಕು. ಅಂತೂ ಎಂಟು ಕರ್ಮಗಳು.

ಇಲ್ಲಿ ಹಿಂದೆ ಪ್ರಸಕ್ತವಾದ ಪಂಚಪರಮೇಷ್ಠಿಗಳಲ್ಲಿ ಅರ್ಹತ್ಪರಮೇ ಷ್ಠಿಯ ಸ್ವರೂಪವು ಇತರ ದರ್ಶನದೃಷ್ಟಿಗೆ ಬೇಕಾಗಿರುವುದರಿಂದ ಸ್ವಲ್ಪ ವಿವರಿಸಲ್ಪಡುವುದು. ಈ ಅರ್ಹತ್ಪರಮೇಷ್ಠಿ ಘಾತಿಕರ್ಮಚತುಷ್ಟಯದಿಂದ ನಿರ್ಮುಕ್ತನಾಗಿ ನಿರವಧಿಕ ಜ್ಞಾನವೀರ್ಯ ಸುಖವಂತನಾಗಿ ಪರಿಶುದ್ಧ ಶುಭದೇಹವನ್ನು ಪರಿಗ್ರಹಿಸಿ ಕೇವಲ ಲೋಕಾನುಗ್ರಹಕ್ಕಾಗಿರುವನು. ಇತರ ದರ್ಶನಗಳಲ್ಲಿ ಲೋಕಾನುಗ್ರಹಕ್ಕಾಗಿ ಕಪಿಲಾದಿ ಸಿದ್ಧರನ್ನೂ ಮುಕ್ತ ರನ್ನೂ ಅಂಗೀಕರಿಸಿರುವರು. ಈ ಅರ್ಹತ್ಪರಮೇಷ್ಠಿಯೇ 'ಣಮೋ ಅರು ಹಂತಾಣಂ' ಎಂಬ ಮಂತ್ರಕ್ಕೆ ಮುಖ್ಯಗೋಚರವಾಗಿರುವವನು. ಪೂಜ್ಯ ವಾಚಕ ಅರ್ಹತ್ಪದಕ್ಕೆ ಇವರೇ ಮುಖ್ಯಾರ್ಥವು. ಇವರ ಧ್ಯಾನವೇ ಆಚಾರ್ಯ ಭಕ್ತಿಯಲ್ಲಿ ಸೇರಿ ಸಕಲ ಶುಭಕ್ಕೂ ಕಾರಣವೆಂದು ಸಂಪ್ರದಾಯ.

ಈ ಪ್ರಕಾರ ಬಂಧವಿಮುಕ್ತನಾದ ಜೀವನು ಮಣ್ಣಿನಿಂದ ಮೆತ್ತಲ್ಪಟ್ಟ ಸೋರೆಕಾಯಿ ನೀರಿನ ತಳದಲ್ಲಿದ್ದು ಕ್ರಮವಾಗಿ ಮಣ್ಣು ಕರಗಿಹೋದರೆ ಮೇಲಕ್ಕೆ ಬರುವ ಹಾಗೆ ಊರ್ಧ್ವಗತಿಯಿಂದ ಲೋಕದ ತುತ್ತತುದಿಗೆ ಹೋಗಿ ಯಾವತ್ಕಾಲವೂ ಸ್ವಾಭಾವಿಕ ವಿಶಾಲ ಸುಖಾನುಭವದಲ್ಲಿರುವನು.

ಈ ದರ್ಶನದಲ್ಲಿ ತತ್ವಜ್ಞಾನವು ಮುಖ್ಯವಾದರೂ ತಪಸ್ಸೆಂಬ ಕರ್ಮಕ್ಕೆ ಕಾಯಕ್ಲೇಶಕ್ಕೆ ಪ್ರಾಧಾನ್ಯವೆಂದು ಸೌಗತಾಭಿಪ್ರಾಯಕ್ಕೆ ಪ್ರತಿಪಕ್ಷವಾದ ಅಭಿಪ್ರಾಯ.

ಈ ಮತದಲ್ಲಿ ಪಂಚಸಿದ್ಧಾಂತಗಳೆಂಬ ಜೋತಿಶ್ಶಾಸ್ತ್ರ ಸಿದ್ಧಾಂತಗಳಲ್ಲಿ ಒಂದು ಸಿದ್ಧಾಂತದ ಪ್ರಕಾರ ಭೂಗೋಳ ಖಗೋಳ ಚಂದ್ರ ಸೂರ್ಯಗ್ರಹ ನಕ್ಷತ್ರ ಸಂಚಾರದಲ್ಲೂ, ಎರಡು ಸೂರ್ಯ ಎರಡು ಚಂದ್ರ ಇತ್ಯಾದಿ ವಿಚಾರ ದಲ್ಲೂ ಅತಿ ವಿಸ್ತರವಿರುವುದಾದರೂ ಆಧುನಿಕ ಸಂಸ್ಕಾರಕ್ಕೆ ಅನಾವಶ್ಯಕ ವೆಂದು ಅದರಲ್ಲಿ ಪ್ರವರ್ತಿಸಲಿಲ್ಲ, ಮುಖ್ಯವಾಗಿ ದರ್ಶನ ಸ್ವರೂಪಕ್ಕೂ ಅನುಷ್ಠಾನಕ್ಕೂ ಇಷ್ಟು ಜ್ಞಾನವು ಸಾಕೆಂದು ಮಂಗಳವು.

---



# ೬ ನೆಯ ಅಧ್ಯಾಯ

## ಯೋಗದರ್ಶನ

### ಸಂಪ್ರದಾಯ

ಯೋಗದರ್ಶನಕ್ಕೆ ಪತಂಜಲಿ ಮಹರ್ಷಿಗಳು ಸೂತ್ರಕಾರರಾದುದರಿಂದ ಪಾತಂಜಲದರ್ಶನವೆಂದು ಪ್ರಸಿದ್ಧಿ ಬಂದಿದೆ. ಇದಕ್ಕೆ ಮೂಲಪುರುಷರು ಹಿರಣ್ಯಗರ್ಭರೆಂಬ ಯೋಗೀಶ್ವರರು. ಅವರ ಆಗಮವನ್ನನುಸರಿಸಿ ಸಂಪ್ರದಾಯ ಪರಂಪರೆಯಿಂದ ಪತಂಜಲಿಯೂ ಪ್ರವರ್ತಕರಾದರು. ಹಿರಣ್ಯಗರ್ಭನೇ ಯೋಗ ಸಿದ್ಧಾಂತಕ್ಕೆ ಪ್ರಥಮ ಪ್ರವರ್ತಕನೆಂದು ಯಾಜ್ಞವಲ್ಕ್ಯರು ಹೇಳಿರುವರು. ಮತ್ತು ಜೀವಾತ್ಮ ಪರಮಾತ್ಮರ ಸಂಯೋಗವೇ ಯೋಗವೆಂದೂ ಜೀವಾತ್ಮ ಪರಮಾತ್ಮರ ಸಾಮ್ಯದರ್ಶನವೇ ಸಮಾಧಿಯೆಂದೂ ಯೋಗಸಮಾಧಿ ಪದಗಳ ಅರ್ಥವನ್ನು ನಿರೂಪಿಸಿರುವರು. ಇದರಿಂದ ಜೀವಾತ್ಮ ಪರಮಾತ್ಮ ಭೇದ ಸಿದ್ಧಾಂತವಿದೆಂದೂ ಜೀವಾತ್ಮರು ಪರಮಾತ್ಮ ಸಮರಾಗಿ ಮೋಕ್ಷದಲ್ಲಿರುವರೆಂದೂ ನಿರ್ಣಯವಾಗುವುದು. ಜೀವಾತ್ಮನು ಸರ್ವ ಪ್ರಪಂಚಸಂಬಂಧ ನಿವೃತ್ತಿಯನ್ನು ಮಾಡಿಕೊಂಡು ತನ್ನ ಸ್ವರೂಪದಲ್ಲಿ ಶಾಶ್ವತನಾಗಿ ನಿಲ್ಲುವುದೇ ಕೈವಲ್ಯವೆಂಬ ಮೋಕ್ಷವೆಂದೂ ಪ್ರಪಂಚ ಸಂಬಂಧ ನಿವೃತ್ತಿಯನ್ನು ಸಾಧಿಸುವುದೇ ಯೋಗವೆಂದೂ ಈಶ್ವರನು ಇದಕ್ಕೆ ಸಹಾಯವಾಗಿರುವನೆಂದೂ ಪತಂಜಲಿಯ ಅಭಿಪ್ರಾಯವಾಗಿರುವುದು. ಯಾವ ದರ್ಶನವಾದರೂ ಕಾಲಕ್ರಮದಲ್ಲಿ ಅಭಿಪ್ರಾಯ ಭೇದವನ್ನು ಹೊಂದುವುದೆಂದು ಪುನಃ ಪುನಃ ಹೇಳಬೇಕಾಗಿಲ್ಲ. ಅನಂತರ ವಾರ್ಷಗಣ್ಯ, ವ್ಯಾಸದೇವ ಮೊದಲಾದವರು ಇದನ್ನು ವಿಸ್ತರಿಸಿದವರು.

ವಿಜ್ಞಾನಭಿಕ್ಷುವೆಂಬ ಆಧುನಿಕ ವಿದ್ವಾಂಸರು ಸಾಂಖ್ಯ ಮತ್ತು ಯೋಗ ದರ್ಶನಗಳಲ್ಲಿ ಬಹು ಗ್ರಂಥಗಳನ್ನು ರಚಿಸಿ ವಿಚಿತ್ರ ರೀತಿಯಲ್ಲಿ ನಿರೂಪಿಸಿರುವರು. ಆದರೂ ಯಾವ ಪ್ರಾಚೀನ ದಾರ್ಶನಿಕ ಸಂಪ್ರದಾಯದವರೂ ಈ ಮಾರ್ಗವನ್ನು ಪರಿಗ್ರಹಿಸಿರುವುದಿಲ್ಲ. ಅನುವಾದವನ್ನೂ ಮಾಡಲಿಲ್ಲ.

## ಉಪದೇಶಶಾಸ್ತ್ರ

ಈ ಯೋಗದರ್ಶನವು ಉಪದೇಶಶಾಸ್ತ್ರವೇ ಹೊರತು ಪರೀಕ್ಷಾ ಶಾಸ್ತ್ರವಲ್ಲ. ಪರೀಕ್ಷಾ ಶಾಸ್ತ್ರಗಳೆಂಬ ವಿಚಾರ ಶಾಸ್ತ್ರಗಳ ಪ್ರಾರಂಭದಲ್ಲಿ 'ಧರ್ಮಜಿಜ್ಞಾಸಾ, ಬ್ರಹ್ಮಜಿಜ್ಞಾಸಾ' ಎಂದು ವಿಚಾರವನ್ನು ಬೋಧಿಸುವ ಜಿಜ್ಞಾಸಾಪದ ಪ್ರಯೋಗವಿರುತ್ತದೆ. ಉಪದೇಶಶಾಸ್ತ್ರ ಪ್ರಾರಂಭದಲ್ಲಿ 'ಅನುಶಾಸನಂ' ಎಂಬ ಪದಪ್ರಯೋಗವಿರುತ್ತದೆ. ಆದುದರಿಂದಲೇ 'ಅಥ ಶಬ್ದಾನುಶಾಸನಂ' ಎಂದು ವ್ಯಾಕರಣ ಶಾಸ್ತ್ರವನ್ನು ಮಹಾ ಭಾಷ್ಯಕಾರರು ಪ್ರಾರಂಭಿಸಿರುವರು. ಅನುಶಾಸನವೆಂದರೆ ವೇದಭಾಷೆಯಲ್ಲಿ ಉಪದೇಶವೆಂದರ್ಥ. ಇದರಿಂದ ಗುರುಗಳು ಹೇಳಿದುದನ್ನು ಶಿಷ್ಯರು ವಿಶ್ವಾಸದಿಂದ ಕೇಳಬೇಕೇ ಹೊರತು ಅದು ಹೇಗೆ ಎಂದು ವಿಚಾರಿಸಬಾರದು ಎಂದು ಅಭಿಪ್ರಾಯ.

ಈ ಶಾಸ್ತ್ರದಲ್ಲಿ ಯೋಗೀಶ್ವರರ ಸಿದ್ಧಿಗಳೂ ಮಹಿಮೆಗಳೂ ಅತಿ ವಿಚಿತ್ರವಾಗಿ ಉಪದೇಶಿಸಲ್ಪಡುವುವು. ಸಿದ್ಧಪುರುಷರು ಇಲ್ಲಿಂದಲೇ ಚಂದ್ರಮಂಡಲವನ್ನು ಸ್ಪರ್ಶಮಾಡಬಹುದು; ಕಲ್ಲುಬಂಡೆಯಲ್ಲಿ ಮಾಯವಾಗಬಹುದು; ಹಿಮವತ್ಪರ್ವತಕ್ಕಿಂತಲೂ ಭಾರವಾಗಬಹುದು; ಹತ್ತಿಗಿಂತಲೂ ಹಗುರವಾಗಬಹುದು; ಈ ಪ್ರಪಂಚವನ್ನೇ ತಲೆಕೆಳಗುಮಾಡಬಹುದು; ಸಕಲ ಪ್ರಾಣಿಗಳ ಭಾಷೆಯನ್ನು ಕೇಳಿ ತಿಳಿದುಕೊಳ್ಳಬಹುದು; ಮುಖ್ಯವಾಗಿ ಮನಸ್ಸಿಗೆ ತೋರುವ ಸಕಲ ಸಿದ್ಧಿಗಳನ್ನೂ ಹೊಂದಬಹುದು ಇತ್ಯಾದಿ. ನಮ್ಮ ಪುರಾಣಗಳಲ್ಲಿ ಯೋಗೀಶ್ವರರ ಮಹಿಮೆಯನ್ನು ಅಪಾರವಾಗಿ ವಿವರಿಸಿರುವರು. ಅವೆಲ್ಲವೂ ಈ ಯೋಗಶಾಸ್ತ್ರದಲ್ಲಿರುವುವು. ಆದುದರಿಂದ ಯುಕ್ತಿಯಿಂದ ವಿಚಾರಮಾಡಲು ಈ ಶಾಸ್ತ್ರದಲ್ಲಿ ಅವಕಾಶವಿಲ್ಲ. ವ್ಯಾಕರಣ ಶಾಸ್ತ್ರದಲ್ಲೂ ಇದು ಸಾಧುಶಬ್ದ, ಇದು ಅಸಾಧುಶಬ್ದ ಎಂದು ಉಪದೇಶವೇ ವಿನಾ ಯುಕ್ತಿಗೆ ಅವಕಾಶವಿಲ್ಲ.

## ವೇದಾಂತಪರಿಗ್ರಹ

ಸಾಂಖ್ಯರು ಹೇಳುವಂತೆ ಈ ಸಿದ್ಧಾಂತದಲ್ಲೂ ಈ ಪ್ರಪಂಚಕ್ಕೆ ಪ್ರಧಾನವೆಂಬ ಮೂಲಪ್ರಕೃತಿಯೇ ಉಪಾದಾನಕಾರಣವು. ಎಂದರೆ ಭೂಪ

ಣಗಳಿಗೆ ಬಂಗಾರದಂತೆ ಪರಿಣಮಿಸುವ ಕಾರಣವು, ಈಶ್ವರನು ಅಕ್ಕಸಾಲಿಗನಂತೆ ನಿಮಿತ್ತಮಾತ್ರನೆಂದು ಸ್ಥಾಪಿಸಿರುವುದರಿಂದ ಇದು ವೇದಾಂತ ಸಿದ್ಧಾಂತವಲ್ಲ, ಆಗಮಸಿದ್ಧಾಂತವೆಂದು ಬ್ರಹ್ಮಸೂತ್ರದಲ್ಲಿ ನಿರಾಕರಿಸಲ್ಪಟ್ಟಿರುವುದು. ವೇದಾಂತಸಿದ್ಧಾಂತದಲ್ಲಿ ಬ್ರಹ್ಮನೆಂಬ ಪರಮೇಶ್ವರನೇ ಉಪಾದಾನಕಾರಣವು, ನಿಮಿತ್ತ ಕಾರಣವು ಸಹ ಎಂದು ಅಭಿಪ್ರಾಯವಿರುವುದು. ಕೆಲವು ಭಾಷ್ಯಕಾರರ ರೀತಿಯಿಂದ ಮೂಲಪ್ರಕೃತಿಯೇ ಉಪಾದಾನಕಾರಣವೆಂದು ವೇದಾಂತ ತಾತ್ಪರ್ಯವನ್ನು ಹೇಳಿದರೂ ಸ್ವತಂತ್ರ ಪ್ರಕೃತಿ ಕಾರಣವಲ್ಲ. ಪರಮೇಶ್ವರಪರತಂತ್ರವಾದ ಪ್ರಕೃತಿ ಕಾರಣವೆಂದು ನಿರ್ಣಯಿಸಿರುವುದರಿಂದ ಸ್ವತಂತ್ರ ಪ್ರಕೃತಿ ಕಾರಣವಾದುವು ವೇದಾಂತವಿರುದ್ಧವೆಂದು ಅಭಿಪ್ರಾಯವಿರುವುದು.

ಬೌದ್ಧ ಆರ್ಹತ ನಿರ್ಗ್ರಂಥ ಪಾಶುಪತ ಪಂಚರಾತ್ರ ಮೊದಲಾದ ಆಗಮಗಳು ವೇದೋಕ್ತ ಪ್ರಾಣಿಹಿಂಸಾಮಯವಾದ ಯಾಗಾದಿಗಳಿಗೆ ಅವಕಾಶವನ್ನು ಕೊಡುವುದಿಲ್ಲ. ವೇದವಿರುದ್ಧವೆಂದು ಆಗಮಸಂಪ್ರದಾಯವನ್ನು ಪೂರ್ವ ಮೀಮಾಂಸಕರು ಬಹಿಷ್ಕರಿಸಿರುವರು. ಅದೇ ಮಾರ್ಗದಲ್ಲಿ ವೇದಾಂತಿಗಳೂ ವೇದಾಂತಾಭಿಪ್ರಾಯವಿರುದ್ಧವೆಂದು ಬಹಿಷ್ಕರಿಸಿರುವರು. ಪಾಂಚರಾತ್ರ ಮೊದಲಾದ ಕೆಲವು ಆಗಮಗಳು ವೇದಾಂತವಿರುದ್ಧವಲ್ಲವೆಂದು ಕೆಲವರಿಂದ ಪರಿಗ್ರಹಿಸಲ್ಪಟ್ಟಿರುವುವು. ಸರ್ವಾಗಮಗಳಿಗೂ ಪ್ರಾಮಾಣ್ಯವನ್ನು ಜಯಂತಭಟ್ಟಾಚಾರ್ಯರೇ ಮೊದಲಾದ ಕೆಲವು ಪಂಡಿತರು ಸೂಚಿಸಿರುವರು.

## ಸೇಶ್ವರ ಸಾಂಖ್ಯ

ಪ್ರಾಯಶಃ ಈ ದರ್ಶನವು ಸಾಂಖ್ಯಪ್ರಕ್ರಿಯೆಯಲ್ಲಿ ಇರುವುದರಿಂದಲೂ ಈಶ್ವರನನ್ನಂಗೀಕರಿಸಿರುವುದರಿಂದಲೂ 'ಸಾಂಖ್ಯಪ್ರವಚನ' ಸೇಶ್ವರಸಾಂಖ್ಯ ಎಂದೂ ಇದಕ್ಕೆ ಹೆಸರು. ಸಾಂಖ್ಯರಿಗೂ ತಾರ್ಕಿಕರಿಗೂ ಮಧ್ಯಸ್ಥಮಾರ್ಗದಲ್ಲಿ ಭೇದಾಭೇದವನ್ನು ಅಂಗೀಕರಿಸಿರುವುದರಿಂದ ಒಂದು ದೃಷ್ಟಿಯಲ್ಲಿ ಅನೇಕಾಂತ ವಾದವಾಗುತ್ತದೆಂದು ಆರ್ಹತಮತನಿರೂಪಣಾನಂತರ ಇದಕ್ಕೆ ಅವಕಾಶ ಬಂದಿತು.

ಮತ್ತು ಪ್ರಪಂಚದ ಸಕಲ ವ್ಯಾಪಾರಗಳೂ ವಸ್ತುಸ್ವಭಾವವೆಂಬ ಕ್ರಿಯಾಶಕ್ತಿಯಿಂದ ನಡೆಯುವುದೆಂದು ಸಾಂಖ್ಯಾದಿಗಳ ಅಭಿಪ್ರಾಯ. ನಿರಂಕುಶ ಸ್ವತಂತ್ರನಾದ ಪರಮೇಶ್ವರನ ಇಚ್ಛಾಶಕ್ತಿಯಿಂದ ನಡೆಯುವು ದೆಂದು ಈಶ್ವರಾಗಮವಾದಿಗಳ ಅಭಿಪ್ರಾಯ. ಕರ್ಮವೆಂಬ ಸಂಸಾರ ಶಕ್ತಿಯಿಂದ ನಡೆಯುವುದೆಂದು ವೈದಿಕರ ಅಭಿಪ್ರಾಯ. ಈ ದರ್ಶನದಲ್ಲಿ ಸಂಸ್ಕಾರವೆಂಬ ಕರ್ಮವು ವರಣಭೇದದಂತೆ ಪ್ರತಿಬಂಧಕನಿವಾರಣೆಯನ್ನು ಮಾತ್ರ ಮಾಡುವುದೆಂದೂ ಚೇತನನ ಪ್ರಯತ್ನವಿಲ್ಲದೆ ಅಚೇತನವ್ಯಾಪಾ ರವು ಪ್ರಪಂಚದಲ್ಲಿ ಯಾವುದೂ ಇಲ್ಲವಾದುದರಿಂದ ಈಶ್ವರನ ಸಂಕಲ್ಪ ಮೂಲಕ ವಸ್ತುಸ್ವಭಾವದಿಂದ ಸಕಲ ವ್ಯಾಪಾರವೂ ನಡೆಯುವುದೆಂದೂ ಸಾಮರಸ್ಯವು ಇರುವುದು. ವರಣವೆಂದರೆ ಗದ್ದೆಗಳ ತೆವರು. ರೈತನು ಗದ್ದೆಗೆ ನೀರನ್ನು ಹಾಯಿಸಬೇಕಾದರೆ ತೆವರನ್ನು ಮಾತ್ರ ತೆಗೆಯುತ್ತಾನೆ. ನೀರು ತನ್ನ ಸ್ವಭಾವದಿಂದಲೇ ಗದ್ದೆಯನ್ನು ಹಾಯುತ್ತದೆ. ಇದೇ ವರಣ ಭೇದ.

## ಸಾಂಖ್ಯಯೋಗ

ಈ ಯೋಗದರ್ಶನದಲ್ಲಿ ತತ್ತ್ವಜ್ಞಾನವು ಆವಶ್ಯಕವಾಗಿದ್ದರೂ ಫಲಸಂಗ ಕರ್ತೃತ್ವತ್ಯಾಗಪೂರ್ವಕವಾದ ಶ್ರೌತಸ್ಮಾರ್ತಕರ್ಮಗಳಿಂದ ಪರಮೇಶ್ವರ ಪ್ರೀತಿಯನ್ನೂ ಅನುಗ್ರಹವನ್ನೂ ಸಂಪಾದಿಸಬೇಕೆಂದು ನಿರ್ಣಯಿಸಿರುವುದರಿಂದ ಈಶ್ವರಭಕ್ತಿಗೆ ಪ್ರಾಧಾನ್ಯವುತೋರುತ್ತದೆ. ಸಾಂಖ್ಯ ಶಾಸ್ತ್ರದಿಂದ ತತ್ತ್ವಜ್ಞಾನವನ್ನು ಸಂಪಾದಿಸಿ. ಯೋಗಶಾಸ್ತ್ರದಿಂದ ಭಕ್ತಿ ಪೂರ್ವಕ ಕರ್ಮಾನುಷ್ಠಾನವನ್ನು ಮಾಡಿ, . ಮೋಕ್ಷವೆಂಬ ಸರ್ವದುಃಖ ನಿವೃತ್ತಿಯನ್ನು ಹೊಂದಬೇಕೆಂಬ ಅಭಿಪ್ರಾಯದಿಂದ ಸಾಂಖ್ಯವನ್ನೂ ಯೋಗ ವನ್ನೂ ಕೂಡಿಸಿ ವ್ಯವಹರಿಸಿರುತ್ತಾರೆ, ಆದುದರಿಂದ ಅದು ಜ್ಞಾನಶಾಸ್ತ್ರ, ಇದು ಕರ್ಮಶಾಸ್ತ್ರವೆಂದು ಕೆಲವರ ನಿರ್ಣಯ. ಇದರಿಂದಲೂ ಜ್ಞಾನಕರ್ಮ ವಿರೋಧವು ಶಮನವಾಗುವುದು.

ಜ್ಞಾನವಿಲ್ಲದೆ ಕರ್ಮವು ಉಪಯೋಗವಿಲ್ಲ. ಕರ್ಮವಿಲ್ಲದೆ ಜ್ಞಾನವೂ ಉಪಯೋಗವಿಲ್ಲ. ಕುರುಡನು ಕರ್ಮಶಕ್ತಿಯಿದ್ದರೂ ಜ್ಞಾನಶಕ್ತಿಯಿಲ್ಲ

ದುದರಿಂದಲೂ, ಕುಂಟನು ಜ್ಞಾನಶಕ್ತಿಯಿದ್ದರೂ ಕರ್ಮಶಕ್ತಿ ಇಲ್ಲದೇ ಹೋದುದರಿಂದಲೂ ಕಾಡುಗಿಚ್ಚಿನಲ್ಲಿ ದಗ್ಧರಾಗಬಹುದು. ಇಬ್ಬರೂ ಸೇರಿದರೆ ಅಪಾಯವನ್ನು ತಪ್ಪಿಸಿಕೊಂಡು ಊರು ಸೇರಬಹುದು. ಈ ಅಭಿಪ್ರಾಯವನ್ನು,

ಹತಂ ಜ್ಞಾನಂ ಕ್ರಿಯಾಹೀನಂ ಹತಾ ಚಾಜ್ಞಾನಿನಾಂ ಕ್ರಿಯಾ
ಅಪಶ್ಯನ್ನನ್ಧಕೋ ದಗ್ಧಃ ಪಶ್ಯನ್ನಪಿ ಚ ಪಙ್ಗುಕಃ ॥

ಎಂದು ಹೇಳುತ್ತಾರೆ.

## ಶಾಸ್ತ್ರಾರ್ಥ

ಈ ಪಾತಂಜಲ ಯೋಗಶಾಸ್ತ್ರದಲ್ಲಿ ಮೊದಲನೆಯ ಪಾದದಲ್ಲಿ ಯೋಗವೆಂಬ ಸಮಾಧಿಸ್ವರೂಪವನ್ನೂ, ಎರಡನೆಯದರಲ್ಲಿ ಸಮಾಧಿಯಿಂದ ಎದ್ದ ಸಮಯದಲ್ಲಿ ಮಾಡಬೇಕಾದ ತಪಸ್ಸು, ಪಾಠಪ್ರವಚನ, ಈಶ್ವರಭಕ್ತಿ ಮೊದಲಾದ ಕ್ರಿಯಾ ಯೋಗವೆಂಬ ಕರ್ತವ್ಯವನ್ನೂ ಅಹಿಂಸಾ ಮೊದಲಾದ ಯಮನಿಯಮಗಳನ್ನೂ ಯೋಗಕ್ಕೆ ಬೇಕಾದ ಬಾಹ್ಯಾಂಗಗಳನ್ನೂ ನಿರೂಪಿಸಿ, ಮೂರನೆಯ ಪಾದದಲ್ಲಿ ಸಂಯಮವೆಂಬ ಧಾರಣಾ, ಧ್ಯಾನ, ಸಮಾಧಿ ಎಂಬ ಅಂತರ ಅಂಗಗಳನ್ನೂ ಅದರ ಫಲವಾದ ವಿಭೂತಿಯೆಂಬ ಸಕಲ ಸಿದ್ಧಿಗಳನ್ನೂ ಹೇಳಿ ನಾಲ್ಕನೆಯದರಲ್ಲಿ ಸಮಾಧಿಸಿದ್ಧಿಯನ್ನೂ ಕೈವಲ್ಯವನ್ನೂ ನಿರೂಪಿಸಿರುವರು.

ಈ ದರ್ಶನದಲ್ಲಿ ನಿರೂಪಿಸಲ್ಪಡುವ ಅಷ್ಟಾಂಗಯೋಗವು ಸಕಲ ದರ್ಶನಗಳಿಗೂ ಬೇಕಾಗಿರುವುದು. ಎಲ್ಲರೂ ಧ್ಯಾನದಿಂದ ಆಯಾಯಾ ತತ್ತ್ವಸಾಕ್ಷಾತ್ಕಾರವನ್ನು ಸಂಪಾದಿಸಿ ಅಜ್ಞಾನ ನಿವೃತ್ತಿ ಮೂಲಕ ತಮ್ಮ ತಮ್ಮ ಸಿದ್ಧಾಂತ ಪ್ರಕಾರ ಪರಮಸುಖವನ್ನು ಹೊಂದಬೇಕೆಂದು ಅಭಿಪ್ರಾಯಪಡುವರು. ಆದುದರಿಂದ ಇಲ್ಲಿ ನಿರೂಪಿಸಲ್ಪಡುವ ಅಷ್ಟಾಂಗಯೋಗಸ್ವರೂಪವು ವಿಶದವಾಗಿ ತಿಳಿಯಲ್ಪಡತಕ್ಕದ್ದು ಬೇಕು.

## ಈಶ್ವರ

ಈ ಸಿದ್ಧಾಂತದಲ್ಲಿ ಈಶ್ವರನಿಗೆ ಪ್ರಪಂಚವನ್ನು ಕುರಿತು ನಿಮಿತ್ತ ಕಾರಣತ್ವವು ಅಂಗೀಕರಿಸಲ್ಪಟ್ಟಿರುವುದರಿಂದಲೂ ಈಶ್ವರಪ್ರಣಿಧಾನವೆಂಬ

ಈಶ್ವರ ಭಕ್ತಿ ಸಮಾಧಿಲಾಭಕ್ಕೆ ಸುಕರವಾಗಿಯೂ ಶೀಘ್ರವಾಗಿಯೂ ನಿಷ್ಪ್ರಮಾದವಾಗಿಯೂ ಸಾಧನವಾಗಿರುವುದರಿಂದಲೂ ಈಶ್ವರಸ್ವರೂಪ ನಿರೂಪಣವು ಮೊದಲು ಆವಶ್ಯಕ.

ಈಶ್ವರನಿಗೆ ಶುದ್ಧಸತ್ತ್ವಪ್ರಧಾನವಾದ ನಿರ್ಮಾಣಕಾಯವೆಂಬ ಅವತಾರ ಶರೀರವಿರುವುದು. ಬುದ್ಧಿ, ಮನಸ್ಸು, ಇಂದ್ರಿಯಗಳು ಜೀವಾತ್ಮರುಗಳಿಗೆ ಇರುವಂತೆಯೇ ಇರುವುವಾದರೂ ಶುದ್ಧಸತ್ತ್ವಪ್ರಧಾನವಾಗಿಯೇ ಇರುವುವು. ಅವುಗಳು ಇಲ್ಲದಿದ್ದರೆ ಅನುಗ್ರಹ ಉಪದೇಶ ಮೊದಲಾದುವುಗಳಿಗೆ ಅವಕಾಶವಿರಲಾರದು. ಆದರೆ ಅವುಗಳು ಜಗದನುಗ್ರಹೇಚ್ಛಾ ಮೂಲಕವೇ ಹೊರತು ಕರ್ಮಾಧೀನವಲ್ಲ. ಶುದ್ಧಸತ್ತ್ವಮಯವಾಗಿರುವುದರಿಂದ ರಜಸ್ತಮೋಗುಣಗಳ ಸಂಬಂಧದಿಂದ ಬರುವ ಭಾವಾಷ್ಟಕದಲ್ಲಿ ಸೇರಿದ ಅಧರ್ಮ, ಅಜ್ಞಾನ, ಅವೈರಾಗ್ಯ, ಅನೈಶ್ವರ್ಯ ಮೊದಲಾದ ಯಾವ ದೋಷವೂ ಸಂಬಂಧಿಸುವುದಿಲ್ಲ. ಆದುದರಿಂದಲೇ ಆವನಿಗೆ ಸದಾ ಸರ್ವಜ್ಞತ್ವ, ಪರಮಕೃಪೆ ಮೊದಲಾದ ಸಕಲ ಕಲ್ಯಾಣಗುಣಗಳೂ ಇರುವುವು. ಕ್ಲೇಶಕರ್ಮವಿಪಾಕಾಶಯಗಳಿಂದ ಸ್ವಲ್ಪವೂ ಸಂಬಂಧವಿಲ್ಲದಿರುವನು.

### ಕ್ಲೇಶಪಂಚಕ

ಕ್ಲೇಶವೆಂದರೆ ಕಷ್ಟ. ಅದು ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶವೆಂದು ಐದು ಪ್ರಕಾರ. ಅವಿದ್ಯೆಯೆಂದರೆ, ಅನಿತ್ಯವನ್ನು ನಿತ್ಯವೆಂದೂ, ಅಶುಚಿಯನ್ನು ಶುಚಿಯೆಂದೂ, ದುಃಖವನ್ನು ಸುಖವೆಂದೂ, ಅನಾತ್ಮನನ್ನು ಆತ್ಮನೆಂದೂ ತಿಳಿಯುವ ಭ್ರಾಂತಿ. ಅಸ್ಮಿತೆಯೆಂದರೆ ಬುದ್ಧಿ ಪುರುಷರನ್ನು ಒಂದಾಗಿ ತಿಳಿದುಕೊಂಡು ನಾನು ನನ್ನದು ಎಂಬ ಅಭಿಮಾನ, ಅಹಂಕಾರ, ಮಮಕಾರ. ರಾಗವೆಂದರೆ ಪ್ರವೃತ್ತಿಗೆ ಕಾರಣವಾದ ಆಶೆ. ದ್ವೇಷವೆಂದರೆ ನಿವೃತ್ತಿಗೆ ಕಾರಣವಾದ ಜಿಹಾಸೆ. ಅಭಿನಿವೇಶವೆಂದರೆ ಜರಾಮರಣ ಮೊದಲಾದ ಭಯ.

ಕರ್ಮವೆಂದರೆ ಸುಖದುಃಖಗಳಿಗೆ ಕಾರಣವಾದ ಪುಣ್ಯಪಾಪಗಳು. ಪಾಕವೆಂದರೆ ಸುಖದುಃಖರೂಪವಾದ ಕರ್ಮಫಲ. ಆಶಯವೆಂದರೆ ಪುಣ್ಯ

ಪಾಪಗಳ ಪ್ರವೃತ್ತಿಗೆ ಕಾರಣವಾದ ಸಂಸ್ಕಾರ. ಇಂತಹ ಕ್ಲೇಶಕರ್ಮವಿಪಾಕಾಶಯಗಳೆಂಬ ದೋಷಗಳು ಈಶ್ವರನಲ್ಲಿಲ್ಲ.

ಪ್ರಳಯಕಾಲದಲ್ಲಿ ಈಶ್ವರನ ಚಿತ್ತ ಮೊದಲಾದುವು ಲಯವಾದರೂ ಪೂರ್ವಪೂರ್ವವಾಸನಾವಾಸಿತವಾಗಿಯೇ ಸೃಷ್ಟಿಕಾಲದಲ್ಲಿ ಪ್ರಕೃತಿಯಿಂದ ಬೇರೆ ಚಿತ್ತ ಮೊದಲಾದುವುಗಳು ಉದಯಿಸುವುವು. ಇಂತಹ ಸಾತ್ತ್ವಿಕ ದೇಹೇಂದ್ರಿಯಾದಿಗಳಿಂದ ಸದಾ ಆನಂದಾನುಭವವುಳ್ಳವನಾಗಿರುವನು. ಧರ್ಮಜ್ಞಾನ ಐಶ್ವರ್ಯಗಳೆಂಬ ಭಾವಗಳು ಸಂಪೂರ್ಣವಾಗಿರುವುವು. ಜೀವಾತ್ಮರುಗಳ ಸಂಸಾರ ಮೋಕ್ಷಗಳು ಅವರವರ ಕರ್ಮಾನುಸಾರವಾಗಿ ಇವನ ಸಂಕಲ್ಪಾಧೀನವಾಗುವುವು. ಸಕಲ ಪುರುಷಾರ್ಥಗಳನ್ನು ಸಂಕಲ್ಪ ಮಾತ್ರದಿಂದಲೇ ಕೊಡಲು ಇವನು ಶಕ್ತನಾಗಿರುತ್ತಾನೆ. ಇವನೇ ಪರಮ ಸಿದ್ಧನು, ಪರಮ ಯೋಗೀಶ್ವರನು, ಪರಮಪುರುಷನು, ಸರ್ವಕರ್ಮ ಸಮಾರಾಧ್ಯನು.

## ಜಗದನುಗ್ರಹ

ಲೋಕದಲ್ಲಿ ಯಾರಿಗೆ ಯಾವುದು ಇಷ್ಟವೋ ಅದೇ ಅವರಿಗೆ ಪ್ರಯೋಜನ. "ಮನಃಪ್ರೀತಿಕರಃ ಸ್ವರ್ಗಃ ನರಕಸ್ತದ್ವಿಪರ್ಯಯಃ" ಎಂಬ ಹಾಗೆ ಈಶ್ವರನಿಗೆ ಪ್ರಪಂಚಾನುಗ್ರಹವೇ ನಿರತಿಶಯಪ್ರಿಯವಾಗಿರುವುದರಿಂದ ಅದೇ ಅವನಿಗೆ ಪ್ರಯೋಜನ. ಪ್ರಯೋಜನವಿಲ್ಲದೆ ಜಗತ್ಕರ್ತನಾಗುವುದಿಲ್ಲ. ಬೀಜಾಂಕುರ ನ್ಯಾಯದಿಂದ ಪ್ರವಹಿಸುತ್ತಿರುವುದರಿಂದ ಈ ಪ್ರಪಂಚಕ್ಕೆ ಆದ್ಯಂತಗಳಿಲ್ಲ. ಸರ್ವಪ್ರಾಣಿಗಳಿಗೂ ಸರ್ವದಾ ಅವನೇ ಗುರುವಾಗಿರುವನು. ಅವನ ಹೆಸರು ಪ್ರಣವವು, ಓಂಕಾರವು. ಆಶ್ರಿತ ಪ್ರಾರ್ಥನೆಯನ್ನೆಲ್ಲಾ ಅಂಗೀಕರಿಸುವ ಅರ್ಥವನ್ನು ಕೊಡುವ ಪದವಿದು. ಅವನ ಸ್ವಭಾವವು ಅದೇ ಆದುದರಿಂದ ಅವನ ಸೇವೆ, ಬಹು ಮುಖ್ಯವಾದ ಕರ್ತವ್ಯ. ಆದುದರಿಂದಲೇ ಸಕಲಪುರುಷಾರ್ಥಸಿದ್ಧಿ ಲಭಿಸುವುದು.

## ಭಾಗವತಧರ್ಮ

ಸಾಂಖ್ಯಯೋಗವೆಂಬ ಈಗಿನ ಭಗವದ್ಗೀತಾ ಸಿದ್ಧಾಂತವೇ ಈ ಪಾತಂಜಲ ಯೋಗಸಿದ್ಧಾಂತವಾಗುವುದು. ಈಶ್ವರನಿಗೆ ಶುದ್ಧಸತ್ತ್ವಮಯವಾದ

ದೇಹೇಂದ್ರಿಯಾದಿಗಳಿದ್ದರೂ ಅದು ಮಹಾತ್ಮರಾದವ್ಯಾಸಾದಿಮಹರ್ಷಿಗಳಿಗೆ ಗೋಚರವೇ ವಿನಾ ನಮ್ಮ ಇಂದ್ರಿಯುಗಳಿಗೆ ಗೋಚರವಲ್ಲ. ಅಂತಹ ಈಶ್ವರ ನನ್ನು ನಾವು ಯಾವ ರೂಪ ಆಕಾರ ಮೂರ್ತಿ ಮೂಲಕ ಪೂಜಿಸಬೇಕು, ಆರಾಧಿಸಬೇಕು, ಸರ್ವಕರ್ಮಗಳನ್ನೂ ಸಮರ್ಪಣಮಾಡಬೇಕು, ಸರ್ವ ಕರ್ಮಗಳ ಕರ್ತೃತ್ವವನ್ನೂ ಫಲವನ್ನೂ ಸಂಗವನ್ನೂ ಈಶ್ವರನಲ್ಲಿಡಬೇಕೆಂದರೆ ಇದಕ್ಕಾಗಿಯೆ ಭಗವದ್ಗೀತೆಯಲ್ಲಿವಿಶ್ವರೂಪೋಪದೇಶವಿರುವುದು. ಆ ಅಧ್ಯಾಯದಲ್ಲಿ ವಿಶ್ವಮೂರ್ತೇ, ವಿಶ್ವರೂಪ, ಜಗನ್ನಿವಾಸ ಮೊದಲಾದ ಸಂಬೋಧನೆಗಳಿರುತ್ತವೆ. ಇಲ್ಲಿ 'ಪಶ್ಯಾದಿ ದೇವಾಂಸ್ತವ ದೇವ ದೇಹೇ' ಮೊದಲಾದ ಶ್ಲೋಕಗಳಲ್ಲಿ ಪ್ರಪಂಚದಲ್ಲಿರುವ ಸಕಲ ವಸ್ತುಗಳೂ ಭಗವಂತನ ದೇಹ ಮೂರ್ತಿ ಶರೀರ ರೂಪವೆಂದು ಸ್ಪಷ್ಟವು. ಉಪನಿಷತ್ತುಗಳಲ್ಲೂ ಭಗವಚ್ಛಾಸ್ತ್ರಗಳಲ್ಲೂ ಸಕಲ ವಸ್ತುವೂ ಭಗವಂತನ ಶರೀರವೆಂದು ಸ್ಪಷ್ಟವಾಗಿರುವುದು. ಪ್ರಪಂಚಕ್ಕೂ ಪರಬ್ರಹ್ಮನಿಗೂ ಶರೀರಾತ್ಮಭಾವ ಸಂಬಂಧವೇ ವೇದಾಂತದರ್ಶನದ ಮುಖ್ಯ ಮೂಲತತ್ತ್ವವು.

ನಮಗೆ ಪ್ರತ್ಯಕ್ಷವಾದ ಈ ಪ್ರಪಂಚವೆಂಬ ಮೂರ್ತಿಮೂಲಕವೇ ಭಗವಂತನ ಪೂಜೆಯನ್ನು ಮಾಡಬೇಕು. ಒಬ್ಬ ಮಹಾರಾಜನಿಗೆ ಅಥವಾ ರಾಜಾಧಿಕಾರಿಗೆ ಮರ್ಯಾದೆಯನ್ನೂ, ಉಪಚಾರವನ್ನೂ ಮಾಡಬೇಕಾದರೆ ಪುಷ್ಪಹಾರವನ್ನು ಅವನ ಶರೀರವಾದ ಕಂಠದಲ್ಲಿ ಸಮರ್ಪಿಸುತ್ತಾರೆ. ಅಥವಾ ಅದಕ್ಕೂ ಆವರಣವಾಗಿರುವ ಅಂಗಿಯ ಮೇಲೆ ಸಮರ್ಪಿಸುತ್ತಾರೆ. ಇದರಿಂದ ರಾಜನ ಅಥವಾ ರಾಜಪುರುಷನ ಆತ್ಮನು ಸಂತೋಷಪಡುತ್ತಾನೆ. ಹೀಗೆ ಅಪಚಾರ ವಿಷಯದಲ್ಲೂ ತಿಳಿಯಬೇಕು. ಒಬ್ಬ ಮನುಷ್ಯನನ್ನು ಸಂತೋಷಪಡಿಸಬೇಕಾದರೆ ಅವನ ದೇಹವು ಹೇಗೆ ಮಾರ್ಗವೋ ಹಾಗೆ ಪರಮೇಶ್ವರನನ್ನು ಆರಾಧಿಸಬೇಕಾದರೆ, ಸಂತೋಷಪಡಿಸಬೇಕಾದರೆ ಪ್ರಪಂಚವೇ ಮಾರ್ಗ ಎಂದು ಉಪದೇಶಿಸುವುದಕ್ಕಾಗಿಯೇ ವಿಶ್ವರೂಪಾಧ್ಯಾಯವು ಭಗವದ್ಗೀತೆಯಲ್ಲಿ ಮುಖ್ಯವಾಗಿ ಮಧ್ಯಭಾಗದಲ್ಲಿ ಸೇರಿರುವುದು.

ಈ ಅಭಿಪ್ರಾಯವನ್ನು ದೃಢವಾಗಿ ಶ್ರದ್ಧೆಯಿಂದ ನಂಬಿ ಭಗವಂತನಲ್ಲಿ ಭಕ್ತಿಯನ್ನು ಮಾಡತಕ್ಕವರು ಪ್ರಪಂಚಮೂಲಕವಾಗಿ ಭಕ್ತಿಯನ್ನು ಮಾಡಬೇಕು. ಈ ಪ್ರಕಾರ ಈಶ್ವರಸ್ವರೂಪವನ್ನು ತಿಳಿದವನು ಲೌಕಿಕವೈದಿಕ

ಸಕಲಕರ್ಮಗಳ ಫಲಸಂಗಕರ್ತೃತ್ವಗಳನ್ನು ಈಶ್ವರನಲ್ಲಿಯೇ ಇಡಬೇಕು ಎಂಬುದರ ರಹಸ್ಯಾರ್ಥವೇನೆಂದರೆ, ಇವನು ಮಾಡತಕ್ಕ ಸಕಲ ವ್ಯಾಪಾರಕ್ಕೂ ಈಶ್ವರನೇ ಕರ್ತನಾದರೆ ಈಶ್ವರಸ್ವಭಾವದಲ್ಲಿ ಈಶ್ವರನು, ಅವನ ಸಂಕಲ್ಪವು, ಅವನ ವ್ಯಾಪಾರವು ಮೊದಲಾದ ಸಕಲವೂ ಕೇವಲ ಲೋಕಾನುಗ್ರಹಕ್ಕಾಗಿಯೇ ಎಂದು ಸಿದ್ಧಾಂತಸಾರಾಂಶವಾದುದರಿಂದ ಇವನ ವ್ಯಾಪಾರಗಳೆಲ್ಲವೂ ಈಶ್ವರನ ವ್ಯಾಪಾರಗಳೇ ಆದರೆ ಅದು ಯಾವ ರೀತಿಯಲ್ಲಿ ಪರ್ಯವಸಾನವಾಗಬೇಕು ಎಂಬುದನ್ನು ವಿಸ್ತರಿಸಬೇಕಾಗಿಲ್ಲ. ಬುದ್ಧಿವಂತರು ಊಹಿಸಿಕೊಳ್ಳಬಹುದು. ಇದೇ —

ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ
ಮಾ ಕರ್ಮಫಲಹೇತು ರ್ಭೂರ್ಮಾ ತೇ ಸಂಗೋಽಸ್ತ್ವ ಕರ್ಮಣಿ ॥

ಎಂಬ ಶ್ಲೋಕದ ತಾತ್ಪರ್ಯ. ಕರ್ಮಗಳನ್ನು ಮಾಡಿಯೇ ತೀರಬೇಕು. ಅವುಗಳಿಗೆ ಸಂಬಂಧಪಟ್ಟ ಫಲ, ಕರ್ತೃತ್ವ, ಸಂಗ ಈ ಮೂರನ್ನೂ ಈಶ್ವರದಲ್ಲಿ ಸಮರ್ಪಿಸಬೇಕೆಂದು ಈ ಶ್ಲೋಕದ ಶಬ್ದಾರ್ಥ.

ಇಂತಹ ಭಕ್ತಿಯಿಂದಲೇ ಈಶ್ವರನನ್ನು ವಶೀಕರಿಸಿ ಅವನ ಸಾಕ್ಷಾತ್ಕಾರವನ್ನು, ಅವನ ಅನುಗ್ರಹದಿಂದ ಜೀವಾತ್ಮ ಸಾಕ್ಷಾತ್ಕಾರವನ್ನು ಹೊಂದಿ ಈಶ್ವರ ಸ್ವಾಮ್ಯವೆಂಬ ಕೈವಲ್ಯವನ್ನು ಹೊಂದಬೇಕೆಂದು ಭಗವದ್ಗೀತಾ ಸಿದ್ಧಾಂತಪ್ರಕಾರ ಪಾತಂಜಲಯೋಗಶಾಸ್ತ್ರದ ಸಾರಾರ್ಥವಾಗಿದೆ. ಇದೇ ಭಾಗವತಧರ್ಮ. ಈಶ್ವರ ಸಾಮ್ಯದರ್ಶನವಾದರೂ ಈಶ್ವರಸಾಮ್ಯಪ್ರಾಪ್ತಿಯಾದರೂ ಈಶ್ವರನಂತೆ ಜಗದನುಗ್ರಹವೇ ಕರ್ತವ್ಯವಾಗುವುದು. ಅದೇ ಅವನ ಕೈಂಕರ್ಯಸೇವೆಯಾಗುವುದೆಂದು ರಹಸ್ಯ.

## ಕ್ರಿಯಾಯೋಗ

ಸಮಾಧಿಶತ್ರುಗಳಾದ ಅವಿದ್ಯಾ ಮೊದಲಾದ ಕ್ಲೇಶಗಳ ವಿನಾಶಕ್ಕಾಗಿಯೂ ಸಮಾಧಿಸಿದ್ಧಿಗಾಗಿಯೂ ಪ್ರಥಮಕರ್ತವ್ಯವು ಕ್ರಿಯಾಯೋಗ. ಇದೇ ಕರ್ಮಯೋಗ. ಅಂದರೆ, ಫಲಸಂಗಕರ್ತೃತ್ವತ್ಯಾಗಪೂರ್ವಕವಾಗಿ ಕೇವಲ ಭಗವತ್ಪ್ರೀತಿಗೋಸ್ಕರವೇ ಮಾಡಲ್ಪಡುವ ಕರ್ಮಗಳು. ಇವುಗಳು ಶಾರೀರ, ವಾಚಿಕ, ಮಾನಸಿಕವೆಂದು ಮೂರು ಪ್ರಕಾರ. ಶಾರೀರವೆಂದರೆ

ಯಮನಿಯಮಗಳಲ್ಲಿ ಹೇಳಲ್ಪಟ್ಟ ನಿಷಿದ್ಧಕರ್ಮಗಳನ್ನು ಬಿಟ್ಟು ವಿಹಿತ ಕರ್ಮಗಳನ್ನು ಮಾಡುತ್ತಾ ಉಪವಾಸ ಮಿತಾಹಾರಾದಿಗಳಿಂದ ಯೋಗಾಭ್ಯಾಸಕ್ಕೆ ವಿರೋಧವಿಲ್ಲದಂತೆ ಶರೀರವನ್ನು ಆರೋಗ್ಯವಾಗಿಟ್ಟುಕೊಳ್ಳತಕ್ಕದ್ದು. ಶಾರೀರಾರೋಗ್ಯವೇ ಯೋಗಕ್ಕೆ ಮುಖ್ಯವಾದ ಸಾಧನ.

ವಾಚಿಕವೆಂದರೆ ಸತ್ಯವಾಗಿಯೂ, ಹಿತವಾಗಿಯೂ, ಪ್ರಿಯವಾಗಿಯೂ ಇರತಕ್ಕ ಪರಾಪವಾದಸಂಬಂಧವಿಲ್ಲವ ಮಾತುಗಳನ್ನಾಡುತ್ತಾ ಸಚ್ಛಾಸ್ತ್ರ ಪಾಠಪ್ರವಚನಪಾರಾಯಣಾದಿಗಳಲ್ಲಿ ಕಾಲಕ್ಷೇಪವನ್ನು ಮಾಡುತ್ತಿರುವುದು. ಆದುದರಿಂದಲೇ ವೇದಾಧ್ಯಯನವೆಂದರೆ ವೇದವನ್ನು ಕಲಿಯುವುದು, ವೇದಾರ್ಥವನ್ನು ವಿಚಾರಮಾಡುವುದು, ವೇದವನ್ನು ಪಾರಾಯಣ ಮಾಡುತ್ತಿರುವುದು, ಜಪಿಸುವುದು, ತನ್ನ ವಿದ್ಯೆಯನ್ನೆಲ್ಲಾ ಶಿಷ್ಯರಿಗೆ ದಾನಮಾಡುವುದು ಈ ಪ್ರಕಾರವಾಗಿ ಐದು ವಿಧವಾಗಿರುವುದು ಎಂದು ದಕ್ಷಾದಿಗಳು ಹೇಳಿರುವರು.

ಮಾನಸಿಕವೆಂದರೆ, ದಯಾದಾಕ್ಷಿಣ್ಯಶಮದಮಾದಿಗುಣಗಳನ್ನು ಸಂಪಾದಿಸಿ ಈಶ್ವರಭಕ್ತಿಯನ್ನು ವೃದ್ಧಿಪಡಿಸುವುದು. ಈ ಈಶ್ವರಪ್ರಣಿಧಾನವೆಂಬ ಈಶ್ವರ ಭಕ್ತಿಯಲ್ಲಿ ಧರ್ಮಶಾಸ್ತ್ರ, ಭಗವಚ್ಛಾಸ್ತ್ರ, ಭಗವದ್ಗೀತಾ ಮೊದಲಾದ ಸಕಲ ಶಾಸ್ತ್ರಗಳಲ್ಲೂ ಹೇಳಲ್ಪಟ್ಟ ಸಕಲ ಸತ್ಕರ್ಮಗಳೂ ಅಡಗಿರುತ್ತವೆ. ಇದು ಕ್ರಿಯಾಯೋಗವೆನ್ನಲ್ಪಡುವುದು. ಈಶ್ವರಾರ್ಪಣ ಬುದ್ಧಿಯಿಂದ ಮಾಡಲ್ಪಡುವುದಾದರೆ ಇದೇ ಭಕ್ತಿಯೋಗ. ಈಶ್ವರಾರ್ಪಣ ತತ್ತ್ವವು ಹಿಂದೆ ವಿವರಿಸಲ್ಪಟ್ಟಿರುವುದು. ಇದೇ ಸಾಮ್ಯದರ್ಶನಸಾಧನ, ಸಾಮ್ಯದರ್ಶನಸಾಧರ್ಮ್ಯವೆಂಬ ಮೋಕ್ಷಸಾಧನ.

## ತತ್ತ್ವ

ಚೇತನ ಅಚೇತನ, ಅಥವಾ ಜ್ಞಾನ ಜ್ಞೇಯ, ಭೋಕ್ತೃ ಭೋಗ್ಯವೆಂದು ತತ್ತ್ವ ಎರಡು ವಿಧ. ಅಚೇತನತತ್ತ್ವವು ಪ್ರಕೃತಿ, ಮಹತ್, ಅಹಂಕಾರ, ಜ್ಞಾನೇಂದ್ರಿಯಗಳು ಐದು, ಕರ್ಮೇಂದ್ರಿಯಗಳು ಐದು, ಮನಸ್ಸು, ಪಂಚತನ್ಮಾತ್ರಗಳು, ಪಂಚಭೂತಗಳು ಸೇರಿ ಇಪ್ಪತ್ತುನಾಲ್ಕು, ಇವುಗಳ ಸ್ವರೂಪ ಸ್ವಭಾವಗಳು ಸಾಂಖ್ಯದರ್ಶನದ ತತ್ತ್ವಪ್ರಕರಣದಲ್ಲಿ ನಿರೂಪಿಸಿರುವ ಹಾಗೆ ಇವರಿಗೂ ಸಮ್ಮತವು.

ಈ ತತ್ತ್ವಗಳೇ ಸೂಕ್ಷ್ಮಸ್ಥೂಲ ಶರೀರವಾಗಿಯೂ ಅನೇಕ ಕೋಟಿ ಬ್ರಹ್ಮಾಂಡಗಳಾಗಿಯೂ ಪರಿಣಮಿಸುವವು. ಇವುಗಳಲ್ಲಿ ಮಹದಹಂಕಾರ ತತ್ತ್ವಗಳು ಸೂಕ್ಷ್ಮಶರೀರದಲ್ಲಿ ಸೇರಿ ಪುರುಷನಿಗೆ ಭೋಗಸಾಧನನಾಗಿರುವುದು. ಇದರಲ್ಲಿ ಮಹತ್ತೆಂಬ ಬುದ್ಧಿಶಬ್ದವನ್ನು ಮುಂದಿಟ್ಟು ಸಾಂಖ್ಯರ ವ್ಯವಹಾರ. ಮನಸ್ಸೆಂಬ ಚಿತ್ತವನ್ನೇ ಪ್ರಧಾನವಾಗಿಟ್ಟುಕೊಂಡು 'ಸರ್ವಂ ಚಿತ್ತವಿಚೇಷ್ಟಿತಂ' ಎಂದು ಇವರ ವ್ಯವಹಾರ.

## ಜೀವಾತ್ಮ

ಚೇತನತತ್ತ್ವವು ಪುರುಷ ಈಶ್ವರನೆಂದು ಎರಡು ವಿಧ. ಈಶ್ವರ ಸ್ವರೂಪವು ಹಿಂದೆಯೇ ನಿರೂಪಿಸಲ್ಪಟ್ಟಿರುವುದು. ಜೀವಾತ್ಮನೆಂಬ ಪುರುಷನು ಅಸಂಖ್ಯಾತನು, ವಿಭುಸ್ವರೂಪನು, ಅಜನು. ನಿತ್ಯನು, ಶಾಶ್ವತನು, ನಿರ್ಲೇಪನು. ಅಂದರೆ ಸ್ವಾಭಾವಿಕವಾಗಿ ಯಾವ ವಿಧವಾದ ದೋಷವೂ ಇಲ್ಲದವನು. ಸಾಕ್ಷಿ ಮಾತ್ರನು, ಸರ್ವವನ್ನೂ ನೋಡತಕ್ಕವನು, ಚೈತನ್ಯಸ್ವರೂಪನು, ಜ್ಞಾನಸ್ವರೂಪನು.

ಕೆಲವು ಪ್ರಾಚೀನರು ಇವನಲ್ಲಿ ಸುಖದುಃಖಾನುಭವವೆಂಬ ಭೋಗಶಕ್ತಿಯನ್ನು ಮಾತ್ರ ಅಂಗೀಕರಿಸಿರುವರು. ಭೋಗವೆಂಬುದು ಪುರುಷನ ಚಲನೆಯೆಂಬ ಸ್ವಾಭಾವಿಕಪರಿಣಾಮವು. ಅಗ್ನಿಯಲ್ಲಿ ಔಷ್ಣ್ಯವೆಂಬ ಗುಣವಲ್ಲದೆ ಸ್ಫುರಣ, ಪ್ರಕಾಶವೆಂಬ ಚಲನೆ ಸರ್ವಾನುಭವಸಿದ್ಧವಾಗಿರುವುದು. ಆ ಚಲನೆ ಅಗ್ನಿಯ ಸ್ವಭಾವವು. ಅದಿಲ್ಲದಿದ್ದರೆ ಅಗ್ನಿಸ್ವರೂಪಸಿದ್ಧಿಯೇ ಇಲ್ಲ. ಅದು ಅಗ್ನಿ ಸ್ವರೂಪಕ್ಕೆ ಅತಿಶಯವೇ ವಿನಾ ನ್ಯೂನತೆಯಲ್ಲ. ಈ ಅಂಶವನ್ನು ವಜ್ರರತ್ನಾದಿಗಳಲ್ಲೂ ಪರೀಕ್ಷಕರು ತಿಳಿಯುವರು. ಲೌಕಿಕರು ಸಹ ಇದನ್ನು ನೀರೋಟವೆಂದು ಹೇಳುತ್ತಾರೆ. ಹೀಗೆ ಚೈತನ್ಯಸ್ವರೂಪನಾದ ಜೀವನಿಗೂ ಸ್ವಾಭಾವಿಕವಾದ ಸ್ಫುರಣವಿರುವುದು. ಇದೊಂದು ವಿಕಾರವಾದರೂ ನಿರ್ವಿಕಾರನೆಂಬ ಸ್ವರೂಪಕ್ಕೆ ಬಾಧಕವಿಲ್ಲ. ಎಂತಹ ವಿಕಾರದಿಂದ ಸ್ವರೂಪವೇ ಬದಲಾವಣೆಯನ್ನು ಹೊಂದುತ್ತದೆಯೋ ಅಂತಹ ವಿಕಾರವೇ ಪರಣಾಮವು. ಅಂತಹ ವಿಕಾರವಿಲ್ಲವೆಂದು ನಿರ್ವಿಕಾರಪದಕ್ಕೆ ಅರ್ಥ. ಆದುದರಿಂದ ಸ್ಫುರಣವೇ ಆನಂದಾನುಭವವೆಂಬ ಭೋಗವು

ಸ್ವಾಭಾವಿಕವು. ಅದೇ ಸುಖ ರೂಪವಾದ ಆತ್ಮಾನುಭವವು. ಇದು ಮೋಕ್ಷ ದಶೆಯಲ್ಲಿ ಸಮಗ್ರವಾಗಿರುವುದು. ಆದುದರಿಂದ ಸ್ವಾಭಾವಿಕ ಸುಖಾನುಭವವು ಮೋಕ್ಷವೆಂದು ಪಾತಂಜಲರು ಕೆಲವರು ಹೇಳುತ್ತಾರೆಂದು ಪ್ರವಾದವು.

ಕೆಲವರು ಸಾಂಖ್ಯರಂತೆ ನಿರತಿಶಯ ನಿರ್ವಿಕಾರ ಎಂಬ ಕೂಟಸ್ಥತ್ವವನ್ನು ಸಾಧಿಸುವುದಕ್ಕಾಗಿ ಇಂತಹ ಪರಿಣಾಮವನ್ನು ಅಂಗೀಕರಿಸುವುದಿಲ್ಲ. ದೃಗ್ ದೃಶ್ಯಭಾವವು ಸಹ ಬಿಂಬ ಪ್ರತಿಬಿಂಬಪ್ರಾಯವಾದ ಸಂಬಂಧವೇ ಹೊರತು ವಾಸ್ತವವಲ್ಲವೆಂದು ನಿರ್ಣಯಿಸುವರು.

ಚಿತ್ತವೆಂಬ ಬುದ್ಧಿ ಯಾವಾಗ ಘಟಾದಿವಿಷಯಸಂಬಂಧವೆಂಬ ವಿಷಯೋಪರಾಗವನ್ನು ಹೊಂದುತ್ತದೆಯೋ ಆವಾಗ ಚಿತ್ತದಲ್ಲಿ ಬಿದ್ದಿರುವ ಪುರುಷನ ಛಾಯೆಗೆ ಘಟಾದಿಸಂಬಂಧವು ಬಂದಹಾಗಾಯಿತು. ಇದೇ ದೃಗ್ದೃಶ್ಯಭಾವ.

## ಬಂಧ

ಚೈತನ್ಯವೆಂಬ ಪುರುಷನು ಸ್ವಾಭಾವಿಕವಾಗಿ ಅತ್ಯಂತಪರಿಶುದ್ಧನಾಗಿ ಕೈವಲ್ಯಸ್ವರೂಪನಾದರೂ ಅನಾದಿಕಾಲದಿಂದ ಪ್ರಕೃತಿ ಸಂಬಂಧವನ್ನುಳ್ಳವನಾಗಿರುವನು. ಹೇಗೆಂದರೆ, ಇವನು ಜ್ಞಾನ ಸ್ವರೂಪನಾಗಿಯೂ, ಪ್ರಕೃತಿಜ್ಞೇಯಸ್ವರೂಪನಾಗಿಯೂ ಇರುವುದರಿಂದ ಜ್ಞಾನಜ್ಞೇಯಗಳಿಗೆ ಸಂಬಂಧವು ಸಹಜವಾದರೂ ಪ್ರಕೃತಿಯನ್ನು ಹೇಯವೆಂದು ತಿಳಿಯದೆ ಭೋಗ್ಯವೆಂದು ತಿಳಿದಿರುವನು. ಆ ತಿಳಿಯುವಿಕೆ ಹೇಗೆಂದರೆ ಪ್ರಕೃತಿಯಿಂದ ಪರಿಣಮಿಸುವ ಸ್ವಚ್ಛಕನ್ನಡಿಯಂತಿರುವ ಚಿತ್ತದಲ್ಲಿ ಮುಖದ ಪ್ರತಿಬಿಂಬದಂತೆ ಇವನ ಛಾಯೆ ಬೀಳುವುದು. ಸುಖದುಃಖೇಚ್ಛೆ ಕಾಮ ಕ್ರೋಧ ಮೊದಲಾದ ಸಕಲಗುಣಗಳೂ ಚಿತ್ತಕ್ಕೆ ಸೇರಿದುವು. ಅದರಲ್ಲಿಯೇ ಹುಟ್ಟುವುವು. ಅವುಗಳನ್ನು ಪುರುಷನು ಪ್ರತಿಬಿಂಬದಲ್ಲಿ ಕಾಣುವುದನ್ನು ತನ್ನಲ್ಲಿರುವ ಹಾಗೆ ತಿಳಿಯುವನು. ಅಂದರೆ, ಚಿತ್ತವೇ ತಾನೆಂದು ಭ್ರಮಿಸಿರುವನು. ಈ ಭ್ರಾಂತಿ ಹೋಗಬೇಕಾದರೆ ಚಿತ್ತವು ಬೇರೆ, ತಾನು ಬೇರೆ ಎಂಬ ಸಾಕ್ಷಾತ್ಕಾರ ಬೇಕು. ಇದನ್ನೇ ಸತ್ತ್ವಪುರುಷಾನ್ಯಖ್ಯಾತಿ ಎನ್ನುವರು. ಸತ್ತ್ವವೆಂದರೆ ಚಿತ್ತವು, ಪುರುಷನೆಂದರೆ ತಾನು. ಅನ್ಯತೆಯೆಂದರೆ

ಭೇದ. ಖ್ಯಾತಿಯೆಂದರೆ ಸಾಕ್ಷಾತ್ಕಾರ. ಸತ್ತ್ವಗುಣ ಪ್ರಧಾನವೃತ್ತಿ ಯಿಂದ ಚಿತ್ತವನ್ನು ಸತ್ತ್ವವೆಂದು ವ್ಯವಹರಿಸಿರುವರು. ಇದೇ ಮೋಕ್ಷ ಸಾಧನ. ಚಿತ್ತಕ್ಕೂ ತನಗೂ ಭೇದವನ್ನು ತಿಳಿಯದೇ ಇರುವಿಕೆ ಎಂಬ ಅಖ್ಯಾತಿಮೂಲಕ ಬಂಧವೆಂದು ಸಾಂಖ್ಯರು ಹೇಳುವರು. ಇವರು ಚಿತ್ತ ವನ್ನೇ ತಾನೆಂದು ತಿಳಿಯುವಿಕೆ ಎಂಬ ಭ್ರಮವನ್ನಂಗೀಕರಿಸಿರುವುದರಿಂದ ಭ್ರಾಂತಿಮೂಲಕ ಬಂಧವೆಂದು ಹೇಳುತ್ತಾರೆ. ಭ್ರಾಂತಿ ವಿವೇಕಸಾಕ್ಷಾ ತ್ಕಾರದಿಂದಲೇ ನಿವೃತ್ತಿಯಾಗಿ ಮೋಕ್ಷವಾಗಬೇಕು. ಈ ಸಂಬಂಧವನ್ನು ದೃಗ್ದೃಶ್ಯಭಾವ. ಬಿಂಬಪ್ರತಿಬಿಂಬ ಭಾವ, ವ್ಯಂಗ್ಯ ವ್ಯಂಜಕಭಾವ ಭೋಗ್ಯ ಭೋಕ್ತೃಭಾವವೆಂದು ಬುದ್ಧ್ಯಾರೋಹಕ್ಕಾಗಿ, ಮನಸ್ಸಿಗೆ ಮನದಟ್ಟಾಗು ವುದಕ್ಕಾಗಿ ನಿರೂಪಿಸಿರುವರು.

ಪುರುಷನು ಸ್ವಾಭಾವಿಕವಾಗಿ ಭೋಕ್ತೃಶಕ್ತಿಯುಳ್ಳವನಾದುದರಿಂದ ಪ್ರಕೃತಿಪುರುಷರಿಗಿರುವ ಸಂಬಂಧವನ್ನು ಭೋಕ್ತೃಭೋಗ್ಯಸಂಬಂಧವೆಂದು ಪಂಚಶಿಖಾಚಾರ್ಯರೇ ಮೊದಲಾದವರು ಹೇಳುವರು.

## ಚಿತ್ತಭೂಮಿ

ಕ್ಷಿಪ್ತ ಮೂಢ ವಿಕ್ಷಿಪ್ತ ಏಕಾಗ್ರ ನಿರುದ್ಧವೆಂದು ಚಿತ್ತಸ್ಥಿತಿ ಐದುವಿಧ. ಕ್ಷಿಪ್ತವೆಂದರೆ ಲೋಕವ್ಯವಹಾರವಿಷಯದಲ್ಲೇ ವ್ಯಾಪೃತವಾಗಿರುವ ಚಿತ್ತ, ಮೂಢವೆಂದರೆ ತಮೋಗುಣದಿಂದ ನಿದ್ರೆಯಲ್ಲಿರುವ ಹಾಗೆ ಆಲಸ್ಯದಲ್ಲಿರು ವುದು. ವಿಕ್ಷಿಪ್ತವೆಂದರೆ ಯಾವುದರಲ್ಲಿಯೂ ಸ್ಥಿರವಾಗಿ ನಿಲ್ಲದೆ ಚಂಚಲವಾಗಿ ರುವುದು. ಏಕಾಗ್ರವೆಂದರೆ ಯಾವುದಾದರೊಂದು ವಿಷಯದಲ್ಲಿ ಸ್ಥಿರವಾ ಗಿರುವ ಸ್ವಭಾವ. ನಿರುದ್ಧವೆಂದರೆ ಯಾವ ವಿಷಯದಲ್ಲಿಯೂ ಚಿತ್ತವನ್ನು ಬಿಡದೆ ತಡೆಯುವುದು ; ಎಂದರೆ, ತಡೆಯುತಕ್ಕಚಿತ್ತವೃತ್ತಿ ಎಂದರ್ಥ. ಅದೊಂದು ಚಿತ್ತದ ಪರಿಣಾಮ. ಏಕಾಗ್ರತೆ, ನಿರೋಧ ಇವುಗಳ ಸ್ವಭಾವ ದಲ್ಲಿರುವ ಚಿತ್ತವುಳ್ಳವರಿಗೇ ಯೋಗಶಾಸ್ತ್ರಾಧಿಕಾರ. ಚಿತ್ತವು ಏಕಾಗ್ರ ವಾಗಿರುವ ಧ್ಯೇಯವಾದ ವಸ್ತು ಸ್ಪಷ್ಟವಾಗಿ ಪ್ರಕಾಶಿಸುವುದು. ಕ್ಲೇಶಗಳು ಕ್ಷಯವಾಗುವುವು. ಬಂಧಗಳು ಸಡಿಲವಾಗುವುವು. ಚಿತ್ತವು ವಿಶಾಂತ್ರಿಯೆಂಬ ನಿರೋಧಕ್ಕೆ ಅಭಿಮುಖವಾಗುವುದು. ಆ ಸ್ಥಿತಿಯೇ ಸಂಪ್ರಜ್ಞಾತಸಮಾಧಿ

ಯೆನಿಸುವುದು. ನಿರೋಧಸ್ಥಿತಿಯೇ ಅಸಂಪ್ರಜ್ಞಾತಸಮಾಧಿ, ಯೋಗ. ಚಿತ್ತವು ಪ್ರಸನ್ನವಾದರೆ, ನಿರ್ದೋಷವಾದರೆ ಏಕಾಗ್ರವಾಗುವುದು. ಪ್ರಸಾದಕ್ಕೆ ಈ ಅಭ್ಯಾಸ ಬೇಕು. ಯಾವುದೆಂದರೆ—ಸುಖಸಂಪತ್ಸಮೃದ್ಧರಾದ ಪ್ರಾಣಿಗಳಲ್ಲಿ ಅಸೂಯೆಯಿಲ್ಲದೆ ಮಿತ್ರಭಾವವನ್ನು ಭಾವಿಸಬೇಕು. ಸಂಕಟಪಡುತ್ತಿರುವ ಪ್ರಾಣಿಗಳನ್ನು ನೋಡಿ ಸಂತೋಷಪಡದೆ ದಯೆಯನ್ನು ತೋರಿಸಬೇಕು. ದಯೆಯೆಂದರೆ ಕಷ್ಟವನ್ನು ಪರಿಹರಿಸುವ ಪ್ರಯತ್ನ. ಪುಣ್ಯವಂತರ ವಿಷಯದಲ್ಲಿ ಸಂತೋಷವನ್ನು ಹೊಂದುತ್ತಿರಬೇಕು. ಪಾಪಿಷ್ಠರಲ್ಲಿ ಉದಾಸೀನಭಾವದಲ್ಲಿರಬೇಕು. ಇಂತಹ ಅಭ್ಯಾಸದಿಂದ ದೋಷನಿವೃತ್ತಿ ಮೂಲಕ ಚಿತ್ತವು ಪ್ರಸನ್ನವಾಗುವುದು.

ಇಂತಹ ನಿರೋಧಚಿತ್ತವೃತ್ತಿಗೆ ಪ್ರಶಾಂತವಾಹಿತಾ ಎಂದು ಹೆಸರು ; ಎಂದರೆ ಶಾಂತವಾದ ಚಿತ್ತ ಸಂಗತಿ. ಇದು ಅನೇಕಕಾಲ ಅಭ್ಯಾಸಪಾಟವದಿಂದಲೂ ಇತರ ಕ್ಷುದ್ರವಿಷಯಗಳಲ್ಲಿ ವೈರಾಗ್ಯದಿಂದಲೂ ಸಿದ್ಧಿಸತಕ್ಕದ್ದು. ಈ ನಿರೋಧ, ಸಮಾಧಿ, ಏಕಾಗ್ರತಾ, ಎಂಬ ಮೂರು ವಿಧವಾದ ಚಿತ್ತಸ್ಥಿತಿಗಳು ಧರ್ಮ ಲಕ್ಷಣ ಅವಸ್ಥಾ ಎಂಬ ಸೂಕ್ಷ್ಮ ಸ್ಥೂಲರೂಪವಾದ ಚಿತ್ತ ಪರಿಣಾಮಗಳೆನ್ನಲ್ಪಡುವುವು. ಬಾಹ್ಯವಸ್ತುಗಳಲ್ಲೂ ತಂತುಗಳಿಂದ ಆಗತಕ್ಕ ಪಟಾದಿಪರಿಣಾಮವು ಧರ್ಮ ಪರಿಣಾಮ. ಭೂತ ವರ್ತಮಾನ ಭವಿಷ್ಯತ್ ಎಂಬ ಕಾಲಭೇದದಿಂದ ತಿಳಿಯಲ್ಪಡುವ ಪರಿಣಾಮವು ಲಕ್ಷಣಪರಿಣಾಮ. ಹೊಸದು ಹಳೆಯದು ಎಂಬ ವ್ಯವಹಾರಕ್ಕೆ ಗೋಚರವಾಗಿರುವ ಪರಿಣಾಮ ಅವಸ್ಥಾಪರಿಣಾಮ.

## ಚಿತ್ತವೃತ್ತಿ

ಈ ಚಿತ್ತಕ್ಕೂ ವಿಷಯಕ್ಕೂ ಉಂಟಾಗತಕ್ಕ ಸಂಬಂಧವೆಂಬ ಚಿತ್ತವೃತ್ತಿ ಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ರಾ ಸ್ಮೃತಿಗಳೆಂದು ಐದು ಪ್ರಕಾರ. ಅಬಾಧಿತವಾದ ಚಿತ್ತವೃತ್ತಿಗೆ ಪ್ರಮಾಣವೆಂದು ಹೆಸರು. ಒಂದು ವಸ್ತುವನ್ನು ಮತ್ತೊಂದು ವಸ್ತುವಾಗಿ ಗ್ರಹಿಸುವಂತಹ ಚಿತ್ತವೃತ್ತಿ ವಿಪರ್ಯಯವು. ರಜ್ಜುಸರ್ಪಜ್ಞಾನ, ಶುಕ್ತಿರಜತಜ್ಞಾನ ಮೊದಲಾದುವು ಉದಾಹರಣೆಗಳು. ಮೃಗವೋ ಮನುಷ್ಯನೋ ಎಂಬ ಸಂದೇಹವು ಸಹ ವಿಪರ್ಯ

ಯದಲ್ಲಿಯೇ ಸೇರಿರುವುದು. ಬರಿಯ ಶಬ್ದದಿಂದ ವಿಷಯವಿಲ್ಲದೇ ಉಂಟಾಗ ತಕ್ಕ ಜ್ಞಾನಕ್ಕೆ ವಿಕಲ್ಪವೆಂದು ಹೆಸರು. ಉದಾಹರಣೆ—

ಮೃಗತೃಷ್ಣಾಮ್ಭಸಿ ಸ್ನಾತಃ ಖಪುಷ್ಪಕೃತಶೇಖರಃ
ಏಷ ವನ್ಧ್ಯಾಸುತೋ ಯಾತಿ ಶಶಶೃಙ್ಗಧನುರ್ಧರಃ ॥

ಬಂಜೆಯ ಮಗನು ಬಿಸಿಲುಗುದುರೆಯ ನೀರಿನಲ್ಲಿ ಸ್ನಾನಮಾಡಿ ಆಕಾಶ ಕುಸುಮವನ್ನು ಧರಿಸಿ ಮೊಲದ ಕೊಂಬಿನ ಬಿಲ್ಲನ್ನು ಹಿಡಿದುಕೊಂಡು ಹೋಗುತ್ತಿದ್ದಾನೆ ಎಂದರ್ಥ.

ಅಙ್ಗುಲಾಗ್ರೇ ಹಸ್ತಿಶತಯೂಥಮಾಸ್ತೇ ॥ ಇತ್ಯಾದಿ

ನಿದ್ರೆ ಎಂದರೆ ಜಾಗ್ರತ್ಸ್ವಪ್ನಕಾಲದಲ್ಲಿ ಬರುವ ಯಾವ ವಿಧ ಜ್ಞಾನವೂ ಇಲ್ಲದಿರುವ ಸ್ಥಿತಿ. ಇದು ಯಾವ ಜ್ಞಾನವೂ ಇಲ್ಲದೆ ಇರುವಿಕೆ ಮಾತ್ರವಲ್ಲ. ಸುಖವಾಗಿ ನಿದ್ರೆಯನ್ನು ಮಾಡಿದೆನು, ಶರೀರವೆಲ್ಲಾ ಭಾರ ವಾಗಿದೆ ಎಂಬಿವೇ ಮೊದಲಾದ ಸ್ಮರಣೆ ಎಚ್ಚರಗೊಂಡವನಿಗೆ ಬರುವುದರಿಂದ ತಮಸ್ಸೆಂಬ ಗುಣ ಮೂಲಕ ಬರುವ ಚಿತ್ತವೃತ್ತಿಯೇ ನಿದ್ರೆ. ಅದೂ ಒಂದು ವಿಧ ಜ್ಞಾನವೆಂದರ್ಥ. ತಮಸ್ಸೆಂಬುದು ಸತ್ತ್ವರಜೋಗುಣಗಳ ವೃತ್ತಿ ಯನ್ನು ತಡೆದು ತಾನು ವಿಚಿತ್ರವಾಗಿಗೋಚರವಾಗುವುದು. ಸ್ಮೃತಿ ಎಂಬುದು ಪೂರ್ವದಲ್ಲಿ ಅನುಭವಿಸಿದ ವಿಷಯಗಳನ್ನು ಸಂಸ್ಕಾರದಿಂದ ಜ್ಞಾಪಿಸಿಕೊಳ್ಳು ವುದು. ಸ್ವಪ್ನಾವಸ್ಥೆ ಹೀಗೆ ಇದರಲ್ಲಿಯೇ ಸೇರುತ್ತದೆ. ಚಿತ್ತವೃತ್ತಿಯು ಐದು ವಿಧ.

## ಪ್ರಮಾಣಚಿತ್ತವೃತ್ತಿಗಳು

ಈ ಸಿದ್ಧಾಂತದಲ್ಲಿ ಸಾಂಖ್ಯಸಿದ್ಧಾಂತದಂತೆ ಪ್ರತ್ಯಕ್ಷ, ಅನುಮಾನ, ಶಬ್ದವೆಂದು ಮೂರು ಪ್ರಮಾಣಗಳು. ವಿಷಯಸಂಬಂಧವನ್ನುಳ್ಳ ಅಂತಃ ಕರಣವೃತ್ತಿಯೇ ಪ್ರಮಾಣ. ಇದರಲ್ಲಿ ಚೈತನ್ಯವೆಂಬ ಪುರುಷನ ಪ್ರತಿ ಬಿಂಬವು ಬೀಳುವುದೇ ಪ್ರಮೆಯೆಂಬ ಪ್ರಮಾಣಫಲವು, ಘಟಾದಿವಿಷಯಾ ನುಭವವು. ಅನಂತರ ವ್ಯವಹಾರಗಳು ಲೋಕಪ್ರಸಿದ್ಧಗಳಾಗಿರುವುವು. ಇಂದ್ರಿಯಾದಿಗಳ ಮೂಲಕ ಅಂತಃಕರಣಕ್ಕೆ ಬರತಕ್ಕ ವಿಷಯಸಂಬಂಧವು

ಪ್ರತ್ಯಕ್ಷಪ್ರಮಾಣವು. ಲಿಂಗ ಶಬ್ದ ಇವುಗಳಿಂದ ಬರತಕ್ಕ ವಿಷಯಸಂಬಂಧವು ಅನುಮಾನ ಆಗಮವೆನ್ನಲ್ಪಡುವುವು. ಮಿಕ್ಕ ವಿಷಯುಗಳೆಲ್ಲವನ್ನೂ ಸಾಂಖ್ಯ ಸಿದ್ಧಾಂತದಲ್ಲಿ ವಿಸ್ತರಿಸುವ ಹಾಗೆ ಇಲ್ಲಿಯೂ ತಿಳಿಯತಕ್ಕದ್ದು.

## ಅಷ್ಟಾಂಗ

ಯೋಗವು ಅಷ್ಟಾಂಗವೆಂದು ಪ್ರಸಿದ್ಧಿ. ಎಂಟು ಅಂಗಗಳೆಂದರೆ ಎಂಟು ಅಂಶಗಳು. ಅವು ಯಮ ನಿಯಮ ಆಸನ ಪ್ರಾಣಾಯಾಮ ಪ್ರತ್ಯಾಹಾರ ಧಾರಣಾ ಧ್ಯಾನ ಸಮಾಧಿಯೆಂದು ಹೇಳಲ್ಪಡುವುವು. ಇವುಗಳಲ್ಲಿ ಸಮಾಧಿಯೇ ಮುಖ್ಯವಾದ ಅಂಶವು. ಯಮವೆಂದರೆ ಬಿಡತಕ್ಕದ್ದು ; ಅದು ಹಿಂಸೆ ಅಸತ್ಯಸ್ತೇಯ ದುರಾಚಾರ ಪರಿಗ್ರಹ ಎಂದು ಐದು ಪ್ರಕಾರ. ಈ ಐದು ಅಂಶಗಳೂ ದೇಶಕಾಲವಸ್ತುನಿಯಮವಿಲ್ಲದೆ ಅತಿವಿಶಾಲವಾಗಿ ಪರಿತ್ಯಜಿಸಲ್ಪಟ್ಟ ಸಾರ್ವಭೌಮ ಮಹಾವ್ರತವೆಂದು ಪ್ರಸಿದ್ಧಿ. ಹಿಂಸಾದಿ ಸ್ವರೂಪವು ಸ್ಪಷ್ಟವಾಗಿರುವುದು. ಪರಿಗ್ರಹವೆಂದರೆ ದುರಾಶೆ.

ನಿಯಮವೆಂದರೆ ಮಾಡತಕ್ಕದ್ದು, ಅದು ಶೌಚ ಸಂತೋಷ ತಪಸ್ಸು ಸ್ವಾಧ್ಯಾಯ ಈಶ್ವರಪ್ರಣಿಧಾನವೇಎಂದು ಐದು ಪ್ರಕಾರ.ಬಾಹ್ಯ,ಅಭ್ಯಂತರ ಎಂದು ಶೌಚವು ಎರಡು ಪ್ರಕಾರ.

ಯೋಽರ್ಥೇ ಶುಚಿಸ್ಸ ಹಿ ಶುಚಿರ್ನ ಮೃದಾದಿ ಶುಚಿಶ್ಶುಚಿಃ ।

ಎಂದು ಮನು ವಿಸ್ತರಿಸಿರುವನು. ಸಂತೋಷ ತಪಸ್ಸು ಸ್ವಾಧಾಯ ಇವು ಸ್ಪಷ್ಟವು. ಈಶ್ವರಪ್ರಣಿಧಾನವೇ ಕ್ರಿಯಾಯೋಗ, ಭಕ್ತಿಯೋಗ ಎಂದು ಹಿಂದೆಯೇ ನಿರೂಪಿಸಲ್ಪಟ್ಟಿರುವುದು,

ಈ ಯಮನಿಯಮಗಳ ಸಿದ್ಧಿಗಳಲ್ಲಿ ಅಹಿಂಸಾಸಿದ್ಧಿಯುಂಟಾದರೆ ಆ ಯೋಗಿಯ ಸಮೀಪದಲ್ಲಿ ಯಾವ ಪ್ರಾಣಿಗಳಿಗೂ ಪರಸ್ಪರ ವೈರವಿಲ್ಲವೆಂದು ತಿಳಿಯಬೇಕು. ಈ ಅಂಶವು ಮಹರ್ಷಿಗಳ ಆಶ್ರಮವರ್ಣನೆಯಲ್ಲಿ ವಿಶದ ವಾಗಿರುವುದು. ಹೀಗೆಯೇ ಸತ್ಯಸ್ಥಿಯಾದರೆ,

ಲೌಕಿಕಾನಾಂ ಹಿ ಸಾಧೂನಾಮರ್ಥಂ ವಾಗನುವರ್ತತೇ
ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋಽನುಧಾವತಿ ॥

ಎಂದು ಭವಭೂತಿ ಹೇಳಿರುವಂತೆ ಅವರ ಬಾಯಿಮಾತುಗಳೆಲ್ಲವೂ ಯಥಾರ್ಥ

ವಾಗುವುವು. ಪರದ್ರವ್ಯಾನಭಿಲಾಷೆಯೆಂಬ ಅಸ್ತೇಯಭಾವನೆ ನಿಂತರೆ ಸರ್ವಧ್ವನಿಯಾಗುವನು, ಬ್ರಹ್ಮಚರ್ಯ ಸಿದ್ಧಿಸಿದರೆ ಚಿತ್ತವು ಯೋಗಾಭ್ಯಾಸ ಸಮರ್ಥವಾಗುವುದು. ಅಪರಿಗ್ರಹ ಸಿದ್ಧಿಸಿದರೆ ಜನ್ಮಾಂತರ ಜ್ಞಾನ ಬರುವುದು. ಶೌಚಸಿದ್ಧಿಯಿಂದ ಶರೀರೇಂದ್ರಿಯಗಳಿಗೆ ಯೋಗಾಭ್ಯಾಸ ಯೋಗ್ಯತೆಯೂ ಸಂತೋಷದಿಂದ ಸುಖಾಭಿವೃದ್ಧಿಯೂ ತಪಸ್ಸಿನಿಂದ ಚಿತ್ತ ಸುದ್ಧಿಯೂ ಸ್ವಾಧ್ಯಾಯ ಸಿದ್ಧಿಯಿಂದ ದೇವತಾಸಾಕ್ಷಾತ್ಕಾರವೂ ಆಗುವುವು. ಈಶ್ವರಪ್ರಣಿಧಾನವು ಸಿದ್ಧಿಸಿದರೆ ಸಮಾಧಿಸಿದ್ಧಿಯಾಯಿತೆಂದು ತಿಳಿಯ ತಕ್ಕದ್ದು.

ಆಸನವೆಂದರೆ ಸುಖಕರವಾಗಿಯೂ ಸ್ಥಿರವಾಗಿಯೂ ಇರತಕ್ಕ ಸ್ಥಿತಿ. ಅದು ಶಾರೀರಕವಾಗಿಯೂ ಬಾಹ್ಯವಾಗಿಯೂ ಇರುವುದು. ಶಾರೀರವಾದಾಸನಗಳು ಪದ್ಮಾಸನವೇ ಮೊದಲಾದುವುಗಳು ಬಹುಪ್ರಕಾರವಾಗಿ ಪ್ರಸಿದ್ಧಗಳಾಗಿಯೂ ಇರುವುವು. ಇಂತಹ ಆಸನವು ಸಿದ್ಧಿಸಿದರೆ ಶಾರೀರವಾದ ವ್ಯಾಧಿ ಮೊದಲಾದ ಯಾವ ತೊಂದರೆಯೂ ಇರಲಾರದು.

ಪ್ರಾಣಾಯಾಮವೆಂದರೆ ಉಚ್ಛ್ವಾಸನಿಶ್ವಾಸ ರೂಪವಾದ ಪ್ರಾಣವಾಯುವನ್ನು ಸ್ವಾಧೀನದಲ್ಲಿಟ್ಟುಕೊಳ್ಳುವುದು. ಇದರಿಂದ ಒಳಗಿರುವ ಅಂತಃಕರಣಕ್ಕೆ ಆವರಣವಾಗಿರುವ ಸೂಕ್ಷ್ಮದೋಷಗಳು ನಿವೃತ್ತಿಯಾಗುವುವು. ಸತ್ತ್ವವೆಂಬ ಅಂತಃಕರಣವು ಸೂಕ್ಷ್ಮವಾದ ವಸ್ತುಗ್ರಹಣ ಯೋಗ್ಯವಾಗುವುದು.

ಪ್ರತ್ಯಾಹಾರವೆಂದರೆ ಚಕ್ಷುರಾದೀಂದ್ರಿಯಗಳನ್ನು ಅವುಗಳ ವಿಷಯಗಳಿಂದ ಹಿಂತಿರುಗಿಸಿ ಅಂತಃಕರಣಕ್ಕೆ ಅನುಕೂಲವಾಗಿರಿಸುವುದು. ಈ ಪ್ರತ್ಯಾಹಾರ ಸಿದ್ಧಿಯಿಂದ ಇಂದ್ರಿಯಗಳು ಸ್ವಾಧೀನವಾಗುವುವು.

ಧಾರಣೆಯೆಂದರೆ ಶುಭವಾದ ಆಶ್ರಯವಾದ ನಾಭಿಚಕ್ರ, ಹೃದಯ, ಜಿಹ್ವಾಗ್ರ, ನಾಸಾಗ್ರ, ಶಿರಸ್ಸು ಮೊದಲಾದ ಶರೀರದವಯವದಲ್ಲಿ ಅಥವಾ ಹೊರಗಿನ ಶುಭವಾದ ಮಂಗಳಕರವಾದ ವಸ್ತುವಿನಲ್ಲಿ ಚಿತ್ತವನ್ನು ಸ್ಥಿರವಾಗಿ ನಿಲ್ಲಿಸುವ ಅಭ್ಯಾಸಮಾಡುವುದು ಇದೇ ದೇಶಬಂಧವು. ಈ ಅಭ್ಯಾಸದಲ್ಲಿ ಅರ್ಧಘಳಿಗೆ, ಒಂದು ಘಳಿಗೆ, ಎರಡು ಘಳಿಗೆ ಈ ಪ್ರಕಾರ ಚಿತ್ತಸ್ಥೈರ್ಯ ವಾಗುವುದು.

ಧ್ಯಾನವೆಂದರೆ ಧ್ಯೇಯವಸ್ತುವಿನಲ್ಲಿ ಚಿತ್ತಸ್ಥಿರೀಕರಣವು. ಆದರೆ ಧಾರಣೆಯಲ್ಲಿ ವಿಷಯಾಂತರ ಸಂಬಂಧವು ಪ್ರಯತ್ನದಿಂದ ಪರಿಹರಿಸಲ್ಪಡುವುದು. ಧ್ಯಾನದಲ್ಲಿ ಪ್ರಯತ್ನವಿಲ್ಲದೆ ಇತರ ವಿಷಯ ಸಂಬಂಧವು ನಿವೃತ್ತಿಯಾಗಬೇಕು.

ಸಮಾಧಿಯೆಂದರೆ ಈ ಧ್ಯಾನವೆಂಬ ಅತಿಸ್ವಚ್ಛಚಿತ್ತವೃತ್ತಿ ಪ್ರವಾಹಕ್ಕೂ ಧ್ಯೇಯವಸ್ತುವಿಗೂ ಭೇದ ತೋರದೆ ಧ್ಯೇಯವಸ್ತು ಸ್ವರೂಪದಲ್ಲೇ ಲೀನವಾಗುವಿಕೆ. ಇದನ್ನು ಧ್ಯೇಯ ಮಾತ್ರ ಸ್ಫೂರ್ತಿಯೆನ್ನುವರು. ಇದೇ ಸಂಪ್ರಜ್ಞಾತ ಸಮಾಧಿ. ಇಲ್ಲಿ ಧ್ಯಾನ ಧಾರಣಾ ಸಮಾಧಿ ಈ ಮೂರಕ್ಕೂ ಸಂಯಮವೆಂದು ಹೆಸರು. ಉಪನಿಷತ್ತುಗಳಲ್ಲಿ ಉಪದೇಶಿಸಲ್ಪಟ್ಟಿರುವ ಪರಬ್ರಹ್ಮನ ಉಪಾಸನೆಗಳಲ್ಲೂ ಸ್ಥಾನವನ್ನೂ ಗುಣವನ್ನೂ ಉಪಾಸನೆಗೆ ರೂಪವಾಗಿ ಹೇಳಿರುವರು. ಹಾಗೆ ಇಲ್ಲಿ ದೇಶಬಂಧವೆಂಬ ಧಾರಣೆಯನ್ನು ತಿಳಿಯಬೇಕು.

ಪ್ರಾಣಾಯಾಮೈರ್ದಹೇದ್ದೋಷಾನ್ ಧಾರಣಾಭಿಶ್ಚ ಕಿಲ್ಬಿಷಮ್
ಪ್ರತ್ಯಾಹಾರೇಣ ಸಂಸರ್ಗಾನ್ ಧ್ಯಾನೇನಾನೀಶ್ವರಾನ್ ಗುಣಾನ್ ॥

ಎಂದು ಮನು ಹೇಳಿರುವನು. ಪ್ರಾಣಾಯಾಮದಿಂದ ಶಾರೀರವಾದ ರಜಸ್ತಮಸ್ಸುಗಳ ದೋಷಗಳನ್ನು ಸುಡಬೇಕು. ಧಾರಣೆಯಿಂದ ಪಾಪವನ್ನು ಸುಡಬೇಕು. ಪ್ರತ್ಯಾಹಾರದಿಂದ ಇತರ ಸಂಬಂಧವನ್ನೂ ಧ್ಯಾನದಿಂದ ಅನೀಶ್ವರ ಗುಣಗಳನ್ನೂ ಸುಡಬೇಕೆಂದು ಅರ್ಥವು. ಅನೀಶ್ವರ ಗುಣಗಳು ಕಾಮಕ್ರೋಧಲೋಭ ಮೊದಲಾದ ಕೆಟ್ಟಗುಣಗಳು. ಇದರಿಂದ ಪರಮೇಶ್ವರನ ಸಾಮ್ಯದೃಷ್ಟಿಯಿಂದ ಯೋಗಿ ಜಗದನುಗ್ರಹದೃಷ್ಟಿಯಲ್ಲಿರಬೇಕು. ಅದೇ ಪರಮ ಪುರುಷಾರ್ಥ, ಕೈವಲ್ಯ ಎಂದಭಿಪ್ರಾಯವಾಗುವುದು.

## ಸಮಾಧಿ ವಿಭಾಗ

ಸಮಾಧಿಯೆಂಬ ಯೋಗವು ಸಂಪ್ರಜ್ಞಾತ ಅಸಂಪ್ರಜ್ಞಾತ, ಅಥವಾ ಸಬೀಜ ನಿರ್ಬೀಜ, ಸಾಲಂಬ ನಿರಾಲಂಬ, ಅಥವಾ ಸವಿಕಲ್ಪ ನಿರ್ವಿಕಲ್ಪವೆಂದು ಎರಡು ಪ್ರಕಾರವು. ಸಂಪ್ರಜ್ಞಾತವೆಂದರೆ ಧ್ಯಾನಮಾಡಲ್ಪಡುವ ವಸ್ತುವಿನಲ್ಲೇ ಚಿತ್ತವು ಲಯವಾಗುವುದು. ಅಸಂಪ್ರಜ್ಞಾತವೆಂದರೆ ಯಾವ

ವ್ಯಾಪಾರವೂ ಇಲ್ಲದೆ ಚಿತ್ತವು ಲಯಾಭಿಮುಖವಾಗಿರುವುದು. ಸಂಪ್ರಜ್ಞಾತ ಸಮಾಧಿ ಏಕಾಗ್ರಸ್ವಭಾವವುಳ್ಳ ಚಿತ್ತಕ್ಕೆ ಸಾಧ್ಯ. ಅಸಂಪ್ರಜ್ಞಾತ ಸಮಾಧಿ ನಿರೋಧ ಸ್ವಭಾವವುಳ್ಳ ಚಿತ್ತಕ್ಕೆ ಸಾಧ್ಯ. ಈ ಸಂಪ್ರಜ್ಞಾತ ಸಮಾಧಿ ಸವಿತರ್ಕ ಸವಿಚಾರ ಸಾನಂದ ಸಾಸ್ಮಿತಾ ಎಂದು ನಾಲ್ಕು ಪ್ರಕಾರ. ಪೂರ್ವಾಪರಜ್ಞಾನವು ವಸ್ತುಗಳಿಗೂ ಅವುಗಳ ಹೆಸರುಗಳಿಗೂ ಇರುವ ಸಂಬಂಧ ಜ್ಞಾನವು. ಇವೇ ಮೊದಲಾದ ಸನ್ನಿವೇಶಗಳೊಡನೆ ಸ್ಥೂಲವಾದ ಪಂಚ ಮಹಾ ಭೂತಗಳ ವಿಚಾರ ಭಾವನೆ ಸವಿತರ್ಕಸಮಾಧಿ.

ಪಂಚತನ್ಮಾತ್ರೆಗಳು ಬುದ್ಧ್ಯಹಂಕಾರಾಂತಃಕರಣಗಳು ಮೊದಲಾದ ಸೂಕ್ಷ್ಮತತ್ತ್ವಗಳ ಭಾವನೆ ದೇಶಕಾಲಪರಿಚ್ಛಿನ್ನವಾಗಿ ನಡೆದರೆ ಸವಿಚಾರ ಸಮಾಧಿ.

ಸುಖಸ್ವಭಾವದಲ್ಲಿರುವ ಸತ್ತ್ವಗುಣಪ್ರಧಾನವಾಗಿಯೂ ರಜಸ್ತಮಸ್ಸುಗಳ ಸ್ವಲ್ಪ ಸಂಬಂಧನೊಡನೆ ನಡೆಯುವ ಭಾವನೆ ಸಾನಂದಸಮಾಧಿ. ಸತ್ತ್ವಸಮುದ್ರೇಕದಿಂದ ಸುಖಾನುಭವರೂಪವಾಗಿರುವುದರಿಂದ ಸಾನಂದ ವೆಂದು ಪ್ರಸಿದ್ಧಿ.

ರಜಸ್ತಮಸ್ಸುಗಳ ಸಂಬಂಧವಿಲ್ಲದೆ ಪರಮಸುಖಸ್ವಭಾವದಲ್ಲಿರುವ, ಸತ್ತ್ವಗುಣಸಂಬಂಧದಲ್ಲಿರುವ ಚಿತ್ತವನ್ನು ವಿಷಯೀಕರಿಸುತ್ತಿದ್ದರೂ ಸತ್ತ್ವಕ್ಕೆ ಅಪ್ರಾಧಾನ್ಯವೂ ಚೈತನ್ಯವೆಂಬ ಪುರುಷನಿಗೆ ಪ್ರಾಧಾನ್ಯವೂ ಇರುವ ಭಾವನೆ ಸಾಸ್ಮಿತೆ.

ಈ ನಾಲ್ಕು ವಿಧ ಭಾವನೆಗಳಲ್ಲೂ ಇತರ ವಿಷಯಗಳು ತೋರದಿದ್ದರೂ ಆಯಾ ಧ್ಯೇಯವಾದ ಅಂಶಗಳು ತೋರುತ್ತವೆಯಾದ್ದರಿಂದ ಸಂಪ್ರಜ್ಞಾತ ಸಮಾಧಿಯೆಂದು ಹೆಸರು.

## ಸಮಾಧಿಸಿದ್ಧಿಗಳು

ಈ ನಾಲ್ಕು ವಿಧವಾದ ಸಂಪ್ರಜ್ಞಾತಸಮಾಧಿಸಿದ್ಧಿಗಳು ಕ್ರಮವಾಗಿ ಮಧುಮತೀ, ಮಧುಪ್ರತೀಕಾ, ವಿಶೋಕಾ, ಸಾಸ್ಮಿತಾ ಎಂಬ ಪದಗಳಿಂದ ವ್ಯವಹರಿಸಲ್ಪಡುವುವು. ಒಂದನೆಯ ಮಧುಮತಿಯೇ ಋತಂಬರಾ ಎಂದು ಹೇಳಲ್ಪಡುವುದು. ಇಲ್ಲಿ ಅಭ್ಯಾಸ ವೈರಾಗ್ಯದಿಂದ ರಜಸ್ತಮಸ್ಸುಗಳು

ಪ್ರಾಯಃ ಕ್ಷೀಣವಾಗಿ ಸುಖಪ್ರಕಾಶಮಯವಾದ ಚಿತ್ತದ ಭಾವನೆಯಿಂದ ವಿಷದಪ್ರಕಾಶ ಸ್ವರೂಪಚಿತ್ತಸಿದ್ಧಿಯಾಗುವುದು.

ಮಧುಪ್ರತೀಕಸಿದ್ಧಿಯಲ್ಲಿ ಮನೋವೇಗವು, ಕಾರಣವಿಲ್ಲದೆ ಕಾರ್ಯವನ್ನು ಹೊಂದುವುದು ಮೊದಲಾದ ಸಿದ್ಧಿಗಳು ಬರುವುವು.

ವಿಶೋಕಾಸಿದ್ಧಿ ಸರ್ವೇಶ್ವರಸಾಮ್ಯ ಮೊದಲಾದುದು ; ಇದರಲ್ಲೇ ಸರ್ವಜ್ಞನಾಗುವನು. ಇದರಿಂದ ಸತ್ತ್ವಪುರುಷಾನ್ಯತಾಖ್ಯಾತಿ ಸಿದ್ಧಿಸುವುದು. ಶಾಂತ ಉದಿತ ಅವ್ಯಪದೇಶ್ಯಗಳೆಂಬ ಈ ಮೂರು ವಿಧ ಭಾವನೆಗಳಿಗೆ ಫಲವಾಗಿ ಜ್ಯೋತಿಷ್ಮತೀ ಎಂಬುದು ನಾಲ್ಕನೆಯ ಸಿದ್ಧಿ. ಇದರಲ್ಲೇ ವಿವೇಕ ಸಾಕ್ಷಾತ್ಕಾರವು. ಇಂತಹ ವಿವೇಕಖ್ಯಾತಿಯಲ್ಲೂ ವಿರಕ್ತವಾಗಿ ಚಿತ್ತವು ವಿಲಯಾಭಿಮುಖವಾಗುವುದೇ ಅಸಂಪ್ರಜ್ಞಾತಸಮಾಧಿ, ಯಾವ ವಿಧವಾದ ಚಿತ್ತವೃತ್ತಿಯೂ ಇಲ್ಲದೆ ಇರುವಸ್ಥಿತಿ. ಇದನ್ನು ಚೈತನ್ಯಸ್ವರೂಪನಾದ ಪುರುಷನ ಸ್ವರೂಪಸ್ಥಿತಿಯೆಂದೂ ತಿಳಿಯಬೇಕು.

ಸಾಸ್ಮಿತೆಯೆಂಬ ಅವಸ್ಥೆಯಲ್ಲಿ ಜೀವಾತ್ಮ ಸ್ವರೂಪವು ಸ್ಫುಟವಾಗಿ ಪ್ರಕಾಶಿಸುತ್ತದೆ. ಇವನಿಗಿಂತಲೂ ಸೂಕ್ಷ್ಮವಾದ ಪರಮಾತ್ಮಸ್ವರೂಪವು ಸಾಸ್ಮಿತೆಯಿಂದಲೇ ಸಾಕ್ಷಾತ್ಕರಿಸಲ್ಪಡಬೇಕು. ಈ ಸ್ಥಿತಿಯಲ್ಲಿ ಸಮಸ್ತ ಕ್ಲೇಶಗಳೂ ವಿನಾಶವಾಗಿ ಚಿತ್ತವು ದಗ್ಧಬೀಜಶಕ್ತಿಯಾಗುವುದು, ಕ್ರಮವಾಗಿ ನಾಶವನ್ನೂ ಹೊಂದುವುದು. ಈ ರೀತಿ ಚಿತ್ತವಿನಾಶವೇ ಸಂಸಾರ ನಿವೃತ್ತಿ.

ಜನ್ಮದಿಂದ ಕೆಲವು ಸಿದ್ಧಿಗಳು ಕಾಣಲ್ಪಡುವುವು ; ಪಕ್ಷಿಗಳಿಗೆ ಆಕಾಶಗಮನ, ಕಪಿಗಳಿಗೆ ಪ್ಲವನ ಮೊದಲಾದುವು. ಹೀಗೆ ಶುಕಮಹರ್ಷಿ ಮೊದಲಾದ ಕೆಲವು ಯೋಗಿಗಳಿಗೆ ಜನ್ಮದಿಂದಲೇ ವಿಜಾತೀಯ ಸಾಮರ್ಥ್ಯಗಳಿದ್ದುವೆಂದು ಪುರಾಣಗಳಿಂದ ತಿಳಿಯಲ್ಪಡುವುವು. ಅವೆಲ್ಲವೂ ಪೂರ್ವಜನ್ಮದ ಯೋಗಾಭ್ಯಾಸ ಫಲವೆಂದು ತಿಳಿಯಲ್ಪಡಬೇಕು. ಹಾಗೆಯೇ ಓಷಧಿಯಿಂದಲೂ ತಪಸ್ಸಿನಿಂದಲೂ ಮಂತ್ರದಿಂದಲೂ ಅನೇಕ ಸಿದ್ಧಿಗಳುಂಟಾಗುವುವು. ಎಲ್ಲವೂ ಪ್ರಾಚೀನ ಯೋಗದ ಮಹಿಮೆಯೆಂದು ಯೋಗಶಾಸ್ತ್ರದ ತಾತ್ಪರ್ಯವು.

## ಸಾರಾಂಶ

ಸಾಮಾನ್ಯವಾಗಿ ಸಮಾಧಿ ಎಂದರೆ ಭಾವನೆ. ಯಾವ ವಸ್ತುವನ್ನು ಸಾಕ್ಷಾತ್ಕಾರಮಾಡಬೇಕೋ ಅದರಲ್ಲಿ ಇತರವಸ್ತುಗಳನ್ನು ಬಿಟ್ಟು ಚಿತ್ತವನ್ನು ಪುನಃಪುನಃ ಇಡುವುದು. ಪ್ರಕೃತದಲ್ಲಿ ಆತ್ಮವಸ್ತುವನ್ನೋ ಪರಮಾತ್ಮವಸ್ತುವನ್ನೋ ಧ್ಯಾನಮಾಡಬೇಕಾದರೆ ಅವುಗಳ ವಿಷಯಕರವಾದ ಚಿತ್ತವೃತ್ತಿಯಲ್ಲದೆ ಇತರ ಚಿತ್ತವೃತ್ತಿಗಳೆಲ್ಲವನ್ನೂ ನಿರೋಧಿಸುವುದೇ ಯೋಗವೆನ್ನಲ್ಪಡುವುದು. ಯೋಗವೆಂದರೂ ಸಮಾಧಿಯೆಂದರೂ ಒಂದೇ ಅರ್ಥ. ಸಮಾಧಿ ವಿಧಿರೂಪವಾಗಿಯೂ, ಯೋಗವೆಂಬುದು ನಿಷೇಧರೂಪವಾಗಿಯೂ ಇರುವುದು ಎಂದರೆ, ಯೋಗಪದವು ಪ್ರತಿಬಂಧಕನಿವೃತ್ತಿಯೆಂಬ ಚಿತ್ತವಿನಾಶದಲ್ಲಿ ಪ್ರಾಧಾನ್ಯ ದೃಷ್ಟಿಯುಳ್ಳದು. ಸಮಾಧಿಪದವು ಕರ್ತವ್ಯಾಂಶವೆಂಬ ಆತ್ಮಸ್ವರೂಪಪರಿವೇಷದಲ್ಲಿ ಪ್ರಾಧಾನ್ಯದೃಷ್ಟಿಯುಳ್ಳದು. ಎರಡರಲ್ಲೂ ಎರಡಂಶಗಳೂ ಸೇರಿರುವುವು.

ಇಂತಹ ಯೋಗದಿಂದ ಪರಿಶುದ್ಧಾತ್ಮಸಾಕ್ಷಾತ್ಕಾರವೂ ಪರಮಾತ್ಮಸಾಕ್ಷಾತ್ಕಾರವೂ ಆಗುವುವು. ಸರ್ವಜ್ಞನಾಗುವನು. ಇಂತಹ ಯೋಗಕ್ಕೆ ಬೇಕಾದ ಅಂತರಂಗಬಹಿರಂಗ ಉಪಾಯಗಳೇ ಯಮನಿಯಮಾದ್ಯಂಗಗಳು.

ಈ ರೀತಿಯಾಗಿ ಧ್ಯಾನಾಭ್ಯಾಸದಿಂದ ಬರತಕ್ಕ ಆನಂದಕ್ಕೆ ಧರ್ಮಮೇಘವೆಂದು ಹೆಸರು. ಇಂತಹ ಧ್ಯಾನಪರಾಕಾಷ್ಠೆಯಿಂದ ಉಂಟಾಗತಕ್ಕ ವಿವೇಕೋಪಲಬ್ಧಿಯೆಂಬ ಸತ್ತ್ವಪುರುಷಾನ್ಯತಾಖ್ಯಾತಿಯೇ ವಿವೇಕಸಾಕ್ಷಾತ್ಕಾರವಾಗಿ ಮೋಕ್ಷಸಾಧನವಾಗಿರುವುದು. ಚಿತ್ತನಿವೃತ್ತಿಯಿಂದ ಸರ್ವಸಂಬಂಧವೂ ನಿವೃತ್ತಿಯಾಗಿ ಪುರುಷನು ಕೇವಲನಾಗಿ ಶಾಶ್ವತನಾಗಿ ಸ್ವಸ್ವರೂಪದಲ್ಲಿ ನಿಲ್ಲುವನು. ಯೋಗದರ್ಶನದ ಪುರುಷಾರ್ಥ.

ಸರ್ವ ಚಿತ್ತಮಯಂ, ಚಿತ್ತವೆಂಬ ವಿಜ್ಞಾನವೇ ಆತ್ಮನು, ಚಿತ್ತವಿನಾಶವೇ ಪುರುಷಾರ್ಥ, ದುಃಖನಿವೃತ್ತಿ ಮೋಕ್ಷವೆಂದು ಬೌದ್ಧರು ಭಾವಿಸುವರು. ಇವರು ಬಾಹ್ಯವಸ್ತುಗಳನ್ನು ಅಂಗೀಕರಿಸಿದರೂ ಚಿತ್ತಾಧೀನವೆಂದು ಸ್ಥಾಪಿಸಿ ಚಿತ್ತವಿನಾಶವನ್ನು ಅಂಗೀಕರಿಸಿ ಪುರುಷನಿಗೆ ಉಳಿಯುವಿಕೆಯೆಂಬ ಕೈವಲ್ಯವನ್ನು ನಿರೂಪಿಸಿರುವರು. ಚಿತ್ತವಿನಾಶವೇ ಮುಖ್ಯವಾಗಿ ಯೋಗಶಾಸ್ತ್ರಸಾರಾರ್ಥವು. ಇದೇ ಯೋಗಶಬ್ದದ ತಾತ್ಪರ್ಯಾರ್ಥ.

ಈ ಪ್ರಕಾರವಾದ ಯೋಗಶಾಸ್ತ್ರಪ್ರಕ್ರಿಯೆ ಸಕಲದರ್ಶನಗಳಿಗೂ ಮಾರ್ಗಪ್ರದರ್ಶಕವಾಗಿ ಸರ್ವೋಪಕಾರವಾಗಿರುವುದು. ಪರಿಶುದ್ಧವಾದ ಆತ್ಮಸಾಕ್ಷಾತ್ಕಾರ ಅಥವಾ ಪರಮಾತ್ಮಸಾಕ್ಷಾತ್ಕಾರ ಅಥವಾ ತತ್ತ್ವಸಾಕ್ಷಾತ್ಕಾರ ಈ ಪ್ರಕಾರ ಎಲ್ಲರೂ ಸಾಕ್ಷಾತ್ಕಾರದಿಂದ ಭ್ರಾಂತಿನಿವೃತ್ತಿಯಾಗುವುದನ್ನೇ ಉದ್ದೇಶಿಸಿರುವರು. ಆ ಸಾಕ್ಷಾತ್ಕಾರವು ಅಷ್ಟಾಂಗ ಯೋಗಾತಿಶಯದಿಂದ ಸಿದ್ಧಿಸುವುದು. ಅತಿಶಯವು ದೀರ್ಘಕಾಲ ಆದರ ನಿರಂತರ ಪಟುವಾದ ಅಭ್ಯಾಸ ಮೊದಲಾದ ರೀತಿಯಲ್ಲಿರುವುದು. ಆದುದರಿಂದ ಈ ದರ್ಶನವು ಮಧ್ಯದಲ್ಲಿ ನಿರೂಪಿಸಲ್ಪಟ್ಟಿರುವುದು.

# ೭ ನೆಯ ಅಧ್ಯಾಯ

## ತಾರ್ಕಿಕ ದರ್ಶನ

### ಪದ್ಯವಿಭಾಗ

ನ್ಯಾಯ ಮತ್ತು ವೈಶೇಷಿಕ ಎರಡು ದರ್ಶನಗಳೂ ಸೇರಿ ತಾರ್ಕಿಕ ದರ್ಶನವಾಗಿರುವುದು. ಈ ದರ್ಶನಗಳಿಗೆ ಕೆಲವು ಚಿಲ್ಲರೆ ವಿಷಯಗಳಲ್ಲಿ ಅಲ್ಪಾಲ್ಪ ವ್ಯತ್ಯಾಸಗಳಿದ್ದರೂ ಅನೇಕ ಮುಖ್ಯ ವಿಷಯಗಳಲ್ಲಿ ಐಕಮತ್ಯ ವಿರುವುದರಿಂದ ಒಂದೇದರ್ಶನವಾಗಿ ನಿರೂಪಿಸಲ್ಪಡುವುದು. ವೈಶೇಷಿಕರನ್ನು ಜರತ್ತಾರ್ಕಿಕರೆಂದು ಶಾಸ್ತ್ರಕಾರರು ಕರೆಯುತ್ತಾರೆ. ವೈಶೇಷಿಕಕ್ಕೆ ಕಣಾದ ಮಹರ್ಷಿಯೂ ನ್ಯಾಯಕ್ಕೆ ಗೌತಮ ಮಹರ್ಷಿಯೂ ಸೂತ್ರಕಾರರಾಗಿರುವರು. ಕಣಾದರನ್ನು ಕಾಶ್ಯಪರೆಂದೂ ಉಲೂಕರೆಂದೂ ಕರೆಯುವರು. ಗೌತಮರಿಗೆ ಅಕ್ಷಪಾದರೆಂದೂ ಪ್ರಸಿದ್ಧಿ. ಈ ಸೂತ್ರಗಳ ಭಾಷ್ಯಗಳು ಕ್ರಮವಾಗಿ ಪ್ರಶಸ್ತಪಾದರು ವಾತ್ಸ್ಯಾಯನರು—ಇವರುಗಳಿಂದ ರಚಿಸಲ್ಪಟ್ಟಿರುವುವು. ಇವರುಗಳ ಹಿಂದೆಯೂ ಇವುಗಳಿಗೆ ಅನೇಕ ಭಾಷ್ಯಗಳಿತ್ತೆಂದು ಇವರುಗಳ ಭಾಷ್ಯಗಳಿಂದಲೇ ತಿಳಿದು ಬರುತ್ತದೆ.

ವೈಶೇಷಿಕವನ್ನು ಪ್ರಮೇಯಶಾಸ್ತ್ರವೆಂದೂ ನ್ಯಾಯವನ್ನು ಪ್ರಮಾಣಶಾಸ್ತ್ರವೆಂದೂ ಪರಿಗ್ರಹಿಸಿ ಒಂದು ಶಾಸ್ತ್ರವಾಗಿ ಪರಿಷ್ಕರಿಸುವರು. 'ವೈಶೇಷಿಕ' ಪದವು ವಿಶೇಷವೆಂಬ ಒಂದು ವಸ್ತುವನ್ನು ಅಂಗೀಕರಿಸಿರುವುದರಿಂದ ಬಂದಿರುವುದೆಂದು ಪ್ರಾಯಶಃ ತಿಳಿಯುವರು. ಆದರೆ ದಾರ್ಶನಿಕ ವ್ಯವಹಾರವ್ಯುತ್ಪತ್ತಿಯಿಂದ ನೋಡಿದರೆ ಸಾಂಖ್ಯಸಂಪ್ರದಾಯದಲ್ಲಿ 'ವಿಶೇಷ' ಪದವು ಪಂಚಭೂತಗಳಲ್ಲಿ ಪ್ರಯೋಗಿಸಲ್ಪಡುವುದು. ಹಾಗಾದರೆ ಸ್ಥೂಲವಾದ ಪಂಚಭೂತಗಳನ್ನೇ ಜಗತ್ಕಾರಣಗಳೆಂದು ತಿಳಿಯುವ ಸಿದ್ಧಾಂತವು ಸೂಕ್ಷ್ಮವಾದ ಪ್ರಕೃತಿ ಮಹದಹಂಕಾರಾದಿಗಳನ್ನು ಪರಿಗ್ರಹಿಸದಿರುವದೆಂದು ಸಾಂಖ್ಯದೃಷ್ಟಿಯಿಂದ ವೈಶೇಷಿಕವೆಂದು ಪ್ರಸಿದ್ಧಿ ಬಂದಿರಬಹುದು. ವಿಶೇಷದಲ್ಲಿ ನಿಂತದ್ದೆಂದರ್ಥವು.

ನ್ಯಾಯವೆಂದರೆ ಪ್ರಮಾಣಗಳಿಂದ ಪದಾರ್ಥಗಳನ್ನು ಪರೀಕ್ಷೆ ಮಾಡುವ ಶಾಸ್ತ್ರವೆಂದರ್ಥ. ಪ್ರಮಾಣಪ್ರಾಧಾನ್ಯದಿಂದ ಪ್ರಮಾಣಶಾಸ್ತ್ರ ವೆಂದು ಕರೆಯುತ್ತಾರೆ. ಹಾಗೆಯೇ ಆನ್ವೀಕ್ಷಕಿಯೆಂದೂ ನ್ಯಾಯಶಾಸ್ತ್ರಕ್ಕೆ ಪ್ರಸಿದ್ಧಿ ಇರುವುದು. ಪ್ರತ್ಯಕ್ಷದಿಂದಲೂ ಆಗಮದಿಂದಲೂ ತಿಳಿಯಲ್ಪಡುವ ವಸ್ತುಗಳನ್ನು ಅನಂತರ ಯುಕ್ತಿಗಳಿಂದ ಪರೀಕ್ಷೆಯನ್ನು ಮಾಡುವ ವಿದ್ಯೆ ಯೆಂದರ್ಥ. ಈವಿಚಾರ ಮುಂದಿರುವುದು.

ಲೋಕದಲ್ಲಿ ಸಾಮಾನ್ಯವಾಗಿ ವಿದ್ಯೆಗಳು—

ಅಙ್ಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ
ಪುರಾಣಂ ಧರ್ಮಶಾಸ್ತ್ರಂ ಚ ವಿದ್ಯಾ ಹ್ಯೇತಾಶ್ಚತುರ್ದಶ ॥

ಎಂದು ಹದಿನಾಲ್ಕು ಪ್ರಕಾರವೆಂದು ಯಾಜ್ಞವಲ್ಕ್ಯಾದಿ ಮಹರ್ಷಿಗಳು ವಿವರಿಸಿರುವರು. ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥ ಶಾಸ್ತ್ರ ಎಂಬ ನಾಲ್ಕು ವಿದ್ಯೆಗಳನ್ನು ಸೇರಿಸಿ ಹದಿನೆಂಟು ವಿದ್ಯೆಗಳೆಂದು ಕೆಲವರು ಸಂಗ್ರಹಿಸಿರುವರು. ನ್ಯಾಯಶಾಸ್ತ್ರದಲ್ಲಿ ವಿದ್ಯೆ ಆನ್ವೀಕ್ಷಕೀ ತ್ರಯೀ ವಾರ್ತಾದಂಡನೀತಿ ಎಂದು ಸಾಮಾನ್ಯವಾಗಿ ನಾಲ್ಕು ವಿಧವೆಂದು ವಿಂಗಡಿ ಸಿರುವರು. ಆನ್ವೀಕ್ಷಕಿಯೆಂದರೆ ಆತ್ಮವಿದ್ಯೆ. ತ್ರಯೀ ಎಂಬುದು ಯಾಗಾದಿ ಕರ್ಮಗಳನ್ನು ಉಪದೇಶಿಸುವುದು. ವಾರ್ತಾ ಎಂಬುದು ಕೃಷಿ ವಾಣಿಜ್ಯ ಶಿಲ್ಪ ಮೊದಲಾದ ವಿದ್ಯೆ. ದಂಡನೀತಿ ರಾಜ್ಯಭಾರ ಪ್ರಜಾಪರಿಪಾಲನೆ ಇತ್ಯಾದಿಗಳನ್ನು ಬೋಧಿಸುವ ವಿದ್ಯೆ. ಈಗ ವೇದಾಂತವೆಂಬ ಉಪನಿಷತ್ತು ಗಳಿಗೆ ಆತ್ಮವಿದ್ಯೆಯೆಂದು ಪ್ರಸಿದ್ಧಿ. ಆದರೂ ಉಪನಿಷತ್ತುಗಳು ಉಪದೇಶ ರೂಪಗಳಾಗಿರುವುವು. ನ್ಯಾಯವಿದ್ಯೆಯೂ ಆತ್ಮಾನಾತ್ಮಸ್ವರೂಪವನ್ನು ವಿಚಾರಪೂರ್ವಕವಾಗಿ ನಿರ್ಣಯಿಸುವ ವಿದ್ಯೆಯಾದುದರಿಂದ ಆತ್ಮವಿದ್ಯೆ ಯೆಂದೆನಿಸಿರುವುದು. 'ಆನ್ವೀಕ್ಷಕೀಂ ಚಾತ್ಮವಿದ್ಯಾಂ' ಎಂದು ಮನುಸ್ಮೃತಿ ಯಲ್ಲಿ ಆನ್ವೀಕ್ಷಕಿಯನ್ನು ಆತ್ಮವಿದ್ಯೆಯೆಂದು ಸ್ಪಷ್ಟವಾಗಿ ಹೇಳಿರುವುದನ್ನು ವ್ಯಾಖ್ಯಾಕಾರರು ಬೇರೆ ಬೇರೆಯಾಗಿ ಅಭಿಪ್ರಾಯಪಡುತ್ತಾರೆ. ಈ ಅಂಶ ವನ್ನು ವಿದ್ಯಾವಂತರು ವಿಚಾರಿಸಬೇಕು.

ವೈಶೇಷಿಕ ದರ್ಶನದಲ್ಲಿ ಸಾಮಾನ್ಯವಾಗಿ ಪ್ರಪಂಚವನ್ನು ದ್ರವ್ಯ ಗುಣ ಕರ್ಮ ಸಾಮಾನ್ಯ ವಿಶೇಷ ಸಮವಾಯ ಮತ್ತು ಅಭಾವವೆಂದು ಏಳು

ಪದಾರ್ಥಗಳಾಗಿ ವಿಭಾಗಮಾಡಿರುವರು. ನ್ಯಾಯದರ್ಶನದಲ್ಲಿ ಪ್ರಮಾಣ ಪ್ರಮೇಯ ಸಂಶಯ ಪ್ರಯೋಜನ ದೃಷ್ಟಾಂತ ಸಿದ್ಧಾಂತ ಅವಯವ ತರ್ಕ ನಿರ್ಣಯ ವಾದ ಜಲ್ಪ ವಿತಂಡಾ ಹೇತ್ವಾಭಾಸ ಛಲ ಜಾತಿ ನಿಗ್ರಹಸ್ಥಾನ ಎಂದು ಪದಿನಾರು ಪದಾರ್ಥಗಳನ್ನು ನಿರೂಪಿಸಿರುವರು. ಇದರಿಂದ ಪ್ರಪಂಚವನ್ನು ವಿಭಾಗಮಾಡಲಿಲ್ಲ. ಈ ವಿಭಾಗವು ಆತ್ಮಾ ನಾತ್ಮವಿವೇಕ ಕ್ಕಾಗಿ ಬೇಕಾದ ಪದಾರ್ಥಗಳ ಸಂಗ್ರಹವು. ಆದುದರಿಂದಲೇ ನ್ಯಾಯ ಶಾಸ್ತ್ರವನ್ನು ಆತ್ಮಶಾಸ್ತ್ರವೆಂದು ಹೇಳುತ್ತಾರೆ.

ಈ ತರ್ಕಶಾಸ್ತ್ರವು ಸಾಂಖ್ಯದಂತೆ ಕೇವಲ ಸತ್ಪಕ್ಷದಲ್ಲಿ ನಿಲ್ಲುವುದಿಲ್ಲ. ಬೌದ್ಧರಂತೆ ಅಸತ್ಪಕ್ಷದಲ್ಲೂ ನಿಲ್ಲುವುದಿಲ್ಲ, ಆರ್ಹತರಂತೆ ಸದಸತ್ಪಕ್ಷದಲ್ಲಿ ನಿಲ್ಲುವುದಿಲ್ಲ. ಅದ್ವೈತದಂತೆ ಸದಸದ್ವಿ ಲಕ್ಷಣಪಕ್ಷದಲ್ಲಿ ನಿಲ್ಲುವುದಿಲ್ಲ. ಆದರೆ ವ್ಯವಸ್ಥಿತ ಸದಸತ್ಪದಾರ್ಥವಾದದಲ್ಲಿ ನಿಂತಿರುವುದು. ಎಂದರೆ—ಪ್ರಾಯಃ ಸಕಲ ವಸ್ತುಗಳಿಗೂ ಸತ್ಸ್ವರೂಪವೂ ಉಂಟು ; ಅಸತ್ಸ್ವರೂಪವೂ ಉಂಟು. ಅಸತ್ಸ್ವ ರೂಪವೆಂದರೆ ಅಭಾವ.ಘಟಪಟಾದಿವಸ್ತುಗಳೂ ಉಂಟು. ಅವುಗಳ ಅಭಾವಗಳೂ ಉಂಟೆಂದರ್ಥ. ಭಾವವಸ್ತು ಅಭಾವವಾಗುವುದಿಲ್ಲ. ಅಭಾವ ವಸ್ತು ಭಾವವಾಗುವುದಿಲ್ಲ. ಇದಕ್ಕೆ ವ್ಯವಸ್ಥಿತ ಸದಸತ್ಪದಾರ್ಥ ವಾದವೆಂದು ಹೆಸರು. ಆಕಾಶಾದಿ ಕೆಲವು ನಿತ್ಯವಸ್ತುಗಳು. ಗವಾಶ್ವಾದಿ ಗಳು ಕೆಲವು ಅನಿತ್ಯಗಳು. ಇದರಿಂದ ಸಾಂಖ್ಯಸೌಗತಸಾಮರಸ್ಯವೆಂದು ತಾರ್ಕಿಕದರ್ಶನವನ್ನು ಹೇಳಬಹುದು.

ಈ ರೀತಿಯಿಂದ ತರ್ಕಶಾಸ್ತ್ರವು ಮನುಷ್ಯರಿಗೆ ಮುಖ್ಯವಾಗಿ ಬೇಕಾಗಿ ರುವ ವೇದಶಾಸ್ತ್ರಕ್ಕೆ ಪ್ರಾಮಾಣ್ಯವನ್ನು ಸ್ಥಾಪಿಸುವುದಕ್ಕಾಗಿಯೇ ಹೊರಟಿರು ವುದರಿಂದ ಸಕಲವಿದ್ಯೆಗಳಿಗಿಂತಲೂ ಉತ್ತಮವಾದ ವಿದ್ಯೆಯೆಂದು ಕೆಲವರು ಅಭಿಪ್ರಾಯಪಡುವರು. ಮತ್ತು ಕೆಲವರು ಪರಮೇಶ್ವರನನ್ನು ಸ್ಥಾಪಿಸುವ ಶಾಸ್ತ್ರವೆಂದು ಗೌರವಿಸಿರುವರು. ಪರಮೇಶ್ವರನ ಭಕ್ತಿಯೇ ಮುಖ್ಯವಾಗಿ ಸಕಲ ಶ್ರೇಯಸ್ಸುಗಳಿಗೂ ಕಾರಣವಾಗಿರುವುದರಿಂದ ಪರಮೇಶ್ವರನು ಈ ಶಾಸ್ತ್ರದಿಂದ ಸಿದ್ಧಿಸುವುದಾದರೆ ಇದು ಸರ್ವೋತ್ತಮವೆಂಬುದರಲ್ಲಿ ಸಂದೇಹ ವೇನಿರುವುದು ?

ಈ ತರ್ಕಶಾಸ್ತ್ರದಲ್ಲಿ ಪ್ರಾಚೀನ ತರ್ಕ, ನವೀನ ತರ್ಕ ಎಂಬ ಎರಡು

ವಿಭಾಗವಿರುವುದು. ಸೂತ್ರ, ಭಾಷ್ಯ, ವಾರ್ತಿಕ ಮೊದಲಾದ ಗ್ರಂಥಗಳು ಪ್ರಾಚೀನ ತರ್ಕಗಳು. ತತ್ತ್ವಚಿಂತಾಮಣಿ, ಅದರ ವ್ಯಾಖ್ಯಾನಗಳು, ಗದಾಧರೀಯ, ಜಗದೀಶೀಯ, ಮೊದಲಾದ ಗ್ರಂಥಗಳು ನವೀನ ತರ್ಕಕ್ಕೆ ಸೇರಿದುವು. ಈ ನವೀನ ತರ್ಕಾಭ್ಯಾಸದಿಂದ ವ್ಯವಹಾರಸಾಮರ್ಥ್ಯವೂ ವಿಷಯಗಳ ಪರಿಷ್ಕಾರವೂ ಧರ್ಮ ಧರ್ಮಿಜ್ಞಾನವೂ ಯುಕ್ತಿಚಾತುರ್ಯವೂ ಪಾಠಪ್ರವಚನಾದಿ ಕೌಶಲ್ಯವೂ ಸಿದ್ಧಿಸುವುದೆಂದು ಪ್ರಾಯಃ ಎಲ್ಲರೂ ನವೀನ ತರ್ಕಶಾಸ್ತ್ರಾಧ್ಯಯನವನ್ನು ಮಾಡುವರು.

ಪ್ರಾಚೀನ ತರ್ಕಭಾಗದಲ್ಲಿ ಪ್ರಮೇಯಭಾಗವು ಎಂದರೆ ಆತ್ಮಾನಾತ್ಮ ವಿಚಾರವೂ, ವೈರಾಗ್ಯ, ಮೋಕ್ಷ, ಮೋಕ್ಷ ಸಾಧನ—ಈ ವಿಷಯಗಳೂ ಮತ್ತು ಪ್ರಪಂಚದ ವಿಚಾರಗಳೂ ವಿಶದವಾಗಿ ವಿಚಾರಿಸಲ್ಪಡುವುವು. ಆದುದರಿಂದ ಪ್ರಾಚೀನ ತರ್ಕಮೂಲಕವಾಗಿಯೇ ದರ್ಶನತತ್ತ್ವವನ್ನು ತಿಳಿಯಬೇಕು.

ಆನ್ವೀಕ್ಷಕಿಯೆಂಬುದು ಪ್ರತ್ಯಕ್ಷದಿಂದಲೂ ಶಾಸ್ತ್ರದಿಂದಲೂ ತಿಳಿಯಲ್ಪಡುವ ಆತ್ಮ, ಶರೀರ, ಇಂದ್ರಿಯ ಮೊದಲಾದ ವಸ್ತುಗಳ ತತ್ತ್ವಜ್ಞಾನವನ್ನು ಯುಕ್ತಿಮೂಲಕವಾಗಿ ದೃಢಪಡಿಸುವ ಶಾಸ್ತ್ರವೆಂದು ನಿರ್ಣಯವಾದರೆ ಶಾಸ್ತ್ರಕ್ಕಿಂತಲೂ ಯುಕ್ತಿಪ್ರಧಾನವೆಂದು ಅಭಿಪ್ರಾಯವಾಗುವುದು. ಆದುದರಿಂದ ತಾರ್ಕಿಕರಿಗೆ ಯೌಕ್ತಿಕರೆಂದು ವ್ಯವಹಾರವಿರುವುದು.

ಇದಕ್ಕೆ ಪ್ರತಿಯಾಗಿ ಮೀಮಾಂಸಕರಾದ ವೈದಿಕರಲ್ಲಿ ಕುಮಾರಿಲ ಭಟ್ಟಾಚಾರ್ಯರು ಆತ್ಮವಾದದ ಕೊನೆಯಲ್ಲಿ ಹೇಳಿರುವುದು ಹೇಗೆಂದರೆ—ಭಾಷ್ಯಕಾರರಾದ ಶಬರಸ್ವಾಮಿಗಳು ನಾಸ್ತಿಕಮತವನ್ನು ನಿರಾಕರಿಸುವುದಕ್ಕಾಗಿ ಆತ್ಮನೆಂಬ ವಸ್ತುವನ್ನು ಯುಕ್ತಿಯಿಂದ ನಿರೂಪಿಸಿದರು. ಹೀಗೆ ಯುಕ್ತಿಯಿಂದ ಬಂದ ಆತ್ಮಜ್ಞಾನವನ್ನು ವೇದಾಂತವೆಂಬ ಶಾಸ್ತ್ರದಿಂದ ದೃಢಪಡಿಸಿಕೊಳ್ಳಬೇಕು ಎಂದು ಬರೆದಿರುವರು.

ವೈಶೇಷಿಕದರ್ಶನದಲ್ಲಿ ಕಣಾದಮಹರ್ಷಿಗಳು 'ಪ್ರತ್ಯಕ್ಷದಿಂದ ತಿಳಿದ ಆತ್ಮಸ್ವರೂಪವನ್ನು ಯುಕ್ತಿಯಿಂದ ವಿಚಾರಿಸಿ ಸಂದೇಹವಿಲ್ಲದೆ ನಿರ್ಣಯಿಸಿಕೊಳ್ಳಬೇಕು' ಎಂದು ಎರಡನೆಯ ಆಹ್ನಿಕದಲ್ಲಿ ಬರೆದಿರುತ್ತಾರೆ. ಹೀಗೆ ವೈದಿಕರು ಶಾಸ್ತ್ರಕ್ಕೆ ಪ್ರಾಧಾನ್ಯವನ್ನೂ, ತಾರ್ಕಿಕರು ಯುಕ್ತಿಗೆ ಪ್ರಾಧಾನ್ಯವನ್ನೂ ಕಲ್ಪಿಸುತ್ತಾರೆ.

ಮತ್ತು ಶಾಸ್ತ್ರದ ಅರ್ಥವನ್ನು ತಿಳಿದುಕೊಳ್ಳಬೇಕಾದರೆ ಸಂದರ್ಭ ಮೊದಲಾದ ಯುಕ್ತಿಗಳಿಂದ ತಾತ್ಪರ್ಯವನ್ನು ಕಂಡುಹಿಡಿದು ಅದಕ್ಕೆ ಅನುಸಾರವಾಗಿ ಅರ್ಥವನ್ನು ತಿಳಿಯಬೇಕು ಎಂದು ಎಲ್ಲರೂ ಹೇಳುವರು. ಇದರಿಂದ ಯುಕ್ತಿಯಿಂದ ತಿಳಿದ ಅರ್ಥವೇ ಶಾಸ್ತ್ರದಿಂದ ತಿಳಿಯಿತು ಎಂದು ತಾರ್ಕಿಕರು ಹೇಳುತ್ತಾರೆ. ಇದಕ್ಕೆ ಪ್ರತಿಯಾಗಿ 'ತಾತ್ಪರ್ಯವನ್ನು ಸೂಚಿಸುವ ಯುಕ್ತಿಗಳು ಶಾಸ್ತ್ರದ ಹಿಂದು ಮುಂದು ಶಬ್ದಗಳಲ್ಲಿರತಕ್ಕವುಗಳೇ ಹೊರತು ಮನುಷ್ಯರ ಮನಸ್ಸಿನಲ್ಲಿರತಕ್ಕವಲ್ಲ. ಆದುದರಿಂದ ಯುಕ್ತಿ ಮೂಲಕವಾಗಿ ತಿಳಿದರೂ ಶಾಸ್ತ್ರಮೂಲಕವಾಗಿಯೇ ತಿಳಿಯಿತು' ಎಂದು 'ವಾಕ್ಯಪದಿ'ಯಲ್ಲಿ ವೈದಿಕರಾದ ಭರ್ತೃಹರಿಯುವರು ಬರೆದಿರುತ್ತಾರೆ.

ಯುಕ್ತಿಗೆ ಪ್ರತಿಯಾದ ಯುಕ್ತಿ ಬುದ್ಧಿವಂತರಲ್ಲಿ ಒಬ್ಬರಿಗಿಂತಲೂ ಒಬ್ಬರಿಗೆ ಹೆಚ್ಚು ತೋರಿಬರುವುದಾದರಿಂದ ಯುಕ್ತಿಗೆ ವ್ಯವಸ್ಥೆಯಿಲ್ಲ. ಆದುದರಿಂದಲೇ ಧರ್ಮಸ್ವರೂಪವನ್ನೋ ಬ್ರಹ್ಮಸ್ವರೂಪವನ್ನೋ ಶಾಸ್ತ್ರದಿಂದಲೇ ತಿಳಿಯಬೇಕೆಂದು ವೈದಿಕರು ಅಭಿಪ್ರಾಯಪಡುವರು.

ಹೇಳಿದವರು, ಕೇಳಿದವರು ಗೊತ್ತಿಲ್ಲದ ಬರಿಯ ಶಾಸ್ತ್ರವು ಆಕಾಶವಾಣಿಯಂತೆ ನಂಬಲರ್ಹವಲ್ಲ. ಯುಕ್ತಿಗೆ ಅನುಸಾರವಾಗಿದ್ದರೇಯೇ ಮನಸ್ಸು ಒಪ್ಪುವುದು ಎಂದು ಯೌಕ್ತಿಕರ ಅಭಿಪ್ರಾಯ. ಯುಕ್ತಿಯಿಂದಲೇ ಸರ್ವಶೂನ್ಯವಾದ, ನಾಸ್ತಿಕವಾದ ಮೊದಲಾದವುಗಳನ್ನು ನಿರಾಕರಿಸಬೇಕೆಂದು ತಾರ್ಕಿಕರ ಸಿದ್ಧಾಂತ. ಹೀಗೆ ಶಾಸ್ತ್ರಕ್ಕೂ ಯುಕ್ತಿಗೂ ಇರತಕ್ಕ ಪ್ರಾಧಾನ್ಯಾಪ್ರಾಧಾನ್ಯವಾದವು ಅನಾದಿಕಾಲದಿಂದಿರುವುದು.

ಶಾಸ್ತ್ರಕ್ಕೆ ಅನುಕೂಲವಾದ ತರ್ಕ ಸತ್ತರ್ಕ. ಅದಕ್ಕೆ ಅನುಕೂಲ ತರ್ಕವೆಂದೂ ಹೆಸರು. ಶಾಸ್ತ್ರಕ್ಕೆ ಪ್ರತಿಕೂಲವಾಗಿರುವ ತರ್ಕ ದುಸ್ತರ್ಕ. ಇದಕ್ಕೆ ಕುತರ್ಕವೆಂದೂ ವ್ಯವಹಾರವುಂಟು.

## ಪ್ರಮೇಯ ವಿಭಾಗ

ಸಾಮಾನ್ಯವಾಗಿ ಸಕಲ ಶಾಸ್ತ್ರಗಳಲ್ಲೂ ವಿಷಯವನ್ನು ಹೇಯ. ಹೇಯ ಹೇತು, ಉಪಾದೇಯ, ಉಪಾದೇಯಹೇತು ಎಂದು ವಿಭಾಗ ಮಾಡಿರುವರು. ವೈದ್ಯಶಾಸ್ತ್ರದಲ್ಲಿ ವ್ಯಾಧಿ ಹೇಯ. ಅಪಥ್ಯ ಹೇಯಹೇತು. ಆರೋಗ್ಯ ಉಪಾದೇಯ. ಔಷಧ ಅದಕ್ಕೆ ಹೇತು.

ನ್ಯಾಯಶಾಸ್ತ್ರದಲ್ಲಿ ಹೇಗೆಂದರೆ—ಆತ್ಮ ಶರೀರ ಇಂದ್ರಿಯ ಅರ್ಥ ಬುದ್ಧಿ ಮನಸ್ಸು ಪ್ರವೃತ್ತಿ ದೋಷ ಪ್ರೇತ್ಯಭಾವ ಫಲ ದುಃಖ ಅಪವರ್ಗ ವೆಂದು ಹನ್ನೆರಡು ವಿಧವಾಗಿ ಪ್ರಮೇಯವನ್ನು ಒಂಬತ್ತನೆಯ ಸೂತ್ರದಲ್ಲಿ ವಿಭಾಗ ಮಾಡಿರುವರು.

ಆತ್ಮನೆಂದರೆ ಸರ್ವವನ್ನೂ ನೋಡತಕ್ಕವನು, ಅನುಭವಿಸತಕ್ಕವನು, ತಿಳಿಯುತಕ್ಕವನು. ಇವನ ಭೋಗಕ್ಕೆ ಆಶ್ರಯ ಶರೀರ. ಇಂದ್ರಿಯಗಳೇ ಸಾಧನಗಳು. ವಿಷಯಗಳೇ ಅರ್ಥಗಳು. ಬುದ್ಧಿಯೇ ಭೋಗ. ಕಣ್ಣು ಮೊದಲಾದ ಇಂದ್ರಿಯಗಳು ಸಕಲ ವಿಷಯಗಳನ್ನೂ ತಿಳಿಯಲು ಪ್ರತ್ಯೇಕ ವಾಗಿ ಅಸಮರ್ಥವಾಗಿರುವುದರಿಂದ ಸರ್ವಶಕ್ತಿಯುಳ್ಳ ಮನಸ್ಸು ಶರೀರೇಂದ್ರಿ ಯಾರ್ಥ ಬುದ್ಧಿ ಸುಖವೇದನೆಗಳಿಗೆ ಉತ್ಪತ್ತಿ ಕಾರಣ. ಪ್ರವೃತ್ತಿಯೆಂಬುದು ಪುಣ್ಯಪಾಪಗಳು. ರಾಗದ್ವೇಷಗಳೆಂಬುದು ದೋಷಗಳು. ಹಿಂದಿನ ಶರೀ ರಗಳಿಗೆ ಆದಿಯಿಲ್ಲ. ಮುಂದಿನ ಶರೀರಗಳಿಗೆ ಮೋಕ್ಷವೇ ಕೊನೆ. ಇದೇ ಪ್ರೇತ್ಯಭಾವ. ಸುಖದುಃಖಾನುಭವವು ಫಲ. ದುಃಖವೆಂದರೆ ಹಿಂದೆ ಹೇಳಿದ ಸಕಲ ಪ್ರಮೇಯವೂ ದುಃಖಮಿಶ್ರವಾಗಿಯೂ ದುಃಖಮಯ ವಾಗಿಯೂ ಇರುವುದರಿಂದ ಇವುಗಳೆಲ್ಲಲ್ಲ ದುಃಖವೆಂಬ ಭಾವನೆ ಬೇಕು. ಸದಾ ದುಃಖ ದುಃಖವೆಂಬ ಭಾವನೆ ಮಾಡುತ್ತಿದ್ದರೆ ನಿರ್ವೇದ ಬರುತ್ತದೆ. ನಿರ್ವೇದವೆಂದರೆ ಅಯ್ಯೋ, ಇದುವರೆಗೆ, ವಿವೇಕವಿಲ್ಲದೆ ಕೆಟ್ಟೆನಲ್ಲಾ ಎಂಬ ಆತ್ಮನಿಂದೆ. ಇದರಿಂದ ವೈರಾಗ್ಯ. ವೈರಾಗ್ಯದಿಂದ ಮೋಕ್ಷ.

ಇವುಗಳಲ್ಲಿ ಪ್ರೇತ್ಯಭಾವ, ಫಲ, ದುಃಖ ಈ ಮೂರೂ ಹೇಯ. ಪ್ರವೃತ್ತಿ ದೋಷಗಳು ಹೇಯಹೇಯಗಳು. ಅಪವರ್ಗ ಉಪಾದೇಯ. ತತ್ವಜ್ಞಾನ ಅದಕ್ಕೆ ಹೇತು. ಇದು ಪ್ರಥಮ ಸೂತ್ರದಲ್ಲಿ ತತ್ತ್ವಜ್ಞಾನದಿಂದ ಮೋಕ್ಷಪ್ರಾಪ್ತಿಯೆಂದು ಚೆನ್ನಾಗಿ ಉಪದೇಶಿಸಲ್ಪಟ್ಟಿರುವುದು.

ಈ ಹನ್ನೆರಡು ವಿಧವಾದ ಪ್ರಮೇಯದಲ್ಲಿ ಆತ್ಮನೇ ಮೋಕ್ಷಕ್ಕೆ ಅಧಿಕಾರಿ. ಶರೀರ, ಇಂದ್ರಿಯ, ಅರ್ಥ, ಬುದ್ಧಿ ಮತ್ತು ಮನಸ್ಸು ಈ ಐದು ವಸ್ತುಗಳೂ ಭೋಗಗಳಾಗಿಯೂ, ಭೋಗಸಾಧನೆಗಳಾಗಿಯೂ ಇರುವುವು. ಇದರಿಂದ ಭೋಗ, ಭೋಗಸಾಧನ, ಮೋಕ್ಷ, ಮೋಕ್ಷಸಾಧನ ಹೀಗೆ ಶಾಸ್ತ್ರಾರ್ಥವು ಸಂಗ್ರಹವಾಗಿರುವುದು.

ಮತ್ತು ಈ ಒಂಬತ್ತನೆಯ ಸೂತ್ರಾರ್ಥವನ್ನೇ 'ಏಕವಿಂಶತಿ ದುಃಖ ಧ್ವಂಸಃ ಮೋಕ್ಷಃ' ಎಂದು ನವೀನರು ಬರೆಯುತ್ತಾರೆ. ಅದು ಹೇಗೆಂದರೆ, ಇಪ್ಪತ್ತೊಂದು ದುಃಖಗಳಲ್ಲಿ ಇಂದ್ರಿಯಗಳು ಆರು. ಅವುಗಳಿಗೆ ಗೋಚರ ವಾಗುವ ಶಬ್ದಾದಿ ವಿಷಯಗಳು ಆರು. ಇವುಗಳ ಅನುಭವಗಳು ಆರು. ಇವುಗಳಿಗೆ ಮೂಲಕಾರಣವಾಗಿರುವ ಶರೀರವೊಂದು. ಅದರ ಮೂಲಕವಾಗಿ ಬರುವ ಸುಖಾನುಭವ ಮತ್ತು ದುಃಖಾನುಭವ ಇವೆರಡೂ ಸೇರಿ ಇಪ್ಪತ್ತೊಂದು. ಇವುಗಳೆಲ್ಲಾ ದುಃಖಮೂಲವಾಗಿಯೂ ದುಃಖಮಿಶ್ರವಾಗಿಯೂ ದುಃಖಸಾಧನವಾಗಿಯೂ ಇರುವುದರಿಂದ ವಿವೇಕಿಗಳಿಗೆ ದುಃಖಮಯ. ಇಂತಹ ಇಪ್ಪತ್ತೊಂದು ವಿಧವಾದ ದುಃಖಗಳು ಆತ್ಯಂತಿಕವಾಗಿ ನಿವರ್ತಿಸುವುವು ; ಅಂದರೆ ಪುನರುದಯವಿಲ್ಲದೆ ನಿಶ್ಶೇಷವಾಗಿ ನಾಶವಾಗುವುದೆಂದರ್ಥ.

ನ್ಯಾಯಶಾಸ್ತ್ರವೆಂದರೆ ವಿಚಾರಶಾಸ್ತ್ರ. ವಿಚಾರಕ್ಕೆ ಬೇಕಾದ ಹದಿನಾರು ಅಂಶಗಳು ಇಲ್ಲಿ ನಿರೂಪಿಸಲ್ಪಟ್ಟಿರುವುವು. ಪ್ರಮಾಣಪೂರ್ವಕ ವಿಚಾರಿಸ ಬೇಕಾಗಿರುವುದರಿಂದ ಪ್ರಮಾಣಗಳು ಮುಖ್ಯವಾಗಿ ಮೊದಲು ನಿರೂಪಿಸಲ್ಪಟ್ಟು ಅವುಗಳ ವಿಷಯಗಳು ಆತ್ಮ ಶರೀರ ಮೊದಲಾದ ಹನ್ನೆರಡು ಸೂಚಿಸಲ್ಪಟ್ಟಿರುವುವು. ಸಂಶಯ ಮೊದಲಾದ ಹದಿನಾಲ್ಕು ಅಂಶಗಳಿಲ್ಲದೆ ವಿಚಾರ ನಡೆಯಲಾರದು. ತಿಳಿಯದಿರುವ ಅಥವಾ ನಿಶ್ಚಿತವಾಗಿರುವ ವಿಷಯದಲ್ಲಿ ವಿಚಾರವಿಲ್ಲ. ವಿಷಯ ಸಂದಿಗ್ಧವಾಗಿದ್ದರೆ ವಿಚಾರ. ಅದಕ್ಕಾಗಿ ಸಂಶಯಸ್ವರೂಪವನ್ನು ತಿಳಿಯಬೇಕು. ಪ್ರಯೋಜನವನ್ನುದ್ದೇಶಿಸಿಯೇ ಸಕಲ ಪ್ರಾಣಿಗಳೂ ಸಕಲವ್ಯಾಪಾರಗಳೂ ಸಕಲ ವಿದ್ಯೆಗಳೂ ಇರುವುದರಿಂದ ಪ್ರಯೋಜನವೂ ಒಂದು ಅಂಶವಾಗಿ ತಿಳಿಯಬೇಕಾಗಿರುವುದು. ವಿತಂಡಾವಾದವೆಂಬ ಸರ್ವಶೂನ್ಯವಾದವನ್ನು ಖಂಡಿಸಬೇಕಾದರೆ ಪ್ರಯೋಜನವೇ ಬ್ರಹ್ಮಾಸ್ತ್ರವಾಗಿರುವುದು. ಹೇಗೆಂದರೆ—ವಿತಂಡಾ ಎಂದರೆ ತನಗೆ ಯಾವ ಪಕ್ಷವೂ ಇಲ್ಲದೆ ಇತರರ ಪಕ್ಷಗಳನ್ನು ಖಂಡಿಸುವುದು. ವಿತಂಡಾವಾದಿಗೆ ಪ್ರಯೋಜನವಿದೆಯೇ ಇಲ್ಲವೇ ಎಂಬ ಪ್ರಶ್ನೆಯ ಮೇಲೆ ಪ್ರಯೋಜನವನ್ನೊಪ್ಪಿಕೊಂಡರೆ ಅದೇ ಅವನ ಪಕ್ಷವಾಯಿತು. ಅವನು ವಿತಂಡಾವಾದಿಯಲ್ಲ. ಪ್ರಯೋಜನವಿಲ್ಲವೆಂದರೆ ಪಂಡಿತನೂ ಅಲ್ಲ, ಪಾಮರನೂ ಅಲ್ಲ, ಉನ್ಮತ್ತನಾಗುವನು, ವಾದಾಧಿಕಾರವಿಲ್ಲ.

ಪರಕೀಯಪಕ್ಷಗಳು ಸರಿಯಲ್ಲವೆಂದು ಅವರಿಗೆ ತಿಳಿಸುವುದೇ ಪ್ರಯೋಜನವೆಂದರೆ ತಿಳಿಸುವವನು, ತಿಳಿದುಕೊಳ್ಳುವವನು, ತಿಳಿಯಲ್ಪಡುವ ವಿಷಯ ತಿಳಿಯುವುದಕ್ಕೆ ಸಾಧನವಾದ ವಾಕ್ಯಗಳು ಇವುಗಳನ್ನು ಒಪ್ಪಿಕೊಂಡು ತನ್ನ ವಾಕ್ಯಗಳಿಗೆ ಅರ್ಥವನ್ನು ಒಪ್ಪಿಕೊಳ್ಳಬೇಕು. ಹಾಗಾದರೆ ಅದೇ ಸ್ವಪಕ್ಷವಾಗುತ್ತದೆ. ಅವನು ಶೂನ್ಯವಾದಿಯೆಂಬ ವಿತಂಡಾವಾದಿಯಾಗಲಾರನು ಎಂದು ವಿಂತಡಾವಾದ ನಿರಾಸಸಾರಾಂಶ.

ಪಂಡಿತಪಾಮರ ಸಾಧಾರಣವಾಗಿ ಪ್ರಸಿದ್ಧವಾಗಿರುವುದು ದೃಷ್ಟಾಂತ. ಅನುಮಾನಪ್ರಮಾಣದ ಗುಣದೋಷಗಳು ದೃಷ್ಟಾಂತಾಧೀನವಾಗಿರುವುವು ಮತ್ತು ಇದು ಅನುಮಾನಕ್ಕೆ ಬೀಜಪ್ರಾಯವಾಗಿರುವುದು. ನಾಸ್ತಿಕವಾದ ನಿರಾಕರಣಕ್ಕೆ ದೃಷ್ಟಾಂತವೇ ಬ್ರಹ್ಮಾಸ್ತ್ರ. ನಾಸ್ತಿಕನು ದೃಷ್ಟಾಂತವನ್ನೊಪ್ಪಿಕೊಂಡರೆ ಯುಕ್ತಿಶಾಸ್ತ್ರ ಪ್ರಬಲವಾಗಿ ಅನುಮಾನ ಪ್ರಾಮಾಣ್ಯದಿಂದ ನಾಸ್ತಿಕತ್ವ ಹೋಯಿತು. ದೃಷ್ಟಾಂತವನ್ನೇ ಒಪ್ಪಿಕೊಳ್ಳದಿದ್ದರೆ ಯುಕ್ತಿಯೆಂಬುದೇ ಇಲ್ಲದೆ ಪರಪಕ್ಷನಿರಾಕರಣವಾಗಲಾರದು.

ಅವರವರು ನಂಬಿರುವ ಅಂಶಗಳೇ ಸಿದ್ಧಾಂತಗಳು. ಬೇರೆಬೇರೆ ಸಿದ್ಧಾಂತಗಳಿಲ್ಲದಿದ್ದರೆ ವಿಚಾರವೇ ಬೇಕಿಲ್ಲ. ಆದ್ದರಿಂದ ಸಿದ್ಧಾಂತ ಪದಾರ್ಥನಿರೂಪಣೆಯ ಆವಶ್ಯಕತೆ ಇರುವುದು.

ವಾದದಲ್ಲಿ ಪರಸ್ಪರಾಭಿಪ್ರಾಯಗಳನ್ನು ಬೋಧಿಸಿ ಸಾಧಿಸುವ ದೊಡ್ಡ ವಾಕ್ಯಕ್ಕೆ ನ್ಯಾಯವಾಕ್ಯವೆಂದು ಹೆಸರು. ಆ ವಾಕ್ಯದಲ್ಲಿ ಐದು ಚಿಕ್ಕ ವಾಕ್ಯಗಳಿರುವುವು. ಅವುಗಳೇ ಪಂಚಾವಯವಗಳು.

ತರ್ಕವೆಂದರೆ ಊಹೆ; ಯಾವುದಾದರೊಂದು ಅಂಶದಲ್ಲಿ ಕಾರಣೋಪಪತ್ತಿ ಚಿಂತೆ. ಇದು ಪ್ರಮಾಣಗಳಿಗೆ ಸಹಾಯವಾಗಿ ತತ್ತ್ವನಿರ್ಣಯಕ್ಕೆ ಬೇಕಾಗಿರುವ ಅಂಶ. ತತ್ತ್ವಜ್ಞಾನವೇ ನಿರ್ಣಯ, ಪ್ರಮಾಣಗಳ ಫಲ. ಇದಕ್ಕಾಗಿಯೇ ವಾದವೆಂಬ ವಿಚಾರ ಗುರುಶಿಷ್ಯರುಗಳಿಗೂ ವಾದಿಪ್ರತಿವಾದಿಗಳಿಗೂ ನಡೆಯುವುದು.

ಜಲ್ಪವೆಂದರೆ ವಾದಿವಿಜಯಕ್ಕಾಗಿ ಮಾಡುವ ವಿಚಾರ. ವಿತಂಡಾವಾದವೆಂಬ ಅಸಂಬದ್ಧಪ್ರಲಾಪ ಅಂತಹದೇ. ಆದರೂ ವಾದಿನಿಗ್ರಹ ಮಾಡಿ ಸಿದ್ಧಾಂತವನ್ನು ಸಂರಕ್ಷಿಸುವುದಕ್ಕಾಗಿ ಇವುಗಳ ಸ್ವರೂಪವೂ

ತಿಳಿಯಲ್ಪಡಬೇಕು. ತೋಟಗಳಿಗೆ ಮುಳ್ಳುಬೇಲಿ ಹಾಕುವ ಹಾಗೆ ಸಿದ್ಧಾಂತ ಸಂರಕ್ಷಣೆಗೆ ದುರ್ವಾದವಾದರೂ ಜಲ್ಪವಿತಂಡಗಳು ಕೆಲವು ಸಂದರ್ಭಗಳಲ್ಲಿ ಬೇಕಾಗಿರುವುವು. ಸಿದ್ಧಾಂತಸಂರಕ್ಷಣೆಯನ್ನು ಮಾಡದಿದ್ದರೆ ಮಂದಮತಿಗಳಾದ ಶಿಷ್ಯರಿಗೆ ಅವಿಶ್ವಾಸ ಹುಟ್ಟಿ ಪ್ರಯಾಸ ವ್ಯರ್ಥ್ಯವಾಗುವುದು.

ಹೀಗೆಯೇ ಹೇತ್ವಾಭಾಸಗಳೆಂಬುವು ಹೇತುದೋಷಗಳು. ವಾಕ್ಯಗಳಿಗೆ ಅಪಾರ್ಥವೆಂಬುದು ಛಲ. ಅಸದುತ್ತರವೆಂಬುದು ಜಾತಿ. ವಾದಿಗಳ ಅಸಾಮರ್ಥ್ಯವೆಂಬುದು ನಿಗ್ರಹಸ್ಥಾನ. ಈ ನಾಲ್ಕು ಅಂಶಗಳೂ ವಾದಿವಿಜಯಕ್ಕಾಗಿಯೂ ತನ್ನ ವಾದದಲ್ಲಿ ಇಂತಹ ದೋಷಗಳಿಲ್ಲದ ಹಾಗೆ ನೋಡಿಕೊಳ್ಳುವುದಕ್ಕಾಗಿಯೂ ತಿಳಿಯಬೇಕೆಂದು ಷೋಡಶಪದಾರ್ಥನಿರೂಪಣವು ನ್ಯಾಯಶಾಸ್ತ್ರವು.

ಈ ರೀತಿಯಾದ ಶಾಸ್ತ್ರಾರ್ಥ ವಿಚಾರದಿಂದ ಆತ್ಮಾನಾತ್ಮ ವಿವೇಕ ಮುಖ್ಯವಾಗಿ ಬೇಕೆಂದರ್ಥವಾಯಿತು. ಆತ್ಮವಸ್ತುವನ್ನೂ ಅನಾತ್ಮವಸ್ತುವನ್ನೂ ಯಥಾವತ್ತಾಗಿ ತಿಳಿಯುವುದೇ ತತ್ತ್ವಜ್ಞಾನ. ದೇಹೇಂದ್ರಿಯಾದಿಗಳನ್ನು ಆತ್ಮನೆಂದು ತಿಳಿಯುವುದೇ ಅಹಮಸ್ಮಿ ಎಂಬ ಮೋಹ, ಅಹಂಕಾರ. ಇದೇ ಸಂಸಾರಬೀಜ. ಇದಕ್ಕೆ ಸ್ವಲ್ಪ ತೊಂದರೆ ಬಂದರೆ ಆತ್ಮನೇ ಹೋದನೆಂದು ದುಃಖಿಸುವನು, ಹೆದರುವನು. ಇದಕ್ಕೆ ಆತ್ಮಾನಾತ್ಮತತ್ತ್ವಸಾಕ್ಷಾತ್ಕಾರವೇ ಸಾಧ್ಯವಾದ ನಿವರ್ತಕ. ಇದರಿಂದ ಅಹಂಕಾರ ನಿವೃತ್ತಿಯಾಗಿ ದುಃಖ ಭಾವನೆಯಿಂದ ವಿರಕ್ತನಾಗಿ ಮುಕ್ತನಾಗುವನು. ಇದಲ್ಲದೆ ಸಕಲವಸ್ತುಗಳಲ್ಲೂ ನಾನಾವಿಧವಾದ ಮಿಥ್ಯಾಜ್ಞಾನಗಳಿರುವುವು, ಪ್ರತಿಯೊಂದು ವಸ್ತುವಿನ ತತ್ತ್ವಜ್ಞಾನವೂ ಬೇಕೆಂದರೆ ಯಾರಿಗೂ ಸಾಧ್ಯವಿಲ್ಲ. ಶಾಸ್ತ್ರೋಪದೇಶವೂ ವ್ಯರ್ಥವಾಗುವುದು. ಆದುದರಿಂದ ಎಂತೆಂತಹ ವಸ್ತುಗಳ ಮಿಥ್ಯಾಜ್ಞಾನ ಸಂಸಾರಕಾರಣವೋ ಆಯಾ ವಸ್ತುಗಳೇ ಇಲ್ಲಿ ಸ್ವೀಕರಿಸಲ್ಪಟ್ಟಿರುವುವು. ವೈಶೇಷಿಕದರ್ಶನದಲ್ಲಿ ಪ್ರಪಂಚದ ಎಲ್ಲಾ ವಸ್ತುಗಳನ್ನೂ ಸಂಗ್ರಹಿಸಿ ನಿರೂಪಿಸಿದರೂ ಪ್ರತಿವಸ್ತುವಿನ ತತ್ತ್ವಜ್ಞಾನವು ಸಾಧ್ಯವೂ ಅಲ್ಲ, ವಿವಕ್ಷಿತವೂ ಅಲ್ಲ. ಆದುದರಿಂದ ಸಾಮಾನ್ಯವಾಗಿ ಪದಾರ್ಥಗಳ ಸಾಧರ್ಮ್ಯವೈಧರ್ಮ್ಯಗಳೇ ವಿವಕ್ಷಿತಗಳು. ಇದರಿಂದ ತರ್ಕಶಾಸ್ತ್ರವು ಸಕಲವಸ್ತುಗಳನ್ನೂ ಚೆನ್ನಾಗಿ ಶೋಧಿಸಿ ನಿರೂಪಣೆ ಮಾಡಲಿಲ್ಲವೆಂಬ ಆಧುನಿಕಪ್ರವಾದಕ್ಕೆ ಅವಕಾಶವಿರದು.

## ಆತ್ಮತತ್ತ್ವ

ಲೋಕದಲ್ಲಿ ಜ್ಞಾನ ಸುಖ ದುಃಖ ಇಚ್ಛೆ ದ್ವೇಷ ಪ್ರಯತ್ನ ಕಾಮ ಕ್ರೋಧ ದಯೆ ದಾಕ್ಷಿಣ್ಯ ಮೊದಲಾದ ಭಾವಗಳು ಸರ್ವಜನಪ್ರಸಿದ್ಧಗಳಾಗಿರುತ್ತವೆ. ಇವುಗಳಿಗೆ ಮೂಲವಾಗಿರುವದನ್ನು ಚಿತ್ತವೆಂದೂ ಇವುಗಳನ್ನು ಚೈತ್ತವೆಂದೂ ಸಾಮಾನ್ಯವಾಗಿ ವ್ಯವಹರಿಸುವರು. ಇವುಗಳು ಒಳಗಿನ ವಸ್ತುಗಳು. ಪೃಥಿವಿ ಮೊದಲಾದ ಪಂಚಭೂತಗಳಿಗೂ ಅವುಗಳಿಂದುಂಟಾಗುವ ದೇಹ ಇಂದ್ರಿಯ ನದಿ ಸಮುದ್ರ ಪರ್ವತ ವೃಕ್ಷಾದಿಗಳಿಗೂ ಭೂತ ಭೌತಿಕವೆಂಬ ವ್ಯವಹಾರವಿರುವುದು. ಇವು ಹೊರಗಿನ ವಸ್ತುಗಳು. ಭೂತಭೌತಿಕ ವಸ್ತುಗಳ ಸ್ವಭಾವಗಳೇ ಚಿತ್ತಚೈತ್ತಗಳು ; ಸ್ವತಂತ್ರ ವಸ್ತುಗಳಲ್ಲವೆಂದು ಚಾರ್ವಾಕಮತ.

ಇವುಗಳೆಲ್ಲವೂ ಸ್ವತಂತ್ರವಸ್ತುಗಳು. ಚಿತ್ತವೆಂಬುದು ಇವುಗಳಿಗೆಲ್ಲಾ ಮೂಲವಾಗಿರುವ ವಿಜ್ಞಾನವೆಂಬ ವಸ್ತು. ಅದರ ಪರಿಣಾಮವೇ ಇವುಗಳೆಂದು ಬೌದ್ಧರು ತಿಳಿಯುವರು.

ಸಾಂಖ್ಯರ ಅಭಿಪ್ರಾಯವೇನೆಂದರೆ. ಪ್ರಕೃತಿಯ ಪರಿಣಾಮವಾದ ಬುದ್ಧಿಯೆಂಬ ಅಂತಃಕರಣದಲ್ಲಿ ಇವೆಲ್ಲವೂ ಉದಯಿಸುವುವು. ಪುರುಷನೆಂಬ ಆತ್ಮನು ಚೈತನ್ಯ ಸ್ವರೂಪನಾಗಿ ತಾವರೆಯ ಎಲೆಯಂತೆ ಲೇಪವಿಲ್ಲದವನು. ಅವನಿಗೂ ಬುದ್ಧಿಗೂ ಭೇದವನ್ನು ಅನಾದಿಕಾಲದಿಂದ ತಿಳಿಯದೇ ಇರುವುದರಿಂದ ಇವೆಲ್ಲವೂ ಪುರುಷನಿಗೆ ಸೇರಿರುವುದೆಂದು ತಿಳಿದು ಜನರು ಸಂಕಟಪಡುತ್ತಿರುವರು. ಬುದ್ಧಿ, ಪುರುಷ—ಇವುಗಳ ವ್ಯತ್ಯಾಸ ತಿಳಿದರೆ ಇವುಗಳ ಸಂಬಂಧ ನಿಶ್ಶೇಷವಾಗಿ ನಿವೃತ್ತಿಯಾಗುವುದೆಂದು ಸಾಂಖ್ಯರ ಮತ.

ಯೋಗ ಜೈನ ವಿಶುದ್ಧಾದ್ವೈತ ಮೊದಲಾದ ಅಭಿಪ್ರಾಯ ಕೂಡ ಪುರುಷನನ್ನೂ ಅಂತಃಕರಣವನ್ನೂ ಒಂದು ಎಂದು ಭ್ರಮಿಸಿರುವುದರಿಂದ ಬುದ್ಧಿಯಲ್ಲಿರುವುದೆಲ್ಲವೂ ಪುರುಷನಲ್ಲಿರುವುದೆಂದೂ ಪುರುಷನಲ್ಲಿರುವ ಚೈತನ್ಯ ಮೊದಲಾದ ಗುಣಗಳನ್ನು ಬುದ್ಧಿಯಲ್ಲಿರುವುದೆಂದೂ ಭ್ರಮಿಸಿ ಲೋಕವ್ಯವಹಾರ ನಡೆಯುವುದು. ಬುದ್ಧಿಪುರುಷರ ಭೇದಜ್ಞಾನ ಬಂದರೆ ಇವೆಲ್ಲವೂ ನಿವೃತ್ತಿಯಾಗುವುದೆಂದು ಸಿದ್ಧಾಂತ.

ಮೀಮಾಂಸಕರ ಅಭಿಪ್ರಾಯದಲ್ಲಿ ಪುರುಷನೆಂಬ ಆತ್ಮವಸ್ತುವಿನಲ್ಲೇ

ಈ ಅಂತರವಸ್ತುಗಳು ಶಕ್ತಿರೂಪದಿಂದ ಕಾರಣದಶೆಯಲ್ಲಿ ಸೂಕ್ಷ್ಮರೂಪವಾಗಿರುವುವು. ಕಾರಣಸಾಮಗ್ರಿಯಿಂದ ವ್ಯಕ್ತರೂಪವಾಗಿ ಅಂದರೆ ಸ್ಥೂಲರೂಪವಾಗಿ ಹೊರಗೆ ಬರುವುವು. ಕಾರಣಸಾಮಗ್ರಿಯನ್ನು ವಿನಾಶಪಡಿಸಿದರೆ ಇವುಗಳತೊಂದರೆ ತಪ್ಪುವುದೆಂದು ನಿರ್ಣಯಿಸುವರು.

ದ್ವೈತಸಿದ್ಧಾಂತದಲ್ಲಿ ಇವುಗಳು ಮನಸ್ಸೆಂಬ ಅಂತಃಕರಣದಲ್ಲೂ ಆತ್ಮನ ಸ್ವರೂಪದಲ್ಲೂ ಇರುವುವು. ಅಂತಃಕರಣದಲ್ಲಿ ಇರತಕ್ಕುವು ಅನಿತ್ಯಗಳು. ಆತ್ಮನಲ್ಲಿರತಕ್ಕುವು ನಿತ್ಯಗಳು. ಅವು ಅಶುಭಗಳು. ಇವು ಶುಭಗಳು. ಆ ಅಶುಭಗಳಿಗೂ ಆತ್ಮನಿಗೂ ಸ್ವಸ್ವಾಮಿಭಾವಸಂಬಂಧದಿಂದ ಆತ್ಮನಿಗೆ ಸಂಬಂಧಪಟ್ಟವೆಂದು ತಿಳಿದು ತೊಂದರೆಪಡುವರು. ಆ ಸಂಬಂಧವನ್ನು ವಿನಾಶಪಡಿಸಿದರೆ ತೊಂದರೆಯಿಲ್ಲವೆಂದು ಅಭಿಪ್ರಾಯ. ವಿಶಿಷ್ಟಾದ್ವೈತಸಿದ್ಧಾಂತದಲ್ಲಿ ಸಾಂಖ್ಯರಂತೆ ಬುದ್ಧಿಯೆಂಬ ಅಂತಃಕರಣವೂ ಇರುವುದು. ಚೈತನ್ಯಸ್ವರೂಪನಾದ ಮತ್ತು ನಿರ್ವಿಕಾರನಾದ ಆತ್ಮನೂ ಇರುವನು. ಇವುಗಳ ಮಧ್ಯೇ ಜ್ಞಾನವೆಂಬ ವಸ್ತುವೂ ಉಂಟು. ಮನೋಭಾವನೆಗಳೆಲ್ಲವೂ ಆ ವಸ್ತುವಿನ ಪರಿಣಾಮ. ಜ್ಞಾನ ಆತ್ಮನಿಗೆ ಪ್ರದೀಪಕ್ಕೆ ಪ್ರಭೆಯಂತೆ ನಿತ್ಯವಾಗಿ ಸಂಬಂಧಿಸಿರುವುದು. ಈ ಜ್ಞಾನ ಶುಭವಾಗಿ ಪರಿಣಮಿಸಿದರೆ ಶುಭವಾದ ಜ್ಞಾನ, ಸುಖ ಮೊದಲಾದ ರೂಪದಲ್ಲಿ ವಿಕಾಸವನ್ನು ಹೊಂದಿ ಪರಮೇಶ್ವರನ ಸ್ವಭಾವದಂತೆ ಇರಬೇಕೆಂದು ವಿಕಾಸಸಿದ್ಧಾಂತದಲ್ಲಿರುವುದು.

ತಾರ್ಕಿಕಮತದಲ್ಲಿ ಈ ಒಳಗಿನ ವಸ್ತುಗಳು ಶುದ್ಧರೂಪನಾದ ಆತ್ಮನೆಂಬ ವಸ್ತುವಿನಲ್ಲಿ ಕಾರಣಸಾಮಗ್ರಿಯಿಂದ ಆಗಂತುಕವಾಗಿ ಹೊಸದಾಗಿ ಹುಟ್ಟುವುವು. ಆ ಕಾರಣಸಾಮಗ್ರಿಯನ್ನು ನಿವೃತ್ತಿಪಡಿಸಿಕೊಂಡರೆ ಇವುಗಳ ಪ್ರವಾಹ ನಿಂತುಹೋಗಿ ಆತ್ಮನು ಶುದ್ಧವಾದ ಸ್ವಸ್ವರೂಪಸ್ಥಿತಿಯಲ್ಲಿ ಶಾಶ್ವತವಾಗಿ ನಿಂತುಬಿಡುವನು. ಇದೇ ಪರಮಪುರುಷಾರ್ಥವೆಂದೂ ಅಪವರ್ಗವೆಂದೂ ನಿಶ್ಶ್ರೇಯಸವೆಂದೂ ಸಿದ್ಧಾಂತಪಡಿಸುವರು.

ದೇಹಕ್ಕಿಂತಲೂ ಆತ್ಮನು ಬೇರೆ ವಸ್ತುವಾಗಿರುವನೆಂಬ ವಿಷಯದಲ್ಲಿರುವ ಬಹುವಿಧ ಯುಕ್ತಿಗಳಲ್ಲಿ ಸ್ಮರಣಾನುಪಪತ್ತಿಯೆಂಬುದೊಂದು ಮುಖ್ಯವಾದ ಯುಕ್ತಿ. ಇದು ಹೇಗೆಂದರೆ – ಯಾವನು ನೋಡಿರುವನೋ, ಅನು

ಭವಿಸಿರುವನೋ ಅವನೇ ಸ್ಮರಿಸುತ್ತಾನೆ. ಒಬ್ಬನು ಅನುಭವಿಸಿರುವುದನ್ನು ಮತ್ತೊಬ್ಬನು ಸ್ಮರಿಸಲಾರನು. ಬಾಲ್ಯದಲ್ಲಿ ಒಂದೂರನ್ನು ನೋಡಿದವನು ಮುಪ್ಪಿನಲ್ಲಿ ಪುನಃ ಆ ಊರಿಗೆ ಬಂದರೆ ಮನೆಗಳು ಹೀಗಿದ್ದವು, ಬೀದಿಗಳು ಹೀಗಿದ್ದವೆಂದು ಸ್ಮರಣೆ ಬರುತ್ತದೆ. ದೇಹವೆಂಬುದು ಪ್ರತಿಕ್ಷಣದಲ್ಲೂ ಬೇರೆಬೇರೆಯಾಗಿ ಹಿಂದಿನ ಅವಯುಗಳಿಂದ ಹುಟ್ಟುತ್ತವೆಯೆಂದು ತಿಳಿದು ಬರುತ್ತದೆ. ಅಥವಾ ಪ್ರತಿಕ್ಷಣದಲ್ಲೂ ಬದಲಾವಣೆಯನ್ನು ಹೊಂದುತ್ತದೆಂದು ತಿಳಿದುಬರುತ್ತದೆ. ಹಿಂದಿನ ಅನುಭವದಿಂದುಂಟಾದ ಸಂಸ್ಕಾರವೆಂಬ ಶಕ್ತಿ ಎಲ್ಲಿತ್ತೆಂದು ವಿಚಾರಿಸಿದರೆ ದೇಹದ ಯಾವದೊಂದು ಅಂಶದಲ್ಲಿತ್ತೆಂದು ಹೇಳಬೇಕು. ಆ ಅಂಶವೂ ಪ್ರತಿಕ್ಷಣದಲ್ಲೂ ಬದಲಾಯಿಸುತ್ತಾ ಇದ್ದುದರಿಂದ ಶಕ್ತಿಸಹಿತವಾಗಿ ಬದಲಾಯಿಸುತ್ತಾ ಇದ್ದರೆ ಅನಂತ ಅಸಂಖ್ಯಾತ ಶಕ್ತಿಗಳು ಕಲ್ಪಿಸಲ್ಪಡಬೇಕು. ಮತ್ತು ವಿವಿಧ ವಿದ್ಯಾಭ್ಯಾಸ, ವ್ಯಾಪಾರ, ಲೇವಾದೇವಿ ಮೊದಲಾದ ಸಕಲ ಸಂಸ್ಕಾರಗಳೂ ಅನಂತ ಅಸಂಖ್ಯಾತಗಳಾಗಿ ಅವುಗಳ ಉದಯವಿಲಯುಗಳು ಕಲ್ಪಿಸಲ್ಪಡಬೇಕು. ಇಂತಹ ಅಧಿಕ ಕಲ್ಪನೆಗಳಿಗಿಂತಲೂ ಒಬ್ಬ ಸ್ಥಿರನಾದ ಆತ್ಮನನ್ನು ಅಂಗೀಕರಿಸುವ ಪಕ್ಷದಲ್ಲಿ ಕಲ್ಪನಾ ಲಾಘವವಿದೆ; ಜನ್ಮಾಂತರ, ಪುಣ್ಯ, ಪಾಪ, ಸದಾಚಾರ, ದುರಾಚಾರ ಪರಸ್ಪರೋಪಕಾರ ಮೊದಲಾದ ಐಹಿಕಾಮುಷ್ಮಿಕ ಸಕಲ ವಿಷಯುಗಳಿಗೂ ಅನುಕೂಲ್ಯವಿರುತ್ತದೆ. ಲೋಕಾನುಗ್ರಹ ಶಾಸ್ತ್ರಾನುಗ್ರಹವಿರುತ್ತದೆ. ಆದಕಾರಣ ಜೀವಾತ್ಮ ಕಲ್ಪನೆಯಲ್ಲಿ ಸುಖವಿದೆ. ಇಲ್ಲವೆಂಬ ಕಲ್ಪನೆಯಲ್ಲಿ ಅಧಿಕಕಲ್ಪನಾ ದೋಷವಿದೆಯೆಂದಭಿಪ್ರಾಯ. ಇದೇ ಸ್ಮರಣಾನುಪಪತ್ತಿಯೆಂಬ ಯುಕ್ತಿ.

## ಮಿಥ್ಯಾಜ್ಞಾನ

ಇಂತಹ ಅಶುಭಪ್ರವಾಹ ಬರುವುದಕ್ಕೆ ಕಾರಣವೇನೆಂದರೆ, ಆತ್ಮಾನಾತ್ಮಗಳ ತತ್ತ್ವಜ್ಞಾನವಿಲ್ಲದೆ ಮಿಥ್ಯಾಜ್ಞಾನವೆಂಬ ಅತತ್ತ್ವಜ್ಞಾನ. ಆ ಮಿಥ್ಯಾಜ್ಞಾನ ಅನೇಕ ಪ್ರಕಾರವಾಗಿರುವುದು. ಆತ್ಮವಿಷಯದಲ್ಲಿ ಆತ್ಮನೆಂಬ ವಸ್ತುವೇ ಇಲ್ಲವೆಂದೂ ದೇಹಾದಿಗಳನ್ನೇ ಆತ್ಮನೆಂದೂ, ದುಃಖವನ್ನು ಸುಖವೆಂದೂ, ಅನಿತ್ಯವನ್ನು ನಿತ್ಯವೆಂದೂ,ಸಭಯವಾದ ವಸ್ತುವನ್ನು ನಿರ್ಭ

ಯುವಾದುವೆಂದೂ, ನಿಂದ್ಯಗಳನ್ನು ಅನಿಂದ್ಯಗಳೆಂದೂ, ಬಿಡಬೇಕಾದುದನ್ನು ಬಿಡಬಾರದೆಂದೂ ಬರುವ ಭ್ರಾಂತಿಗಳು. ಮತ್ತು ಕರ್ಮವೆಂಬ ಪುಣ್ಯ ಪಾಪಗಳಿಲ್ಲವೆಂದೂ ಅವುಗಳಿಗೆ ಫಲವೂ ಇಲ್ಲವೆಂದೂ ಸಂಸಾರ ಶಾಶ್ವತ ವೆಂದೂ ಬರುವ ಭ್ರಾಂತಿಗಳು.

ಮತ್ತು ಮೋಕ್ಷ ದಶೆಯಲ್ಲಿ ಆತ್ಮನು ಆತ್ಯಂತಿಕವಿನಾಶವನ್ನು ಹೊಂದುವ ನೆಂದೂ ಜನ್ಮಾಂತರವಿಲ್ಲವೆಂದೂ ಜನ್ಮಮರಣಪ್ರವಾಹವಸ್ವಾಭಾವಿಕವಾಗಿ ಕಾರಣವಿಲ್ಲದೆ ನಿಂತುಬಿಡುವುದೆಂದೂ ಮೋಕ್ಷವೆಂಬುದು ಬಹಳ ಭಯಂಕರ, ಯಾವ ಸುಖವೂ ಇಲ್ಲದ ಈ ಮೋಕ್ಷವನ್ನು ಯಾವ ಬುದ್ಧಿವಂತನಾದರೂ ಅಪೇಕ್ಷಿಸುವನೇ ಎಂದೂ—ಇದೇ ಮೊದಲಾದ ವಿಚಿತ್ರಭ್ರಾಂತಿಗಳೇ ಕಾರಣ ಗಳು.

## ಧರ್ಮಾಧರ್ಮ

ಇಂತಹ ಮಿಥ್ಯಾಜ್ಞಾನದಿಂದ ಅನುಕೂಲವೆಂದು ತಿಳಿದುಬರುವ ವಿಷಯಗಳಲ್ಲಿ ದ್ವೇಷವೂ ಇವುಗಳ ಮೂಲಕ ಅಸೂಯೆ ಮಾಯೆ ಮೋಹ ಮೊದಲಾದ ದೋಷಗಳೂ ಉದಯಿಸುವುವು. ಈ ದೋಷಗಳ ಮೂಲಕ ಶರೀರದಿಂದ ಪ್ರಾಣಿಹಿಂಸೆ, ಚೌರ್ಯ, ದುರಾಚಾರ ಇವುಗಳೂ, ವಾಙ್ಮೂ ಲಕವಾಗಿ—ಅಸತ್ಯ, ಪಾರುಷ್ಯ, ಚಾಡಿ ಮತ್ತು ಅಸಂಬದ್ಧ ಪ್ರಲಾಪಗಳೂ, ಮನಸ್ಸಿನಿಂದ— ಪರದ್ರವ್ಯಾಭಿಲಾಷೆ, ಪರದ್ರೋಹ, ನಾಸ್ತಿಕ್ಯ ಮೊದಲಾ ದುವೂ ಉಂಟಾಗುವುವು. ಈ ಹತ್ತು ಗುಣಗಳೂ ಮುಖ್ಯವಾದ ಪಾಪಗಳು, ಅಧರ್ಮಕ್ಕೆ ಕಾರಣಗಳು.

ಧರ್ಮಕ್ಕೆ ಕಾರಣಗಳಾದ ಪುಣ್ಯಕರ್ಮಗಳು ಯಾವುವೆಂದರೆ, ಶರೀರ ದಿಂದ— ತನ್ನ ಸ್ವತ್ತುಗಳನ್ನು ಇತರರಿಗೆ ಕೊಡುವುದು, ಪ್ರಾಣಿಗಳ ಕಷ್ಟ ವನ್ನು ಪರಿಹರಿಸುವುದು, ಹೀಗೆ ಯಥಾಶಕ್ತಿ ಲೋಕಸೇವೆ ಮಾಡುವುದು ; ವಾಙ್ಮೂಲಕವಾಗಿ— ಸತ್ಯವಾಗಿಯೂ ಪ್ರಿಯವಾಗಿಯೂ ಹಿತವಾಗಿಯೂ ಇರುವ ಮಾತುಗಳನ್ನಾಡುವುದು ಮತ್ತು ಶಾಸ್ತ್ರಾಭ್ಯಾಸವನ್ನು ಮಾಡುವುದು: ಮನಸ್ಸಿನಿಂದ— ದಯೆ, ದುರಾಶೆಯಿಲ್ಲದಿರುವಿಕೆ, ಆಸ್ತಿಕ್ಯಬುದ್ಧಿ. ಈ ಹತ್ತು ಗುಣಗಳೂ ಧರ್ಮಕ್ಕೆ ಕಾರಣಗಳು.

ಧರ್ಮಾಧರ್ಮಗಳೆಂದರೆ, ಈ ದರ್ಶನಕಾರರ ಅಭಿಪ್ರಾಯದಲ್ಲಿ ಸುಖ ದುಃಖಕ್ಕೆ ಕಾರಣಗಳಾದ ಅದೃಷ್ಟಗಳು. ಅವು ಮೇಲ್ಕಂಡ ಶುಭಾಶುಭ ರೂಪವಾದ ಹತ್ತು ಹತ್ತು ಕರ್ಮಗಳಿಂದ ಹುಟ್ಟುವುವು. ಈ ಕರ್ಮಗಳಿಗೆ ಪ್ರವೃತ್ತಿಯೆಂದು ಹೆಸರು. ಈ ಪ್ರವೃತ್ತಿಯಲ್ಲಿ ಶುಭಪ್ರವೃತ್ತಿಯಿಂದ ಉತ್ತಮ ಜನ್ಮವೂ ಅಶುಭಪ್ರವೃತ್ತಿಯಿಂದ ಅಧಮಜನ್ಮವೂ ಬರುವುವು. ಜನ್ಮವೆಂದರೆ ಆತ್ಮನಿಗೆ ಶರೀರ ಇಂದ್ರಿಯ ಬುದ್ಧಿ ಇವುಗಳ ಸಂಘಾತಸಂಬಂಧ. ಈ ಜನ್ಮ ಮೂಲಕವಾಗಿ ಆತ್ಮನಿಗೆ ದುಃಖಾನುಭವವುಂಟಾಗುವುದು. ದುಃಖ ವೆಂದರೆ ಪ್ರತಿಕೂಲ, ಬಾಧೆ, ಪೀಡೆ ಎಂದರ್ಥ. ಮಿಥ್ಯಾಜ್ಞಾನ, ದೋಷ, ಪ್ರವೃತ್ತಿ, ಜನ್ಮ, ದುಃಖ ಈ ಐದು ವಿಧವಾದ ಭಾವಗಳು ಅವಿಚ್ಛಿನ್ನ ವಾಗಿಯೂ ಅನಾದಿಯಾಗಿಯೂ ತಿರುಗುವ ಚಕ್ರಕ್ಕೆ ಸಂಸಾರವೆಂದು ಹೆಸರು. ಇದನ್ನೇ "ಅವಿದ್ಯಾ ಕರ್ಮವಾಸನಾ ರುಚಿ ಪ್ರಕೃತಿ ಸಂಬಂಧ" ಗಳ ಚಕ್ರವೆಂದು ಕೆಲವರು ಹೇಳುತ್ತಾರೆ. ಯಾವಾಗ ತತ್ತ್ವಜ್ಞಾನದಿಂದ ಮಿಥ್ಯಾಜ್ಞಾನ ಹೋಗುತ್ತದೆಯೋ ಆಗ "ಕಾರಣಾಭಾವಾತ್ ಕಾರ್ಯಾ ಭಾವಃ" ಎಂದು ಕಾರಣನಿವೃತ್ತಿಯಿಂದ ಕಾರ್ಯ ನಿವರ್ತಿಸಬೇಕಾಗಿರು ವುದರಿಂದ ಸಂಸಾರ ಪ್ರವಾಹ ನಿಂತುಹೋಗುವುದು. ತತ್ತ್ವಜ್ಞಾನವೆಂಬುದು ಮೇಲ್ಕಂಡ ಮಿಥ್ಯಾಜ್ಞಾನಗಳಿಗೆಲ್ಲಾ ಪ್ರತಿ ಪಕ್ಷವಾಗಿರುವ ವಸ್ತು; ಯಥಾತ್ಮ್ಯ ಸಾಕ್ಷಾತ್ಕಾರ ; ಯಥಾ ಭೂತಾರ್ಥಾವಬೋಧ.

## ಮೋಕ್ಷ

ಈ ಪ್ರಕಾರ ಸರ್ವದುಃಖನಿವೃತ್ತಿಯೇ ಮೋಕ್ಷ. ಸಕಲ ಘೋರವಾದ ಕಷ್ಟಗಳೂ ನಿವೃತ್ತಿಯಾಗತಕ್ಕವು. ಇಂತಹ ಸರ್ವದುಃಖನಿವೃತ್ತಿರೂಪವಾದ ಮೋಕ್ಷವನ್ನು ಬುದ್ಧಿವಂತನಾದ ಯಾವ ವಿವೇಕಿಯೂ ಅಪೇಕ್ಷಿಸದಿರಲಾರನು. ಅವಿವೇಕಿಗಳಿಗೆ ಮೋಕ್ಷ ಭಯವಾಗಿ ಹೇಯವಾಗಿದ್ದರೂ ವಿವೇಕಿಗಳಿಗೆ ನಿರ್ಭರನಿರ್ಭಯ ಪರಮಪುರುಷಾರ್ಥರವೆಂದು ಸಿದ್ಧಾಂತ.

ವೈಶೇಷಿಕಭಾಷ್ಯದಲ್ಲಿರುವ ಪ್ರಕಾರವಿದು—ದುಃಖರೂಪವಾದ ಸಂಸಾರ ತತ್ತ್ವಜ್ಞಾನಕ್ಕೆ ಪ್ರತಿಬಂಧಕ. ಈ ಸಂಸಾರಕ್ಕೆ ಕಾರಣಗಳು ಶಾಸ್ತ್ರ ಪ್ರಸಿದ್ಧವಾಗಿರುವ ಧರ್ಮಕ್ಕೆ ಪ್ರತಿಕಕ್ಷಿಗಳಾಗಿರುವ ಪ್ರಾಣಿಹಿಂಸೆ, ಅಸತ್ಯ

ಭಾಷಣ, ಕಳ್ಳತನ, ಶಾಸ್ತ್ರವಿಹಿತವಾದ ಕರ್ಮಗಳನ್ನು ಬಿಡುವುದು, ಇತ್ಯಾದಿಗಳು. ಕೆಟ್ಟ ಆಲೋಚನೆಯೊಡನೆ ಆತ್ಮ ಮನಸ್ಸು ಇವುಗಳ ಸಂಬಂಧದಿಂದ ಅಧರ್ಮ ಉತ್ಪತ್ತಿಯಾಗುವುದು. ರಾಗದ್ವೇಷಮೋಹಗಳೊಡನೆ ಕೂಡಿರುವ ಮೂಢಾತ್ಮರಿಗೆ ಪ್ರವೃತ್ತಿಯನ್ನುಂಟುಮಾಡುವ, ಸ್ವಲ್ಪ ಅಧರ್ಮದೊಡನೆ ಕೂಡಿರುವ ಅಧಿಕ ಧರ್ಮದಿಂದ ಬ್ರಹ್ಮ ಇಂದ್ರ ಪ್ರಜಾಪತಿ ಪಿತೃ ಮತ್ತು ಮನುಷ್ಯಲೋಕಗಳಲ್ಲಿ ವಾಸನಾನುಗುಣವಾಗಿ ಇಷ್ಟವಾದ ಶರೀರ, ವಿಷಯ—ಇವುಗಳ ಮೂಲಕ ಸುಖಾನುಭವ. ಹಾಗೇಯೇ ಸ್ವಲ್ಪ ಧರ್ಮದೊಡನೆ ಕೂಡಿರುವ ಅಧಿಕವಾದ ಅಧರ್ಮದಿಂದ ಪ್ರೇತ ಭೂತ ಮುಂತಾದ ದುಷ್ಟಜಾತಿಗಳ ಸ್ಥಾನದಲ್ಲಿ ಅನಿಷ್ಟಗಳಾದ ಶರೀರೇಂದ್ರಿಯ ವಿಷಯಗಳ ಮೂಲಕ ದುಃಖಾನುಭವ ಬರುವುದು. ಈ ರೀತಿ ಬೇರೆಬೇರೆ ಪ್ರವೃತ್ತಿಗಳಿಂದ ದೇವ, ಮನುಷ್ಯ, ತಿರ್ಯಕ್, ನರಕ— ಈ ಲೋಕಗಳಲ್ಲಿ ಪುನಃ ಪುನಃ ಸಂಸಾರಬಂಧ ಬರುವುದು.

ಜ್ಞಾನಮೂಲಕವಾಗಿ ಫಲದಲ್ಲಿ ದೃಷ್ಟಿಯಿಲ್ಲದೆ ಮಾಡಲ್ಪಟ್ಟ ಧರ್ಮದಿಂದ ವಿಶುದ್ಧವಾದ ವಂಶದಲ್ಲಿ ಹುಟ್ಟಿ ದುಃಖಪರಿಹಾರೋಪಾಯವನ್ನು ಅಪೇಕ್ಷಿಸುವವನಿಗೆ ಸದಾಚಾರ್ಯಸಂಬಂಧದಿಂದ ಷಟ್ಪದಾರ್ಥಗಳ ತತ್ತ್ವಜ್ಞಾನವುಂಟಾಗಿ, ಅಜ್ಞಾನನಿವೃತ್ತಿಯಾಗಿ, ವೈರಾಗ್ಯದಿಂದ ರಾಗದ್ವೇಷಗಳ ವಿಜಯ ಆಗುವುದು. ಇದರಿಂದ ಧರ್ಮಾಧರ್ಮಗಳು ಹೊಸದಾಗಿ ಹುಟ್ಟುವುದಿಲ್ಲ. ಹಿಂದಿನ ಧರ್ಮಾಧರ್ಮಗಳ ಫಲಪ್ರವಾಹ ಮುಂದೆ ನಿಂತು ಹೋಗುವುದೆಂಬ ಸಂತೋಷ ಸುಖವನ್ನೂ ಅದುವರೆಗೂ ಶರೀರವನ್ನು ಧರಿಸಿರಬೇಕೆಂಬ ದುಃಖವನ್ನೂ ಉಂಟುಮಾಡಿ ಪ್ರಾಚೀನಸಂಚಿತಧರ್ಮಾಧರ್ಮಗಳು ನಿವೃತ್ತಿಯಾಗಿ ನಿವೃತ್ತಿಧರ್ಮ ಉದಯಿಸುವುದು, ಅದರಿಂದ ಪರಮಾರ್ಥದರ್ಶನಸುಖಾನುಭವ ಬರುವುದು. ಅದರಲ್ಲೂ ವಿರಕ್ತನಾದ ಆತ್ಮನಿಗೆ ಕಾರಣವಿಲ್ಲದಿರುವುದರಿಂದ ಉರಿದು ಆರಿದ ಬೆಂಕಿಯಂತೆ ಈಗಿನ ಶರೀರಾದಿಗಳು ವಿನಾಶವಾಗಿ ಪುನಃ ಹೊಸಶರೀರಾದಿಗಳು ಉತ್ಪನ್ನವಾಗದೆ ಮೋಕ್ಷವೆಂಬ ಶಾಂತಿ ಲಭಿಸುವುದು ಎಂದು ವಿವರಿಸಲ್ಪಟ್ಟಿರುವುದು.

ಮೋಕ್ಷದಲ್ಲಿ ಜೀವಾತ್ಮನು ತನ್ನ ಸ್ವಾಭಾವಿಕ ಸ್ಥಿತಿಯಲ್ಲಿರುವನು ಅದೆಂತೆಂದರೆ ವಿಭುತ್ವ ದ್ರವ್ಯತ್ವ ನಿತ್ಯತ್ವ ನಿರವಯವತ್ವ ನಾನಾತ್ವ ಮೊದ-

ಲಾದ ಧರ್ಮಗಳೊಡನೆ ಯಾವತ್ಕಾಲ ನಿರ್ದುಃಖಿಯಾಗಿರುತ್ತಾನೆ. ದುಃಖವಿಲ್ಲದಿರುವ ಸ್ಥಿತಿಯನ್ನೇ ಸ್ವಾಭಾವಿಕವಾದ ಸುಖಾನುಭವವೆಂದು ಹೇಳಬಹುದು. ಮೋಕ್ಷದಲ್ಲಿ ಆತ್ಮನಿಗೆ ನಿತ್ಯಸುಖಾನುಭವವಿರುವುದೆಂದು ತಾರ್ಕಿಕರಲ್ಲೇ 'ನ್ಯಾಯಭೂಷಣ' ಎಂಬ ಗ್ರಂಥಕಾರರು ಬರೆಯುತ್ತಾರೆ. ಅದಕ್ಕೆ 'ನ್ಯಾಯಭಾಷ್ಯ'ದಲ್ಲಿರುವ ಮೋಕ್ಷಸುಖ ವಿಚಾರವೇ ಮೂಲವಾಗಿರಬಹುದು. ಅದೆಂತೆಂದರೆ, ಮೋಕ್ಷದಲ್ಲಿ ಸುಖಾನುಭವವಿರಬೇಕಾದರೆ ಮನಸ್ಸು ಶರೀರ ಇಂದ್ರಿಯ ಆಶೆ ಮೊದಲಾದವು ಇರಬೇಕು. ಶುದ್ಧವಾಗಿ ಇವುಗಳಿರಲೆಂದರೆ ಮೋಕ್ಷಕ್ಕೂ ಸಂಸಾರಕ್ಕೂ ವ್ಯತ್ಯಾಸವೇನು? ಶುದ್ಧಿ ಅಶುದ್ಧಿಗಳೇ ವ್ಯತ್ಯಾಸವಿರಲಿ ಅಂದರೆ ಈ ವಿಚಾರ ಯುಕ್ತಿಯಿಂದ ಪರ್ಯವಸಾನವಾಗತಕ್ಕದ್ದಲ್ಲವೆಂದು ತಿಳಿದು ಭಾಷ್ಯಕಾರರು ಬರೆದಿರುವ ವಾಕ್ಯವಿದು – "ಮೋಕ್ಷದಲ್ಲಿ ಸುಖವಿರಲಿ, ಇಲ್ಲದಿರಲಿ ಮೋಕ್ಷಪ್ರಾಪ್ತಿಯೆಂಬುದರಲ್ಲಿ ವಿವಾದವಿಲ್ಲವೆಂದು ಸಿದ್ಧಾಂತ" ಇದರಿಂದ ತಾರ್ಕಿಕ ಮತದಲ್ಲೇ ಅಭಿಪ್ರಾಯ ಭೇದವಿರುವುದೆಂದು ಸ್ಪಷ್ಟ.

ಪೂರ್ವಮೀಮಾಂಸಾಸೂತ್ರಗಳಲ್ಲಿ ಧರ್ಮನಿರೂಪಣೆಯನ್ನು ಮಾಡಬೇಕೆಂದು ಪ್ರಾರಂಭಿಸಿ ಆ ಧರ್ಮ ವೇದದಿಂದಲೇ ತಿಳಿಯತಕ್ಕದೆಂದು ಎರಡನೆಯ ಸೂತ್ರ ಹೇಳುವುದು.

ವೈಶೇಷಿಕದರ್ಶನದಲ್ಲಿ ಧರ್ಮವನ್ನು ನಿರೂಪಣೆ ಮಾಡುತ್ತೇನೆಂದು ಪ್ರಾರಂಭಮಾಡಿ ಎರಡನೆಯ ಸೂತ್ರದಲ್ಲಿ ಧರ್ಮಾರ್ಥಕಾಮಗಳೆಂಬ ಅಭ್ಯುದಯವೂ ಮೋಕ್ಷವೆಂಬ ನಿಶ್ಶ್ರೇಯಸವೂ ಧರ್ಮದಿಂದ ಸಿದ್ಧಿಸುತ್ತವೆಯೆಂದು ಹೇಳಿ ಮೂರನೆಯ ಸೂತ್ರದಲ್ಲಿ ಈ ಅಂಶ ವೇದದಿಂದ ತಿಳಿಯಲ್ಪಡುವುದೆಂದು ಕಣಾದರು ಬರೆದಿರುವರು. ನ್ಯಾಯದರ್ಶನದಲ್ಲಿಯೂ ತತ್ತ್ವಜ್ಞಾನದಿಂದ ಮೋಕ್ಷವೆಂದಿರುವುದು. ಪೂರ್ವಮೀಮಾಂಸಾದರ್ಶನದಲ್ಲಿ ಸೂತ್ರದಲ್ಲೂ ಭಾಷ್ಯದಲ್ಲೂ ನಿಶ್ಶ್ರೇಯಸವೆಂಬ ಮೋಕ್ಷಪ್ರಸಕ್ತಿಯೇ ಇಲ್ಲ.

ಮೋಕ್ಷಾಧಿಕಾರವಿಷಯದಲ್ಲಿ ಜೈಮಿನಿಸಮ್ಮತವಾದ ಐಕಾಶ್ರಮ್ಯಪಕ್ಷವು ಪ್ರತಿಪಕ್ಷವಾಗಿರುವುದೆಂದು ಚಾತುರಾಶ್ರಮ್ಯಪಕ್ಷವು ನ್ಯಾಯವೈಶೇಷಿಕ ವೇದಾಂತ ದರ್ಶನಗಳಲ್ಲಿ ಸಮರ್ಥಿಸಲ್ಪಟ್ಟಿರುವುದು.

ವೈಶೇಷಿಕದರ್ಶನದಲ್ಲೂ ನ್ಯಾಯದರ್ಶನಲ್ಲೂ ಅವುಗಳ ಭಾಷ್ಯ

ಗಳಲ್ಲೂ ಮೋಕ್ಷವೆಂಬ ಪುರುಷಾರ್ಥವಿಲ್ಲವೆಂಬ ಸಿದ್ಧಾಂತವನ್ನನುವಾದ ಮಾಡಿ ನಿರಾಕರಿಸಿ ಮೋಕ್ಷವನ್ನೂ ಅದರ ಸಾಧನವನ್ನೂ ನಿರೂಪಿಸಿರುತ್ತಾರೆ. ಇದರಿಂದ ಧರ್ಮ ಅರ್ಥ ಕಾಮ ಎಂಬ ತ್ರಿವರ್ಗವಾದಿಗಳು ಕೆಲವರೂ, ಮೋಕ್ಷವನ್ನೂ ಸೇರಿಸಿ ಚತುರ್ವರ್ಗವಾದಿಗಳು ಕೆಲವರೆಂದೂ ನಿರ್ಣಯ ವಾಗುತ್ತದೆ. ಇದು ಕಾಲಕ್ರಮ ನಿಬಂಧನವೆಂದು ಕೆಲವರು ಅಭಿಪ್ರಾಯ ಪಡುತ್ತಾರೆ.

## ಈಶ್ವರ

ತತ್ತ್ವಜ್ಞಾನದಿಂದ ಮೋಕ್ಷಪ್ರಾಪ್ತಿಯೆಂಬ ಸಂದರ್ಭದಲ್ಲಿ ತಾರ್ಕಿಕ ರಿಗೂ ಇತರ ದಾರ್ಶನಿಕರಿಗೂ ಇರುವ ವ್ಯತ್ಯಾಸವಿದು. ಪ್ರಾಯಶಃ ಪರ ಮೇಶ್ವರನ ಅನುಗ್ರಹದಿಂದ ಮೋಕ್ಷ ಪ್ರಾಪ್ತವಾಗಬೇಕು. ಅವನ ಆಜ್ಞೋ ಲ್ಲಂಘನೆಯಿಂದ ಬಂದಿರುವ ನಿಗ್ರಹವೇ ಸಂಸಾರ ಮೂಲಕಾರಣ. ತತ್ತ್ವ ಜ್ಞಾನ ಪೂರ್ವಕ ಪರಮೇಶ್ವರನ ಉಪಾಸನೆಯಿಂದ ಅವನ ಅನುಗ್ರಹವನ್ನು ಸಂಪಾದಿಸಬೇಕೆಂದು ಪರಮೇಶ್ವರನನ್ನು ಅಂಗೀಕರಿಸಿರುವವರೆಲ್ಲರೂ ನಿರ್ಣ ಯಿಸಿರುವರು. ತಾರ್ಕಿಕ ಮತದಂತೆ ಪರಮೇಶ್ವರನು ಸಕಲ ಕಾರ್ಯಕ್ಕೂ ಸಾಮಾನ್ಯವಾಗಿ ಕಾರಣನಾಗಿರುವನು. ವಿಶೇಷವಾಗಿ ಅವನಿಗೆ ನಿಗ್ರಹಾನು ಗ್ರಹ ಶಕ್ತಿಯಿಲ್ಲ. ಭ್ರಾಂತಿಯಿಂದ ಬಂಧವೂ ತತ್ತ್ವಜ್ಞಾನದಿಂದ ನಿವೃ ತ್ತಿಯೂ ಆಗುವಲ್ಲಿ ಮಧ್ಯೇ ಪರಮೇಶ್ವರನ ಅನುಗ್ರಹಕ್ಕೆ ಅವಕಾಶವೆಲ್ಲಿ? ಸರ್ಪ ಭ್ರಾಂತಿಯಿಂದ ಓಡಿ ಹೋಗುವವನಿಗೆ ಹಗ್ಗದ ತತ್ತ್ವಜ್ಞಾನ ನಿವರ್ತಕವೇ ವಿನಾ ಪರಮೇಶ್ವರನ ಪ್ರಸಾದ ಬೇಕಿಲ್ಲವೆಂದು ಅಭಿಪ್ರಾಯ. ಆದುದರಿಂದ ಇವರನ್ನು ನಿರನುಗ್ರಹೇಶ್ವರವಾದಿಗಳೆಂದು ಕೆಲವರು ಕರೆಯು ವರು.

ಆದರೂ 'ನ್ಯಾಯಸೂತ್ರದಲ್ಲಿ' ಹೀಗಿರುವುದು — ಸಕಲ ಕಾರ್ಯ ಗಳಿಗೂ ಪುರುಷ ಪ್ರಯತ್ನನಿರಪೇಕ್ಷವಾದ ನಿರಂಕುಶೇಶ್ವರ ನಿಮಿತ್ತ ಕಾರಣ ತಾವಾದವನು ಪೂರ್ವಪಕ್ಷ ಮಾಡಿಕೊಂಡು ಪುರುಷ ಪ್ರಯತ್ನಸಾಪೇಕ್ಷೇ ಶ್ವರ ನಿಮಿತ್ತ ಕಾರಣತ್ವವು ಸಮರ್ಥಿಸಲ್ಪಟ್ಟಿರುವುದು. ಮತ್ತು ನ್ಯಾಯ ಭಾಷ್ಯಕಾರರು ಹೀಗೆ ಬರೆಯುತ್ತಾರೆ – "ಅಧರ್ಮ ಮಿಥ್ಯಾಜ್ಞಾನಗಳಿಲ್ಲದೆ,

ಧರ್ಮಜ್ಞಾನ ಸಮಾಧಿಗಳಿಂದ ಕೂಡಿದ ಆತ್ಮನೇ ಪರಮಾತ್ಮನು. ಅವನಿಗೇ ಧರ್ಮಸಮಾಧಿಗಳ ಫಲ ; ಅಣಿಮಾದಿಸಿದ್ಧಿಗಳೆಂಬ ಎಂಟು ವಿಧ ಐಶ್ವರ್ಯಗಳು. ಅವನ ಧರ್ಮ ಸಂಕಲ್ಪ ಮಾತ್ರದಿಂದ ಸಿದ್ಧಿಸುವಂತಹದು. ಪ್ರತ್ಯಾತ್ಮನಲ್ಲೂ ಇರುವ ಧರ್ಮಾಧರ್ಮರಾಶಿಗಳನ್ನೂ, ಪೃಥಿವಿ ಮೊದಲಾದ ಪಂಚಭೂತಗಳನ್ನೂ ಪ್ರೇರೇಪಿಸತಕ್ಕವನು. ತಾನು ಮಾಡಿದ ಶುಭಕರ್ಮಕ್ಕೆ ಲೋಪವಿಲ್ಲದೆ ಸೃಷ್ಟಿಸಾಮರ್ಥ್ಯವು ಈಶ್ವರನ ಧರ್ಮಫಲವೆಂದರಿಯಬೇಕು. ಇವನು ಆಪ್ತ ಸದೃಶನು. ಮಕ್ಕಳಿಗೆ ತಂದೆಯು ಹಾಗೆ ಸಕಲ ಪ್ರಾಣಿಗಳಿಗೂ ತಂದೆಯಾಗಿರುವನು. ಇವನು ಇತರ ಆತ್ಮ ಪದಾರ್ಥಗಳಂತೆ ಆತ್ಮ ಪದಾರ್ಥವೇ ವಿನಾ ಬೇರೆ ವಸ್ತುವಲ್ಲ. ಇವನ ಸ್ವರೂಪವನ್ನು ಜ್ಞಾನವೆಂಬ ಬುದ್ಧಿರೂಪ ಧರ್ಮದಿಂದಲ್ಲದೆ ಬೇರೆ ಯಾವ ಗುರುತಿನಿಂದಲೂ ನಿರೂಪಿಸಲಸಾಧ್ಯ. ಶಾಸ್ತ್ರದಿಂದಲ್ಲೂ ದ್ರಷ್ಟಾ, ಬೋದ್ಧಾ, ಸರ್ವಜ್ಞಾತಾ ಎಂದು ಈಶ್ವರನ ಸ್ವರೂಪ ತಿಳಿಯಲ್ಪಡುವುದು. ಬುದ್ಧಿ ಮೊದಲಾದ ಆತ್ಮ ಲಿಂಗಗಳಿಲ್ಲದಿದ್ದರೆ ನಿರುಪಾಖ್ಯನೆಂಬ ನಿರ್ವಿಶೇಷನಾಗುವನು. ಆವಾಗ ಪ್ರತ್ಯಕ್ಷಾನುಮಾನ ಆಗಮಗಳಿಗೆ ಗೋಚರನಲ್ಲದವನನ್ನು ಯಾವನು ಉಪದೇಶಮಾಡುವನು ? ಯಾವನು ತಿಳಿಯುವನು ? ತಾನು ಮಾಡಿದ ಶುಭ ಕರ್ಮದಿಂದ ಪ್ರವರ್ತಿಸುತ್ತಿರುವ ಈಶ್ವರನನ್ನು ಅವನಿಗೆ ಕರ್ಮವಿಲ್ಲ, ಶರೀರವಿಲ್ಲ, ಬುದ್ಧಿಯಿಲ್ಲ, ಸೃಷ್ಟಿಸಾಮರ್ಥ್ಯವಿಲ್ಲ ಎಂದು ನಿರಾಕರಿಸುವ ಮತವೆಲ್ಲವೂ ನಿರಾಧಾರವಾದುದೆಂದು'' ಬರೆಯುತ್ತಾರೆ. ಹೀಗೆಯೇ 'ವೈಶೇಷಿಕಭಾಷ್ಯ' ಪ್ರಾರಂಭದಲ್ಲೂ ಪ್ರಶಸ್ತಪಾದರು ''ಪ್ರಣಮ್ಯ ಹೇತುಮೀಶ್ವರಂ'' ಎಂದು ಈಶ್ವರ ನಮಸ್ಕಾರಮಾಡಿ ಭಾಷ್ಯವನ್ನು ಬರೆಯುತ್ತಾರೆ.

ಇಲ್ಲಿ 'ನ್ಯಾಯಭಾಷ್ಯ' ವಾಕ್ಯಗಳಲ್ಲಿ ಬಹುವಿಧ ದರ್ಶನ ದೃಷ್ಟಿಗಳಿರುವಂತೆ ತೋರುತ್ತದೆ. ಮುಖ್ಯವಾಗಿ ಆತ್ಮಜಾತಿಗೆ ಸೇರಿದವನು ನಿರುಪಾಖ್ಯನಲ್ಲ. ಪರಮೇಶ್ವರನಿಗೂ ಇಚ್ಛಾ ಮಾತ್ರದಿಂದ ಧರ್ಮವೆಂಬ ಕರ್ಮವುಂಟು ; ಕರ್ಮಾಧೀನವಾಗಿ ಕೆಲಸ ಮಾಡುವನು—ಇತ್ಯಾದಿ ವಿಷಯಗಳು ಅಪೂರ್ವಗಳಾಗಿರುವುವು.

ಆಧುನಿಕ ತಾರ್ಕಿಕರು ಈಶ್ವರನನ್ನು ಸಾಧಿಸುವ ಕ್ರಮ ಹೇಗೆಂದರೆ-

ಪ್ರತಿವಾದಿಗಳು ನಾಸ್ತಿಕರಾದ ಚಾರ್ವಾಕರಲ್ಲ. ದೇಹಾತಿರಿಕ್ತ ಜೀವಾತ್ಮನನ್ನೂ ಜನ್ಮಾಂತರವನ್ನೂ ಪುಣ್ಯಪಾಪಗಳನ್ನೂ ಸ್ವರ್ಗನರಕಮೋಕ್ಷ ಮೊದಲಾದುವುಗಳನ್ನೂ ಅಂಗೀಕರಿಸಿ ಪರಮಾತ್ಮನನ್ನು ಮಾತ್ರ ಅಂಗೀಕರಿಸದಿರುವ ನಿರೀಶ್ವರ ಮೀಮಾಂಸಕರು ಪೂರ್ವಪಕ್ಷಿಗಳು. ಏತಕ್ಕೆಂದರೆ, ಇವರ ವಾದಗಳೆಲ್ಲವೂ ಹಿಂದಿನ ವಿಷಯಗಳ ಆಧಾರದ ಮೇಲೆ ಹೊರಟಿರುತ್ತವೆ. ಮತ್ತು ಮೊದಲು ಪ್ರಪಂಚಕ್ಕೆ ಸೃಷ್ಟಿ ಪ್ರಲಯಗಳನ್ನು ಸಾಧಿಸಿದರೆ ಅದರ ಮೇಲೆ ವಿಚಾರಕ್ಕೆ ಅವಕಾಶ. ಆದುದರಿಂದ ಅದನ್ನು ಸಾಧಿಸಿಕೊಂಡು ಹೀಗೆ ಯುಕ್ತಿಗಳನ್ನು ಹೇಳುತ್ತಾರೆ.

> ಕಾರ್ಯಾಯೋಜನಧೃತ್ಯಾದೇಃ ಪದಾತ್ಪ್ರತ್ಯಯತಃ ಶ್ರುತೇಃ
> ವಾಕ್ಯಾತ್ ಸಂಖ್ಯಾ ವಿಶೇಷಾಚ್ಚ ಸಾಧ್ಯೋ ವಿಶ್ವವಿದವ್ಯಯಃ ॥

ಎಂದು 'ಕುಸುಮಾಂಜಲಿ'ಯಲ್ಲಿ ಉದಯನಾಚಾರ್ಯರ ಸಂಗ್ರಹ. ಇದರ ತಾತ್ಪರ್ಯವಿದು—

ಪ್ರಪಂಚ ಎಂದರೆ ಭೂಗೋಳ, ಖಗೋಳ, ಸೂರ್ಯ, ಚಂದ್ರ, ಸಮುದ್ರ, ಪರ್ವತ ಮೊದಲಾದುವುಗಳಿಗೆ ಉತ್ಪತ್ತಿಯಿರುವುದರಿಂದ ಮನೆ ಮಠ ಮೊದಲಾದುವುಗಳಿಗೆ ಕರ್ತನಿರುವಂತೆ ಇವುಗಳಿಗೂ ಕರ್ತನಿರಬೇಕು, ಅವನಿಗೆ ತಕ್ಕ ಶಕ್ತಿ, ಜ್ಞಾನ, ಇಚ್ಛೆ, ಪ್ರಯತ್ನಗಳಿರಬೇಕು. ಅನೇಕ ಕರ್ತರನ್ನು ಅಂಗೀಕರಿಸುವುದಕ್ಕಿಂತ ಸರ್ವಶಕ್ತನಾದ ಒಬ್ಬನೇ ಶಾಶ್ವತವಾಗಿರುವ ಪಕ್ಷದಲ್ಲಿ ಅವನೇ ಪರಮಾತ್ಮನೆಂದು ಒಂದು ಯುಕ್ತಿ. ಇವುಗಳಿಗೆ ಉತ್ಪತ್ತಿಯೆಂಬುದು ಸಾವಯವವಾಗಿರುವುದರಿಂದ ಇತರ ವಸ್ತುಗಳಂತೆ ಸಿದ್ಧವೆಂದಭಿಪ್ರಾಯ. ಇದೇ "ಕಾರ್ಯ" ಎಂಬುದರ ಅಭಿಪ್ರಾಯ.

ಆಯೋಜನವೆಂದರೆ ಪ್ರಲಯಕಾಲದಲ್ಲಿ ಪರಮಾಣುಗಳು ಸ್ವತಂತ್ರಗಳಾಗಿ ಬೇರೆ ಬೇರೆ ಇರುವುವು. ಸೃಷ್ಟಿಗೆ ಪ್ರಾರಂಭವಾದರೆ ಎರಡು ಮೂರು ಪರಮಾಣು ಸೇರಿ ಕ್ರಮವಾಗಿ ವಸ್ತುಗಳಾಗಬೇಕು. ಆವಾಗ ಯಾವ ಮನುಷ್ಯಾದಿಗಳೂ ಇಲ್ಲದಿರುವುದರಿಂದ ಅವುಗಳನ್ನು ಸೇರಿಸುವಂತಹ ಪುರುಷನಿರಬೇಕು. ಅವನೇ ಪರಮಾತ್ಮನು.

ಧೃತಿಯೆಂದರೆ ಭೂಗೋಳ ಖಗೋಳ ಮೊದಲಾದ ವಸ್ತುಗಳನ್ನು ಧರಿಸುವ ಪುರುಷನಿರಬೇಕು.

ಪದವೆಂದರೆ ಅನಾದಿಕಾಲದಿಂದ ಬಂದಿರುವ ವೃದ್ಧವ್ಯವಹಾರ-ಭಾಷೆಯೆಂದರ್ಥ. ಇದೊಬ್ಬ ಮಹಾಪುರುಷನ ಸಂಕೇತ ಮೂಲಕವೆಂದರ್ಥ.

ಪ್ರತ್ಯಯವೆಂದರೆ ನಂಬಿಕೆ. ವೇದಸಂಪ್ರದಾಯ ಪ್ರಾಮಾಣಿಕ ಪುರುಷ ಮೂಲಕ-ಎಂದರ್ಥ.

ಶ್ರುತಿಯೆಂದರೆ ವೇದವಾಕ್ಯಗಳು. ಲೋಕದಲ್ಲಿ ವಾಕ್ಯಗಳನ್ನು ಆಯಾ ಅರ್ಥವನ್ನು ತಿಳಿದವರು ಪ್ರಯೋಗಿಸುತ್ತಾರೆ. ವೇದವಾಕ್ಯಗಳ ಅರ್ಥವೆಲ್ಲವನ್ನೂ ತಿಳಿದಿರಬೇಕಾದರೆ ಸರ್ವಜ್ಞನಾದ ಪುರುಷನಿರಬೇಕು.

ವಾಕ್ಯವೆಂದರೆ ಪದಗಳ ಸಮೂಹ. ವೇದವಾಕ್ಯಗಳಲ್ಲಿ ಪದಗಳನ್ನು ಜೋಡಿಸಬೇಕಾದರೆ ಪಂಡಿತೋತ್ತಮನಿರಬೇಕು.

ಸಂಖ್ಯಾವಿಶೇಷವೆಂದರೆ ಸೃಷ್ಟಿಕಾಲದಲ್ಲಿ ದ್ವ್ಯಣುಕ ತ್ರ್ಯಣುಕಗಳ ಪರಿಮಾಣವು ಅವಯವ ಪರಿಮಾಣದಿಂದುಂಟಾಗುವುದಾದರೆ ಅಣುತರ ಅಣುತಮವಾಗಬೇಕಾಗುತ್ತದೆ. ಆದುದರಿಂದ ಅವಯವ ಸಂಖ್ಯೆಯಿಂದ ಪರಿಮಾಣವಾಗಬೇಕು, ಆವಾಗ ಸಂಖ್ಯೆ ಮಾಡುವನಿರಬೇಕಾದರೆ ಪರಮಾತ್ಮನಿರಬೇಕೆಂದು ತಾತ್ಪರ್ಯ.

## ಕಾರ್ಯಕಾರಣಭಾವ

ಈ ತಾರ್ಕಿಕ ದರ್ಶನದಲ್ಲಿ ಆರಂಭವಾದವನ್ನಂಗೀಕರಿಸಿರುವರು ಹೇಗೆಂದರೆ ತಂತುವಿನಿಂದ ಪಟ ಹುಟ್ಟುತ್ತದೆ. ಬೀಜದಿಂದ ಅಂಕುರ ಹುಟ್ಟುತ್ತದೆ. ಇಂತಹ ಕಾರ್ಯಕಾರಣಭಾವ ಸ್ಥಳಗಳಲ್ಲಿ ತಂತುಬೀಜಗಳೇ ಬೇರೆ, ವಸ್ತ್ರ ಅಂಕುರಗಳೇ ಬೇರೆ ಎಂದು ಅವಯವ, ಅವಯವಿ-ಇವುಗಳಿಗೆ ಅತ್ಯಂತ ಭೇದವನ್ನಂಗೀಕರಿಸಿರುವರು. ಹೊಸದಾಗಿ ಹುಟ್ಟಿದ ಅವಯವಿ ವಿನಾಶವನ್ನು ಹೊಂದಿ ಅವಯವ ಉಳಿಯುವುದು. ಹೀಗೆ ಕೊನೆಯ ಅವಯವವೇ ಪರಮಾಣುವೆನ್ನಿಸಿಕೊಳ್ಳುವುದು. ಅದು ನಿತ್ಯ. ನಾಶವಿಲ್ಲದ್ದು.

ಈ ಸ್ಥಳದಲ್ಲಿ ಪ್ರಾಯಃ ಇತರ ದಾರ್ಶನಿಕರ ಅಭಿಪ್ರಾಯವೆಂತೆಂದರೆ. ಅವಯವಿ ಅವಯವಗಳಿಗಿಂತಲೂ ಬೇರೆಯಾಗಿ ಹುಟ್ಟಿದ ವಸ್ತುವಲ್ಲ. ಅವಯವಗಳ ಸಂಯೋಗ ವಿಶೇಷವೇ ಅವಯವಿ ಎಂದೂ ಇದೇ ಪರಿಣಾಮವಾದವೆಂದೂ ನಿರ್ಣಯ.

ಈ ಪರಿಣಾಮವಾದ ಲೋಕಾನುಭವದಲ್ಲಿಯೂ ಸರ್ವಸಮ್ಮತವಾಗಿರುವುದು. ಈ ಆರಂಭವಾದ ಸಾಮಾನ್ಯ ಜನರಿಗೂ ಈಗ ಸಮ್ಮತವಾಗುವ ಹಾಗಿಲ್ಲ. ಈ ವಿಷಯದಲ್ಲಿ ಇತರ ಸಾರ್ವದಾರ್ಶನಿಕರು ಇವರನ್ನು ಅರ್ಧ ವೈನಾಶಿಕರೆಂದು ಕರೆಯುತ್ತಾರೆ ವೈನಾಶಿಕರೆಂದರೆ ಪ್ರತಿಯೊಂದು ವಸ್ತುವೂ ಪ್ರತಿಕ್ಷಣದಲ್ಲಿಯೂ ಹುಟ್ಟಿ ಉತ್ತರಕ್ಷಣದಲ್ಲಿಯೇ ನಾಶವಾಗುವುದು ಎಂದು ವಾದಿಸುವ ಕ್ಷಣಿಕವಾದಿಗಳು, ಮಹಾವೈನಾಶಿಕರು. ತಾರ್ಕಿಕರು ಅವಯವಿ ಮಾತ್ರ, ವಿನಾಶವಾಗಿ ಅವಯವ ಉಳಿಯುತ್ತದೆಂದು ಹೇಳುವುದರಿಂದ ಅರ್ಧ ವೈನಾಶಿಕರೆಂದು ಪ್ರಸಿದ್ಧಿ.

ಈ ಅವಯವ ಅವಯವಿಗಳಿಗೆ ಘಟಪಟಾದಿಗಳಂತೆ ಅತ್ಯಂತ ಭೇದವಿರುವುದಾದರೆ ದೇಶಭೇದ, ಭಾರದಲಿ ಭೇದ ಮೊದಲಾದ ಅನುಪಪತ್ತಿಗಳಿಗೆ ಸಮಾಧಾನವಾಗಿ ಅವಯವ ಅವಯವಿಗಳಿಗೆ ಸಮವಾಯವೆಂಬ ಸಂಬಂಧವನ್ನು ಅಂಗೀಕರಿಸಿರುವರು. ಸಮವಾಯವೆಂದರೆ ತಂತುವಿನಲ್ಲಿ ಪಟವಿದೆ, ಬಂಗಾರದಲ್ಲಿ ಭೂಷಣಗಳಿವೆ ಎಂಬ ಪ್ರತೀತಿಗೆ ನಿಯಾಮಕವಾಗಿಯೂ ದೇಶದಲ್ಲಿ ಭೇದವೂ ಭಾರದಲ್ಲಿ ಭೇದವೂ ಇಲ್ಲದೆಯೂ ಇರುವ ಒಂದು ಸಂಬಂಧವೆಂದರ್ಥ.

ಇಂತಹ ಸಂಬಂಧವನ್ನು ಪ್ರಾಭಾಕರ ಮೀಮಾಂಸಕರು ವಿನಾ ಎಲ್ಲರೂ ನಿರಾಕರಿಸಿರುವರು. ಇವರಲ್ಲಿ ಕೆಲವರು ಅವಯವ ಅವಯವಿಗಳಿಗೆ ಅತ್ಯಂತ ಅಭೇದವನ್ನೂ ಕೆಲವರು ಭೇದಾಭೇದವನ್ನೂ ಅಂಗೀಕರಿಸಿರುವುದರಿಂದ ಇಂತಹ ಸಂಬಂಧ ಅವರಿಗೆ ಆವಶ್ಯಕವಿಲ್ಲ.

ಸಾಮಾನ್ಯವಾಗಿ ತಾರ್ಕಿಕರು ಕಾರ್ಯಕಾರಣಭಾವದಲ್ಲಿ ವಿಶೇಷ ದೃಷ್ಟಿಯನ್ನಿಟ್ಟಿರುವರು. ಆರಂಭವಾದವೆಂಬುದು ಅಸತ್ಕಾರ್ಯವಾಗುತ್ತದೆ. ಈ ಕಾರ್ಯಕಾರಣಭಾವ ವಿಷಯದಲ್ಲಿ ಸತ್ಕಾರ್ಯವಾದ, ಅಸತ್ಕಾರ್ಯವಾದ, ಸದಸತ್ಕಾರ್ಯವಾದ, ಸದಸದ್ವಿಲಕ್ಷಣಕಾರ್ಯವಾದ ಎಂಬ ನಾಲ್ಕು ಪಕ್ಷಗಳಲ್ಲಿ ಅಸತ್ಕಾರ್ಯ ಪಕ್ಷವನ್ನು ಸ್ವೀಕಾರಮಾಡಿ ಇತರ ಮೂರು ಪಕ್ಷಗಳನ್ನೂ ನಿರಾಕರಿಸಿರುತ್ತಾರೆ.

ಸಾಂಖ್ಯರು ಸತ್ಕಾರ್ಯವಾದಿಗಳು. ಕಾರ್ಯವೂ ಕಾರಣವೂ ಒಂದೇ ಆದುದರಿಂದ. ಕಾರಣರೂಪದಲ್ಲಿ ಕಾರ್ಯವು ಇರುವುದರಿಂದ ಸತ್ಕಾರ್ಯ

ವಾದವಾಗುತ್ತದೆ. ಕಾರ್ಯ ಬೇರೆ, ಕಾರಣ ಬೇರೆ. ಆದುದರಿಂದ ಕಾರಣ ದಶೆಯಲ್ಲಿ ಕಾರ್ಯವು ಇಲ್ಲದೇ ಇರುವುದರಿಂದ ಅಸತ್ಕಾರ್ಯವಾದವಾಗುವುದು. ಕಾರ್ಯಕಾರಣಗಳಿಗೆ ಭೇದಾಭೇದ ಯುಕ್ತಿಗಳು ಸಮಬಲವಾಗಿರುವುದರಿಂದ ಮಧ್ಯಸ್ಥಸ್ಥಿತಿ ಯುಕ್ತವೆಂದು ತಿಳಿದು ಜೈನ, ಪಾತಂಜಲ, ಕುಮಾರಿಲಪ್ರಭೃತಿಗಳು ಸದಸತ್ಕಾರ್ಯವಾದವನ್ನು ಆಶ್ರಯಿಸಿರುವರು. ಸದಸತ್ಪಕ್ಷಗಳಿಗೆ ಪರಸ್ಪರ ವಿರೋಧವಿರುವುದರಿಂದ ಸದಸದ್ವಿಲಕ್ಷಣವೆಂದರೆ ವಿರೋಧವಿಲ್ಲವೆಂದು ತಿಳಿದು ಈ ನಾಲ್ಕನೆಯ ಪಕ್ಷವನ್ನು ಕೆಲವರು ಆಶ್ರಯಿಸಿರುವರು. ಇವರೆಲ್ಲರೂ ಸತ್ಕಾರಣವಾದಿಗಳು.

ಇವರೆಲ್ಲರಿಗೂ ಪ್ರತಿಪಕ್ಷವಾಗಿ ಸೌಗತರು ಅಸತ್ಕಾರಣವಾದಿಗಳು. ಶೂನ್ಯವೇ ಪ್ರಪಂಚಕ್ಕೆ ಮೂಲವೆಂದು ತಿಳಿಯುವರು ; ಎಂದರೆ ಕಾರಣವೇ ಇಲ್ಲವೆಂದರ್ಥ. ಕಾರ್ಯಕಾರಣಭಾವದ ವ್ಯವಹಾರದಲ್ಲಿ ಕಾರಣವೆಂಬುದು ಸಮವಾಯಿಕಾರಣ, ಅಸಮವಾಯಿಕಾರಣ, ನಿಮಿತ್ತ ಕಾರಣವೆಂದು ಮೂರು ವಿಧ. ಕಾರಣವೆಂದರೆ ಕಾರ್ಯ ಹುಟ್ಟುವುದಕ್ಕೆ ಪೂರ್ವಕ್ಷಣದಲ್ಲಿ ನಿಯತವಾಗಿರುವ ವಸ್ತು. ವಸ್ತ್ರವೆಂಬ ವಸ್ತು ಹುಟ್ಟಬೇಕಾದರೆ ತಂತು ಮೊದಲಾದುವು ನಿಯಮೇನ ಪೂರ್ವಕ್ಷಣದಲ್ಲಿರುತ್ತದೆ. ನಿಯಮವೆಂದರೆ ಯಾವುದಿಲ್ಲದಿದ್ದರೆ ಕಾರ್ಯ ಉದಯಿಸಲಾರದೋ ಅಂತಹ ವಸ್ತುವಿನ ಇರುವಿಕೆ. ಸಕಲ ಕಾರ್ಯಕ್ಕೂ ಮೂರು ವಿಧವಾದ ಕಾರಣಗಳಿರಬೇಕು. ವಸ್ತ್ರಕ್ಕೆ ತಂತುಗಳು ಸಮವಾಯಿಕಾರಣ. ತಂತುಗಳ ಸೇರುವಿಕೆಯೆಂಬ ಸಂಯೋಗವು ಅಸಮವಾಯಿಕಾರಣ. ತಂತುವಾಯನೇ ಮೊದಲಾದ ಉಳಿದುವೆಲ್ಲವೂ ನಿಮಿತ್ತ ಕಾರಣ. ನಿಮಿತ್ತಕಾರಣವನ್ನು ಪ್ರಾಯಃಕರ್ತನೆಂದು ಹೇಳುವರು. ಪ್ರತಿಕಾರ್ಯಕ್ಕೂ ಕರ್ತನಿರಬೇಕು. ಕರ್ತನೆಂದರೆ ದೇಶಕಾಲ ಸ್ವಭಾವವನ್ನರಿತು ಕಾರಣ ವಸ್ತುಗಳನ್ನು ಪ್ರತ್ಯಕ್ಷವಾಗಿ ತಿಳಿದು ಆ ವಸ್ತುವನ್ನು ಮಾಡಬೇಕೆಂಬ ಇಚ್ಛೆಯುಳ್ಳ ಮನುಷ್ಯ. ಪ್ರಾಯಃ ಮನುಷ್ಯರಿಗೇಯೇ ಜ್ಞಾನೇಚ್ಛಾ ಪ್ರಯತ್ನಗಳು ಅನುಭವಸಿದ್ಧಗಳಾಗಿರುವುವು. ಆದುದರಿಂದ ಮನುಷ್ಯ ಪ್ರಯತ್ನವಿಲ್ಲದೆ ಲೋಕದಲ್ಲಿ ಯಾವ ಕೆಲಸವೂ ನಡೆಯುವುದಿಲ್ಲ. ಕೆಲಸವನ್ನು ಬೋಧಿಸುವ ಧಾತುಗಳೆಂಬ ಶಬ್ದಗಳ ಮೇಲೆ ಬರುವ ಆಖ್ಯಾತ ಪ್ರತ್ಯಯಗಳಿಗೆಲ್ಲಾ ಪ್ರಯತ್ನವೂ ಅರ್ಥವೆಂದು ತಾರ್ಕಿಕರ ಸಿದ್ಧಾಂತ.

ಇದರಿಂದ ಸ್ವಭಾವವಾದವು ನಿರಾಕರಿಸಲ್ಪಟ್ಟು ಪ್ರಯತ್ನವಾದವು ಸ್ಥಾಪಿಸಲ್ಪಡುವುದು. ಆದುದರಿಂದ ಮನುಷ್ಯರಿಗೆ ಮೊದಲು ಸ್ವಾಭಾವಿಕವಾದ ಆಲಸ್ಯವೆಂಬ ಸೋಮಾರಿತನ ನಿವೃತ್ತಿಯಾಗುವುದು. ವಿಧಿನಿಷೇಧರೂಪವಾದ ಶಾಸ್ತ್ರಕ್ಕೆ ಅವಕಾಶ ಏರ್ಪಡುವುದು. ಸ್ವಭಾವವಾದದಲ್ಲಿ ಇವುಗಳಿಗೆ ಅವಕಾಶವಿಲ್ಲ. ಶಾಸ್ತ್ರವೆಂಬ ಪ್ರಮಾಣವನ್ನು ಅಂಗೀಕರಿಸಿರುವವರೆಲ್ಲರೂ ಶಾಸ್ತ್ರವು ವಿಧಿನಿಷೇಧ ರೂಪವಾಗಿರುವುದರಿಂದ ಪ್ರಯತ್ನಶೀಲರಾಗಿರಬೇಕು. ಇದೇ ತಾರ್ಕಿಕ ದರ್ಶನದ ರಹಸ್ಯ.



## ಪ್ರತಿಬಧ್ಯ ಪ್ರತಿಬಂಧಕ

ಈ ದರ್ಶನದಲ್ಲಿ ಪ್ರತಿಬಂಧಕ ವಿಚಾರವು ಬಹುಮುಖ್ಯ. ಕಾರ್ಯಕಾರಣಭಾವ ವಿಷಯದಲ್ಲಿ ಕಾರಣವಾಗಬೇಕಾದರೆ ಅದಕ್ಕೆ ಶಕ್ತಿಯಿರಬೇಕು. ಶಕ್ತಿಯೆಂಬುದು ಒಂದು ವಸ್ತು. ಅದು ಸಕಲ ವಸ್ತುಗಳಲ್ಲೂ ನಾನಾ ವಿಧವಾಗಿರುವುದು. ಅಂತಹ ಶಕ್ತಿ ಸಹಿತವಾದ ವಸ್ತುವೇ ಕಾರಣವಾಗುವುದು. ಶಕ್ತಿ ನಷ್ಟವಾಗಿದ್ದರೆ ಅದು ಕಾರಣವಾಗಲಾರದು. ಬೆಂಕಿಯಲ್ಲಿ ದಹನಶಕ್ತಿಯಿರುವುದು ಸರ್ವಜನ ಪ್ರತ್ಯಕ್ಷ. ಬೀಜದಲ್ಲಿ ಅಂಕುರಜನನಶಕ್ತಿಯಿದ್ದರೆ ಅಂಕುರವುಂಟಾಗುವುದು. ಅದು ನಷ್ಟವಾಗಿದ್ದರೆ ಉಂಟಾಗುವುದಿಲ್ಲ. ಹೀಗೆ ಸಕಲ ವಸ್ತುಗಳಲ್ಲೂ ಶಕ್ತಿಯೆಂಬ ವಸ್ತುವಿರುವುದೆಂದು ಪ್ರಾಯಃ ಸಕಲ ದಾರ್ಶನಿಕರೂ ಒಪ್ಪುವರು. ತಾರ್ಕಿಕರು ಮಾತ್ರ ಶಕ್ತಿಯೆಂಬ ಬೇರೆ ಪದಾರ್ಥವೇ ಇಲ್ಲವೆನ್ನುತ್ತಾರೆ. ಶಕ್ತಿಪದಕ್ಕೆ ಅರ್ಥವೇನೆಂದರೆ ಸಹಕಾರಿ ಸಂಪತ್ತಿ ಎಂದು. ಒಂದು ವಸ್ತು ಕಾರಣವಾಗಬೇಕಾದರೆ ಅದಕ್ಕೆ ಸಹಕಾರಿಗಳು ಅನೇಕವಾಗಿರುವುವು. ಅವುಗಳೆಲ್ಲಾ ಕೂಡುವುದೇ ಕಾರಣಕ್ಕೆ ಶಕ್ತಿ. ಬೀಜಕ್ಕೆ ಭೂಮಿ, ಜಲ ಮೊದಲಾದುವು ಸಹಕಾರಿಗಳು. ಮೂಷಿಕ ಗಂಧವು ಪ್ರತಿಬಂಧಕ. ಬೀಜವನ್ನು ಇಲಿ ಮೂಸಿ ನೋಡಿದರೆ ಅದರಿಂದ ಅಂಕುರ ಹುಟ್ಟುವುದಿಲ್ಲ. ಆದುದರಿಂದ ಮೂಷಿಕ ಗಂಧ ಪ್ರತಿಬಂಧಕ. ಅದಿಲ್ಲದಿರುವುದು ಮೂಷಿಕ ಗಂಧಾಭಾವ. ಇದು ಕಾರ್ಯ ಸಹಕಾರಿಯಾದ ಪ್ರತಿಬಂಧಕಾಭಾವ. ಗಂಧವಿರುವ ಬೀಜದಲ್ಲಿ ಗಂಧಾಭಾವವೆಂಬ ಸಹಕಾರಿಯಿಲ್ಲದಿರುವುದರಿಂದ ಅಂಕುರ ಜನನವಿಲ್ಲ. ಇತರರ ಅಭಿಪ್ರಾಯದಲ್ಲಿ

ಮೂಷಿಕ ಗಂಧದಿಂದ ಜನನ ಶಕ್ತಿಯೇ ನಷ್ಟವಾಯಿತೆಂದು ಹೇಳಬೇಕು. ಶಕ್ತಿಯೆಂಬ ಬೇರೆ ಪದಾರ್ಥವಿದ್ದರೆ ಅದಕ್ಕೆ ಉತ್ಪತ್ತಿ, ವಿನಾಶ, ಕಾರಣ, ಕಾಲ, ದೇಶ ಮೊದಲಾದ ಸಕಲ ಸನ್ನಿವೇಶಗಳನ್ನೂ ಕಲ್ಪಿಸಬೇಕು. ಪ್ರತಿಬಂಧಕ ಕಲ್ಪನೆಯಿಂದಲೇ ನಿರ್ವಾಹಕವಾಗುವಾಗ ಅತಿರಿಕ್ತ ಪದಾರ್ಥದ ಆವಶ್ಯಕತೆಯಿಲ್ಲ. ಇದೇ ಲಾಘವಯುಕ್ತಿ. ಹೀಗೆ ಅನೇಕ ಸಂದರ್ಭಗಳಲ್ಲಿ ಲಾಘವ ಯುಕ್ತಿಯಿಂದ ನಿರ್ಣಯವು ತರ್ಕಶಾಸ್ತ್ರದಲ್ಲಿ ಮಾಡಲ್ಪಟ್ಟಿರುವುದು.

ಏವಂಚ ಪ್ರತಿಬಂಧಕವೆಂದರೆ ಸಾಮಗ್ರಿಯೆಂಬ ಕಾರಣಸಮುದಾಯಕ್ಕೆ ನ್ಯೂನತೆಯನ್ನುಂಟುಮಾಡುವುದು. ಅದೇ ಸಾಮಗ್ರೀವೈಕಲ್ಯವು. ಅದನ್ನುಂಟು ಮಾಡುವುದು ಪ್ರತಿಬಂಧಕ. ಅದರ ಅಭಾವವು ಸಾಮಗ್ರಿಯಲ್ಲಿ ಸೇರಿರುವುದು. ಅದಿದ್ದರೆ ಅಭಾವವಿರುವುದಿಲ್ಲ, ಸಾಮಗ್ರೀಸಾಕಲ್ಯವಿಲ್ಲ, ಯಾವುದರಿಂದ ಕಾರ್ಯ ನಿಂತುಹೋಗುವುದು. ಅದು ಪ್ರತಿಬಂಧಕವಾದರೆ ಕಾರ್ಯ ಪ್ರತಿಬಧ್ಯವಾಗುವುದು. ಇಂತಹ ಪ್ರತಿಬಧ್ಯ ಪ್ರತಿಬಂಧಕಭಾವವು ಹೊರಗಿನ ವಸ್ತುಗಳಲ್ಲಿರುವ ಹಾಗೆ ಒಳಗಿನ ವಸ್ತುಗಳಲ್ಲೂ ಇರುವುದು. ಇಲ್ಲಿ ಮನುಷ್ಯನಿಲ್ಲವೆಂಬ ನಿಶ್ಚಯವಿದ್ದರೆ ಮನುಷ್ಯನಿದ್ದಾನೆಂಬ ಜ್ಞಾನ ಹುಟ್ಟುವುದಿಲ್ಲ. ಹಾಗೆಯೇ ಇರುವನೆಂಬ ನಿಶ್ಚಯವಿದ್ದರೆ ಮನುಷ್ಯನಿಲ್ಲವೆಂಬ ಜ್ಞಾನವೂ ಬರುವುದಿಲ್ಲ. ಈ ಪ್ರಕಾರ ವಿಚಾರವು ಬಹುದೂರ ಹೋಗುವುದು. ಒಂದು ಪ್ರದೇಶದಲ್ಲಿ ಕೀರಗಳಿದ್ದರೆ ಹಾವುಗಳಿರಲಾರದು. ಕೀರಗಳಿರುವುದರಿಂದ ಹಾವುಗಳಿಲ್ಲವೆಂಬ ಜ್ಞಾನ ಹುಟ್ಟುವುದು. ತತ್ತ್ವಜ್ಞಾನದಿಂದ ಮಿಥ್ಯಾಜ್ಞಾನ ವಿನಾಶವಾಗಬೇಕಾದರೆ ಈ ವಿಚಾರ ಆವಶ್ಯಕ.

ಆದುದರಿಂದ ಪ್ರಪಂಚದಲ್ಲಿರುವ ವಸ್ತುಗಳು ಭಾವ, ಅಭಾವ ಎಂದು ಎರಡು ವಿಧ. ಭಾವಗಳಾದ ಘಟಪಟಾದಿಗಳು ಹೇಗೆ ಪದಾರ್ಥಗಳೋ ಅವುಗಳ ಅಭಾವಗಳೂ ಪದಾರ್ಥಗಳು. ಅವುಗಳೂ ಕಾರಣವಾಗಿಯೂ ಕಾರ್ಯವಾಗಿಯೂ ಇರುವುವು. ಆದುದರಿಂದ ಪ್ರತಿಬಂಧಕದ ಅಭಾವವು ಕಾರಣವಾಗುವುದರಲ್ಲಿ ಯಾವ ಆಕ್ಷೇಪಣೆಯೂ ಇಲ್ಲ. ಕಲ್ಲಾರು ಮತ್ತು ಕೆಲವು ಓಷಧಿರಸಗಳನ್ನು ಕೈಕಾಲುಗಳಿಗೆ ಸವರಿಕೊಂಡು ಬೆಂಕಿ ಹಿಡಿಯಬಹುದು; ಅದರ ಮೇಲೆ ನಡೆಯಬಹುದು. ಇವುಗಳು ಬೆಂಕಿಯಿಂದ ದಹನಕಾರ್ಯವನ್ನು ತಡೆಯುವುವು. ಬೆಂಕಿಯಲ್ಲಿರುವ ದಹನ ಶಕ್ತಿಯನ್ನು ನಾಶಪಡಿ

ಸುವುದಿಲ್ಲ, ಆದುದರಿಂದ ತಾರ್ಕಿಕರ ಸಹಕಾರವಾದವೇ ಪ್ರತ್ಯಕ್ಷಕ್ಕೆ ಸರಿಯಾಗಿರುವುದೆಂದು ತಿಳಿದುಬರುವುದು. ಮೂಷಿಕ ಗಂಧವುಳ್ಳ ಬೀಜದಲ್ಲಿ ಸಹ ಶಕ್ತಿ ನಷ್ಟವಾಯಿತೇ ಅಥವಾ ಶಕ್ತಿತಡೆಯಲ್ಪಟ್ಟಿತೇ, ಎಂದರೆ ಅಲ್ಲೂ ತಡೆಯೆಂಬ ಪ್ರತಿಬಂಧಕವಿದೆ ಎನ್ನಬಹುದು. ಇವುಗಳಲ್ಲಿ ಕೆಲವು ಸ್ಥಿರವಾಗಿರುವುವು. ಕೆಲವು ಅಸ್ಥಿರವಾಗಿರುವುವು. ಮೂಷಿಕ ಗಂಧವು ಸ್ಥಿರವಾದ ತಡೆಯೆಂದು ಹೇಳಬಹುದು.

## ಪ್ರಮಾಣ

ಬುದ್ಧಿ, ಉಪಲಬ್ಧಿ, ಜ್ಞಾನ– ಈ ಮೂರು ಪದಗಳ ಅರ್ಥಗಳೂ ಬೇರೆ ಬೇರೆಯೆಂದು ಸಾಂಖ್ಯರು ಹೇಳುವರು. ಈ ವಿಚಾರವು ಸಾಂಖ್ಯ ದರ್ಶನದಲ್ಲಿ ವಿಸ್ತಾರವಾಗಿರುವುದು. ತಾರ್ಕಿಕ ಮತದಲ್ಲಿ ಆ ಮೂರು ಪದಗಳಿಗೂ ಒಂದೇ ಅರ್ಥವೆಂದೂ ಅದು ಆತ್ಮನ ಮುಖ್ಯಧರ್ಮವೆಂದೂ ನಿರ್ಣಯ, ಈ ಜ್ಞಾನದಲ್ಲಿ ಸ್ಮೃತಿ, ಅನುಭವ ಎಂದು ಎರಡು ವಿಧ. ಅನುಭವ ಮೂಲಕ ಸಂಸ್ಕಾರದಿಂದುಂಟಾಗುವ ಜ್ಞಾನ ಸ್ಮರಣೆ. ಇದರಿಂದಲೇ ಪ್ರಪಂಚದಲ್ಲಿ ಸಕಲ ವ್ಯವಹಾರಗಳೂ ನಡೆಯುವುವು. ಕಾವ್ಯಗಳೂ ದರ್ಶನಗಳೂ ಇತರ ಸಕಲ ಶಾಸ್ತ್ರಗಳೂ ಸ್ಮೃತಿಶಕ್ತಿಯಲ್ಲಿರುವುದು ಸರ್ವಲೋಕ ಪ್ರಸಿದ್ಧ. ಆದರೂ ಸ್ಮೃತಿಯನ್ನು ಪ್ರಮಾಣದಲ್ಲಿ ಸೇರಿಸಿ ಪ್ರಾಮಾಣ್ಯವನ್ನು ಅಂಗೀಕರಿಸುವುದಿಲ್ಲ.

ಅನುಭವದಲ್ಲಿ ಎರಡು ವಿಧ. ಯಥಾರ್ಥಾನುಭವ, ಅಯಥಾರ್ಥಾನುಭವ ಎಂದು. ಮೊದಲನೆಯದಕ್ಕೆ ಪ್ರಮೆಯೆಂದೂ, ಎರಡನೆಯದಕ್ಕೆ ಭ್ರಮೆಯೆಂದೂ ಹೆಸರು. ಈ ಭ್ರಮೆಯೆಂಬುದೇ ಅನ್ಯಥಾಖ್ಯಾತಿ. ಹಾಗೆಂದರೆ ಅನ್ಯಪ್ರಕಾರವಾಗಿ ಬೇರೆ ವಸ್ತುವಾಗಿ ತಿಳಿಯುವ ಜ್ಞಾನವೆಂದರ್ಥ. ಶುಕ್ತಿ ರಜತವಾಗಿಯೂ ಹಗ್ಗ ಸರ್ಪವಾಗಿಯೂ ಸೂರ್ಯಕಿರಣ ನೀರಾಗಿಯೂ ತಿಳಿಯಲ್ಪಡುವುವು. ಎದುರಿಗಿರುವ ವಸ್ತು ಚೆನ್ನಾಗಿ ತಿಳಿಯದ ದೋಷದಿಂದ ಸದೃಶವಸ್ತುವಿನ ಸ್ಮರಣೆಬಂದು ಅದರ ಮೂಲಕ ಇದು ರಜತವು, ಇತ್ಯಾದಿ ಜ್ಞಾನಗಳುದಯಿಸುವುವು. ಈ ಖ್ಯಾತಿವಿಚಾರವು ಸಾಂಖ್ಯದರ್ಶನದಲ್ಲೂ ವೇದಾಂತದರ್ಶನದಲ್ಲೂ ವಿಸ್ತರಿಸಲ್ಪಟ್ಟಿರುವುದು. ಅಖ್ಯಾತಿವಾದದಲ್ಲಿ

ಎರಡು ಜ್ಞಾನಗಳು ಒಂದಾಗಿಯೂ ಅಸತ್ಖ್ಯಾತಿವಾದದಲ್ಲಿ ಅಸತ್ತು ಸತ್ತಾಗಿಯೂ, ಅನಿರ್ವಚನೀಯಖ್ಯಾತಿವಾದದಲ್ಲಿ ಅನಿರ್ವಚನೀಯವು ನಿರ್ವಚನೀಯವಾಗಿಯೂ, ಆತ್ಮ ಖ್ಯಾತಿವಾದದಲ್ಲಿ ಆತ್ಮನು ಅನಾತ ನಾಗಿಯೂ, ಏವಂಚ ಇಲ್ಲದಿರುವುದು ಇರುವುದಾಗಿಯೂ, ಇರುವುದು ಬೇರೆಯಾಗಿಯೂ ತೋರಿಯೇ ತೋರಬೇಕು. ಅನ್ಯಥಾಖ್ಯಾತಿಯೆಂಬುದು ಸರ್ವತ್ರ ಇದ್ದೇ ಇರುವುದು ಎಂದು ಇವರ ಅಭಿಪ್ರಾಯ. ಪ್ರಮೆ ಸಾಕ್ಷಾತ್ಕಾರ, ಅನುಮಿತಿ, ಉಪಮಿತಿ, ಶಾಬ್ದಬೋಧವೆಂಬುದಾಗಿ ನಾಲ್ಕು ಪ್ರಕಾರವಾಗಿದೆ. ಈ ನಾಲ್ಕು ಪ್ರಕಾರಗಳಿಗೂ ಅಸಾಧಾರಣ ಕಾರಣಗಳು ನಾಲ್ಕು ಪ್ರಮಾಣಗಳು.

ಪ್ರಮಾಣವೆಂದರೆ ಪ್ರಮೆಗೆ ಸಾಧನ. ಪ್ರಮೆಯೆಂದರೆ ಯಥಾರ್ಥ ಜ್ಞಾನ. ಇದಕ್ಕೆ ಆಶ್ರಯನಾಗಿರುವವನು ಪ್ರಮಾತ. ವಿಷಯವಾಗಿರುವುದು ಪ್ರಮೇಯ. ಏವಂಚ ಪ್ರಮಾಣ, ಪ್ರಮೇಯ, ಪ್ರಮಾತ, ಪ್ರಮಿತಿ ಎಂದು ನಾಲ್ಕು ವಿಧದಲ್ಲಿ ಪ್ರಪಂಚವೆಲ್ಲವೂ ಅಡಗಿರುವುದು. ಸಾಮಾನ್ಯವಾಗಿ ಪ್ರತಿಯೊಂದು ಕ್ರಿಯೆಗೂ ಕರ್ತೃ ಕರಣ ಕರ್ಮಗಳು ಇರುವ ಹಾಗೆ ಪ್ರಮೆ ಎಂಬ ಜ್ಞಾನ ರೂಪಕ್ರಿಯೆಗೂ ಕರ್ತೃ ಕರ್ಮ ಕರಣಗಳು ಇರಬೇಕು. ಚೈತ್ರನು ಕಣ್ಣಿನಿಂದ ಸೂರ್ಯನನ್ನು ನೋಡುತ್ತಾನೆಂಬುದರಲ್ಲಿ ನೋಡುತ್ತಾನೆಂಬುದು ಕ್ರಿಯೆ. ಚೈತ್ರನು ಕರ್ತೃ, ಕಣ್ಣು ಕರಣ, ಸೂರ್ಯನು ಕರ್ಮ.

ಪ್ರಮಾಣವು ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ ಅನುಪಲಬ್ಧಿ, ಸಂಭವ, ಐತಿಹ್ಯ, ಲಿಪಿ, ಲೋಕಪ್ರಸಿದ್ಧಿ, ಚೇಷ್ಟೆ, ಪ್ರಾತಿಭ ಎಂದು ಹನ್ನೆರಡು ವಿಧವೆಂದು ಕೆಲವರು ಹೇಳುತ್ತಾರೆ. ಇವುಗಳಲ್ಲಿ ವೈಶೇಷಿಕರು ಪ್ರತ್ಯಕ್ಷ-ಅನುಮಾನ ಎಂಬ ಎರಡು ಪ್ರಮಾಣಗಳನ್ನು ಮಾತ್ರ ಒಪ್ಪುವರು. ಇವುಗಳಲ್ಲಿಯೇ ಉಳಿದ ಪ್ರಮಾಣಗಳೆಲ್ಲವೂ ಸೇರಿರುವುವೆಂದು ಅಭಿಪ್ರಾಯಪಡುವರು. ನೈಯಾಯಿಕರು ಮೊದಲನೆಯ ನಾಲ್ಕು ಪ್ರಮಾಣಗಳನ್ನೊಪ್ಪುವರು. ಈ ಪ್ರಮಾಣಗಳಿಂದಲೇ ಸಕಲ ವಿಧಪದಾರ್ಥಪರೀಕ್ಷಣವೂ ಆಗುವುದೆಂದು ಸಿದ್ಧಾಂತ.

## ಪ್ರಮಾಣಪರೀಕ್ಷೆ

ಪ್ರಮಾಣಗಳಿಂದ ತತ್ತ್ವವನ್ನು ಪರೀಕ್ಷಿಸುವವರು ಮೊದಲು ಪ್ರಮಾಣಗಳನ್ನು ಪರೀಕ್ಷಿಸಬೇಕೇ, ಬೇಡವೇ ಎಂಬ ವಿಚಾರ ಬರುತ್ತದೆ. ಪ್ರಮಾಣಪರೀಕ್ಷೆಗೆ ಹೊರಟರೆ ಆ ಪರೀಕ್ಷಕಪ್ರಮಾಣಗಳ ಪರೀಕ್ಷೆ ಬೇಕಾಗುತ್ತದೆ. ಅನವಸ್ಥೆ ಬರುತ್ತದೆ. ಲೋಕದಲ್ಲೂ ಸಾಕ್ಷಿಗೆ ಸಾಕ್ಷಿಯಿಲ್ಲ. ಆದುದರಿಂದ ಪ್ರಮಾಣಪರೀಕ್ಷೆ ಅಸಾಧ್ಯ ಮತ್ತು ಅನಾವಶ್ಯಕ. ಪ್ರಮಾಣಗಳನ್ನು ಪರೀಕ್ಷಿಸದೆ ವಸ್ತು ಪರೀಕ್ಷೆ ಯುಕ್ತವೆಂದು ಕೆಲವರ ಅಭಿಪ್ರಾಯ.

ಅಪರೀಕ್ಷಿತಪ್ರಮಾಣಗಳಿಂದ ವ್ಯವಹಾರವು ನಡೆಯುವುದಾದರೆ ಪ್ರಮಾಣಗಳಿಲ್ಲದೆ ಸ್ವೇಚ್ಛೆಯಿಂದ ವ್ಯವಹಾರವನ್ನು ಮಾಡಬಹುದು. ಅದು ಲೋಕದಲ್ಲೂ ಇಲ್ಲವಾದುದರಿಂದ ಪ್ರಮಾಣದಿಂದ ವ್ಯವಹಾರ ಮಾಡುವವರು ಪ್ರಮಾಣಪರೀಕ್ಷೆಯಲ್ಲೂ ದೃಷ್ಟಿಯನ್ನಿಡುವರು. ಲಕ್ಷಣಕ್ಕೆ ಲಕ್ಷಣವನ್ನು ಹೇಳಿದರೆ ಅದರಲ್ಲೂ ಲಕ್ಷಣಲಕ್ಷಣವಿರಬೇಕು. ಪ್ರಮಾಣಪರೀಕ್ಷೆಯಲ್ಲಿ ಪರೀಕ್ಷಕಪ್ರಮಾಣ ಪರೀಕ್ಷೆಯೂ ಸೇರಿರುತ್ತದೆ. ಇದೂ ಸ್ವಪರನಿರ್ವಾಹಕವಾಗುವುದು. ಮತ್ತು ವ್ಯಕ್ತಿಭೇದದಿಂದಲೂ ಪ್ರಮಾಣಪರೀಕ್ಷೆ ಆಗುವುದು ಕಣ್ಣಿಂದ ನೋಡಿದುದನ್ನು ಕೈಯಿಂದ ಮುಟ್ಟಿ ದೃಢಪಡಿಸಿಕೊಳ್ಳುವುದಿಲ್ಲವೆ ? ಲೋಕದಲ್ಲೂ ಸಾಕ್ಷಿಯ ಪ್ರಾಮಾಣಿಕತೆಯನ್ನು ಅವನ ನಡತೆಯಿಂದ ತಿಳಿದುಕೊಳ್ಳುವುದಿಲ್ಲವೇ ? ಆದುದರಿಂದ ಪ್ರಮಾಣಪರೀಕ್ಷೆ ಅಶಕ್ಯವೂ ಅಲ್ಲ, ಅನವಶ್ಯಕವೂ ಅಲ್ಲ.

ವ್ಯವಹಾರಕ್ಕೆಲ್ಲಾ ಅಪ್ರಾಮಾಣ್ಯವನ್ನು ಹೇಳಿ ಪಾರಮಾರ್ಥಿಕಾವಸ್ಥೆಯೊಂದುಂಟೆಂದು ವಾದಿಸುವವರು ಸಕಲಪ್ರಮಾಣಗಳಿಗೂ ಪ್ರಾಮಾಣ್ಯವನ್ನು ಪ್ರತಿಷೇಧ ಮಾಡುತ್ತಾರೆ. ಅದರಲ್ಲೂ ಪ್ರಾಮಾಣ್ಯಪ್ರತಿಷೇಧಕ ಪ್ರಮಾಣವು ಸಕಲಪ್ರಮಾಣಪ್ರಾಮಾಣ್ಯವನ್ನೂ ಪ್ರತಿಷೇಧಮಾಡಿ ತನಗೂ ಪ್ರಾಮಾಣ್ಯಪ್ರತಿಷೇಧವನ್ನು ಉಂಟುಮಾಡುತ್ತದೆಂದು ಸ್ವಪರನಿವರ್ತಕ ನ್ಯಾಯದಿಂದ ಹೇಳುತ್ತಾರೆ. ಅದೆಂತೆಂದರೆ, ಸ್ವಪರನಿವರ್ತಕಗಳೆಂದು ಕೆಲವು ವಿಷಯಗಳಿರುವುವು. ಬೆಂಕಿ ಎಲ್ಲವನ್ನೂ ವಿನಾಶಪಡಿಸಿ ತಾನೂ ವಿನಾಶವಾಗುತ್ತದೆ. ಬೆಳ್ಳಿ ಚಿನ್ನದಲ್ಲಿರುವ ಇತರ ಲೋಹದ ಕಶ್ಮಲವನ್ನು ತೆಗೆದುಕೊಂಡು ತಾನೂ ಹೊರಕ್ಕೆ ಬರುತ್ತದೆ. ಚಿಲ್ಲದ ಬೀಜದ ಚೂರ್ಣ

ನೀರಿನಲ್ಲಿರುವ ಕೊಳೆಯನ್ನೆಲ್ಲಾ ಕೆಳಕ್ಕೆ ಇಳಿಸಿಕೊಂಡು ತಾನೂ ಇಳಿಯತು ವುದು. ಇವುಗಳು ಸ್ವಪರನಿವರ್ತಕಗಳು.

ಇದಕ್ಕೆ ತಾರ್ಕಿಕರ ಸಮಾಧಾನ—ನಿರೂಪಿಸಿದ ಸ್ವಪರನಿವರ್ತಕ ನಿದರ್ಶನಗಳು ಕಾರಕಹೇತುಗಳಾಗಿವೆಯೇ ಹೊರತು ಜ್ಞಾಪಕಹೇತುಗಳಲ್ಲ. ಜ್ಞಾಪಕ ಹೇತುಗಳು ಪ್ರಮಾಣವಾಗಿದ್ದರೇಯೇ ಪ್ರಮಾಣಜ್ಞಾನಸಾಧಕ ಗಳಾಗುವುವು. ಹೇತುಜ್ಞಾನವು ಭ್ರಾಂತಿಯಾದರೆ ಸಾಧ್ಯಜ್ಞಾನವೂ ಭ್ರಾಂತಿಯಾಗಬೇಕಾಗುವುದು. ಪ್ರಾಮಾಣ್ಯಪ್ರತಿಷೇಧಕಪ್ರಮಾಣಕ್ಕೆ ಪ್ರಾಮಾಣ್ಯವಿಲ್ಲದಿದ್ದರೆ ಪ್ರತಿಷೇಧಸಿದ್ಧಿಯಿಲ್ಲ. ಹೇಗೆಂದರೆ, ಸ್ವಪರನಿರ್ವಾ ಹಕವೆಂಬ ವಿಧಿಪಕ್ಷದಲ್ಲಿ ವಿರೋಧವಿಲ್ಲ. ಸ್ವಪರನಿವರ್ತಕವೆಂಬ ನಿಷೇಧ ಪಕ್ಷದಲ್ಲಿ ವಿರೋಧವಿರುತ್ತದೆ. ಹೇಗೆಂದರೆ—ಒಬ್ಬ ಮನುಷ್ಯನು ಹೀಗೆ ಹೇಳುತ್ತಾನೆ. "ನಾನು ಹೇಳುವ ವಾಕ್ಯಗಳಲ್ಲಿರುವ ಪದಗಳೆಲ್ಲವೂ ಸಾರ್ಥಕ ಗಳು" ಎಂದು ಹೇಳಿ ವಾಕ್ಯಗಳನ್ನು ಪ್ರಯೋಗ ಮಾಡುತ್ತಾನೆ. ಇವುಗ ಳಲ್ಲಿ ಮೊದಲನೆಯ ಪ್ರತಿಜ್ಞಾವಾಕ್ಯದಲ್ಲಿರುವ ಪದಗಳು ಸಾರ್ಥಕಗಳಾಗಿ ಇತರ ವಾಕ್ಯಗಳ ಪದಗಳನ್ನು ಸಾರ್ಥಕಗೊಳಿಸುವುವು. ಇದು ವಿಧಿಪಕ್ಷ. ಮತ್ತೊಬ್ಬನು ಹೀಗೆ ಹೇಳುವನು. "ನಾನು ಹೇಳುವ ವಾಕ್ಯಗಳಲ್ಲಿರುವ ಪದಗಳೆಲ್ಲವೂ ಅಪಾರ್ಥಗಳು" ಎಂದು ಪ್ರತಿಜ್ಞಾವಾಕ್ಯವನ್ನು ಹೇಳಿ ವಾಕ್ಯವನ್ನು ಪ್ರಯೋಗಿಸುತ್ತಾನೆ. ಇಲ್ಲಿ ಮೊದಲನೆಯ ವಾಕ್ಯದಲ್ಲಿರುವ ಪದಗಳು ಸಾರ್ಥಕವಾದರೆ ಇತರ ವಾಕ್ಯಗಳ ಪದಗಳು ಅಪಾರ್ಥಗಳಾಗುವುವು. ಮೊದಲನೆಯ ವಾಕ್ಯದ ಪದಗಳು ಅಪಾರ್ಥಕಗಳಾದರೆ ಇತರ ವಾಕ್ಯಗಳ ಪದಗಳು ಸಾರ್ಥಕಗಳಾಗುತ್ತವೆ. ಇದು ಪ್ರತಿಷೇಧಪಕ್ಷ. ಇಲ್ಲಿ ಸ್ವಪರ ವಿಘಾತ ದೋಷವಿರುವುದು. ಜ್ಞಾಪಕಹೇತುಗಳಾದುದರಿಂದ ಈ ದೋಷವು ದುಷ್ಪರಿಹಾರವೆಂದು ಅಭಿಪ್ರಾಯ.

ಮತ್ತೊಂದು ಉದಾಹರಣೆ—ಒಬ್ಬ ಪಂಡಿತನು ಒಂದು ಪುಸ್ತಕವನ್ನು ಬರೆದು ಮುದ್ರಿಸಿ ಪ್ರಚುರಪಡಿಸಿದನು. ಅದರ ಮುಖಪುಟದಲ್ಲಿ ದೊಡ್ಡ ಅಕ್ಷರಗಳಿಂದ—"ಈ ಪುಸ್ತಕದಲ್ಲಿ ಬರೆದಿರುವುದೆಲ್ಲಾ ಸುಳ್ಳು" ಎಂದು ಬರೆದಿದ್ದನು. ಇದನ್ನು ನೋಡಿ ಬಹುಜನರು ಪುಸ್ತಕವನ್ನು ಅನಾದರಿಸುತ್ತಿ ದ್ದರು. ಒಬ್ಬ ಬುದ್ಧಿವಂತನು ಈ ವಾಕ್ಯವನ್ನು ವಿಮರ್ಶೆಮಾಡಿ ಈ ವಾಕ್ಯವು

ಮೊದಲು ಸುಳ್ಳಾದರೆ ಪುಸ್ತಕವೆಲ್ಲವೂ ನಿಜವಾಗಬೇಕು. ಇದು ನಿಜವಾದರೆ ಪುಸ್ತಕದಲ್ಲಿ ಬರೆದಿರುವುದೆಲ್ಲಾ ಸುಳ್ಳಾಗುವುದಿಲ್ಲ. ಈ ಚಮತ್ಕಾರಪ್ಪ ತಿಳಿಯಲಿ ಎಂದು ಬರೆದಿರುವನೆಂದು ನಿರ್ಣಯಿಸಿದನಂತೆ. ಅದರಂತೆ ಸರ್ವಪ್ರಮಾಣಪ್ರತಿಷೇಧಪಕ್ಷವು ಸ್ವಪರವಿಘಾತಕವಾಗುವುದೇ ಹೊರತು ಸಾಧಕವಾಗಲಾರದು.

### ಕಾರಕಜ್ಞಾಪಕವಿವರಣೆ

ಜ್ಞಾನ ಹುಟ್ಟಬೇಕಾದರೆ ಕಾರಣವು ಕಾರಕ, ಜ್ಞಾಪಕ ಎಂದು ಎರಡು ಪ್ರಕಾರವು. ಘಟಪಟಾದಿಪ್ರತ್ಯಕ್ಷಜ್ಞಾನಕ್ಕೆ ಚಕ್ಷುರಿಂದ್ರಿಯ, ಆಲೋಕ ಘಟಪಟಾದಿವಿಷಯುಗಳು ಕಾರಕಹೇತುಗಳು. ಇವುಗಳ ಸ್ವರೂಪವೇ ಕಾರಣ. ಜ್ಞಾನ ಕಾರಣವಲ್ಲ. ಅನುಮತಿ, ಶಾಬ್ದಬೋಧ ಮೊದಲಾದ ಜ್ಞಾನವು ಹುಟ್ಟಬೇಕಾದರೆ ಲಿಂಗಜ್ಞಾನ, ವ್ಯಾಪ್ತಿಜ್ಞಾನ, ಪದಜ್ಞಾನ, ಶಕ್ತಿಜ್ಞಾನ ಮೊದಲಾದುವುಗಳು ಕಾರಣವೇ ಹೊರತು ಲಿಂಗ, ವ್ಯಾಪ್ತಿ, ಪದ, ಶಕ್ತಿ ಇವುಗಳ ಸ್ವರೂಪವು ಕಾರಣವಲ್ಲ. ಇದೇ ಕಾರಕಹೇತು ಜ್ಞಾಪಕ ಹೇತು ಎಂಬ ವಿಭಾಗ. ಜ್ಞಾನವೆಂಬ ಕಾರ್ಯಸ್ಥಳವಲ್ಲಿ ಕಾರಕಹೇತುಗಳಿಗೆ ದೋಷವಿದ್ದರೆ ಜ್ಞಾನವು ಭ್ರಾಂತಿಯಾಗುವುದು. ಜ್ಞಾಪಕಹೇತುಗಳಿಗೆ ಪ್ರಾಮಾಣ್ಯವಿಲ್ಲದಿದ್ದರೆ ಹುಟ್ಟಿದ ಜ್ಞಾನವು ಪ್ರಮಾಣವಾಗಲಾರದು, ಭ್ರಾಂತಿಯಾಗುವುದು.

ಬೆಂಕಿ ಕಾಷ್ಠವನ್ನು ವಿನಾಶಮಾಡಬೇಕಾದರೆ ಕಾರಕಹೇತುವಾಗುವುದು. ಬೆಳ್ಳಿ ಚಿನ್ನದ ದೋಷವನ್ನು ತೆಗೆದುಕೊಂಡು ಬರಬೇಕಾದರೆ ಕಾರಕಹೇತುವಾಗಿರುವುದು. ಚಿಲ್ಲದ ಬೀಜಚೂರ್ಣ ನೀರಿನ ಕೊಳೆಯನ್ನು ಕೆಳಕ್ಕೆ ಇಳಿಯಿಸಬೇಕಾದರೆ ಕಾರಕಹೇತುವಾಗಿರುವುದು. ಇವುಗಳಲ್ಲಿ ಸ್ವಪರನಿವರ್ತಕತ್ವವಿರಬಹುದು, ವಿರೋಧವಿಲ್ಲ.

ಸಕಲ ಪ್ರಮಾಣಗಳಿಗೂ ಪ್ರಾಮಾಣ್ಯವಿಲ್ಲವೆಂಬ ಜ್ಞಾನಕ್ಕೆ ಹೇತುವಾಗಿರುವ ಪ್ರಮಾಣವು ಜ್ಞಾಪಕಹೇತುವಾಗಿರುವುದರಿಂದ ಅದಕ್ಕೆ ಪ್ರಾಮಾಣ್ಯವಿರಬೇಕು. ಇದ್ದರೆ ಇದೂ ಒಂದು ಪ್ರಮಾಣವಾಗಿರುವುದರಿಂದ ಸಕಲ ಪ್ರಮಾಣಗಳಿಗೂ ಅಪ್ರಾಮಾಣ್ಯ ಜ್ಞಾನವೂ ಬರುವುದಿಲ್ಲ. ಇದಕ್ಕೆ ಪ್ರಾಮಾ

ಣ್ಯವಿಲ್ಲದಿದ್ದರೆ ಇದರಿಂದ ಹುಟ್ಟುವ ಜ್ಞಾನಕ್ಕೆ ಪ್ರಾಮಾಣ್ಯವಿಲ್ಲ. ಇದೇ ಜ್ಞಾಪಕಸ್ಥಲದಲ್ಲಿ ಸ್ವಪರವಿಘಾತಕತ್ವವೆಂಬ ದೋಷ. ದೃಷ್ಟಾಂತದಾರ್ಷ್ಟಾಂತಿಕವೈರೂಪ್ಯವಿರುವುದರಿಂದ ಸ್ವಪರನಿವರ್ತಕನ್ಯಾಯವು ಜ್ಞಾಪಕಸ್ಥಲದಲ್ಲಿ ಪ್ರವರ್ತಿಸುವುದಿಲ್ಲವೆಂದು ಸಮಾಧಾನ. ಹೀಗೆ ವಿತಂಡಾವಾದವನ್ನು ತಾರ್ಕಿಕರು ನಿರಾಕರಿಸುವರು. ಇದರ ಸಂಗ್ರಹವು "ಸರ್ವಾರ್ಥಸಿದ್ಧಿ"ಯಲ್ಲಿ ಹೀಗಿರುವುದು—

ಅಹಂ ಸತ್ಯಂ ವದಾಮೀತಿ ಸ್ವೋಕ್ತಿಃ ಸ್ವಪರರಕ್ಷಿಣೀ
ನ ಕದಾಚಿದ್ವದಾಮೀತಿ ವಾದಸ್ತು ಸ್ವೋಕ್ತಿಬಾಧಿತಃ ॥
ಮಾನಸ್ಥಾಪಕಮಾನಸ್ಯ ಮಾನಸಂಕ್ಷೋಭಕಸ್ಯ ಚ
ಗತಿರೇವಮಿತಿ ಪ್ರೇಕ್ಷ್ಯ ತ್ಯಜ್ಯತಾಂ ಸದುರಾಗ್ರಹಃ ॥

## ಸ್ವತಃ ಪರತಃ ವಿಚಾರ

ಪ್ರಮಾಣಮೂಲಕ ಇತರ ವಸ್ತುಗಳ ತತ್ತ್ವನಿರ್ಣಯವನ್ನು ಮಾಡುವ ಹಾಗೆ ಪ್ರಮಾಣಫಲವಾದ ಜ್ಞಾನವೆಂಬ ವಸ್ತುವಿನ ತತ್ತ್ವನಿರ್ಣಯವಾಗ ಬೇಕು ಎಂದರೆ, ಇದು ಸರಿಯಾದ ಶುದ್ಧವಾದ ಜ್ಞಾನ, ಇದು ತಪ್ಪಾದ ಅಶುದ್ಧವಾದ ಜ್ಞಾನವೆಂದು ತಿಳಿಯುವುದು. ಇಲ್ಲಿ ಜ್ಞಾನದ ಶುದ್ಧಿ ಅಶುದ್ಧಿಗಳ ಕಾರಣವನ್ನೂ ಅವುಗಳನ್ನು ತಿಳಿಯುವ ಕ್ರಮವನ್ನೂ ತಾರ್ಕಿಕರು ಹೇಳುವುದೆಂತೆಂದರೆ—ಲೋಕದಲ್ಲಿ ಗುಣದೋಷವೆಂಬುದು ಸರ್ವವಿಷಯದಲ್ಲೂ ಇರುವುದು. ಗುಣದಿಂದ ಶುದ್ಧಿ, ದೋಷದಿಂದ ಅಶುದ್ಧಿ ಎಂಬುದು ಸರ್ವಸಮ್ಮತ. ಜ್ಞಾನಸಾಮಗ್ರಿಯಲ್ಲಿ ಗುಣ ಸೇರಿದ್ದರೆ ಶುದ್ಧವಾದ ಜ್ಞಾನ ಉದಯಿಸುವುದು. ದೋಷ ಸೇರಿದ್ದರೆ ಅಶುದ್ಧವಾದ ಜ್ಞಾನ ಉದಯಿಸುವುದು. ದೋಷವಿಲ್ಲದಿರುವುದೇ ಗುಣವೆಂದು ಕೆಲವರು ಅಭಿಪ್ರಾಯಪಡುವರು. ಗುಣವಿಲ್ಲದಿರುವುದೇ ದೋಷವೆಂದು ಅದಕ್ಕೆ ಪ್ರತಿ ಹೇಳಬಹುದು. ಆದುದರಿಂದ ಗುಣ ಬೇರೆ, ದೋಷ ಬೇರೆ. ಇವುಗಳ ಸಂಬಂಧದಿಂದ ಕಾರ್ಯಗಳಲ್ಲಿ ಸರ್ವತ್ರ ಶುದ್ಧಿಯೂ ಅಶುದ್ಧಿಯೂ ಇರುವುವೆಂದರಿಯಬೇಕು.

ಈ ಶುದ್ಧಿ ಅಶುದ್ಧಿಗಳನ್ನು ತಿಳಿಯುವ ಕ್ರಮ ಹೇಗೆಂದರೆ—ಜ್ಞಾನ ಹುಟ್ಟಿದಮೇಲೆ ಮನುಷ್ಯನು ಪ್ರವರ್ತಿಸುತ್ತಾನೆ. ಪ್ರವೃತ್ತಿ ಸಫಲವಾದರೆ

ಜ್ಞಾನ ಸರಿಯಾದುದೆಂದೂ ನಿಷ್ಫಲವಾದರೆ ಸರಿಯಾದುದಲ್ಲವೆಂದೂ ತಿಳಿಯುವನು. ಪ್ರವೃತ್ತಿಯ ಸಾಫಲ್ಯನೈಷ್ಫಲ್ಯಗಳಿಗೆ ಸಂವಾದವಿಸಂವಾದಗಳೆಂದು ಹೆಸರು. ಹೀಗೆಯೇ ಜ್ಞಾನದ ಪ್ರಾಮಾಣ್ಯ, ಅಪ್ರಾಮಾಣ್ಯ ಅಂದರೆ ಜ್ಞಾನದ ಯಥಾರ್ಥತ್ವ ಅಯಥಾರ್ಥತ್ವವೆಂದು ಹೆಸರು. ದೂರದಲ್ಲಿ ನೀರಿದೆಯೆಂದು ತಿಳಿದು ಅಲ್ಲಿಗೆ ಹೋಗಿ ನೀರಿದ್ದರೆ ಸಫಲಪ್ರವೃತ್ತಿಯೆಂದೂ ಬಿಸಿಲುಕುದುರೆಯನ್ನು ನೀರೆಂದು ತಿಳಿದು ಓಡಿಹೋಗಿ ನೋಡಲು ನೀರಿಲ್ಲದಿದ್ದರೆ ವಿಫಲಪ್ರಯತ್ನವೆಂದೂ ಅಪ್ರಮಾಣವೆಂದೂ ತಿಳಿಯುತ್ತೇವೆ. ಸಂವಾದವಿಸಂವಾದಗಳಿಂದ ಅವೆರಡನ್ನೂ ತಿಳಿಯುವುದೇ ಪರತಃ ಎಂಬ ಸಿದ್ಧಾಂತ.

ಇದಕ್ಕೆ ಪ್ರತಿಯಾಗಿ ವೈದಿಕರು ಪ್ರಾಮಾಣ್ಯವು ಸ್ವತಃ, ಅಪ್ರಾಮಾಣ್ಯವು ಪರತಃ ಎನ್ನುವರು. ಅಪ್ರಾಮಾಣ್ಯವು ಪರತಃ ಎಂಬುದು ತಾರ್ಕಿಕರಂತೆಯೇ ಇರುವುದು. ಪ್ರಾಮಾಣ್ಯವು ಸ್ವತಃ ಎಂಬುದೆಂತೆಂದರೆ, ಲೋಕದಲ್ಲಿ ಪ್ರಾಯಃ ಪ್ರತಿಯೊಂದು ವಿಷಯದಲ್ಲೂ ಸರಿಯಾಗಿರುವುದು ಹೆಚ್ಚು, ಕೆಟ್ಟು ಹೋಗುವುದು ಕಡಮೆ. ಮನುಷ್ಯರಲ್ಲಿ ಜನಿಸಿ ಬದುಕುವವರು ಹೆಚ್ಚು. ಒಬ್ಬ ಮನುಷ್ಯನ ಜೀವಮಾನದಲ್ಲಿ ಆರೋಗ್ಯಕಾಲವು ಹೆಚ್ಚು, ಸತ್ಯವನ್ನು ಹೇಳುವುದು ಹೆಚ್ಚು. ಹೀಗೆ ಸಕಲ ವಿಷಯಗಳಲ್ಲೂ ಸರಿಯಾಗಿರುವುದು ಹೆಚ್ಚು ಎಂಬುದಕ್ಕೆ ಭೂಯೋನುಗ್ರಹನ್ಯಾಯವೆಂದು ಹೆಸರು. ಐವಂಚ ಕಣ್ಣು ಮೊದಲಾದ ಜ್ಞಾನಸಾಧನಗಳು ಯಾವಾಗಲೂ ಸರಿಯಾದ ಜ್ಞಾನವನ್ನೇ ಹುಟ್ಟಿಸುವುವು. ದೋಷವಿದ್ದರೆ ವ್ಯತ್ಯಾಸವಾಗುವುದು. ಜ್ಞಾನಸಾಮಗ್ರಿಯಿಂದ ಬರುವ ಜ್ಞಾನವು ಸ್ವಾಭಾವಿಕವಾಗಿ ವಸ್ತು ಹೇಗಿರುವುದೋ ಹಾಗೆಯೇ ಗ್ರಹಿಸುವುದು. ಕಾಚ, ಕಾಮಾಲ ಮೊದಲಾದ ಇಂದ್ರಿಯದೋಷಗಳು, ದೂರ, ಸೂಕ್ಷ್ಮ ಮೊದಲಾದ ವಸ್ತುದೋಷಗಳು, ಅನವಧಾನ, ಶ್ರಮ, ಆಲಸ್ಯ, ಮೊದಲಾದ ಮನೋದೋಷಗಳು, ಕತ್ತಲೆ ಅಧಿಕಪ್ರಕಾಶ ಮೊದಲಾದ ಸಹಕಾರಿದೋಷಗಳು— ಇತ್ಯಾದಿ ದೋಷಗಳಿಂದ ಸಂಶಯ, ಅನವಧಾರಣ, ಸಂಭಾವನೆ ಮೊದಲಾದ ದುಷ್ಟಜ್ಞಾನಗಳುದಯಿಸುವುವು. ಯಾವ ದೋಷವೂ ಇಲ್ಲದಿದ್ದರೆ ಶುದ್ಧವಾದ ಜ್ಞಾನ ಉದಯಿಸುವುದು. ಆದುದರಿಂದ ವಸ್ತುತತ್ತ್ವವೆಂಬ ಜ್ಞಾನಪ್ರಾಮಾಣ್ಯವು ಸ್ವತಃ ಅಂದರೆ ಸ್ವಾಭಾವಿಕವೆಂದರ್ಥ. ಇದರಮೇಲೆ ವಿಚಾರವು

ಪಕ್ಷಪ್ರತಿಪಕ್ಷಗಳಿಂದ ಬಹುದೂರ ಹೋಗುವುದು. ಸಾರಾಂಶವು ಇಷ್ಟೇ—ಇದರಿಂದ ವೇದವು ಪ್ರಮಾಣವಾಗಬೇಕಾದರೆ ಅದನ್ನು ಹೇಳಿದವನ ಯೋಗ್ಯತೆಯೆಂಬ ಗುಣದಿಂದ ನಿಶ್ಚಯವಾಗಬೇಕು. ಅದಕ್ಕೆ ಸರ್ವಜ್ಞನಾದ ಪರಮೇಶ್ವರನೇ ವೇದವನ್ನುಪದೇಶಿಸಿದನೆಂದು ತಾರ್ಕಿಕರ ಅಭಿಪ್ರಾಯ. ಶಬ್ದದಲ್ಲಿ ಸ್ವಾಭಾವಿಕವಾಗಿ ಯಾವ ದೋಷವೂ ಇರುವುದಿಲ್ಲ. ಹೇಳುವವನ ದೋಷವೇ ಶಬ್ದದೋಷ. ಅದು ಪ್ರಮಾದ, ಅಶಕ್ತಿ, ಆಲಸ್ಯ ಇವುಗಳಿಂದುಂಟಾಗುವುದು. ವೇದವು ಅನಾದಿಕಾಲದಿಂದ ಏಕರೀತಿಯಲ್ಲೇ ಇರುವುದರಿಂದ ಪುರುಷಸಂಬಂಧವಿಲ್ಲ, ಪುರುಷದೋಷವೂ ಇಲ್ಲ, ಸ್ವಾಭಾವಿಕವಾಗಿ ಪ್ರಮಾಣವಾಗಿರುವುದೆಂದು ವೈದಿಕರ ಸಿದ್ಧಾಂತ.

ಹೀಗೆ ಸ್ವತಃ ಪರತಃ ವಾದವು ವೇದಪ್ರಾಮಾಣ್ಯವಿಚಾರಕ್ಕಾಗಿಯೇ ಹೊರಟಿರುವುದೆಂದು ರಹಸ್ಯವು.

## ಪ್ರತ್ಯಕ್ಷ

ಪ್ರತ್ಯಕ್ಷಪ್ರಮಾಣವೆಂದರೆ ಸಾಕ್ಷಾತ್ಕಾರವೆಂಬ ಪ್ರಮೆಗೆ ಸಾಧನವಾಗಿರುವ ಚಕ್ಷುರಾದಿ ಇಂದ್ರಿಯಗಳು. ಇವುಗಳಲ್ಲಿ ಮನಸ್ಸೆಂಬ ಇಂದ್ರಿಯ ಸೇರಿರುವುದು. ಇದರಿಂದ ಅಹಂ ಸುಖೀ, ದುಃಖೀ, ಜಾನಾಮಿ ಇತ್ಯಾದಿ ಸಾಕ್ಷಾತ್ಕಾರಗಳು ಉದಯಿಸುವುವು. ಇಲ್ಲಿ ಇಂದ್ರಿಯಗಳಿಗೂ ವಸ್ತುಗಳಿಗೂ ಸಂಬಂಧವೆಂಬ ಸನ್ನಿಕರ್ಷ ಬೇಕು. ಕಾರಕಗಳಿಗೆ ಕ್ರಿಯೆ ಫಲವಾಗಿರುವಂತೆ ಪ್ರಮಾಣಕ್ಕೆ ಪ್ರಮೇಯೇ ಫಲ. ಆದುದರಿಂದ ಪ್ರಮಾಣಕ್ಕೂ ಫಲಕ್ಕೂ ಭೇದವಿರಬೇಕೆಂದು ತಾರ್ಕಿಕರ ಮತ. ಬೌದ್ಧಮತದಲ್ಲಿ ಅಭೇದವೂ, ಯೋಗಾದಿ ಮತಗಳಲ್ಲಿ ಭೇದಾಭೇದವೂ ಅಭಿಮತ.

ಪ್ರಮೆ ಆತ್ಮನಲ್ಲಿಯೇ ಹುಟ್ಟಬೇಕಾದುದರಿಂದ ಆತ್ಮವಸ್ತುವೇ ಸಮವಾಯಿಕಾರಣವು. ಸಕಲಪ್ರಮೆಗಳಿಗೂ ಮನಸ್ಸಿನ ಸಹಾಯವು ಬೇಕಾಗಿರುವುದರಿಂದ ಆತ್ಮಮನಸ್ಸಂಯೋಗವೇ ಅಸಮವಾಯಿಕಾರಣವು. ಚಕ್ಷುರಾದೀಂದ್ರಿಯಗಳು ನಿಮಿತ್ತಕಾರಣಗಳಲ್ಲಿ ಸೇರಿ ಅಸಾಧಾರಣ ಕಾರಣಗಳಾಗಿರುವುದರಿಂದ ಪ್ರಮಾಕರಣಗಳೆಂಬ ವ್ಯವಹಾರವು.

**ಲೌಕಿಕಪ್ರತ್ಯಕ್ಷ**

ಪ್ರತ್ಯಕ್ಷವೆಂಬ ಪದವು ಇಂದ್ರಿಯಗಳಲ್ಲೂ ಇವುಗಳಿಂದ ಹುಟ್ಟಿದ ಪ್ರಮೆಗಳಲ್ಲೂ ಅವುಗಳಿಗೆ ವಿಷಯವಾದ ವಸ್ತುಗಳಲ್ಲೂ ಪ್ರಯೋಗಿಸಲ್ಪಡುವುದು. ಈ ಪ್ರತ್ಯಕ್ಷಜ್ಞಾನದಲ್ಲಿ ಲೌಕಿಕಪ್ರತ್ಯಕ್ಷ, ಅಲೌಕಿಕಪ್ರತ್ಯಕ್ಷ ಎಂದು ಎರಡು ವಿಧ. ಲೌಕಿಕಪ್ರತ್ಯಕ್ಷವು ಆರು ಇಂದ್ರಿಯಗಳಿಂದ ಉಂಟಾಗುವುದರಿಂದ ಆರು ವಿಧ. ಕಣ್ಣು ಮೊದಲಾದ ಇಂದ್ರಿಯಗಳಿಗೆ ಅಸಾಧಾರಣವಾದ ರೂಪರಸ ಮೊದಲಾದ ವಿಷಯಗಳು ಆರು ವಿಧಗಳಾಗಿರುವುವು. ಯಥಾಯೋಗ್ಯವಾಗಿ ಸಾಧಾರಣ ವಿಷಯಗಳೂ ಇರುವುವು.

ಪ್ರತ್ಯಕ್ಷಜ್ಞಾನವು ನಿರ್ವಿಕಲ್ಪಕ, ಸವಿಕಲ್ಪಕವೆಂದು ಎರಡು ಪ್ರಕಾರವಾಗಿರುವುದು. ಸಾಮಾನ್ಯವಾಗಿ ಸಕಲಜ್ಞಾನಗಳಲ್ಲೂ ವಿಶೇಷ್ಯ, ವಿಶೇಷಣ, ಇವುಗಳ ಸಂಬಂಧ— ಈ ಮೂರು ಅಂಶಗಳು ತೋರಬೇಕು. ನೀಲಘಟವೆಂಬ ಜ್ಞಾನದಲ್ಲಿ ನೀಲಬಣ್ಣದ ವಿಶೇಷಣವು, ಘಟವು ವಿಶೇಷ್ಯವು. ಸಮವಾಯವು ಸಂಬಂಧವು. ಈ ಮೂರೂ ತೋರುವುವು. ಬರಿಯ ಘಟವೆಂಬ ಜ್ಞಾನದಲ್ಲೂ ಘಟತ್ವವು ವಿಶೇಷಣವು. ಘಟವು ವಿಶೇಷ್ಯವು. ಸಮವಾಯವು ಸಂಬಂಧವು. ಹೀಗೆ ವಿಶೇಷ್ಯವಿದು, ವಿಶೇಷಣವಿದು, ಸಂಬಂಧವಿದು, ಎಂದು ತಿಳಿಯುವ ಜ್ಞಾನ ಸವಿಕಲ್ಪಕ. ಈ ರೀತಿಯಾಗಿ ತಿಳಿಯದೇ ಮೂರನ್ನೂ ಗ್ರಹಿಸುವ ಜ್ಞಾನ ನಿರ್ವಿಕಲ್ಪಕ. ಈ ಪ್ರತ್ಯಕ್ಷ ಜ್ಞಾನಗಳಲ್ಲಿ ಸಮವಾಯಸಂಬಂಧವು ಪ್ರತ್ಯಕ್ಷವಲ್ಲವೆಂದು ವೈಶೇಷಿಕರು ಹೇಳುವರು. ಅದೂ ಪ್ರತ್ಯಕ್ಷವೆಂದು ನೈಯಾಯಿಕರು ಹೇಳುವರು. ವಿಶೇಷ್ಯವಿಶೇಷಣಗಳು ಒಂದಾಗಿ ತೋರುವುದು ನಿರ್ವಿಕಲ್ಪಕವೆಂದು ಸಾಂಖ್ಯಮತ. ಸ್ವಲಕ್ಷಣವು ತೋರುವುದೆಂದು ಬೌದ್ಧಮತ. ಸಾಮಾನ್ಯವು ತೋರುವುದೆಂದು ವೇದಾಂತಮತ. ನಿರ್ವಿಕಲ್ಪಕವೇ ಇಲ್ಲ : ಜ್ಞಾನವೆಲ್ಲವೂ ಸವಿಕಲ್ಪಕವೆಂದು ವೈಯಾಕರಣಮತ. ಗೋತ್ವಾದಿ ಧರ್ಮವು ಜಾತಿಯಾಗಿ ತೋರಿದರೆ ಸವಿಕಲ್ಪಕ, ಬರಿಯ ಧರ್ಮವಾಗಿ ತೋರುವುದು ನಿರ್ವಿಕಲ್ಪಕ ಎಂದು ಪ್ರಾಭಾಕರರು ಹೇಳುವರು. ಧರ್ಮವಾಗಿ ತೋರುವುದೆಂದರೆ ಇದು ಗೋವು ಎಂಬ ಜ್ಞಾನವು. ಜಾತಿಯಾಗಿ ತೋರುವುದೆಂದರೆ ಇದೂ ಗೋವು ಎಂಬ ಜ್ಞಾನವು. ಎರಡನೆಯ ಜ್ಞಾನವಲ್ಲಿ ಹಿಂದೆ ನೋಡಿದ

ಗೋವ್ಯಕ್ತಿಯಲ್ಲೂ ಗೋತ್ವವಿತ್ತೆಂಬ ಅನುವೃತ್ತಿ ಗೋಚರವಾಗುತ್ತದೆ. ಮೊದಲನೆಯ ಜ್ಞಾನದಲ್ಲಿ ಅನುವೃತ್ತಿ ಗೋಚರವಾಗುವುದಿಲ್ಲ. ಅನುವೃತ್ತಿಯೆಂದರೆ ಅನೇಕ ವ್ಯಕ್ತಿಸಂಬಂಧ. ಈ ವಿಕಲ್ಪಗಳಿಗೆ ಅವರವರ ವಾಸನೆ ಸಂಸ್ಕಾರ ಅಭ್ಯಾಸವೇ ನಿಯಾಮಕ.

**ಅಲೌಕಿಕಪ್ರತ್ಯಕ್ಷ**

ಅಲೌಕಿಕಪ್ರತ್ಯಕ್ಷದಲ್ಲಿ ಜ್ಞಾನಲಕ್ಷಣೆ ಸಾಮಾನ್ಯಲಕ್ಷಣೆ ಯೋಗಜಲಕ್ಷಣೆ ಎಂದು ಸಂಬಂಧವು ಮೂರು ವಿಧ. ಜ್ಞಾನಲಕ್ಷಣೆಯೆಂದರೆ ಕಣ್ಣುಗಳಿಂದ ಉಂಟಾಗುವ ಕುಸುಮಜ್ಞಾನದಲ್ಲಿ ಗಂಧವು ತೋರಿ ಸುಗಂಧವಾದ ಕುಸುಮವೆಂದು ಅನುಭವವಿದೆ. ಇಲ್ಲಿ ಗಂಧವು ಕಣ್ಣಿಗೆ ತೋರುವುದಿಲ್ಲ. ಆದರೂ ಕುಸುಮವನ್ನು ನೋಡುವಾಗ ಗಂಧದ ಸ್ಮರಣೆ ಬಂದು ಸುಗಂಧವಾದ ಪುಷ್ಪವೆಂಬ ಅನುಭವವು ಬರುವುದು. ಇಲ್ಲಿ ಹಿಂದಿನ ಗಂಧಸ್ಮರಣೆಯನ್ನು ಜ್ಞಾನಲಕ್ಷಣೆಯೆಂದು ಹೇಳುವರು. ಹಾಗೆಂದರೆ ಜ್ಞಾನವೇ ಸಂಬಂಧವೆಂದರ್ಥ.

ಸಾಮಾನ್ಯಲಕ್ಷಣೆಯೆಂದರೆ ಒಂದು ವಸ್ತುವನ್ನು ನೋಡಿ ಅದರಲ್ಲಿರುವ ಸಾಮಾನ್ಯವೆಂಬ ಜಾತ್ಯಾದಿಮೂಲಕವಾಗಿ ಸಕಲವಸ್ತುಗಳನ್ನು ತಿಳಿದುಕೊಳ್ಳುತ್ತೇವೆ. ಇಂತಹ ಜ್ಞಾನಕ್ಕೆ ಸಾಮಾನ್ಯವೇ ಸಂಬಂಧವಾಗಿರುವುದು. ಇಂತಹ ಸಾಮಾನ್ಯಲಕ್ಷಣೆಯ ಮೂಲಕವಾಗಿ ಜ್ಞಾನವಿರುವುದರಿಂದಲೇ ಒಂದು ಸ್ಥಲದಲ್ಲಿ ವಹ್ನಿಧೂಮಗಳ ಸಾಹಚರ್ಯವನ್ನು ನೋಡಿದ ಮಾತ್ರದಿಂದಲೇ ಸಕಲವಹ್ನಿ ಧೂಮಗಳ ಸಾಹಚರ್ಯವೂ ಗೃಹೀತವಾಗಿ ಪರ್ವತದಲ್ಲಿ ಧೂಮವನ್ನು ನೋಡಿದೊಡನೆಯೇ ಈ ಸಾಹಚರ್ಯನಿಯಮವೆಂಬ ವ್ಯಾಪ್ತಿಯ ಸ್ಮರಣೆ ಬಂದು ಪರ್ವತದಲ್ಲಿ ವಹ್ನಿಜ್ಞಾನವು ಬರುವುದು. ಹೀಗೆ ಅನುಮಾನ ಪ್ರಮಾಣಕ್ಕೆ ಸಾಮಾನ್ಯಲಕ್ಷಣೆ ಅತ್ಯಾವಶ್ಯಕವಾಗಿರುವುದು. ಹಾಗೆಯೇ ಒಂದು ಗೋಪದಕ್ಕೂ ಒಂದು ಗೋರೂಪ ಅರ್ಥಕ್ಕೂ ವಾಚ್ಯವಾಚಕಭಾವವೆಂಬ ಸಂಬಂಧವು ತಿಳಿಯಲ್ಪಡುವಾಗ ಸಕಲ ಗೋಪದಗಳಿಗೂ ಸಕಲ ಗೋರೂಪಾರ್ಥಗಳಿಗೂ ಸಂಬಂಧವು ಗೃಹೀತವಾಗಿ ಅಬಾಧಿತವ್ಯವಹಾರಗಳು ನಡೆಯುವುವು.

ಯೋಗಜಲಕ್ಷಣೆಯೆಂದರೆ ಯೋಗಾಭ್ಯಾಸಸಾಮರ್ಥ್ಯದಿಂದ ಬಂದ ಶಕ್ತಿ ವಿಶೇಷ. ಇಂತಹ ಸಂಬಂಧದಿಂದ ಯೋಗೀಶ್ವರನು ದೇಶಕಾಲವ್ಯವಧಾನವಿಲ್ಲದೆ ತ್ರಿಕಾಲಜ್ಞಾನಿಯಾಗುವನು. ಆರ್ಷಸಿದ್ಧಿ ದರ್ಶನ ಮೊದಲಾದ ಜ್ಞಾನವಿಭಾಗವು ಯೋಗಿಜ್ಞಾನದಲ್ಲಿ ಸೇರಿರುವುದು. ಈ ಯೋಗಿಗಳಲ್ಲಿ ಯುಕ್ತ, ಯುಂಜಾನ ಎಂದು ಎರಡು ವಿಧ. ಯುಕ್ತನು ಸರ್ವದಾ ಸರ್ವಜ್ಞನು. ಯುಂಜಾನನು ಬೇಕಾದಾಗ ಧ್ಯಾನದಿಂದ ಸರ್ವಜ್ಞನಾಗುವನು. ಇಂತಹ ಅಲೌಕಿಕ ಪ್ರತ್ಯಕ್ಷವನ್ನು ಮೀಮಾಂಸಕರು ನಿರಾಕರಿಸುವರು. ಆದುದರಿಂದ ಮೀಮಾಂಸಕ ಮತದಲ್ಲಿ ಸರ್ವಜ್ಞರಿಲ್ಲ, ಸಿದ್ಧಪುರುಷರಿಲ್ಲ, ಅಣಿಮಾದ್ಯಷ್ಟಸಿದ್ಧಿಗಳಿಲ್ಲ. ಆದುದರಿಂದಲೇ ವ್ಯಾಪ್ತಿಯೆಂಬುದು ನಿಯಮವೆಂಬ ಬೇರೊಂದು ಸಂಬಂಧವಾಯಿತು. ಶಕ್ತಿಯೆಂಬುದು ಪದಪದಾರ್ಥಗಳ ಸ್ವಾಭಾವಿಕ ಸಂಬಂಧವಾಯಿತು. ಒಂದೊಂದೇ ವ್ಯಕ್ತಿಯಲ್ಲೂ ಇವು ಗ್ರಹಿಸಲ್ಪಡುವುದೆಂದು ಸಿದ್ಧಾಂತ. ಇತ್ಯಾದಿ.

**ಅನುಮಾನ**

ಅನುಮಾನವೆಂದರೆ ಯುಕ್ತಿ, ಲಿಂಗ, ಸಾಧನ, ಹೇತು ಮೊದಲಾದ ಪದಗಳಿಂದ ಹೇಳಲ್ಪಡುವ ಧೂಮ ಮೊದಲಾದ ವಸ್ತು. ಇದು ಯುಕ್ತಿಯಾಗಬೇಕಾದರೆ ಇದರಿಂದ ತಿಳಿಯಲ್ಪಡುವ ಸಾಧ್ಯವೆಂಬ ವಹ್ನಿ ಮೊದಲಾದ ವಸ್ತುವಿಗೂ ಇದಕ್ಕೂ ಸ್ವಾಭಾವಿಕವಾದ ಸಂಬಂಧವೆಂಬ ವ್ಯಾಪ್ತಿ ಇರಬೇಕು. ಆ ಸಂಬಂಧವು ಕಾರ್ಯಕಾರಣಭಾವ, ಸಾಮಾನ್ಯವಿಶೇಷಭಾವ, ಆಧಾರಾಧೇಯ ಭಾವ, ಉಪಜೀವ್ಯೋಪಜೀವಕಭಾವ, ಉಪಕಾರ್ಯೋಪಕಾರಕಭಾವ, ಅಂಗಾಂಗಿಭಾವ, ನಾಶ್ಯನಾಶಕಭಾವ—ಮೊದಲಾದ ಸಂಬಂಧಮೂಲಕ ನಿರ್ಣಯಿಸಲ್ಪಡಬೇಕು. ಇದನ್ನು ನಿಯತಸಾಹಚರ್ಯವೆಂದು ವ್ಯವಹರಿಸುವರು. ಅಂದರೆ ಎಲ್ಲೆಲ್ಲಿ ಹೇತುವಿರುವುದೊ ಅಲ್ಲಲ್ಲಿ ಸಾಧ್ಯವಿರುವುದೆಂದರ್ಥ. ಇದಕ್ಕೆ ಪ್ರತಿಯಾಗಿ ಬೌದ್ಧರು ವ್ಯತಿರೇಕದೃಷ್ಟಿಯಿಂದ ಅವಿನಾಭಾವವೆಂದು ವ್ಯವಹರಿಸುವರು. ಅಂದರೆ ಎಲ್ಲೆಲ್ಲಿ ಸಾಧ್ಯವಿಲ್ಲವೋ ಅಲ್ಲಲ್ಲಿ ಹೇತುವಿಲ್ಲದೇ ಇರಬೇಕೆಂದರ್ಥ. ಇಂತಹ ವ್ಯಾಪ್ತಿಜ್ಞಾನವು ಗ್ರಹಿಸಲ್ಪಡದೇ ಇರುವುದಕ್ಕೆ ವ್ಯಭಿಚಾರದರ್ಶನವು ಕಾರಣ.

ವ್ಯಭಿಚಾರವೆಂದರೆ ಹೇತುವಿರತಕ್ಕ ಸ್ಥಲದಲ್ಲಿ ಸಾಧ್ಯವಿಲ್ಲದೇ ಇರುವುದು. ಇಂತಹ ವ್ಯಭಿಚಾರ ಜ್ಞಾನವಿಲ್ಲದೇ ಸಹಚಾರದರ್ಶನದಿಂದ ವ್ಯಾಪ್ತಿ ಗ್ರಹಿಸಲ್ಪಡುವುದು. ಅನಂತರ ಯಾವಾಗಲಾದರೂ ಪರ್ವತಾದಿಸ್ಥಲದಲ್ಲಿ ಧೂಮವನ್ನು ದೂರದಲ್ಲಿ ಕಂಡರೆ ಈ ವ್ಯಾಪ್ತಿ ಸ್ಮರಣೆಗೆ ಬಂದು ಅಲ್ಲಿ ವಹ್ನಿಯಿದೆ ಎಂಬ ಜ್ಞಾನ ಬರುತ್ತದೆ. ಇದಕ್ಕೆ ಅನುಮಿತಿ ಎಂದು ಹೆಸರು. ಹೀಗೆ ಹೂವಿನ ವಾಸನೆಯಿಂದ ಪೊದೆಯಲ್ಲಿ ತಾಳೆಯ ಹೂವಿದೆ ಎಂದು ತಿಳಿಯುತ್ತಾನೆ. ರಾಜನ ಪರಿವಾರ ಬಂದಿರುವುದನ್ನು ನೋಡಿ ರಾಜನು ಬಂದಿರುವನೆಂದು ತಿಳಿಯುತ್ತಾನೆ. ಹೀಗೆ ಕಾರ್ಯವನ್ನು ನೋಡಿ ಕಾರಣವನ್ನು ತಿಳಿದುಕೊಳ್ಳುತ್ತೇವೆ. ಮುಖವಿಕಾಸಾದಿಗಳಿಂದ ಸಂತೋಷವನ್ನು ತಿಳಿದುಕೊಳ್ಳುತ್ತೇವೆ. ಹೀಗೆಯೇ ಇಂತಹ ಅನುಮಾನ ಪ್ರಮಾಣದಿಂದಲೇ ಕೃಷಿ ವಾಣಿಜ್ಯ ಶಿಲ್ಪ ವಿದ್ಯಾಭ್ಯಾಸ ರಾಜ್ಯಭಾರ ಪುಣ್ಯ ಪಾಪ ಆತ್ಮ ಮೋಕ್ಷ ಮೊದಲಾದ ಸಕಲ ವ್ಯಾಪಾರಗಳೂ ಸಕಲ ಶಾಸ್ತ್ರಗಳೂ ಸಕಲ ವ್ಯವಹಾರಗಳೂ ಸಕಲ ಜಂತುಗಳಲ್ಲೂ ಸರ್ವದಾ ನಿರಾಬಾಧವಾಗಿ ನಡೆಯುತ್ತಿರುವುವು. ಯಾವ ಸ್ಥಳದಲ್ಲಿ ಸಾಧ್ಯವು ತಿಳಿಯಲ್ಪಡುವುದೋ ಅದಕ್ಕೆ ಪಕ್ಷವೆಂದು ಹೆಸರು, ಎಲ್ಲಿ ಸಾಧ್ಯ ಹೇತುಗಳು ಮೊದಲು ತಿಳಿಯಲಟ್ಟಿವೆಯೋ ಅದಕ್ಕೆ ಸಪಕ್ಷವೆಂದು ಹೆಸರು. ಎಲ್ಲಿ ಸಾಧ್ಯವಿಲ್ಲವೋ ಅದಕ್ಕೆ ವಿಪಕ್ಷವೆಂದು ಹೆಸರು. ಧೂಮದಿಂದ ವಹ್ನಿ ಸಾಧ್ಯವಾದರೆ ಪರ್ವತಾದಿಸ್ಥಳವು ಪಕ್ಷ. ಅಡಿಗೆಮನೆ ಸಪಕ್ಷ, ಮಡು ವಿಪಕ್ಷ. ಇದರಿಂದ ಹೇತು ಸಾಮಾನ್ಯವಾಗಿ ಪಕ್ಷದಲ್ಲಿಯೂ ಸಪಕ್ಷದಲ್ಲಿಯೂ ಇರಬೇಕು. ವಿಪಕ್ಷದಲ್ಲಿ ಇಲ್ಲದಿರಬೇಕು. ಇದರಿಂದ ಹೇತುವಾಗಬೇಕಾದರೆ ಈ ಮೂರು ಅಂಶಗಳು ಇರಬೇಕು. ಹೀಗೆ ಹೇತುವಿಗೆ ಪ್ರತಿಪಕ್ಷವಾಗುವ ಹೇತು ಇರಬಾರದು. ಪಕ್ಷದಲ್ಲಿ ಸಾಧ್ಯವು ಇಲ್ಲವೆಂದು ಬೇರೆ ಪ್ರಮಾಣದಿಂದ ತಿಳಿದಿರಬಾರದು. ಈ ಎರಡಂಶಗಳನ್ನು ಸೇರಿಸಿ ಹೇತುವಿಗೆ ಐದಂಶಗಳಿರಬೇಕೆಂದು ನಿರ್ಣಯಿಸಿರುವರು. ಇಂತಹ ಐದು ಅಂಶಗಳಲ್ಲಿ ಯಾವುದೊಂದಂಶವು ಕಡಿಮೆಯಾದರೂ ಹೇತ್ವಾಭಾಸವೆಂದು ಹೆಸರು. ಇಂತಹ ಸದ್ಧೇತುಗಳಿಂದ ಉಂಟಾದ ಜ್ಞಾನ ಯಾವಾಗಲೂ ನಿಶ್ಚಯರೂಪವಾಗುವುದೇ ಹೊರತು ಸಂಶಯರೂಪವಾಗಲಾರದು. ಅನುಮಾನ, ಉಪಮಾನ, ಶಬ್ದ—ಈ ಮೂರು ಪ್ರಮಾಣಗಳು ಪರೋಕ್ಷ

ಪ್ರಮಾಣಗಳು. ಸಂಶಯವೆಂಬ ಜ್ಞಾನವು ಪ್ರತ್ಯಕ್ಷಸ್ಥಲದಲ್ಲಿಯೇ ಹೊರತು ಪರೋಕ್ಷಪ್ರಮಾಣಗಳಲ್ಲಿಲ್ಲವೆಂದು ಸಿದ್ಧಾಂತ. ಹೇತುವಿನಲ್ಲಿ ದೋಷವಿದ್ದು ತಿಳಿಯದಿದ್ದರೆ ಭ್ರಮರೂಪವಾದ ಅನುಮಿತಿ ಬರಬಹುದು. ಈ ಅನುಮಾನ ಪ್ರಮಾಣದಿಂದಲೇ ಅತೀಂದ್ರಿಯವಾದ ಪುಣ್ಯ ಪಾಪ ಸ್ವರ್ಗ ನರಕಾದಿಗಳನ್ನು ತಾರ್ಕಿಕರು ಸಾಧಿಸುವರು. ವೈದಿಕರು ಶಬ್ದಪ್ರಮಾಣದಿಂದಲೇ ಅತೀಂದ್ರಿಯ ವಸ್ತುಸಿದ್ಧಿಯನ್ನಂಗೀಕರಿಸುವರು.

ಈ ಅನುಮಾನವನ್ನು ವಿಶೇಷತೋದೃಷ್ಟ, ಸಾಮಾನ್ಯತೋದೃಷ್ಟ ಎಂದು ಎರಡು ಪ್ರಕಾರವಾಗಿ ವಿಭಾಗಿಸುವರು. ಇದರ ವಿವರಣೆಯಲ್ಲಿ ಬಹು ಮತಭೇದವಿರುವುದು. ತಾರ್ಕಿಕಮತದಲ್ಲಿ ವಿವರಣೆ ಹೇಗಿರುವುದೆಂದರೆ, ಧೂಮದಿಂದ ವಹ್ನ್ಯನುಮಾನ ಮೊದಲಾದುದು ಒಂದನೆಯದು; ಫಲಾದಿವಸ್ತುಗಳಲ್ಲಿ ರೂಪದಿಂದ ರಸಾನುಮಾನವೂ ಪಶ್ವಾದಿಜಂತುಗಳಲ್ಲಿ ಕೊಂಬುಗಳಿಂದ ಸೀಳುಗೊರಸಿರುವುದೆಂದು ತಿಳಿಯುವುದೂ ಎರಡನೆಯದು ; ಎಂದು ಒಂದು ಮತ.

## ನ್ಯಾಯ

ಈ ಅನುಮಾನಪ್ರಮಾಣದಲ್ಲಿ ನ್ಯಾಯವಾಕ್ಯವೆಂದು ಕೆಲವು ವಾಕ್ಯಗಳನ್ನು ವಾದಿಪ್ರತಿವಾದಿಗಳು ವಾದಕಾಲದಲ್ಲಿ ಉಪಯೋಗಿಸುವರು. ಎಂದರೆ, ಅವರವರ ಪಕ್ಷವನ್ನು ಸ್ಥಾಪಿಸುವ ವಾಕ್ಯವೆಂದರ್ಥ. ಆ ವಾಕ್ಯದ ಭಾಗಗಳು ಅವಯವಗಳೆನ್ನಲ್ಪಡುವುವು. ಅವುಗಳ ಸಂಖ್ಯೆಯಲ್ಲಿ ಒಂದು, ಎರಡು, ಮೂರು ಹೀಗೆ ದಶಾವಯವಗಳ ಪರ್ಯಂತಮತಭೇದಗಳಿರುವುವು. ತಾರ್ಕಿಕರು ಪಂಚಾವಯವಗಳನ್ನು ಉಪಯೋಗಿಸುವರು. ಪ್ರತಿಜ್ಞಾ ಹೇತು ಉದಾಹರಣ ಉಪನಯ ನಿಗಮನವೆಂದು ಅವಕ್ಕೆ ಹೆಸರುಗಳು. ವೇದವಾಕ್ಯಗಳು ಮನುಷ್ಯನ ಬುದ್ಧಿಮೂಲಕವೆಂಬುದು ಪ್ರತಿಜ್ಞೆ. ರಚನಾವಿಶೇಷವೆಂಬ ಆನುಪೂರ್ವಿ ಹೇತು. ಲೌಕಿಕವಾಕ್ಯಗಳು ಉದಾಹರಣೆ. ವೇದವಾಕ್ಯಗಳಲ್ಲೂ ರಚನಾವಿಶೇಷವಿದೆ ಎಂಬುದು ಉಪನಯ. ಆದುದರಿಂದ ವೇದವಾಕ್ಯಗಳು ಪುರುಷಬುದ್ಧಿ ಮೂಲಕ ಎಂದು ನಿಗಮನ. ಈ ಪ್ರಕಾರ ಅವರವರ ಸಿದ್ಧಾಂತವನ್ನು ಸ್ಥಾಪಿಸುವಾಗ ನ್ಯಾಯವಾಕ್ಯನಿಯಮವಿರುವುದು.

ಇಲ್ಲಿ ಚತುರ್ವಿಧಪ್ರಮಾಣಗಳು ಸಹಕಾರಿಗಳಾಗಿ ಸೇರಿರುವುವು. ಪ್ರತಿಜ್ಞೆ ಶಬ್ದಪ್ರಮಾಣವಾಗುವುದು. ಹೇತು ಅನುಮಾನ. ಉದಾಹರಣೆ ಪ್ರತ್ಯಕ್ಷ. ಉಪನಯ ಉಪಮಾನ. ಇವುಗಳ ಸಮಷ್ಟಿ ನಿಗಮನ. ಈ ನ್ಯಾಯವಾಕ್ಯದಿಂದ ಮಧ್ಯಸ್ಥನಿಗೆ ವ್ಯಾಪ್ತಿಜ್ಞಾನಮೂಲಕ ಅನುಮಿತಿ ಉದಯಿಸುವುದೆಂದು ಸಿದ್ಧಾಂತ.

**ಉಪಮಾನ**

ಉಪಮಾನಪ್ರಮಾಣದಲ್ಲಿ ಕೆಲವು ಪದಪದಾರ್ಥಗಳ ವಾಚ್ಯವಾಚಕ ಸಂಬಂಧವು ತಿಳಿಯುವುದೇ ಪ್ರಯೋಜನವು. ಅದೆಂತೆಂದರೆ, ಗ್ರಾಮದಲ್ಲಿ ವಾಸ ಮಾಡುತ್ತಿರುವ ಒಬ್ಬ ಮನುಷ್ಯನಿಗೆ ಅರಣ್ಯದಲ್ಲೇ ಇರುವ ಗವಯ ವೆಂಬ ಪಶುವಿನ ದರ್ಶನವೇ ಇಲ್ಲದಿರುವುದರಿಂದ ಗವಯ ಪದಕ್ಕೆ ಅರ್ಥವೇ ಗೊತ್ತಿಲ್ಲ. ಗವಯವು ಗೋವಿಗೆ ಸಮಾನವಾಗಿರುವುದು ಎಂಬ ವಾಕ್ಯವನ್ನು ಕಾಡು ಮನುಷ್ಯನಿಂದ ಕೇಳಿರುತ್ತಾನೆ. ಅವನು ಯಾವಾಗಲಾದರೂ ಕಾಡಿಗೆ ಹೋದಾಗ ಗವಯವನ್ನು ನೋಡಿದರೆ ಹಿಂದೆ ಕೇಳಿದ ವಾಕ್ಯ ಸ್ಮರಣೆಗೆ ಬಂದು ಇದೇ ಗವಯಪದಕ್ಕೆ ಅರ್ಥವೆಂದು ತಿಳಿದುಕೊಳ್ಳುತ್ತಾನೆ. ಇದು ಸಾಧರ್ಮ್ಯವೆಂಬ ಸಾದೃಶ್ಯಮೂಲಕ ಬಂದ ಸಂಬಂಧಜ್ಞಾನ. ಹೀಗೆ ವೈಧರ್ಮ್ಯಮೂಲಕ ಸಂಬಂಧ ಜ್ಞಾನವೂ ಬರಬಹುದು. ಉದ್ದವಾದ ಕತ್ತೂ, ಜೋಲಾಡುವ ತುಟಿಯೂ, ಮುಳ್ಳುಗಿಡಗಳು ಆಹಾರವಾಗಿಯೂ ಇರುವ ಗವಾದಿಪಶುವಿಲಕ್ಷಣವಾದುದು. ಒಂಟೆಯೆಂದು ದಕ್ಷಿಣದೇಶದವನ ಕೇಳಿ, ಉತ್ತರದೇಶದಲ್ಲಿ ಒಂಟೆಯನ್ನು ನೋಡಿದಾಗ ಇದೇ ಒಂಟೆಯೆಂಬ ಶಬ್ದಕ್ಕೆ ಅರ್ಥವೆಂದು ತಿಳಿಯುತ್ತಾನೆ. ಇಲ್ಲಿ ಗವಯ ಗೋಸದೃಶ, ಉಷ್ಟ್ರ ಗೋವಿಸದೃಶ ಎಂಬ ವಾಕ್ಯವೇ ಉಪಮಾನ ಪ್ರಮಾಣ. ಇದು ಶಬ್ದವಾದರೂ ಪರಂಪರೆಯಾಗಿ ಸಂಬಂಧಜ್ಞಾನ ಬರುವುದರಿಂದ ಶಬ್ದಪ್ರಮಾಣದಲ್ಲಿ ಸೇರಿದುದಲ್ಲವೆಂದು ವೃದ್ಧತಾರ್ಕಿಕರು ಅಭಿಪ್ರಾಯಪಡುವರು. ಅರಣ್ಯದಲ್ಲಿ ಗವಯವನ್ನು ನೋಡುವುದೇ ಉಪಮಾನಪ್ರಮಾಣ. ವಾಕ್ಯವೇ ದ್ವಾರ ವೆಂದು ನವ್ಯತಾರ್ಕಿಕರು ಅಭಿಪ್ರಾಯಪಡುವರು.

ಇಂತಹ ಉಪಮಾನಪ್ರಮಾಣದಿಂದ ಅನೇಕ ಆರಣ್ಯಕ ಓಷಧಿಗಳು

ಗೊತ್ತಾಗಬೇಕೆಂದು ವೈದ್ಯಶಾಸ್ತ್ರದಲ್ಲಿ ಬಹಳವಾಗಿ ಉಪದೇಶಗಳಿರುವುವು. ಮೀಮಾಂಸಕರು ಹೇಳುವುದೇನೆಂದರೆ, ಅರಣ್ಯದಲ್ಲಿ ಗೋಸದೃಶ ಗವಯ ದರ್ಶನವೇ ಉಪಮಾನಪ್ರಮಾಣವು. ಇದರಿಂದ ಗವಯ ಸದೃಶವು ಗ್ರಾಮದಲ್ಲಿರುವ ಗೋವೆಂದು ಜ್ಞಾನವೇ ಫಲವು. ಪದಪದಾರ್ಥಗಳ ಸಂಬಂಧ ಜ್ಞಾನವು ಫಲವಲ್ಲ. ಇಂತಹ ಉಪಮಾನಪ್ರಮಾಣದಿಂದ ಸೌರ್ಯ ಯಾಗಕ್ಕೂ ಆಗ್ನೇಯಯಾಗಕ್ಕೂ ಪರಸ್ಪರ ಸಾದೃಶ್ಯವು ತಿಳಿದರೆ ಆಗ್ನೇಯ ಯಾಗದಲ್ಲಿರುವ ಅಂಗಗಳನ್ನು ಸೌರ್ಯಯಾಗಕ್ಕೆ ಸೇರಿಸಿಕೊಳ್ಳುವುದೂ ಮತ್ತು ಸೋಮಲತೆ ಸಿಕ್ಕದಿದ್ದರೆ ಅದಕ್ಕೆ ಪ್ರತಿನಿಧಿಯಾಗಿ ಪೂತೀಕಲತೆಯನ್ನುಪಯೋಗಿಸುವುದೂ ಮೊದಲಾದುವು ಪ್ರಯೋಜನ. ಹೀಗೆ ಉಪಮಾನಪ್ರಮಾಣಫಲದಲ್ಲಿ ಸಿದ್ಧಾಂತಭೇದಗಳಿರುವುವು.

**ಶಬ್ದಪ್ರಮಾಣ**

ಶಬ್ದಪ್ರಮಾಣವೆಂದರೆ ವೇದಾದಿಶಾಸ್ತ್ರಗಳೆಂಬ ಆಗಮವೇ ಶಬ್ದ ಪ್ರಮಾಣವೆಂದು ಹಿಂದೆ ವ್ಯವಹಾರವಿರಬಹುದು. ಆದುದರಿಂದಲೇ ಶಬರ ಭಾಷ್ಯದಲ್ಲಿ ಶಾಸ್ತ್ರವನ್ನೇ ಶಬ್ದಪ್ರಮಾಣವೆಂದು ನಿರ್ದೇಶಿಸಿರುವರು. ಇದಕ್ಕೆ ಅನುಗುಣವಾಗಿ ಶಬ್ದವನ್ನು ಲೋಕ, ವೇದ ಎಂದು ಎರಡು ವಿಭಾಗಮಾಡಿ ಲೌಕಿಕಶಬ್ದವನ್ನು ಅನುಮಾನದಲ್ಲಿ ಸೇರಿಸಿ, ವೈದಿಕಶಬ್ದವೇ ಶಬ್ದಪ್ರಮಾಣವೆಂದು ಪ್ರಾಭಾಕರರು ನಿರ್ಣಯಿಸಿರುವರು. ಇದಕ್ಕೆ ಪ್ರತಿಯಾಗಿ ತಾರ್ಕಿಕರು, ಕುಮಾರಿಲರು ಮೊದಲಾದವರು ಆಪ್ತವಾಕ್ಯಕ್ಕೂ ಆಗಮಕ್ಕೂ ಬೋಧಕತ್ವ ವಿಷಯದಲ್ಲಿ ವ್ಯತ್ಯಾಸವಿಲ್ಲವಾದುದರಿಂದ, ಲೌಕಿಕವೈದಿಕ ಸಕಲ ಶಬ್ದವೂ ಅನುಮಾನದಲ್ಲಿ ಸೇರದೆ ಬೇರೆ ಪ್ರಮಾಣವಾಗಿರುವುದೆಂದು ಸ್ಥಾಪಿಸಿರುವರು. ಶಬ್ದವು ಅನುಮಾನದಲ್ಲಿ ಸೇರುವುದಿಲ್ಲವೆಂಬುದು ಹೇಗೆಂದರೆ, ಅನುಮಾನದಲ್ಲಿ ಹೇತುಜ್ಞಾನ ಬಂದು ವ್ಯಾಪ್ತಿ ಸ್ಮರಣಮೂಲಕ ಸಾಧ್ಯಜ್ಞಾನ ಬರುವುದು. ಶಬ್ದಪ್ರಮಾಣದಲ್ಲಿ ವ್ಯುತ್ಪನ್ನರಿಗೆ ಶಬ್ದಜ್ಞಾನ ಬಂದರೆ ಅರ್ಥಜ್ಞಾನ ಬರುವುದು. ಮಧ್ಯೇ ವ್ಯವಧಾನವಿಲ್ಲದಿರುವುದರಿಂದ ಬೇರೆ ಪ್ರಮಾಣವೆಂದು ನಿರ್ಣಯಿಸುವರು. ಇಂತಹ ಶಬ್ದವು ವಾಕ್ಯರೂಪವಾಗಿರಬೇಕು. ವಾಕ್ಯವೆಂದರೆ ಪದಗಳ ಸಮೂಹ. ಪದವೆಂದರೆ ಅರ್ಥವನ್ನು ಕೊಡತಕ್ಕ ಅಕ್ಷರ

ಗಳು. ಇದರಿಂದ ರಾಮನನ್ನು ಎಂಬುದು ರಾಮ + ಅನ್ನು ಎಂದು ಬೇರೆ ಬೇರೆ ಅರ್ಥವನ್ನು ಕೊಡುವುದರಿಂದ ಎರಡು ಪದಗಳಾಗುವುವು. ವ್ಯಾಕರಣ ಮತದಲ್ಲಿ ಪ್ರಕೃತಿಪ್ರತ್ಯಯಗಳು ಸೇರಿ ಒಂದು ಪದವೆಂದು ವ್ಯವಹಾರವು. ಆಪ್ತನಿಂದ ಹೇಳಲ್ಪಟ್ಟ ಇಂತಹ ವಾಕ್ಯವೇ ಪ್ರಮಾಣ. ಆಪ್ತನೆಂದರೆ ಆಪ್ತಿಯುಳ್ಳವನು. ವಾಕ್ಯಾರ್ಥಸಾಕ್ಷಾತ್ಕಾರವೇ ಆಪ್ತಿ. ವಾಕ್ಯಾರ್ಥವನ್ನು ನೋಡದೇ ಇರುವವನು ಆಪ್ತನಲ್ಲ. ಹಾಗಾದರೆ ವೇದ ಪೌರುಷೇಯವಾಗುವುದು. ಇದಕ್ಕೆ ವೈದಿಕರು ಹೇಳುವುದೆಂತೆಂದರೆ, ಅನಾಪ್ತನಿಂದ ಹೇಳಲ್ಪಡದಿರುವ ವಾಕ್ಯವು ಶಬ್ದಪ್ರಮಾಣವೆನ್ನುವರು. ಹೀಗೆ ಹೇಳುವುದರಿಂದ ಆಪ್ತನು ಹೇಳಿದ ವಾಕ್ಯವೂ ಅಪೌರುಷೇಯವಾದ ವೇದವಾಕ್ಯವೂ ಅನಾಪ್ತರಿಂದ ಹೇಳಲ್ಪಡದಿರುವುದರಿಂದ ಶಬ್ದಪ್ರಮಾಣವಾಗುವುದೆಂದು ಪರಿಷ್ಕರಿಸುವರು.

ಪದಗಳಿಂದ ತಿಳಿಯಲ್ಪಡುವ ಅರ್ಥಗಳು ಒಟ್ಟಾಗಿ ಸೇರುವುದೇ ವಾಕ್ಯಾರ್ಥ. ಪದಗಳ ಪರಸ್ಪರ ಸಂಬಂಧವು ಅವುಗಳ ಸಾಮರ್ಥ್ಯದಿಂದಲೇ ತಿಳಿಯಲ್ಪಡುವುದೆಂದು ಕುಮಾರಿಲರು ಹೇಳುವರು : ವಾಕ್ಯಾನುಪೂರ್ವೀ ಮಹಿಮೆಯಿಂದ ತೋರುವುದೆಂದು ನವೀನತಾರ್ಕಿಕರು ಹೇಳುವರು. ಇದಕ್ಕೆ ಅಭಿಹಿತಾನ್ವಯವೆಂದು ಹೆಸರು. ಸಂಬಂಧವು ಪದಶಕ್ತಿಯಿಂದಲೇ ತಿಳಿಯುವುದೆಂದು ಪ್ರಾಭಾಕರರು ಹೇಳುವರು. ಇದಕ್ಕೆ ಅನ್ವಿತಾಭಿಧಾನವೆಂದು ಹೆಸರು. ಈ ಪದಾರ್ಥಗಳ ಪ್ರತ್ಯೇಕಜ್ಞಾನಕ್ಕೆ ಸ್ಮರಣೆಯೆಂದೂ ಒಟ್ಟು ಸೇರಿಬರುವ ಜ್ಞಾನಕ್ಕೆ ಅನುಭವವೆಂದೂ ವ್ಯವಹಾರ. ಆದುದರಿಂದಲೇ ಶಾಬ್ದಬೋಧ, ಅನ್ವಯಬೋಧ ಇವೇ ಮೊದಲಾದ ವ್ಯವಹಾರಗಳು. ಪದಕ್ಕೂ ಪದಾರ್ಥಕ್ಕೂ ಯಾವ ವಿಧವಾದ ಸಂಬಂಧವನ್ನೂ ಹೇಳಲು ಸಾಧ್ಯವಿಲ್ಲ. ಆದರೂ ವಕ್ತೃವಿನ ಅಭಿಪ್ರಾಯ ಸೂಚಕಗಳಾಗಿರುವುವೆಂದು ಧರ್ಮಕೀರ್ತಿ ಬರೆಯುತ್ತಾರೆ. ಇತರರೆಲ್ಲರೂ ಸಂಬಂಧವುಂಟೆಂದು ಹೇಳುವರು. ಆ ಸಂಬಂಧಕ್ಕೆ ಶಕ್ತಿಯೆಂದು ಹೆಸರು. ಈ ಶಕ್ತಿ ಕಾರಣಸಾಮಾನ್ಯದಲ್ಲಿರುವ ಶಕ್ತಿಯಂತೆ ಅತಿರಿಕ್ತಪದಾರ್ಥ. ಆಯಾ ಪದದ ಸ್ವಭಾವವೆಂದು ವೈದಿಕರ ಅಭಿಪ್ರಾಯ. ಈ ಪದ ಈ ಅರ್ಥವನ್ನು ಕೊಡಲಿ ಎಂದು ಇಚ್ಛಾರೂಪವಾದ ಈಶ್ವರನ ಸಂಕೇತವೇ ಶಕ್ತಿ. ಕೆಲವು ಶಾಸ್ತ್ರದಲ್ಲಿ ಪ್ರಕೃತಿ

ಪ್ರತ್ಯಯ ಮೊದಲಾದ ಪದಗಳು ಪಾಣಿನ್ಯಾದಿಸಂಕೇತಗಳು. ರಾಮ ಕೃಷ್ಣ ಇತ್ಯಾದಿ ಹೆಸರುಗಳ ಪದಗಳು ಆಧುನಿಕ ಮನುಷ್ಯಸಂಕೇತಗಳು. ಹೀಗೆ ಸಕಲಪದಾರ್ಥಗಳ ಸಂಬಂಧಗಳೂ ಸಂಕೇತರೂಪಗಳೆಂದು ತಾರ್ಕಿಕರ ಸಿದ್ಧಾಂತ. ಈ ಸಂಬಂಧ ಸಾಕ್ಷಾತ್ತಾಗಿದ್ದರೆ ಅಭಿಧಾ ಎಂದೂ ಪರಂಪರೆ ಯಾಗಿದ್ದರೆ ಲಕ್ಷಣಾ ಎಂದೂ ವಿಭಾಗ. ಹೀಗೆ ಪದಶಕ್ತಿಯಲ್ಲದೆ ಪದಸಮೂಹವೆಂಬ ವಾಕ್ಯಕ್ಕೂ ವಾಕ್ಯಾರ್ಥಕ್ಕೂ ಸಂಬಂಧವುಂಟೆಂದು ವೈಯಾಕರಣ ಸಿದ್ಧಾಂತ. ಪದಶಕ್ತಿಯಿಂದಲೇ ನಿರ್ವಾಹವಾಗುತ್ತೆಂದು ತಾರ್ಕಿಕರ ಸಿದ್ಧಾಂತ. ಪದವಿಭಾಗಗಳೂ ಶಾಬ್ದಬೋಧ ಕಾರಣವಿಭಾಗ ಗಳೂ ಪ್ರಕೃತಿಪ್ರತ್ಯಯಾರ್ಥ ವಿಭಾಗಗಳೂ ಇತರಶಾಸ್ತ್ರಗಳಲ್ಲಿ ಹೇಳಿರು ವಂತೆ ಇಲ್ಲಿಯೂ ವಿವರಿಸಲ್ಪಟ್ಟಿರುವುವು. ಅವುಗಳಲ್ಲಿ ಆಕಾಂಕ್ಷೆ ಅಂದರೆ ಪದಗಳು ಯಾವ ಆನುಪೂರ್ವಿಯಲ್ಲಿದ್ದರೆ ಶಾಬ್ದಬೋಧವಾಗುವುದೋ ಅಂತಹ ಆನುಪೂರ್ವಿ. ಅರ್ಥಗಳಿಗೆ ಪರಸ್ಪರಾನ್ವಯಕ್ಕೆ ವಿರೋಧ ವಿಲ್ಲದಿರುವುದು ಯೋಗ್ಯತೆ. ಪದಗಳ ಅವ್ಯವಧಾನವು ಆಸತ್ತಿ. ಇವುಗಳು ಪದಗಳಲ್ಲಿರುವುವೆಂದು ತಾರ್ಕಿಕರ ಅಭಿಪ್ರಾಯ. ಅರ್ಥಗಳಲ್ಲಿರುವುವೆಂದು ಮೀಮಾಂಸಕರ ಅಭಿಪ್ರಾಯ. ವಾಕ್ಯ ಯಾವ ಅರ್ಥವಿಷಯಕ ತಾತ್ಪರ್ಯ ದಿಂದ ಪ್ರಯೋಗಿಸಲ್ಪಡುವುದೋ ಅದೇ ಆ ವಾಕ್ಯಕ್ಕೆ ಅರ್ಥ. ಬೇರೆಯಾಗಿ ತೋರುವುದು ವಾಕ್ಯಾರ್ಥವಲ್ಲ. ಇದನ್ನೇ "ಯತ್ಪರಃ ಶಬ್ದಃ ಸ ಶಬ್ದಾರ್ಥಃ" ಎಂದು ನಿಘಂಟು ಮಾಡಿರುವರು. ತಾತ್ಪರ್ಯವೆಂದರೆ ವಾಕ್ಯವನ್ನು ಹೇಳಿ ದವನ ಅಭಿಪ್ರಾಯ. ವೇದಕ್ಕೂ ವಕ್ತೃವಿನ ಅಭಿಪ್ರಾಯವೆಂಬ ತಾತ್ಪರ್ಯ ಇರಬೇಕಾದರೆ ಪರಮೇಶ್ವರನೇ ವೇದವನ್ನು ಹೇಳಿರಬೇಕೆಂದೂ ವೇದ ಪೌರುಷೇಯ, ಇದರಿಂದ ಈಶ್ವರಸಿದ್ಧಿಯೆಂದೂ ತರ್ಕಸಿದ್ಧಾಂತ.

ಮೀಮಾಂಸಕಮತದಲ್ಲಿ ಪರಮೇಶ್ವರನಿಲ್ಲದಿರುವುದರಿಂದ ತಾತ್ಪ ರ್ಯವೇ ಇಲ್ಲವೆಂದು ಹೇಳಬೇಕು. ಅಥವಾ ತಾತ್ಪರ್ಯವೆಂದರೆ ಪದಾರ್ಥ ಗಳ ಸಾಮರ್ಥ್ಯವೆಂದು ಹೇಳಬೇಕು. ಆದರೂ ಕುಮಾರಿಲರು 'ಶ್ಲೋಕ ವಾರ್ತಿಕ' ಗ್ರಂಥದಲ್ಲಿ ಈಶ್ವರನಿಲ್ಲವೆಂದು ಸಿದ್ಧಾಂತಮಾಡಿ 'ತಂತ್ರ ವಾರ್ತಿಕ' ಗ್ರಂಥದಲ್ಲಿ, ವೇದದಲ್ಲೂ ವೇದಪುರುಷನಾದ ಪರಮಾತ್ಮನ ತಾತ್ಪರ್ಯವಿರುವುದೆಂದು ಬರೆದಿರುತ್ತಾರೆ. ಆಧುನಿಕ ಮೀಮಾಂಸಕರಾದ

ಖಂಡದೇವರೆಂಬುವರು 'ಭಾಟ್ಟದೀಪಿಕೆ'ಯಲ್ಲಿ ದೇವತಾ ಈಶ್ವರ ಇವುಗಳ ನಿರಾಕರಣಪ್ರಕರಣವನ್ನು ನಿರೂಪಿಸಿ ಇಂತಹ ಪಾಪಿಷ್ಠಸಿದ್ಧಾಂತವನ್ನು ನಿರೂಪಣೆ ಮಾಡಿದ್ದರಿಂದ ಬಂದ ಪಾಪವನ್ನು ಪರಮೇಶ್ವರನೇ ನಿರಾಕರಣೆ ಮಾಡಬೇಕು, ಅವನೇ ಶರಣವೆಂದು ಅಪರಾಧ ಪರಿಹಾರವನ್ನು ಮಾಡಿಕೊಂಡಿರುವರು. ಇಂತಹ ಸಂದರ್ಭಗಳನ್ನು ನೋಡಿದರೆ ನಾಸ್ತಿಕವಾದ ಮಾಡುವವರಿಗೆ ಆಸ್ತಿಕ್ಯ ದೃಢವಾಗುವುದೆಂಬ ಅಭಿಪ್ರಾಯ ವ್ಯಕ್ತವಾಗುವುದು.

ವೈಶೇಷಿಕರು ಶಬ್ದವನ್ನು ಬೇರೆ ಪ್ರಮಾಣವೆಂದು ಪರಿಗಣಿಸುವುದಿಲ್ಲ; ಅನುಮಾನದಲ್ಲೇ ಅಂತರ್ಭಾವವನ್ನು ಹೇಳುವರು. ಅವರ ಅಭಿಪ್ರಾಯವೇನೆಂದರೆ ವಾಕ್ಯವನ್ನು ಕೇಳಿದೊಡನೆಯೇ ಜ್ಞಾನ ಹುಟ್ಟಿದರೂ ಆ ವಿಷಯದಲ್ಲಿ ನಿಶ್ಚಯವಿಲ್ಲ. ನಿಶ್ಚಯವಿಲ್ಲದಿರುವುದರಿಂದ ಆ ಜ್ಞಾನ ಉಪಯೋಗವಿಲ್ಲ. ಈ ವಾಕ್ಯವನ್ನು ಹೇಳಿದವರು ಯಾರು ಎಂದು ವಿಚಾರ ಮಾಡಿ ಅವರು ಆಪ್ತರೆಂದು ತಿಳಿದರೆ ಅನಂತರ ಈ ಜ್ಞಾನದಿಂದ ತಿಳಿಯಲ್ಪಟ್ಟ ವಿಷಯದಲ್ಲಿ ನಿಶ್ಚಯವುಂಟಾಗುತ್ತದೆ. ಅವರು ಆಪ್ತರೆಂದು ತಿಳಿಯುವುದು ಅನುಮಾನಮೂಲಕವಾಗಿಯೇ ಇರುವುದರಿಂದ ಅನುಮಾನದಲ್ಲಿಯೇ ಅಂತರ್ಭಾವವೆನ್ನುವರು.

ಈ ಶಬ್ದವೆಂಬ ವಾಕ್ಯಗಳಲ್ಲಿ ಲೌಕಿಕ ವೈದಿಕವೆಂದು ಎರಡು ಪ್ರಕಾರ. ಲೌಕಿಕಪದಗಳೇ ವೈದಿಕಪದಗಳೂ ಆದರೆ ಆನುಪೂರ್ವಿಯೆಂಬ ಪದಗಳ ಕ್ರಮ ಬೇರೆಬೇರೆಯಾದುದರಿಂದ ಬೇರೆ ವ್ಯವಹಾರ. ವೇದವಾಕ್ಯಗಳು ಪುರುಷರಿಂದ ಜೋಡಿಸಲ್ಪಟ್ಟವುಗಳೆಂದು ನಮಗೆ ತಿಳಿದುಬಂದಿಲ್ಲವೆಂದು ಮೀಮಾಂಸಕರು ಹೇಳಿದರೆ ಪುರುಷರಿಂದ ರಚಿಸಲ್ಪಟ್ಟವುಗಳೆಂದು ಕಣಾದ ಗೌತಮಸಂಪ್ರದಾಯದಲ್ಲಿ ಕೇಳಿಬರುತ್ತದೆಂದು ತಾರ್ಕಿಕರು ಬರೆಯುತ್ತಾರೆ. ಆ ವೇದದ ಆನುಪೂರ್ವಿಯಲ್ಲಿರುವ ಮಂತ್ರಗಳು ಪುರಾಣಗಳಲ್ಲಿದ್ದರೆ ಸ್ವರ ನಿಯಮಗಳಿಲ್ಲದೆ ಯಾರು ಬೇಕಾದರೂ ಹೇಳಬಹುದು. ಅದು ವೇದವಲ್ಲ ಎಂದು ಕುಮಾರಿಲರು ಬರೆಯುತ್ತಾರೆ—

ತಾನೇವ ವೈದಿಕಾನ್ ವರ್ಣಾನ್ ಭಾರತಾದಿನಿವೇಶಿತಾನ್
ಸ್ವಾಧ್ಯಾಯ ನಿಯಮಂ ಹಿತ್ವಾ ಲೋಕಬುದ್ಧ್ಯಾ ಪ್ರಯುಂಜ್ಞತೇ ॥

[ತನ್ತ್ರವಾರ್ತಿಕಮ್]

ಪದಗಳಲ್ಲಿರುವ ಅಕಾರಾದಿ ಅಕ್ಷರಗಳು ಕಂಠ, ತಾಲು, ದಂತ ಮೊದಲಾದ ಮನುಷ್ಯಾವಯವಗಳಿಂದ ಹೊಸದಾಗಿ ಉತ್ಪನ್ನವಾಗುವುವು, ವಿನಷ್ಟವಾಗುವುವು ಎಂದು ತಾರ್ಕಿಕಮತ. ಅಕ್ಷರಗಳು ಸ್ವತಂತ್ರಗಳಾಗಿ ಸರ್ವದೇಶವ್ಯಾಪಕಗಳಾಗಿರುವುವು ಮತ್ತು ಉಚ್ಚಾರಣೆಯಿಂದ ಪ್ರಕಾಶಕ್ಕೆ ಬರುವುವು ಎಂದು ಮೀಮಾಂಸಕಮತ. ಈ ಅಕ್ಷರಗಳಿಗೂ ಧ್ವನಿಗೂ ಆಶ್ರಯ ಆಕಾಶವೆಂದು ತರ್ಕಮತ. ವಾಯುವೆಂದು ಶಿಕ್ಷಾಕಾರಮತ. ದೂರದಲ್ಲಿ ಹುಟ್ಟಿದ ಶಬ್ದ ತರಂಗಪರಂಪರೆಯಂತೆ ಬೇರೆಬೇರೆಯಾಗಿ ಹುಟ್ಟಿ ನಮ್ಮ ಕಿವಿಯಲ್ಲಿ ಬಂದು ನಮಗೆ ಗೋಚರವಾಗುವುದೆಂದು ಗ್ರಹಣಪ್ರಕಾರವು ವಿವರಿಸಲ್ಪಟ್ಟಿರುವುದು.

ಪದಗಳ ವಿಭಾಗವನ್ನು ಯೋಗ, ರೂಢ, ಯೋಗರೂಢ ಮೊದಲಾದ ಭೇದಗಳಿಂದ ವಿಭಾಗ ಮಾಡುವರು. ಯೋಗವೆಂದರೆ ಅವಯವಶಕ್ತಿ. ಪದದಲ್ಲಿರುವ ಅಂಶಗಳ ಅರ್ಥಮೂಲಕ ಒಂದರ್ಥವನ್ನು ಕೊಡುವ ಪದವು ಯೋಗಪದ. ನರಪತಿಪದದಲ್ಲಿ ನರ-ಪತಿ ಎಂಬ ವಿಭಾಗದಿಂದ ರಾಜನನ್ನು ಬೋಧಿಸುವುದು ಸಮುದಾಯಶಕ್ತಿಯು ರೂಢಿ. ಭೂಮಿ, ಆಕಾಶ ಮೊದಲಾದುವು ರೂಢಪದಗಳು. ಜಲಜ ಮೊದಲಾದುವು ಯೋಗರೂಢ. ಯಾಸ್ಕರೇ ಮೊದಲಾದವರು ಪದಗಳನ್ನು ನಾಮ, ಆಖ್ಯಾತ, ಉಪಸರ್ಗ, ನಿಪಾತ ಎಂದು ನಾಲ್ಕು ವಿಧಗಳಾಗಿ ಉಪದೇಶಿಸಿರುವರು. ಪತಂಜಲಿ ಮೊದಲಾದವರು ಜಾತಿಶಬ್ದ, ಗುಣಶಬ್ದ, ಕ್ರಿಯಾಶಬ್ದ, ದ್ರವ್ಯಶಬ್ದ ಎಂದು ವಿಭಾಗ ಮಾಡಿರುವರು. ಇಂತಹ ಶಬ್ದಪ್ರಮಾಣದಿಂದಲೇ ಸಕಲಲೌಕಿಕ ವೈದಿಕವ್ಯವಹಾರವೂ ನಡೆಯುತ್ತಿರುವುದು. ಈ ಪ್ರಕಾರ ತರ್ಕಶಾಸ್ತ್ರದ ಸಾರಾಂಶವು ಸಂಗ್ರಹಿಸಲ್ಪಟ್ಟಿತು. ಅವಕಾಶ ಅಲ್ಪವಾಗಿರುವುದರಿಂದ ವಿರಮಿಸಬೇಕಾಗಿರುವುದು.

## ೮

# ಮೀಮಾಂಸಾ ದರ್ಶನ

### ಪುರುಷಾರ್ಥ

ಪುರುಷಾರ್ಥವು ಧರ್ಮ ಅರ್ಥ ಕಾಮ ಮೋಕ್ಷವೆಂಬ ನಾಲ್ಕುವಿಧ. ಈ ನಾಲ್ಕರಲ್ಲಿ ಧರ್ಮ ಅರ್ಥ ಕಾಮ ಇವುಗಳನ್ನು ತ್ರಿವರ್ಗವೆಂದೂ, ಮೋಕ್ಷವನ್ನು ಅಪವರ್ಗವೆಂದೂ ವ್ಯವಹರಿಸುವರು. ಹೀಗೆ ಪುರುಷಾರ್ಥವಿಭಾಗವು ವೇದದಲ್ಲೂ ವೇದಾಂತದಲ್ಲೂ ಕಂಡುಬರುವುದಿಲ್ಲ ; ಇತಿಹಾಸಪುರಾಣಾದಿಗಳಲ್ಲಿ ಸ್ಪಷ್ಟವಾಗಿರುತ್ತದೆ. ಈ ನಾಲ್ಕು ಪುರುಷಾರ್ಥಗಳಿಗೂ ನಾಲ್ಕು ವರ್ಣಗಳಿಗೂ ನಾಲ್ಕು ಆಶ್ರಮಗಳಿಗೂ ನಾಲ್ಕು ಯುಗಗಳಿಗೂ ನಾಲ್ಕು ವೇದಗಳಿಗೂ ಈ ಪ್ರಕಾರ ನಾಲ್ಕುನಾಲ್ಕು ಸಂಖ್ಯೆಗಳುಳ್ಳ ವಸ್ತುಗಳಿಗೆ ಪರಸ್ಪರ ಸಂಬಂಧವನ್ನು ಕಲ್ಪಿಸಿರುವರು. ಇದರಲ್ಲಿ ಮೋಕ್ಷಕ್ಕೆ ಬ್ರಾಹ್ಮಣವರ್ಣ ಸಂನ್ಯಾಸಾಶ್ರಮ ಕೃತಯುಗ ಸಾಮವೇದವೆಂದು ಒಂದು ಗುಂಪಾಗುವುದು. ಈ ಅಭಿಪ್ರಾಯದಿಂದಲೇ ಬ್ರಾಹ್ಮಣಜನ್ಮದಲ್ಲಿ ಸಂನ್ಯಾಸಾಶ್ರಮ ಮಂತರಿಗೇಯೇ ಮೋಕ್ಷವೆಂದೊಂದಭಿಪ್ರಾಯ ಉದಯಿಸುವುದಕ್ಕೆ ಅವಕಾಶವಾಯಿತು.

ಇವುಗಳಲ್ಲಿ ನ್ಯಾಯವಾಗಿ ಅರ್ಥ ಕಾಮ ಧರ್ಮ ಮೋಕ್ಷವೆಂದು ಕ್ರಮವಿರಬೇಕು. ಕೌಮಾರ ಅರ್ಥ, ಯೌವನ ಕಾಮ, ವಾರ್ಧಕ ಧರ್ಮ, ಅಂತ್ಯಕಾಲ ಮೋಕ್ಷ ಎಂದು ಔಚಿತ್ಯವಿರುವುದು. ಆದರೂ ಧರ್ಮಕ್ಕೂ ಮೋಕ್ಷಕ್ಕೂ ಮಧ್ಯೇ ಅರ್ಥಕಾಮಗಳನ್ನು ಸೇರಿಸಿರುವುದು, ಅರ್ಥಕಾಮಗಳು ಧರ್ಮಮೋಕ್ಷಗಳಿಗೆ ಅನುಕೂಲಗಳಾಗಿರಬೇಕೆಂಬ ಭಾವದಿಂದ ಎಂದು ಮನುಸ್ಮೃತಿಯಲ್ಲಿರುವುದು. ಅರ್ಥವೆಂದರೆ ಕೌಮಾರಾವಸ್ಥೆಯಲ್ಲಿ, ಬ್ರಹ್ಮಚರ್ಯಾಶ್ರಮದಲ್ಲಿ ವಿದ್ಯಾಭ್ಯಾಸ ದ್ರವ್ಯಾರ್ಜನೆ. ಕಾಮವೆಂದರೆ ಯೌವನದಲ್ಲಿ, ಗೃಹಸ್ಥಾಶ್ರಮದಲ್ಲಿ ಸಂತತಿ ವೃದ್ಧಿ ಮೊದಲಾದ ಲೌಕಿಕವ್ಯಾಪಾರಗಳು. ಧರ್ಮವೆಂದರೆ ವಾನಪ್ರಸ್ಥಾಶ್ರಮದಲ್ಲಿ ಯಾಗಾದಿಧರ್ಮಪರತೆ. ಮೋಕ್ಷವೆಂದರೆ ಅಂತ್ಯಕಾಲದಲ್ಲಿ ಯೋಗಾಭ್ಯಾಸದಲ್ಲಿರುವುದು.

ಈ ನಾಲ್ಕು ಪುರುಷಾರ್ಥಗಳಲ್ಲಿ ಈಗ ಧರ್ಮಶಾಸ್ತ್ರಕ್ಕೆ ಜೈಮಿನಿಯೂ ಅರ್ಥಶಾಸ್ತ್ರಕ್ಕೆ ಚಾಣಕ್ಯನೂ ಕಾಮಶಾಸ್ತ್ರಕ್ಕೆ ವಾತ್ಸ್ಯಾಯನರೂ, ಮೋಕ್ಷ ಶಾಸ್ತ್ರಕ್ಕೆ ಬಾದರಾಯಣಾಚಾರ್ಯರೂ ಹಿಂದಿನ ಸೂತ್ರಗಳನ್ನು ಅನುಸರಿಸಿ ಸೂತ್ರಗಳನ್ನು ಬರೆದಿರುವರು. ಇವುಗಳಲ್ಲಿ ಜೈಮಿನಿಸೂತ್ರವೇ ಈಗ ಧರ್ಮ ಸೂತ್ರವಾಗಿರುವುದು.

ಧರ್ಮವೆಂದರೆ ಮನುಷ್ಯನು ಇಹಪರದೃಷ್ಟಿಯಿಂದ ಹೇಳಲ್ಪಟ್ಟಿದೆ ಯೆಂದು ವಿಚಾರಪೂರ್ವಕವಾಗಿ ನಿರ್ಣಯಿಸುವ ಶಾಸ್ತ್ರವೇ ಮೀಮಾಂಸಾ ಶಾಸ್ತ್ರ.

ಇದರಲ್ಲಿ ಶ್ರುತಿಸ್ಮೃತಿ ಆಚಾರಗಳಿಂದ ಧರ್ಮಸ್ವರೂಪವನ್ನು ನಿರೂ ಪಿಸಿ ಅವುಗಳಿಗೆ ಬೇಕಾದ ಪ್ರಭೇದವನ್ನೂ ಅವುಗಳಿಗೆ ಬೇಕಾದ ಅಂಶ ಗಳನ್ನೂ ಮಾಡತಕ್ಕ ರೀತಿಯನ್ನೂ ಕ್ರಮವನ್ನೂ ಮಾಡತಕ್ಕವನ ಯೋಗ್ಯ ತೆಯನ್ನೂ ಇವುಗಳಿಗೆ ಸಂಬಂಧಪಟ್ಟ ಇತರ ವಿಷಯಗಳನ್ನೂ ವಿಚಾರಿಸಿ ನಿರ್ಣಯಿಸಿರುತ್ತಾರೆ.

ಮೀಮಾಂಸಾಶಾಸ್ತ್ರವೆಂದರೆ ವೇದಾರ್ಥವಿಚಾರಶಾಸ್ತ್ರವೆಂದರ್ಥ, ಈ ವಿಚಾರಶಾಸ್ತ್ರವೂ ವೇದದಂತೆ ಪೂಜ್ಯವಾದುದರಿಂದ ಪೂಜಿತವಿಚಾರಶಾಸ್ತ್ರ ವೆಂದು ಇದನ್ನು ಕರೆಯುತ್ತಾರೆ. ವೇದವೆಂದರೆ ಅನಾದಿಸಂಪ್ರದಾಯದಿಂದ ಮಹಾಜನ ಪರಿಗೃಹೀತವಾದ ಗ್ರಂಥರಾಶಿ. ಇದು ನಿಯಮಪೂರ್ವಕವಾಗಿ ಗುರುಶಿಷ್ಯ ಸಂಪ್ರದಾಯದಿಂದ, ಅನಾದಿಕಾಲದಿಂದ ಮಹಾತ್ಮರ ಹೃದಯ ದಲ್ಲಿರುವುದು. ಈ ವೇದವಾಕ್ಯಗಳಲ್ಲಿರುವ ಪದಗಳು ಲೋಕದಲ್ಲಿರುವ ಪದ ಗಳೇ ವಿನಾ ಬೇರೆ ಪದಗಳಲ್ಲ. ಅವು ಬೇರೆ ಪದಗಳಾಗಿದ್ದರೆ ಮನುಷ್ಯ ಭಾಷೆಯಾಗುತ್ತಿರಲಿಲ್ಲ. ಈ ವೇದವಾಕ್ಯಗಳಲ್ಲಿ ಕೆಲವು, ಪುರಾಣಗಳಲ್ಲಿ ಅಲ್ಲಲ್ಲಿ ಕಂಡುಬರುವುವು. ಆದರೂ ಅವುಗಳಿಗೆ ಅಧ್ಯಯನನಿಯಮವಿಲ್ಲದಿರು ವುದರಿಂದ ಜನಸಾಮಾನ್ಯ ಓದಬಹುದು. ಅವುಗಳು ಲೌಕಿಕವಾಕ್ಯಗಳೇ ವಿನಾ ವೇದವಾಕ್ಯಗಳಲ್ಲ. ಈ ಅಂಶವನ್ನು ಕುಮಾರಿಲರು ಹೀಗೆ ಹೇಳಿ ದ್ದಾರೆ—

> ತಾನೇವ ವೈದಿಕಾನ್ ವರ್ಣಾನ್ ಭಾರತಾದಿನಿವೇಶಿತಾನ್
> ಸ್ವಾಧ್ಯಾಯನಿಯಮಂ ಹಿತ್ವಾ ಲೋಕಬುದ್ಧ್ಯಾ ಪ್ರಯುಞ್ಜತೇ ॥

ಮತ್ತು ವೇದದಲ್ಲಿ ಹೇಳಲ್ಪಡುವ ಉದಾತ್ತಾನುದಾತ್ತ ಸ್ವರಿತ ಪ್ರಚಯುಗಳೆಂಬ ಸ್ವರಗಳು ಬ್ರಹ್ಮಯಜ್ಞದಲ್ಲಿ ವೇದಜಪಕ್ಕೆ ಉಪಯೋಗವೇಹೊರತು ಅರ್ಥಜ್ಞಾನಕ್ಕೆ ಉಪಯೋಗವಿಲ್ಲವೆಂದು ನಿರ್ಣಯಿಸಿದ್ದಾರೆ. ಈ ಅಂಶವನ್ನು ಇತರ ಪೂರ್ವಾಚಾರ್ಯರುಗಳೂ ಅನುವಾದ ಮಾಡಿರುತ್ತಾರೆ.

## ಪರೀಕ್ಷಾ

ಈ ಮೀಮಾಂಸಾಶಾಸ್ತ್ರವು ಪರೀಕ್ಷಾ ಶಾಸ್ತ್ರವಾಗಿರುವುದು ಎಂದರೆ ನ್ಯಾಯಶಾಸ್ತ್ರವು, ಯುಕ್ತಿಶಾಸ್ತ್ರವು, ಉಪದೇಶಶಾಸ್ತ್ರವಲ್ಲ. ಇದು ಪರೀಕ್ಷಾ ಶಾಸ್ತ್ರವೆಂದೇ ಮೂರನೆಯ ಸೂತ್ರ ಸ್ಪಷ್ಟಪಡಿಸುತ್ತದೆ. ಆದುದರಿಂದ ಇತರ ಸಿದ್ಧಾಂತಗಳಲ್ಲಿರುವ ಅಸಮ್ಮತವಾದ ವಿಷಯಗಳನ್ನು ಯುಕ್ತಿಯಿಂದ ನಿರಾಕರಿಸುತ್ತಾರೆ. ತಮ್ಮ ಸಿದ್ಧಾಂತದಲ್ಲೂ ಭಾಷ್ಯಕಾರರ ಕೆಲವು ಅಭಿಪ್ರಾಯಗಳನ್ನು ವಾರ್ತಿಕಕಾರರು ನಿರಾಕರಿಸಿ ಭಾಷ್ಯಕಾರರ ಅರ್ಥವನ್ನು ಆದರಿಸಬಾರದೆಂದು ಬರೆಯುತ್ತಾರೆ. ಹಿಂದಿನ ವೃತ್ತಿಕಾರ ವಾರ್ತಿಕಕಾರರ ಅಭಿಪ್ರಾಯಗಳು ಕೆಲವು ವಾರ್ತಿಕವ್ಯಾಖ್ಯಾಕಾರರಿಂದ ನಿರಾಕರಿಸಲ್ಪಟ್ಟಿರುವುವು ವ್ಯಾಖ್ಯಾಕಾರರ ಅಭಿಪ್ರಾಯಗಳು ಕೆಲವು ಟೀಕಾಕಾರರಿಂದ ನಿರಾಕರಿಸಲ್ಪಟ್ಟಿರುವುವು. ಹೀಗೆ ಪ್ರತಿ ಗ್ರಂಥಕಾರರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ದಾಕ್ಷಿಣ್ಯವಿಲ್ಲದೆ ಪ್ರಕಾಶಪಡಿಸುತ್ತಾರೆ. ಈ ಕ್ರಮವು ಮೀಮಾಂಸಾದರ್ಶನದಲ್ಲಿ ಬಹುವಾಗಿರುತ್ತದೆ. ಪ್ರಾಯಶಃ ಪ್ರಾಚೀನ ವೇದಾಂತ ಸಂಪ್ರದಾಯದಲ್ಲೂ ಈ ಕ್ರಮವಿತ್ತು. ಆದುದರಿಂದಲೇ ಶಂಕರಾಚಾರ್ಯರು ಉಪನಿಷತ್ತುಗಳ ಹಿಂದಿನ ವ್ಯಾಖ್ಯಾನಗಳನ್ನು ನಿರಾಕರಿಸುತ್ತೇನೆಂದು ಸ್ಪಷ್ಟವಾಗಿ ಹೇಳಿದ್ದಾರೆ. ಶಂಕರಾಚಾರ್ಯರ ಅಭಿಪ್ರಾಯಗಳಲ್ಲೂ ಕೆಲವನ್ನು ಸುರೇಶ್ವರಾಚಾರ್ಯರು ಒಪ್ಪಲಿಲ್ಲ.

ಪೂರ್ವಕಾಲದಲ್ಲಿ ಈ ರೀತಿ ಸ್ಪಷ್ಟವಾಗಿತ್ತು ಎಂಬುದು ಭಾಷ್ಯಗಳ ಮೇಲೆ ಹೊರಟಿರುವ ವಾರ್ತಿಕವೆಂಬ ಗ್ರಂಥದ ಅರ್ಥದಿಂದಲೇ ಸ್ಪಷ್ಟವಾಗುತ್ತದೆ. ವಾರ್ತಿಕವೆಂದರೆ ಮೂಲಕಾರರು ಹೇಳುವುದರಲ್ಲಿ ಹೇಳಬೇಕಾದುದನ್ನು ಬಿಟ್ಟಿರುವುದು, ತಪ್ಪು ಹೇಳಿರುವುದು, ಹೇಳಿದುದನ್ನೆ ಪುನಃ ಹೇಳುವುದು ಇವೇ ಮೊದಲಾದ ದೋಷಗಳನ್ನು ಪರಿಹರಿಸುವ ಗ್ರಂಥ.

ಉಕ್ತಾನುಕ್ತದುರುಕ್ತಚಿಂತಾ ಯತ್ರ ಚಿಕ್ತಾನ್ತಾ ಪ್ರವರ್ತತೇ
ವಾರ್ತಿಕಂ ನಾಮ ತಂ ಪ್ರಾಹುರ್ಗ್ರನ್ಥಭೇದಂ ವಿಪಶ್ಚಿತಃ ॥

ಎಂದು ಲಕ್ಷಣವನ್ನು ಬರೆದಿರುವರು. ಈ ಅಂಶವು ಪಾಣಿನಿಸೂತ್ರಗಳ ಮೇಲೆ ವರರುಚಿ ಬರೆದಿರುವ ವಾರ್ತಿಕದಲ್ಲಿ ಹೇರಳವಾಗಿರುತ್ತದೆ. ಇತರ ವಾರ್ತಿಕ ಗ್ರಂಥಗಳಲ್ಲೂ ಯಥೋಚಿತವಾಗಿ ಈ ಅಂಶಗಳು ಕಾಣುತ್ತವೆ. ಹಿಂದಿನವರ ಮಾರ್ಗದಲ್ಲೇ ಮುಂದಿನವರು ಹೋಗುವವರಾಗಿದ್ದರೆ ವಾರ್ತಿಕಗ್ರಂಥಗಳು ಹೊರಡುತ್ತಲೇ ಇರಲಿಲ್ಲ. ಅನಂತರಕಾಲದಲ್ಲೂ ಗ್ರಂಥಕಾರರು ಸ್ವಂತ ಅಭಿಪ್ರಾಯಗಳನ್ನು ವಿಶದಪಡಿಸದೆ ಇರಲಿಲ್ಲ. ಆದರೆ ತಮ್ಮ ಅಭಿಪ್ರಾಯವೇ ಹಿಂದಿನವರ ಅಭಿಪ್ರಾಯವೆಂದು ಅವರ ಗ್ರಂಥಗಳಿಗೆ ವ್ಯಾಖ್ಯಾನಮಾಡಿರುತ್ತಾರೆ. ಇದರಿಂದ ತಮ್ಮ ಅಭಿಪ್ರಾಯವನ್ನು ಹಿಂದಿನವರ ಅಭಿಪ್ರಾಯವನ್ನಾಗಿ ಮಾಡಿದಂತಾಯಿತು, ಅಂತು ಮನುಷ್ಯಸ್ವಭಾವಸಿದ್ಧವಾದ ಸ್ವಂತ ಕಲ್ಪನಾ ಚಾತುರ್ಯ ಇದ್ದೇ ಇರುವುದು. ಹಿಂದಿನವರ ದಾರಿಯಲ್ಲೇ ಹೋಗುವುದಾಗಿದ್ದರೆ ಬೇರೆ ಗ್ರಂಥವೇತಕ್ಕೆ ಬರೆಯಬೇಕು? ಇತರ ವ್ಯಾಖ್ಯಾಕಾರರ ಮತಖಂಡನಕ್ಕಾಗಿ ಬರೆದಿರುವರೆಂದು ಹೇಳಬಹುದು. ಆದರೆ ತಮ್ಮ ದಾರಿಯಲ್ಲಿ ಮೂಲವನ್ನು ಕೆಲವೆಡೆ ತಿರುಗಿಸಿರುವರೆಂದು ಸ್ಪಷ್ಟ. ಏವಂಚ ಸಕಲ ಗ್ರಂಥಗಳೂ ಪುರುಷಬುದ್ಧಿ ವೈಚಿತ್ರ್ಯಮಯವೆಂದು ಸಿದ್ಧಾಂತ.

ಸರ್ವದಾರ್ಶನಿಕರೂ ಬರೆಯುವ ವಾಕ್ಯವಿದು—"ಎಲ್ಲರೂ ತಮ್ಮ ತಮ್ಮ ಪಕ್ಷದಲ್ಲಿ ಅಭಿನಿವೇಶದಿಂದ ನ್ಯಾಯವನ್ನು ಅತಿಕ್ರಮಿಸುತ್ತಾರೆ" ಎಂದು. ಇಲ್ಲಿ ನ್ಯಾಯವೆಂಬುದು ಇಂತಹುದೆಂದು ಸರ್ವಸಮ್ಮತವಾಗಿ ಯಾವುದೂ ಇಲ್ಲ. ಅವರವರ ಮನಸ್ಸೊಪ್ಪಿದುದು ಅವರಿಗೆ ನ್ಯಾಯವಾದರೆ, ಇತರರನ್ನು ನ್ಯಾಯವನ್ನು ಬಿಟ್ಟರೆಂದು ಹೇಳುವುದು ನ್ಯಾಯವಾಗಿಯೇ ಇದೆ.

ಕುಮಾರಿಲರು ಒಂದು ಸಂದರ್ಭದಲ್ಲಿ ಈ ಮಾತನ್ನು ಬರೆದಿರುತ್ತಾರೆ—"ಯಾರು ಯಾವ ಪಕ್ಷವನ್ನು ಅಂಗೀಕರಿಸುವರೋ ಅವರು ತಮ್ಮ ಪಕ್ಷವನ್ನು ಧೀರರಾಗಿ ಸಾಧಿಸಲೇಬೇಕು. ಮಧ್ಯದಲ್ಲಿ ಉಪದ್ರವಗಳಿಗೆ ಹೆದರಿ ಬಿಟ್ಟಿದ್ದೇ ಆದರೆ ಪಕ್ಷದೊಡನೆ ತಾನೂ ಹಾರಿಹೋಗುವನು ಎಂದು.

ಪಕ್ಷೋ ಯೋಽಙ್ಗೀಕೃತೋ ಯೇನ ತಮುತ್ರಸ್ಯನ್ ಸ ನಿರ್ವಹೇತ್
ಹಾರಯೇದಸ್ತರಾತ್ರಸ್ಯನ್ ಭೀತೋಪದ್ರವಕಾರಿಭಿಃ ॥

ಇದೇ ಅಭಿಪ್ರಾಯವನ್ನು ಅನುಸರಿಸಿ ವೇದಾಂತಾಚಾರ್ಯರು ಬರೆದಿರುವ ಶ್ಲೋಕವಿದು —

ಭವನ್ತಿ ಬಹವೋ ಮೂರ್ಖಾಃ ಕ್ವಚಿದೇಕೋ ವಿಶುದ್ಧದೀಃ
ತ್ರಾಸಿತೋಽಪಿ ಸದಾ ಮೂರ್ಖೈರಚಲೋ ಯಸ್ಸ ಬುದ್ಧಿಮಾನ್ ॥

ಮೂರ್ಖರಿಂದ ಬುದ್ಧಿವಂತರಿಗೆ ತೊಂದರೆಗಳು ಬರುತ್ತವೆ. ಆದರೂ ಹೆದರದೆ ತನ್ನ ಅಭಿಪ್ರಾಯದಲ್ಲಿ ಅಲ್ಲಾಡದೆ ಇರುವವನೇ ಬುದ್ಧಿವಂತನೆಂದು ಭಾವ.

**ವೇದ ಪ್ರಾಮಾಣ್ಯ**

ಮೊದಲು ಧರ್ಮಸ್ವರೂಪವನ್ನು ನಿರ್ಣಯಿಸುವ ಸಂದರ್ಭದಲ್ಲಿ ಚಾರ್ವಾಕ ಬೌದ್ಧ ಮೊದಲಾದವರ ಅಭಿಪ್ರಾಯಗಳನ್ನು ನಿರಾಕರಿಸಿ ವೇದಕ್ಕೆ ಪ್ರಾಮಾಣ್ಯವನ್ನು ಸ್ಥಾಪಿಸಿದರೇಯೇ ಧರ್ಮನಿರೂಪಣೆಯಾಗುವು ದೆಂದು ಮೊದಲು ವೇದಪ್ರಾಮಾಣ್ಯವನ್ನು ನಿರ್ಣಯಿಸಬೇಕು. ಅದಕ್ಕೆ ಪ್ರತಿ ಯಾಗಿರುವುದು. ಪ್ರಾಯಃ ಪೂರ್ವಕಾಲದಲ್ಲಿ ಬೌದ್ಧರ ಅಭಿಪ್ರಾಯ. ಆದುದರಿಂದ ಬೌದ್ಧಾಗಮಕ್ಕೂ ವೇದಕ್ಕೂ ಪ್ರಾಮಾಣ್ಯ ವಿಷಯದಲ್ಲಿ ಬಲಾಬಲವಿಚಾರವು ಆವಶ್ಯಕ.

ವೇದಕ್ಕೆ ಮಹಾಜನ ಪರಿಗ್ರಹವಿರುವುದು. ಮಹಾಜನವೆಂದರೆ ಕ್ಷುದ್ರ ಪ್ರಯೋಜನದಲ್ಲಿ ದೃಷ್ಟಿಯಿಲ್ಲದೆ ಧರ್ಮದಲ್ಲೇ ದೃಷ್ಟಿಯುಳ್ಳವರೆಂದರ್ಥ ಕ್ಷುದ್ರ ಪ್ರಯೋಜನಗಳಿಗ ಹೇತುದರ್ಶನವೆಂದರ್ಥ. ಆ ಹೇತುಗಳಲ್ಲಿ ಕರ್ಮನಿರ್ಬಂಧವಿಲ್ಲದಿರುವುದರಿಂದ ಆಲಸ್ಯವು ಮೊದಲನೆಯದು. ಇಲ್ಲಿಂದ ಪತಿತರಾದವರಿಗೆ ಅಲ್ಲಿ ಪ್ರವೇಶವೆಂಬ ಅನನ್ಯಗತಿಕತ್ವವು, ಸ್ವೇಚ್ಛಾಚಾರಕ್ಕೆ ಅವಕಾಶವು, ಭಕ್ಷ್ಯಾಭಕ್ಷ್ಯವ್ಯವಸ್ಥೆಯಿಲ್ಲದೆ ಪ್ರಾತಃಕಾಲದಲ್ಲೇ ಭೋಜನ ವೆಂಬ ಜೀವಿಕೆ, ದೇಹವು ಸದಾ ಮಲಿನವು, ಆತ್ಮನು ಸದಾ ನಿರ್ಮಲನು, ಸ್ನಾನಾದಿಶೌಚದಿಂದ ಉಪಯೋಗವಿಲ್ಲವೆಂದೂ ಅಹಿಂಸೆಯೇ ಪರಮಧರ್ಮ ವೆಂದೂ ಜ್ಞಾನಾಭ್ಯಾಸವೇ ಮುಖ್ಯವೆಂದೂ ವೇಷವು ಪಾಷಂಡಿಸಹವಾಸ ಪಾಷಾಣಪಾಟನ ಪ್ರತಿಮಾಭಾಷಣ ವೃಕ್ಷಶೋಷಣ ಮೊದಲಾದ ಕಪಟ ಕುತ್ಸಿತಸಿದ್ಧಿಗಳಿಂದ ಸಾಧು ಜನವಂಚನೆ ಮೊದಲಾದುವುಗಳು ತಂತ್ರ ವಾರ್ತಿಕ, ನ್ಯಾಯಕುಸುಮಾಂಜಲಿ, ನ್ಯಾಯಪರಿಶುದ್ಧಿ ಮೊದಲಾದ ಗ್ರಂಥ ಗಳಲ್ಲಿ ವಿಸ್ತರಿಸಲ್ಪಟ್ಟಿರುವುದು.

ಇಂತಹ ಹೇತುದರ್ಶನಲೇಶನವೂ ಇಲ್ಲದೇ ಕೇವಲ ಧರ್ಮದೃಷ್ಟಿಯಿಂದ ಅಧ್ಯಯನಜ್ಞಾನಾನುಷ್ಠಾನದಲ್ಲಿರುವವರು ಮಹಾಜನರು. ಅವರಿಂದ ಪರಿಗ್ರಹಿಸಲ್ಪಟ್ಟಿರುವುದರಿಂದ ಬುದ್ಧಾದ್ಯಾಗಮತುಲ್ಯವಲ್ಲ : ವೈದಿಕಾಗಮವೆಂದು ನಿರ್ಣಯವು.

ಮತ್ತು ಒಂದು ಹೊಸ ಪದ್ಧತಿ ಏರ್ಪಾಡಾಗಬೇಕಾದರೆ ಹಿಂದೆ ಅದಕ್ಕೆ ಪ್ರತಿಯಾದ ಪದ್ಧತಿಯೊಂದಿರಲೇಬೇಕು. ವೈದಿಕಪದ್ಧತಿಗಿಂತಲೂ ಪ್ರಾಚೀನವಾದ ಪದ್ಧತಿ ಯಾವುದೂ ಕಂಡುಬರುವುದಿಲ್ಲ, ಇದರಲ್ಲಿ ಆಲಸ್ಯವು ನವೀನ ಪದ್ಧತಿಗೆ ಮೂಲವಾದುದರಿಂದ ಆಲಸ್ಯಮೂಲಕವಾದ ಪದ್ಧತಿ ಶುದ್ಧವಲ್ಲ.

ಮತ್ತು ಈ ಪ್ರಪಂಚಕ್ಕೆ ಸೃಷ್ಟಿಪ್ರಳಯಗಳನ್ನು ವೇದ ನಿತ್ಯತ್ವಕ್ಕಾಗಿಯೇ ಅಂಗೀಕರಿಸುವುದಿಲ್ಲ. ಅವುಗಳಿದ್ದರೆ ವೇದಸಂಪ್ರದಾಯ ಸಾದಿಯಾಗುವುದು. ಅಪೌರುಷೇಯತ್ವವೂ ನಿತ್ಯತ್ವವೂ ಬರಲಾರದು. ಅಪೌರುಷೇಯತ್ವವೆಂದರೆ ವೇದಾಕ್ಷರಗಳ ಆನುಪೂರ್ವೀರಚನೆಯಲ್ಲಿ, ಕಾಳಿದಾಸಾದಿಗಳಿಗೆ ರಘುವಂಶ ಶ್ಲೋಕಾಕ್ಷರಾನುಪೂರ್ವಿಯಲ್ಲಿ ಸ್ವಾತಂತ್ರ್ಯವಿದ್ದಹಾಗೆ, ಯಾರಿಗೂ ಸ್ವಾತಂತ್ರ್ಯವಿಲ್ಲದೆ ಅನಾದಿಕಾಲದಿಂದ ಒಬ್ಬರು ಹೇಳಿ ಮತ್ತೊಬ್ಬರು ಕೇಳಿ ಉಚ್ಚಾರಣೆ ಮಾಡುವುದು. ಆನುಪೂರ್ವೀರಚನೆಯೆಂಬ ಉಚ್ಚಾರಣೆಯಲ್ಲಿ ಸ್ವಾತಂತ್ರ್ಯವಿಲ್ಲದೆ ಇರುವುದೇ ಅಪೌರುಷೇಯತ್ವ. ನಿತ್ಯತ್ವವೆಂದರೆ ಅಕಾರ ಮೊದಲಾದ ಅಕ್ಷರಗಳು ಅನಿತ್ಯಗಳೆಂದೂ ಕಂಠತಾಲ್ವಾದಿಸ್ಥಾನಗಳಿಂದ ಜನಿಸತಕ್ಕವುಗಳೆಂದೂ ಬೌದ್ಧರು ಮತ್ತು ತಾರ್ಕಿಕರು ಹೇಳುವರು. ಹಾಗಾದರೆ ಅಪೌರುಷೇಯತ್ವವು ಉಪಯೋಗವಿಲ್ಲವೆಂದು ಅಕ್ಷರಗಳೆಂಬ ವಿಭುದ್ರವ್ಯಗಳು ನಿತ್ಯವಾಗಿ ಸರ್ವದಾ ಸರ್ವತ್ರ ಇರುತ್ತವೆ. ಕಂಠಾದ್ಯವಯವಸಂಯೋಗದಿಂದ ಅಂಧಕಾರದಲ್ಲಿರುವ ವಸ್ತು ದೀಪದ ಪ್ರಕಾಶದಿಂದ ಕಾಣುವಹಾಗೆ ಕಾಣುವುದೆಂಬ ಅಭಿವ್ಯಕ್ತಿಯೇ ಹೊರತು ಉತ್ಪತ್ತಿಯಿಲ್ಲವೆಂದರ್ಥ. ಇದರಿಂದ ಮೀಮಾಂಸಕರಿಗೆ ಜಗದನಾದಿವಾದಿಗಳೆಂದು ವ್ಯವಹಾರ. ಈ ಜಗತ್ತಿಗೆ ಉತ್ಪತ್ತಿ ಲಯಗಳಿಲ್ಲ, ಶಾಶ್ವತ. ಈಗಿರುವಂತೆ ಯಾವಾಗಲೂ ಇರುವುದು. ಸೂರ್ಯ ಚಂದ್ರ ಆಕಾಶ ಭೂಮಿ ಸಮುದ್ರ ಮೊದಲಾದುವು ನಿತ್ಯವಾಗಿರುವುವು. ಅಲ್ಲಲ್ಲಿ ಅಲ್ಪಾಲ್ಪ ವ್ಯತ್ಯಾಸವೇ ವಿನಾ ಸರ್ವವಿನಾಶವಿಲ್ಲ. ಸರ್ವಾರಂಭವೂ ಇಲ್ಲ.

## ಆಸ್ತಿಕವಾದ

ಈ ಮೀಮಾಂಸಕ ಸಿದ್ಧಾಂತದಲ್ಲಿ ಮೋಕ್ಷವೆಂಬ ಪುರುಷಾರ್ಥವಿಲ್ಲದಿದ್ದರೆ ಈ ವೈದಿಕ ಸಿದ್ಧಾಂತಕ್ಕೂ ಲೋಕಾಯತವೆಂಬ ಚಾರ್ವಾಕ ಸಿದ್ಧಾಂತಕ್ಕೂ ವ್ಯತ್ಯಾಸವಿಲ್ಲ. ನಾಸ್ತಿಕಮತವೇ ಆಗುವುದೆಂದು ಪ್ರಾಭಾಕರರು, ಕುಮಾರಿಲರು ಮೊದಲಾದವರು ಮೋಕ್ಷವನ್ನು ನಿರೂಪಿಸಿ ಮೀಮಾಂಸಾಮತವನ್ನು ಆಸ್ತಿಕದರ್ಶನವಾಗಿ ಮಾಡಿದರು. ಅವರ ಮೋಕ್ಷಸ್ವರೂಪವೂ ಆತ್ಮಸ್ವರೂಪವೂ ಮೋಕ್ಷಸಾಧನಸ್ವರೂಪವೂ ಪ್ರಾಯಃ ತಾರ್ಕಿಕಮತದಂತೆ ಇರುತ್ತದೆ.

ಈ ತಾರ್ಕಿಕಮೀಮಾಂಸಕರು ಆತ್ಮವಸ್ತುವನ್ನು ಉಪನಿಷತ್ತುಗಳ ಮೂಲಕವಾಗಿಯೇ ತಿಳಿದುಕೊಂಡು ಯುಕ್ತಿಯಿಂದ ತಿಳಿದೆವೆಂದು ಜಂಬ ಕೊಚ್ಚಿಕೊಳ್ಳುತ್ತಾರೆಂದು ಶ್ರೀಶಂಕರಾಚಾರ್ಯರು ಉಪನಿಷದ್ಭಾಷ್ಯದಲ್ಲಿ ಬರೆಯುತ್ತಾರೆ. ಹೇಗಾದರೂ ಇವರೂ ಆಸ್ತಿಕರು ದಾರ್ಶನಿಕರಾದರು. ಕುಮಾರಿಲಗ್ರಂಥದಲ್ಲಿ ಈ ವಾಕ್ಯವಿರುವುದು—ಮೀಮಾಂಸೆ ಹಿಂದಿನವರಿಂದ ನಾಸ್ತಿಕಮತವಾಗಿ ಮಾಡಲ್ಪಟ್ಟಿತು. ಅದನ್ನು ಆಸ್ತಿಕಮಾರ್ಗದಲ್ಲಿ ಸೇರಿಸುವುದಕ್ಕಾಗಿ ನಾನು ಪ್ರಯತ್ನಪಡುತ್ತೇನೆಂದು ಶ್ಲೋಕವಾರ್ತಿಕಾರಂಭದಲ್ಲಿರುವುದು.

> ಪ್ರಾಯೇಣೈವ ಹಿ ಮೀಮಾಂಸಾ ಲೋಕೇ ಲೋಕಾಯತೀಕೃತಾ
> ತಾಮಾಸ್ತಿಕಪಥೇ ಕರ್ತುಮಯಂ ಯತ್ನಃ ಕೃತೋ ಮಯಾ ॥

ಆದರೂ ಜೈಮಿನಿ ಶಬರ ಪ್ರಾಭಾಕರ ಕುಮಾರಿಲ ಮೊದಲಾದವರು ನಿರೀಶ್ವರವಾದಿಗಳೆಂದು ಪ್ರಸಿದ್ಧಿಯಿರುವುದು. ಅದರಂತೆ ಇವರ ಗ್ರಂಥಗಳಲ್ಲೂ ಈಶ್ವರನನ್ನು ನಿರಾಕರಿಸಿರುವರು. ಆದರೆ ಆ ಗ್ರಂಥಗಳ ತಾತ್ಪರ್ಯವನ್ನು ನೋಡಿದರೆ ವೇದಪ್ರಾಮಾಣ್ಯಸ್ಥಾಪನೆಗಾಗಿ ಈಶ್ವರನಿರಾಕಾರಣವೇ ಹೊರತು ಈಶ್ವರನಲ್ಲಿ ದ್ವೇಷವಿಲ್ಲ. ವೇದಪ್ರಾಮಾಣ್ಯ ಸಿದ್ಧಿಸಿದರೆ ಮುಂದಕ್ಕೆ ಈಶ್ವರನೂ ಸಿದ್ಧಿಸುತ್ತಾನೆಂದು ತಾತ್ಪರ್ಯವೆಂದು ಇವರನ್ನು ವೇದಾಂತಿಗಳು ತಮ್ಮಲ್ಲಿ ಸೇರಿಸಿಕೊಂಡಿರುವರು.

## ಆಶ್ರಮ

ಕುಮಾರಿಲಗ್ರಂಥಗಳಲ್ಲಿ ಶ್ಲೋಕವಾರ್ತಿಕವೆಂಬ ಭಾಗದಲ್ಲಿ ಈಶ್ವರನಿರಾಕರಣವಿದ್ದರೂ ತಂತ್ರವಾರ್ತಿಕವೆಂಬ ಉತ್ತರಭಾಗದಲ್ಲಿ ಗ್ರಹಸಂಮಾರ್ಜನಾಧಿಕರಣದಲ್ಲಿ ಸಕಲವೇದಾಭಿಮಾನಿಯಾಗಿ ವೇದಪುರುಷನೆಂಬ ಪರಮಾತ್ಮನನ್ನು ಉದಾಹರಿಸಿರುತ್ತಾರೆ. ವ್ಯಾಕರಣಾಧಿಕಾರಣದಲ್ಲಿ ಶ್ರವಣಮನನಜಿಜ್ಞಾಸಾಧ್ಯಾನಾದಿಗಳಿಂದ ಆ ಪುನರಾವೃತ್ತಿರೂಪ ಪರಮಾತ್ಮಪ್ರಾಪ್ತಿಯೆಂಬ ಮೋಕ್ಷ ಸ್ವರೂಪವನ್ನು, ಛಾಂದೋಗ್ಯೋಪನಿಷತ್ತನ್ನು ಮನಸ್ಸಿನಲ್ಲಿಟ್ಟುಕೊಂಡು, ನಿರೂಪಿಸಿರುವರು.

ಆದರೂ ಇವರು ಸಂನ್ಯಾಸಾಶ್ರಮವನ್ನು ಸರ್ವಕರ್ಮಪರಿತ್ಯಾಗವನ್ನೂ ಒಪ್ಪುವವರಲ್ಲ. ಗೃಹಸ್ಥಾಶ್ರಮದಲ್ಲೇ ಯಾಗಾದಿಕರ್ಮಗಳೊಡನೆ ಜ್ಞಾನವನ್ನು ಸಂಪಾದಿಸಿ ಮೋಕ್ಷವನ್ನು ಹೊಂದಬೇಕೆಂದು ಇವರ ಅಭಿಪ್ರಾಯ. ಆದುದರಿಂದ ಛಾಂದೋಗ್ಯೋಪನಿಷತ್ತನ್ನು ಮಾತ್ರ ವಿಚಾರಿಸಿದರೆ ಸಂನ್ಯಾಸಾಶ್ರಮವಿಲ್ಲ. ಈ ಉಪನಿಷತ್ತು ಸಾಮವೇದಕ್ಕೆ ಸೇರಿದುದು. ಸಾಮಗಾಚಾರ್ಯರಾದ ಜೈಮಿನಿ ಶಬರಸ್ವಾಮಿ ಗೌತಮ ಮೊದಲಾದವರು ಗೃಹಸ್ಥಾಶ್ರಮವೇ ಆಶ್ರಮ, ನಾಲ್ಕು ಆಶ್ರಮಗಳಿಲ್ಲವೆಂಬ ಐಕಾಶ್ರಮ್ಯಪಕ್ಷವನ್ನು ಸ್ಥಾಪಿಸಿರುವರು.

ಇದಕ್ಕೆ ಪ್ರತಿಯಾಗಿ ಬಾದರಾಯಣಾಚಾರ್ಯರು ''ನಾಲ್ಕು ಆಶ್ರಮಗಳುಂಟು. ಆದರೂ ಅವರವರ ಇಚ್ಛಾನುಸಾರ ಯಾವ ಆಶ್ರಮವನ್ನಾದರೂ ಆಶ್ರಯಿಸಬಹುದೆಂದು'' ಬ್ರಹ್ಮಸೂತ್ರದಲ್ಲಿ ನಿರೂಪಿಸಿರುವರು. ಮನ್ವಾದಿಸ್ಮೃತಿಕಾರರು ಪ್ರತಿಪುರುಷನೂ ಶತಮಾನಜೀವನದಲ್ಲಿ ನಾಲ್ಕು ಭಾಗಮಾಡಿ ನಾಲ್ಕು ಆಶ್ರಮದಲ್ಲೂ ಇರಬೇಕೆಂದು ಅಭಿಪ್ರಾಯಪಡುವರು. ಈ ಆಶ್ರಮ ವಿಷಯದಲ್ಲಿ ಬಾಧ ವಿಕಲ್ಪ ಸಮುಚ್ಚಯವೆಂದು ಮೂರು ಮತಗಳಾದವು. ಬಾಧ ಪಕ್ಷವು ಜೈಮಿನಿಸಮ್ಮತವು. ವಿಕಲ್ಪಪಕ್ಷವು ಬಾದರಾಯಣಸಮ್ಮತವು. ಸಮುಚ್ಚಯಪಕ್ಷವು ಮನ್ವಾದಿಸಮ್ಮತವು. ವಾತ್ಸ್ಯಾಯನರೂ ನ್ಯಾಯಭಾಷ್ಯದಲ್ಲಿ ನಾಲ್ಕು ಆಶ್ರಮಗಳನ್ನು ಸ್ಥಾಪಿಸಿರುತ್ತಾರೆ. ಈ ವಿಚಾರವೆಲ್ಲವೂ ಯಾಜ್ಞವಲ್ಕ್ಯಮಿತಾಕ್ಷರೆಯಲ್ಲಿ ವಿಜ್ಞಾನೇಶ್ವರನಿಂದ ತಿಳಿದುಬರುತ್ತವೆ.

ಇದರಿಂದ ಛಾಂದೋಗ್ಯೋಪನಿಷತ್ತು ಗೃಹಸ್ಥಾಶ್ರಮಕ್ಕೆ ಸೇರಿದುದು. ಬೃಹದಾರಣ್ಯಕೋಪನಿಷತ್ತು ಸಂನ್ಯಾಸಾಶ್ರಮಕ್ಕೆ ಸೇರಿದುದು. ಅವರಲ್ಲೇ ಸ್ಪಷ್ಟವಾಗಿ ಸಂನ್ಯಾಸಾಶ್ರಮನಿರೂಪಣವನ್ನು ಶ್ರೀಶಂಕರಾಚಾರ್ಯರು ವಿಸ್ತಾರವಾಗಿ ನಿರೂಪಿಸಿರುವರು. ಯಾಜ್ಞವಲ್ಕ್ಯ ಮಹರ್ಷಿಯ ಚರಿತ್ರೆಯಲ್ಲೂ ಗೃಹಸ್ಥಾಶ್ರಮದಲ್ಲಿ ಸಂನ್ಯಾಸಾಶ್ರಮವನ್ನು ಸ್ವೀಕರಿಸಿದರೆಂದು ಆ ಉಪನಿಷತ್ತಿನಿಂದಲೇ ತಿಳಿದುಬರುತ್ತದೆ. ಆದುದರಿಂದ ಸಕಲೋಪನಿಷತ್ತುಗಳಿಗೂ ಒಂದರ್ಥದಲ್ಲಿ ವಿರೋಧವಿಲ್ಲದೆ ತಾತ್ಪರ್ಯವನ್ನು ನಿರ್ಣಯಿಸುವವರು ಆಶ್ರಮವಿಷಯದಲ್ಲಿ ವಿಕಲ್ಪ ಪಕ್ಷವನ್ನೇ ಆಶ್ರಯಿಸಬೇಕು.

**ವರ್ಣ**

ವರ್ಣವಿಚಾರದಲ್ಲಿ ಬ್ರಾಹ್ಮಣತ್ವಾದಿಜಾತಿಗಳು ಪ್ರತ್ಯಕ್ಷ. ಆದರೂ ಅದಕ್ಕೆ ಸಂತತಿಜ್ಞಾನವೂ ಮಾತಾಪಿತೃಜ್ಞಾನವೂ, ಅಂಧಕಾರದಲ್ಲಿರುವ ವಸ್ತುಗಳ ಪ್ರತ್ಯಕ್ಷಕ್ಕೆ ದೀಪಾದಿಗಳು ಸಹಕಾರಿಗಳಾಗಿರುವ ಹಾಗೆ, ಸಹಕಾರಿಗಳು, ವಿಚಾರಿಸಿ ಸಾವಕಾಶವಾಗಿ ತಿಳಿದಮಾತ್ರಕ್ಕೆ ಪ್ರತ್ಯಕ್ಷವಲ್ಲದೇ ಹೋಗುವುದಿಲ್ಲ. ಕೆಲವು ಗ್ರಾಮಾದಿವಸ್ತುಗಳನ್ನು ಪ್ರಯತ್ನಪೂರ್ವಕವಾಗಿ ಪರ್ವತಶಿಖರವನ್ನು ಹತ್ತಿ ನೋಡುತ್ತೇವೆ. ಆದ ಮಾತ್ರಕ್ಕೆ ಗ್ರಾಮನಗರಾದಿಗಳು ಪ್ರತ್ಯಕ್ಷಗಳಿಲ್ಲವೇ ? ಗರ್ಭಗುಡಿಯಲ್ಲಿ ಪ್ರವೇಶಮಾಡಿದ ಕೂಡಲೇ ದೇವರು ಕಾಣುವುದಿಲ್ಲ. ಸ್ವಲ್ಪ ಕಾಲವಾದಮೇಲೆ ಕಾಣುತ್ತಾರೆ. ಆದ ಮಾತ್ರಕ್ಕೆ ದೇವರು ಪ್ರತ್ಯಕ್ಷವಲ್ಲವೇ ? ತುಪ್ಪವನ್ನು ವಾಸನೆಯಿಂದ ಎಣ್ಣೆಗಿಂತಲೂ ಬೇರೆ ವಸ್ತುವೆಂದು ನಿಧಾನವಾಗಿ ತಿಳಿಯುತ್ತೇವೆ. ಹೀಗೆ ಅನೇಕ ಸಂದರ್ಭಗಳಲ್ಲಿ ಚಿನ್ನ ತಾಮ್ರ ವಜ್ರ ಪುಷ್ಯರಾಗ ಮೊದಲಾದ ವಸ್ತುಗಳ ವಿವೇಕವು ನಿಧಾನವಾಗಿ ಆಗುತ್ತದೆ. ಅದರಂತೆ ಬ್ರಾಹ್ಮಣ ಕ್ಷತ್ರಿಯಾದಿ ಜಾತಿಗಳು ನಿಧಾನವಾಗಿ ಕಣ್ಣಿಗೆ ಕಾಣತಕ್ಕ ಜಾತಿಗಳೆಂದು ಕುಮಾರಿಲಾದಿಗಳ ನಿರ್ಣಯ.

ಇದಕ್ಕೆ ಪ್ರತಿಕಕ್ಷಿಯಾಗಿ ಬ್ರಾಹ್ಮಣತ್ವಾದಿಜಾತಿಗಳು ವಿಶುದ್ಧ ಮಾತಾಪಿತೃಗಳಲ್ಲಿ ಜನನವೇ ವಿನಾ ಬೇರೆ ಅಲ್ಲ. ಅದು ಅವರಿಗೇ ಅನೇಕ ಸಂದರ್ಭಗಳಲ್ಲಿ ಪ್ರತ್ಯಕ್ಷವಲ್ಲ. ತಾಯಿಗೆ ಜನಿಸುವಾಗ ಪ್ರತ್ಯಕ್ಷವೇ ವಿನಾ ಗರ್ಭ

ಧಾರಣ ಸಮಯದಲ್ಲಿ ಅವ್ಯವಸ್ಥರಿಗೆ ಅದೂ ಪ್ರತ್ಯಕ್ಷವಲ್ಲ. ಹೀಗಿರುವಾಗ ಬ್ರಾಹ್ಮಣತ್ವಾದಿ ವಿಜ್ಞಾನವು ಅನಾದಿಕಾಲದ ವ್ಯವಹಾರಮೂಲಕವಾಗಿ ಬರುವ ಮಾನಸಜ್ಞಾನವೇ ವಿನಾ ಇಂದ್ರಿಯಗಳಿಂದ ಬರುವ ಪ್ರತ್ಯಕ್ಷವಲ್ಲಿ. ಶಿಖೆ ಪುಂಡ್ರ ಆಚಾರ ಯಜ್ಞೋಪವೀತ ಮೊದಲಾದುವು ಹೇಗೆಬೇಕಾದರೂ ಇರುವುವು. ಈ ವ್ಯವಹಾರಕ್ಕೆ ಅನಾದಿಕಾಲದಿಂದ ಬಂದಿರುವ ವಾರಾದಿವ್ಯವಹಾರವನ್ನು ಉದಾಹರಣೆಯಾಗಿ ಹೇಳುತ್ತಾರೆ. ಭಾನುವಾರ ಸೋಮವಾರ ಮೊದಲಾದ ವಾರವ್ಯವಹಾರವು ಸರ್ವದೇಶದಲ್ಲೂ ನಡೆಯುತ್ತವೆ. ಪರಸ್ಪರ ವೈಲಕ್ಷಣ್ಯವು ಯಾವಾಗಲೂ ತಿಳಿಯಲು ಸಾಧ್ಯವಿಲ್ಲ. ಅದರಂತೆ ಅನಾದಿ ಕಾಲದಿಂದ ಸಂತತಿಯಲ್ಲಿ ಜನಿಸಿದರೆಂದು ತಿಳಿದು ವ್ಯವಹರಿಸುತ್ತಾರೆ. ಅದಕ್ಕಾಗಿ ಸಂತತಿಸಂರಕ್ಷಣೆ ಬಹುಮುಖವಾಗಿ ನಡೆಯುತ್ತದೆ. ಆದರೂ ಸ್ವಲ್ಪ ವ್ಯತ್ಯಾಸವು ನಡೆಯಬಹುದು. ಅದು ಅನಂತರ ಕಾಲದಲ್ಲಿ ಕ್ರಮ ಕ್ರಮವಾಗಿ ಶುದ್ಧವಾಗುವುದು. ಪಶು ಪಕ್ಷಿ ಮನುಷ್ಯ ಮೃಗ ಮೊದಲಾದ ವಸ್ತುಗಳಲ್ಲಿ ಅವಯವಸಂಘಾತವೆಂಬ ಆಹಾರಕ್ಕಿಂತಲೂ ಬೇರೆಯಾದ ಜಾತಿ ಇಲ್ಲವೇ ಇಲ್ಲ. ಇಲ್ಲದಿರುವ ಜಾತಿಯೆಂಬ ಒಂದು ವಸ್ತುವನ್ನು ಕಲ್ಪನೆಮಾಡಿ ಅದು ಕಣ್ಣಿಗೆ ಕಾಣುತ್ತೆಂದು ಹೇಳುವುದು ಲೋಕಾನುಭವವಿರುದ್ಧವೆಂದು ಬರೆಯುತ್ತಾರೆ.

ಆದರೆ ಬ್ರಾಹ್ಮಣಾದಿ ವರ್ಣ ವಿಭಾಗವು ಯಾವಾಗ ಪ್ರಾರಂಭವಾಯಿತೆಂದು ವಿಚಾರಿಸಿದರೆ ಮಹಾಭಾರತಾದಿ ಪುರಾಣಗಳಿಂದ ಹೀಗೆ ತಿಳಿದು ಬರುತ್ತದೆ—ಪೂರ್ವಕಾಲದಲ್ಲಿ ಎಲ್ಲರೂ ಬ್ರಾಹ್ಮಣವಾಗಿಯೇ ಇದ್ದರು ಎಂದರೆ ವರ್ಣವಿಭಾಗವಿರಲಿಲ್ಲ. ಕ್ರಮಕ್ರಮವಾಗಿ ವಿದ್ಯಾಭ್ಯಾಸ ಮೊದಲಾದ ವಿಷಯದಲ್ಲೂ ಸರ್ವರೂ ಸಮರಾಗಿದ್ದರು. ಈಗಿರುವಂತೆ ಕಾಮ ಕ್ರೋಧಗಳು ಹೆಚ್ಚಾಗಿರಲಿಲ್ಲ. ಪ್ರಾಯಶಃ ತೃಪ್ತರಾಗಿದ್ದರು. ಪರಸ್ಪರ ಸಹಾಯದಲ್ಲಿ ಆಸಕ್ತರಾಗಿದ್ದರು. ಅನಾದಿಕಾಲದಿಂದ ಬಂದ ಜ್ಞಾನವನ್ನು ಪ್ರಚಾರಪಡಿಸುತ್ತ, ವೃದ್ಧಿಪಡಿಸುತ್ತ ಕೆಲವರಿದ್ದರು. ಜನರ ಯೋಗಕ್ಷೇಮದಲ್ಲಿ ನಿರತರಾಗಿ ದುಷ್ಟಶಿಕ್ಷೆಯಲ್ಲಿ ಕೆಲವರು ಆಸಕ್ತರಾಗಿದ್ದರು, ಕೆಲವರು ಕೃಷಿ ವಾಣಿಜ್ಯ ಮೊದಲಾದ ವ್ಯಾಪಾರದಲ್ಲಿದ್ದರು. ಯಾವುದಕ್ಕೂ ಶಕ್ತಿಯಿಲ್ಲದವರು ಇತರರ ಸೇವೆಯಲ್ಲಿದ್ದರು. ಅಂತೂ ಪರಸ್ಪರ ಹಿತಚಿಂತನೆಯಲ್ಲಿ

ದ್ದರು. ಬರುಬರುತ್ತ ಕಾಲಕ್ರಮದಲ್ಲಿ ಅಸೂಯೆ ಪ್ರಬಲವಾಯಿತು ಸ್ವಧರ್ಮದಲ್ಲಿ ಶ್ರದ್ಧೆ ಕಡಮೆಯಾಯಿತು. ಆಚಾರವ್ಯತ್ಯಾಸದಿಂದ ಪರಸ್ಪರ ಸಂಬಂಧ ದೂರವಾಗುತ್ತಾ ಕೂಟಗಳು ಏರ್ಪಾಡಾಗಿ ಗುಂಪು ಗುಂಪಾಗಿ ವೃದ್ಧಿಯಾಗುತ್ತಿದ್ದರು.

ಆ ಗುಂಪುಗಳಲ್ಲಿ ಗುಣವೂ ಕರ್ಮವೂ ಬೇರೆಬೇರೆಯಾಗಿ ಸ್ಪಷ್ಟವಾದ ಭೇದಕ್ಕೆ ಅವಕಾಶವಾಯಿತು. ಶರೀರದ ಬಣ್ಣ ಸಂತತಿ ಕ್ರಮವಾಗಿ ಬದಲಾಯಿಸಿತು. ಆವಾಗ ಶುಕ್ಲ ರಕ್ತ ಪೀತ ಕೃಷ್ಣ ಎಂಬ ನಾಲ್ಕು ಬಣ್ಣಗಳಿಂದ ಜಾತಿ ವಿಭಾಗವೆಂದು ಮಹಾಭಾಷ್ಯದಿಂದ ತಿಳಿದುಬರುತ್ತದೆ. ವಿದ್ಯಾವಿಚಾರದಲ್ಲಿ ಆಲಸ್ಯವೂ ಅರ್ಥಕಾಮ ವಿಷಯದಲ್ಲಿ ಉತ್ಸಾಹವೂ ವಿಭಾಗಕ್ಕೆ ಮೂಲ ಕಾರಣ. ಅನೇಕ ಸಂದರ್ಭಗಳಲ್ಲಿ ಮಹಾಭಾರತದಲ್ಲೇ ವರ್ಣವಿಭಾಗವನ್ನು ವಿವರಿಸಿರುತ್ತಾರೆ. ಮುಖ್ಯವಾಗಿ ಉತ್ಪತ್ತಿಯೆಂಬ ಜಾತಿವಿಭಾಗವು ಶಾರೀರವಾದ ಸತ್ತ್ವ ರಜಸ್ಸು ತಮಸ್ಸು ಎಂಬ ಗುಣಮೂಲಕವೆಂದು ನಿರ್ಣಯವು. ಇದರ ಶಾರೀರ ಜಾತಿವಿಭಾಗ. ಇದಲ್ಲದೆ ಮಾನಸಜಾತಿ ವಿಭಾಗವು ಶಾಸ್ತ್ರಗಳಲ್ಲಿ ಬಹುವಾಗಿರುವುದು. ಜ್ಞಾನ ದಯೆ ದಾಕ್ಷಿಣ್ಯ ಮೊದಲಾದ ಕಲ್ಯಾಣಗುಣಗಳು ಬ್ರಾಹ್ಮಣತ್ವ. ಅಂತಹ ಗುಣವುಳ್ಳ ಚಂಡಾಲನಾದರೂ ಬ್ರಾಹ್ಮಣಶಬ್ದಕ್ಕೆ ಗೋಚರನಾಗುವನು. ಜಾತಿ ಬ್ರಾಹ್ಮಣನು ದುರ್ನಡತೆಯಲ್ಲಿದ್ದರೆ ಚಂಡಾಲಶಬ್ದಕ್ಕೆ ಗೋಚರನಾಗುವನು. ಜಾತಿಬ್ರಾಹ್ಮಣನಿಗಿಂತಲೂ ಗುಣಬ್ರಾಹ್ಮಣನು ಪೂಜ್ಯನೆಂದು ಸಿದ್ಧಾಂತವಿರುವುದು.

## ವೇದಾಧಿಕಾರ

ವೇದವು ಋಗ್ವೇದ ಯಜುರ್ವೇದ ಸಾಮವೇದ ಎಂದು ಮೂರು ವಿಧ. ಮೂರಕ್ಕೂ ಸೇರಿ ತ್ರಯೀ ಎಂದು ಹೆಸರು. ಯಾಗಕ್ಕೆ ಈ ಮೂರು ವೇದಗಳೇ ಬೇಕಾಗಿರುವುವು. ಅಥರ್ವಣವೇದವು ಯಾಗಕ್ಕೆ ಉಪಯೋಗವಿಲ್ಲ. ಅದರಲ್ಲಿ ಶಾಂತಿ ಪುಷ್ಟಿ ಮೊದಲಾದ ಕರ್ಮಗಳ ವಿಧಿಯಿರುತ್ತದೆ. ಆದುದರಿಂದ ಮೂರು ವೇದಕ್ಕೆ ಸಮಾನವಾದುದಲ್ಲವೆಂಬಭಿಪ್ರಾಯವನ್ನು ಕುಮಾರಿಲರು ಮೊದಲಾದವರು ಸೂಚಿಸಿರುತ್ತಾರೆ. ಇದಕ್ಕೆ ಪ್ರತಿಯಾಗಿ ಇತರರು ಹೇಳುವುದೆಂತೆಂದರೆ—ಯಾಗದಲ್ಲಿ ನಾಲ್ಕು ಋತ್ವಿಕ್ಕುಗಳು ಮುಖ್ಯವಾಗಿರ

ಬೇಕು. ಹೋತನೆಂಬುವನು ಋಗ್ವೇದವನ್ನು ಹೇಳುತ್ತಾನೆ. ಉದ್ಗಾತನು ಸಾಮವೇದಗಾನ ಮಾಡುತ್ತಾನೆ. ಅಧ್ವರ್ಯು ಎಂಬುವನು ಯಜುರ್ವೇದ ಮೂಲಕ ಹೋಮ ಮೊದಲಾದುದನ್ನು ಮಾಡುತ್ತಾನೆ. ಬ್ರಹ್ಮನೆಂಬುವನು ಅಥರ್ವಣವೇದವನ್ನು ತಿಳಿದವನು, ಸರ್ವಜ್ಞನಾಗಿ ಇವುಗಳೆಲ್ಲವೂ ಸರಿಯಾಗಿ ನಡೆಯುತ್ತವೆಯೋ ಇಲ್ಲವೋ ಎಂದು ನೋಡುತ್ತ, ತಪ್ಪಿದುದನ್ನು ತಿದ್ದುತ್ತ, ಯಾಗವನ್ನು ಮುಖ್ಯವಾಗಿ ಪೂರ್ತಿ ಮಾಡಿಸುವವನು. ಅವನಿಗೆ ನಾಲ್ಕು ವೇದಗಳೂ ತಿಳಿದಿರಬೇಕು. ವೇದಗಳಲ್ಲಿ ಅಥರ್ವಣವೇದವೇ ಮುಖ್ಯ. ಆ ವೇದಕ್ಕೂ ಶ್ರೌತಸೂತ್ರಗಳಿವೆ. ಅವುಗಳ ಪ್ರಕಾರ ಯಾಗಗಳೂ ಇವೆ. ಬರಿಯ ದ್ವೇಷದಿಂದ ಅಥರ್ವಣವೇದಕ್ಕೆ ಅಪಕರ್ಷವನ್ನು ಹೇಳುವುದು—ಎಂದು ಬರೆಯುತ್ತಾರೆ. ಈ ವಿಚಾರದ 'ನ್ಯಾಯಮಂಜರೀ ಮೊದಲಾದ ಗ್ರಂಥಗಳಲ್ಲಿ ಬಹುವಿಸ್ತಾರವಾಗಿರುವುದು.

ಈ ವೇದಗಳ ಅಧ್ಯಯನವಿಷಯದಲ್ಲಿ ಎಲ್ಲರಿಗೂ ಎಲ್ಲಾ ವೇದಗಳೂ ಬೇಕಾಗಿದ್ದರೂ ವಂಶಪಾರಂಪರ್ಯವಾಗಿ ಯಾವ ವೇದದಲ್ಲಿ ಯಾವ ಶಾಖೆಯನ್ನು ಅಧ್ಯಯನ ಮಾಡುತ್ತಿದ್ದರೋ ಅವರವರು ಆಯಾ ಶಾಖೆಯನ್ನು ಮೊದಲು ಅಧ್ಯಯನ ಮಾಡಿ ಅವಕಾಶವಿದ್ದರೆ ಇತರ ಶಾಖೆಗಳನ್ನು ಕಲಿಯಬಹುದೆಂದು ವಿಧಾಯಕ ಮಾಡಿರುವರು. ಪ್ರತಿವೇದಕ್ಕೂ ಬೇರೆಬೇರೆ ಗುರುಗಳಲ್ಲಿ ಉಪನಯನವಾಗಬೇಕೆಂದು ಒಂದು ಸಿದ್ಧಾಂತ. ಒಂದು ವೇದಕ್ಕೆ ಉಪನಯನವಾಗಿದ್ದರೆ ಇತರ ವೇದಗಳಿಗೆ ಬೇರೆ ಉಪನಯನವಾಗಬೇಕಾಗಿಲ್ಲವೆಂದು ಮತ್ತೊಂದು ಸಿದ್ಧಾಂತ.

ಉಪನಯನವೆಂದರೆ ವಿದ್ಯಾರ್ಥಿಗೆ ಶ್ರುತಿಯಲ್ಲಿ ಹೇಳಲ್ಪಟ್ಟಿರುವ ಸಂಸ್ಕಾರ, ಶುದ್ಧಿ. ಈ ಉಪನಯನವನ್ನು ಮಾಡುವುದಕ್ಕೆ ಬ್ರಾಹ್ಮಣರಿಗೇ ಅಧಿಕಾರ, ಹಕ್ಕು. ಏಕೆಂದರೆ, ಉಪನಯನ ಮಾಡಿ ವೇದಾಧ್ಯಯನವನ್ನು ಮಾಡಿಸುವವನು ಬ್ರಾಹ್ಮಣನು, ಅವನಿಗೆ ಅದು ಜೀವಿಕೆ. ಇದರಿಂದ ಅವರವರ ವೃತ್ತಿವ್ಯವಸ್ಥೆಯೇ ಹಿಂದೆ ವರ್ಣವ್ಯವಸ್ಥೆಯಾಗಿತ್ತು. ಈಗ ವೃತ್ತಿಪರಿತ್ಯಾಗದಿಂದಲೂ ಸಾಂಕರ್ಯದಿಂದಲೂ ವರ್ಣವ್ಯವಸ್ಥೆ ಅವ್ಯವಸ್ಥಿತವಾಗಿ ಉತ್ಪತ್ತಿ ಮಾತ್ರದಿಂದ ವ್ಯವಹಾರದಲ್ಲಿರುವುದು. ವರ್ಣಾಶ್ರಮಧರ್ಮವ್ಯವಸ್ಥೆ ವ್ಯಾಕುಲವಾಯಿತೆಂದು ಕುಮಾರಿಲ ಶಂಕರಾದಿಗಳು ಸ್ಪಷ್ಟವಾಗಿ

ಬರೆದಿರುತ್ತಾರೆ. ಹಾಗೆ ವ್ಯಾಕುಲವಾಗಿದ್ದರೂ ಯಥಾಶಕ್ತಿ ಅನುಷ್ಠಾನ ಮಾಡಬೇಕೆಂದು ಅಭಿಪ್ರಾಯವನ್ನು ಸೂಚಿಸಿರುತ್ತಾರೆ.

## ಸ್ತ್ರೀಯರು

ಇಂತಹ ಉಪನಯನಪೂರ್ವಕ ವೇದಾಧ್ಯಯನ ವಿಷಯದಲ್ಲಿ ಸ್ತ್ರೀ ಶೂದ್ರರಿಗೆ ಉಪನಯನವೂ ವೇದಾಧ್ಯಯನವೂ ಕೂಡದೆಂದು ಸಾಮಾನ್ಯ ವಾಗಿ ಅಭಿಪ್ರಾಯವೂ ಅನುಷ್ಠಾನವೂ ಈಗಿರುತ್ತದೆ. ಆದರೆ ಆರ್ಯ ಸ್ತ್ರೀಯರು ಶೂದ್ರಸಮರಲ್ಲ. ಅವರಿಗೆ ವಿವಾಹಾದಿ ಸಕಲ ಸಂಸ್ಕಾರಗಳೂ ಪುರುಷರಂತೆ ವೇದೋಕ್ತವಾಗಿ ನಡೆಯುತ್ತವೆ. ಅವರು ವೇದಮಂತ್ರಶ್ರವಣ ವನ್ನು ಮಾಡುತ್ತಲಿದ್ದಾರೆ. ಅಗ್ನ್ಯಾಧಾನಾಧಿ ಕಾಲದಲ್ಲಿ ಬೇಕಾದ ಮಂತ್ರ ಗಳನ್ನು ಕಲಿಸಬೇಕೆಂದು ವಿಧಿಯಿರುವುದು. ಯಾಗದಲ್ಲಿ ಜೈಮಿನಿ ಪುರುಷ ರಂತೆ ಸಮಾಧಿಕಾರವನ್ನು ನಿರ್ಣಯಿಸಿರುತ್ತಾರೆ. ಪೂರ್ವಕಾಲದಲ್ಲಿ ಉಪ ನಯನವೂ ವೇದಾಧ್ಯಯನವೂ ಅವರಿಗಿದ್ದುವೆಂದು ಸಕಲ ಧರ್ಮಶಾಸ್ತ್ರ ಕಾರರೂ ಬರೆಯುತ್ತಾರೆ. ಅನೇಕ ಸ್ತ್ರೀಯರು ವೇದಾಧ್ಯಯನವನ್ನು ಮಾಡಿಸುತ್ತಿದ್ದರೆಂದು ಪಾಣಿನಿ ಮೊದಲಾದವರ "ಉಪಾಧ್ಯಾಯಾ, ಉಪಾ ಧ್ಯಾಯೀ, ಆಚಾರ್ಯ" ಮೊದಲಾದ ವ್ಯವಹಾರದಿಂದ ತಿಳಿದುಬರುತ್ತದೆ. ಉಪಾಧ್ಯಾಯಾ, ಆಚಾರ್ಯ ಎಂದರೆ ಸಾಕ್ಷಾತ್ ಉಪಾಧ್ಯಾಯತ್ವವನ್ನೂ ಆಚಾರ್ಯತ್ವವನ್ನೂ ವಹಿಸಿರುವವಳೆಂದರ್ಥ. ಉಪಾಧ್ಯಾಯ ಪತ್ನೀ ಎಂಬ ಅರ್ಥದಲ್ಲಿ ಉಪಾಧ್ಯಾಯಿನೀ. ಆಚಾರ್ಯಾಣೀ ಎಂದು ವ್ಯವಹಾರ. ಪುರುಷರಿಗೆ ಸಮವಾಗಿ ಪಿತ್ರಾರ್ಜಿತ ದಾಯಾಧಿಕಾರವನ್ನು ಯಾಸ್ಕರು ವೇದ ವ್ಯಾಖ್ಯಾನದಲ್ಲಿ ಬರೆಯುತ್ತಾರೆ.

ಹೀಗೆ ವೈದಿಕಲೌಕಿಕ ಸರ್ವಾಧಿಕಾರವಿರುವುದರಿಂದಲೇ ಹಾರೀತ ಮೊದಲಾದ ಸ್ಮೃತಿಕಾರರು"ನ ಶೂದ್ರ ಸಮಾಃ ಸ್ತ್ರೀಯಃ"ಎಂದು ಬರೆಯು ತ್ತಾರೆ, ಶೂದ್ರಸಮರಾಗಿದ್ದರೆ ಅವರ ಉದರದಲ್ಲಿ ಬ್ರಾಹ್ಮಣರು ಹೇಗೆ ಜನಿಸುವರೆಂದು ಹೇಳಿದ್ದಾರೆ. ಸ್ತ್ರೀಯರಿಗೆ ಸಂನ್ಯಾಸಾಶ್ರಮ ಸ್ವೀಕಾರ ವುಂಟೆಂದು ಬೋಧಾಯನ ಧರ್ಮಸೂತ್ರಕಾರರು ಹೇಳಿದ್ದಾರೆಂದು ಮಸ್ಕರಿ

ಭಾಷ್ಯದಲ್ಲಿರುತ್ತದೆ, ಬ್ರಾಹ್ಮಣಕುಲದ ಅನೇಕ ಸಹಸ್ರ ಸ್ತ್ರೀಯರು ಕೌಮಾರ ಬ್ರಹ್ಮಚಾರಿಣಿಯರಾಗಿದ್ದು ಸಂತತಿ ವೃದ್ಧಿಮಾಡದೆ ಸ್ವರ್ಗಕ್ಕೆ ಹೋಗಿದ್ದಾರೆಂದು ಮನುಸ್ಮೃತಿಯಲ್ಲಿ.

ಅನೇಕಾನಿ ಸಹಸ್ರಾಣಿ ಕೌಮಾರಬ್ರಹ್ಮಚಾರಿಣಾಮ್
ದಿವಂ ಗತಾನಿ ವಿಪ್ರಾಣಾಮಕೃತ್ವಾ ಕುಲಸನ್ತತಿಮ್ ॥

ಎಂದಿರುವುದು. ಹೀಗೆ ಸ್ತ್ರೀಯರಿಗೆ "ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ" ಎಂದು ಭಗವದ್ಗೀತೆಯಲ್ಲಿ ಭಕ್ತಿಪೂರ್ವಕ ಭಗವಧಾಶ್ರಯಣವು ಹೇಳಲ್ಪಟ್ಟಿರುವುದು.

ಮತ್ತು ಧರ್ಮಶಾಸ್ತ್ರದ ಪ್ರಕಾರ ವರ್ಣವಿಭಾಗವು ಸ್ತ್ರೀ ಮೂಲಕವಾಗಿರುತ್ತದೆ. ಪೂರ್ವದಲ್ಲಿ ಬೀಜಪ್ರಾಧಾನ್ಯವಿತ್ತು. ಪ್ರಕೃತದಲ್ಲಿ ಕ್ಷೇತ್ರಪ್ರಾಧಾನ್ಯವೇ ವ್ಯವಹಾರಕ್ಕೆ ಮೂಲಕಾರಣವಾಗಿರುತ್ತದೆ. ಕೆಲವು ಸಂದರ್ಭಗಳಲ್ಲಿ ''ಮಾತೃತೋಜಾತಿವ್ಯವಸ್ಥಾ'' ಎಂದು ಸ್ಮೃತಿಕಾರರು ಬರೆಯುತ್ತಾರೆ. ಆದುದರಿಂದ ಧರ್ಮದ ವಿಷಯದಲ್ಲಿ ಸ್ತ್ರೀಯರಿಗೆ ಸರ್ವಾಧಿಕಾರವುಂಟು. ಉಪನಯನ ಸ್ಥಾನದಲ್ಲಿ ವಿವಾಹವು ನಿಂತಿದೆ. ಕೇರಲಾದಿ ದೇಶದಲ್ಲಿ ವಿವಾಹಕ್ಕೆ ಪೂರ್ವ ಯಥೋಚಿತ ಉಪನಯನ ನಡೆಯುತ್ತದೆಂದು ಕೇಳಲ್ಪಡುತ್ತದೆ.

ಕಲ್ಪಾಂತರ ಪ್ರಸಕ್ತಿಯಿಲ್ಲದೆ ಹಾರೀತಸ್ಮೃತಿಯಲ್ಲಿರುವುದೆಂತೆಂದರೆ- ಸ್ತ್ರೀಯರು ಬ್ರಹ್ಮವಾದಿನಿಗಳು, ಸದ್ಯೋವಧುಗಳು ಎಂದು ಎರಡು ಬಗೆ. ಬ್ರಹ್ಮವಾದಿನಿಗಳಿಗೆ ಉಪನಯನ ವೇದಾಧ್ಯಯನ ಮೊದಲಾದ ನಿಯಮಗಳು, ಸದ್ಯೋವಧುಗಳಿಗೆ ವಿವಾಹ ಸಮಯ ಪ್ರಾಪ್ತವಾದರೆ ಯಥೋಚಿತ ಉಪನಯನ ಮಾತ್ರವನ್ನು ಮಾಡಬೇಕೆಂದು ವಿಧಿಸಿರುವರು. ಮತ್ತು ಪ್ರಾಚೀನ ಕಾಲದಲ್ಲಿ ಅನುಷ್ಠಾನದಲ್ಲಿ ಕುಮಾರಿಯರಿಗೆ ಉಪನಯನ ಇತ್ತು. ವೇದಾಧ್ಯಯನದಲ್ಲಿ ತಂದೆ, ಅಣ್ಣ ಅಥವಾ ತಂದೆಯ ಅಣ್ಣ ತಮ್ಮಂದಿರು —ಇವರುಗಳೇ ಉಪಾಧ್ಯಾಯರಾಗಿರಬೇಕು. ತಮ್ಮ ಮನೆಯಲ್ಲಿಯೇ ಭಿಕ್ಷಾಚರಣೆ ನಡೆಯಬೇಕು. ಕೃಷ್ಣಾಜಿನ, ಜಟಾಧಾರಣ ಮೊದಲಾದ ವಿಷಯಗಳನ್ನು ತಿಳಿಸುವ ಯಮಧರ್ಮಶಾಸ್ತ್ರದ ವಚನಗಳನ್ನು ಸಕಲ ಗ್ರಂಥಕಾರರೂ ಉದಾಹರಿಸುತ್ತಾರೆ.

ಜಾತಕರ್ಮಾದಿ ಸಂಸ್ಕಾರಗಳನ್ನು ಪುರುಷ ಶಿಶುಗಳಿಗೆ ಮಾಡುವ ಹಾಗೆ ಪ್ರೀತಿಪೂರ್ವಕವಾಗಿ ನಡೆಸುತ್ತಲಿದ್ದಾರೆ. ಪುರುಷರ ಉಪನಯನ ಬ್ರಾಹ್ಮಣ್ಯಕ್ಕೆ ಮಾತ್ರ ಉಪಯೋಗವಾಗಿದೆ. ವೇದಾಧ್ಯಯನ ನಿಯಮ ಗಳನ್ನು ಕೇಳಬೇಕಾಗಿಲ್ಲ.

ಇದರಿಂದ ಪೂರ್ವಕಾಲದಲ್ಲಿ ಪುರುಷರಂತೆ ಸ್ತ್ರೀಯರಿಗೆ ಉಪನಯನ ವೇದಾಧ್ಯಯನ ಮೊದಲಾದುವು ಇದ್ದುವು. ಅನಂತರ ಕಾಲದಲ್ಲಿ ಉಪ ನಯನ ಮಾತ್ರ ಮಾಡಿ ವಿವಾಹವನ್ನು ಮಾಡುತ್ತಿದ್ದರು. ಈಗ ಉಪ ನಯನವೆಂಬ ಸಂಸ್ಕಾರವಿಲ್ಲದೇ ವಿವಾಹ ನಡೆಯುತ್ತದೆ. ಆ ವಿವಾಹವೂ ಉಪನಯನ ಕಾಲಾತೀತಕಾಲದಲ್ಲಿ ನಡೆಯುತ್ತದೆ. ಹೀಗೆ ಅಸಂಸ್ಕೃತ ರಾಗಿ ಅಪರಿಶುದ್ಧರಾಗಿರುವುದೂ ಆರ್ಯಕುಲದಲ್ಲಿ ಅನಾರ್ಯರನ್ನಾಗಿ ಮಾಡುವುದೂ ಶಾಸ್ತ್ರ ಸಮ್ಮತವಲ್ಲ, ಯುಕ್ತವೂ ಅಲ್ಲ. ಇದರಿಂದ ಪ್ರಾಚೀನ ಕಾಲದ ವಿವಾಹ ವಿಧಿ ವಿವಾಹ ಮಂತ್ರಾರ್ಥಗಳಿಗೆ ಅನುಸಾರವಾಗಿತ್ತೆಂದು ಹೆಚ್ಚಾಗಿ ಹೇಳಬೇಕಾಗಿಲ್ಲ.

**ಉಪನಯನಕಾಲಾತೀತ**

ಉಪನಯನ ವಿಷಯದಲ್ಲಿ ಆಪಸ್ತಂಬಾದಿ ಮಹರ್ಷಿಗಳ ಕಾಲದಲ್ಲಿದ್ದ ವಿಶೇಷಾಂಶವು ಅವರ ಧರ್ಮಸೂತ್ರದಿಂದ ಸ್ಪಷ್ಟಪಡುತ್ತದೆ. ಅದೆಂತೆಂದರೆ —ಆರ್ಯಪುರುಷರಿಗೆ ಉಪನಯನ ಕಾಲವನ್ನು ಹೇಳಿ ಕಾಲಾತೀತವಾದರೆ ಪ್ರಾಯಶ್ಚಿತ್ತವನ್ನು ಹೇಳಿ, ತಂದೆಗೆ ಉಪನಯನವಿಲ್ಲದೆ ಮಗನಿಗೆ ಉಪ ನಯನ ಮಾಡಬೇಕಾಗಿದ್ದರೆ ಪ್ರಾಯಶ್ಚಿತ್ತಪೂರ್ವಕ ಉಪನಯನವನ್ನು ವಿಧಿಸಿದ್ದಾರೆ. ಹಾಗೆಯೇ ತಂದೆಯ ತಂದೆಗೂ ಉಪನಯನವಾಗದಿದ್ದರೆ ಅಧಿಕಪ್ರಾಯಶ್ಚಿತ್ತವನ್ನು ಹೇಳಿದರು. ಪಿತಾಮಹನೇ ಮೊದಲುಗೊಂಡು ಉಪನಯನವಾಗಿರುವುದು ಗೊತ್ತಿಲ್ಲದೇ ಇದ್ದರೂ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿ ಕ್ರಮವಾಗಿ ಸಂಘಕ್ಕೆ ಸೇರಿಸಿಕೊಳ್ಳಬಹುದೆಂದು ವಿಧಿಸಿರುವರು. ಇದರಿಂದ ಹೇಗಾದರೂ ಸಂಘವನ್ನು ಸಂಗ್ರಹಿಸಬೇಕೆಂಬ ಔದಾರ್ಯ ಸ್ಪಷ್ಟ ಪಡುವುದು. ಪ್ರಾಯಶಃ ಸ್ವಪ್ರತಿಷ್ಠೆ, ಲೋಭ ಮೊದಲಾದ ಕಾರಣ ದಿಂದಲೇ ಆರ್ಯರು ದೂರವಾಗಿ ಅನಾರ್ಯಕುಲ ಅಧಿಕವಾಗಿ ಆರ್ಯಕುಲ ಮೂಲೋಚ್ಛೇದಕ್ಕೆ ಕಾರಣವಾಗಿರುತ್ತದೆ.

## ಶೂದ್ರವಿಚಾರ

ಶೂದ್ರರ ವಿಷಯದಲ್ಲಿ ಉಪನಯನವನ್ನು ಸಕಲ ಸ್ಮೃತಿಕಾರರೂ ನಿಷೇಧಿಸಿರುವಲ್ಲಿ ವೇದಾಧ್ಯಯನಕ್ಕೆ ಅವಕಾಶವೆಲ್ಲಿ ? ಅಧ್ಯಯನಪೂರ್ವಕ ಜ್ಞಾನವಿಲ್ಲದೇ ಇರುವುದರಿಂದಲೂ ಆಧಾನಮೂಲಕ ಅಗ್ನಿಸಿದ್ಧಿಯಿಲ್ಲದೇ ಇರುವುದರಿಂದಲೂ ಯಾಗದಲ್ಲಿ ಅಧಿಕಾರವಿಲ್ಲವೆಂದು ಜೈಮಿನಿ ಮುನಿಗಳು ಸಿದ್ಧಾಂತಪಡಿಸಿರುವರು. ಇದನ್ನು ಅನುಸರಿಸಿ ಬಾದರಾಯಣಾಚಾರ್ಯರು ಶೂದ್ರರಿಗೆ ಬ್ರಹ್ಮವಿದ್ಯಾಧಿಕಾರವಿಲ್ಲವೆಂದು ಸಿದ್ಧಾಂತಮಾಡಿರುವರು. ಇವರುಗಳು ತಮ್ಮ ಕಾಲದಲ್ಲಿದ್ದ ಆಚಾರವನ್ನು ಯುಕ್ತಿಗಳಿಂದ ಸಮರ್ಥಿಸಿರುವರು, ಆದರೂ ವಿಶುದ್ಧಾದ್ವೈತ ಸಂಪ್ರದಾಯದವರು ಶೂದ್ರರಿಗೆ ನಿರ್ಗುಣಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನೂ ವಿಶಿಷ್ಟಾದ್ವೈತ ಸಂಪ್ರದಾಯದವರು ಪ್ರಪತ್ತಿಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನೂ ಅನುಗ್ರಹಿಸಿರುವರು. ವೇದಾಧ್ಯಯನ ವಿಷಯದಲ್ಲಿ ಜೈಮಿನಿ ಆ ಕಾಲದ ಆಚಾರಕ್ಕಿಂತಲೂ ಹಿಂದಿನ ಕಾಲದವರ ಆಚಾರದಲ್ಲಿ ವೇದಾಧಿಕಾರವು ಜನಸಾಮಾನ್ಯಕ್ಕೆ ಇತ್ತೆಂಬ ಬಾದರಿಮತವನ್ನು ಅನುವಾದ ಮಾಡಿರುವರು. ಬಾದರಿ ಹೇಳುವುದೆಂತೆಂದರೆ, ಸ್ವರ್ಗದಲ್ಲಿ ಅಪೇಕ್ಷೆಯುಳ್ಳವನು ಜ್ಯೋತಿಷ್ಟೋಮಯಾಗವನ್ನು ಮಾಡಬೇಕು. 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ' ಎಂದು ವಿಧಿಯಿರುತ್ತದೆ. ಈ ವಿಧಿಯಲ್ಲಿ ಇಂತಹ ಜಾತಿಯವನು ಎಂಬ ಪದವಿಲ್ಲ. ಆದುದರಿಂದ ಮನುಷ್ಯಸಾಮಾನ್ಯಕ್ಕೆ ಈ ಶ್ರುತಿ ಯಾಗದಲ್ಲಿ ಅಧಿಕಾರವನ್ನು ಕೊಡುತ್ತದೆ. ಯಾಗ ಮಾಡಬೇಕಾದರೆ ವಿವಾಹ, ದ್ರವ್ಯ ಮೊದಲಾದುವುಗಳಂತೆ ಜ್ಞಾನವೂ ವೇದಾಧ್ಯಯನವೂ ಬೇಕಾಗಿರುವುದರಿಂದ ಉಪನಯನದಲ್ಲೂ ವೇದಾಧ್ಯಯನದಲ್ಲೂ ಅಧಿಕಾರವನ್ನು ಮೇಲೆ ಕಂಡ ಸ್ವರ್ಗಕಾಮ ಶ್ರುತಿಯೇ ಕೊಡುತ್ತಿದೆ. ಆದುದರಿಂದ ಶೂದ್ರನೂ ಉಪನಯನಮಾಡಿಕೊಂಡು ವೇದಾಧ್ಯಯನವನ್ನು ಮಾಡಿ ಜ್ಞಾನವನ್ನು ಸಂಪಾದಿಸಿ ಯಾಗವನ್ನು ಮಾಡಬಹುದು ಎಂದು ಪೂರ್ವಪಕ್ಷ.

ಇದಕ್ಕೆ ಜೈಮಿನಿ ಹೇಳುವುದೆಂತೆಂದರೆ— ಸ್ವರ್ಗಕಾಮಶ್ರುತಿಗೆ ಉಪನಯನಪೂರ್ವಕ, ಅಧ್ಯಯನಮೂಲಕ ಜ್ಞಾನವನ್ನು ಸಂಪಾದಿಸಿರುವವರ ವಿಷಯದಲ್ಲಿ ಚರಿತಾರ್ಥತ್ವವು, ವಿಷಯಸಿದ್ಧಿ ಆಗುತ್ತಿರಲಾಗಿ ಉಪನಯನ

ವೇದಾಧ್ಯಯನಪೂರ್ವಕ ಜ್ಞಾನವನ್ನು ಸಂಪಾದಿಸಿ ಸ್ವರ್ಗಕಾಮನಾದರೆ ಯಾಗವನ್ನು ಮಾಡಬೇಕು ಎಂಬ ಅರ್ಥವನ್ನು ಮಾಡುವುದರಲ್ಲಿ ಶ್ರುತಿಗೆ ಬಹುಭಾರವನ್ನು ಕೊಟ್ಟ ಹಾಗಾಗುತ್ತದೆ. ಇದು ನ್ಯಾಯವಲ್ಲವಾದುದ ರಿಂದಲೂ ಆಚಾರವಿಲ್ಲದಿರುವುದರಿಂದಲೂ ಬಾದರಿಮತವು ಸರಿಯಲ್ಲವೆಂದು ಹೇಳುತ್ತಾರೆ. ಈ ಅಧಿಕಾರ ವಿಚಾರವನ್ನು ವಿಶಿಷ್ಟಾದ್ವೈತಸಂಪ್ರದಾಯ ದಲ್ಲಿ ವಿಸ್ತರಿಸಿರುತ್ತದೆ.

ಮಹಾಭಾರತಾದಿ ಗ್ರಂಥಗಳಲ್ಲಿರುವುದೆಂತೆಂದರೆ–ಜನಸಾಮಾನ್ಯಕ್ಕೂ ವೇದೋಕ್ತಧರ್ಮಾನುಷ್ಠಾನದಲ್ಲಿ ಅಧಿಕಾರವಿರುವುದು. ವೇದೋಕ್ತ ಧರ್ಮ ವನ್ನು ಎಲ್ಲರೂ ಮಾಡಬೇಕು. ಆದರೆ ಮಾಡುವ ಕ್ರಮದಲ್ಲಿ ಕಾಲ ದೇಶ ಶಕ್ತಿ ಶುದ್ಧಿ ಅಶುದ್ಧಿ ಸಹಾಯ ಮೊದಲಾದ ಸಾಮಗ್ರಿಭೇದದಿಂದ ದ್ರವ್ಯ ಪದಾರ್ಥ ಆಮಪಕ್ವ ಮೊದಲಾದ ಪ್ರಭೇದಗಳೆಂದು ನಿರ್ಣಯವಿರುವುದು. ಈಗಲೂ ಧಾರ್ಮಿಕ ಶೂದ್ರರಿಂದ ಸತ್ರಗಳು, ದೇವಾಲಯಗಳು, ಉತ್ಸವ ಗಳು, ಸಂತರ್ಪಣೆಗಳು, ವಿವಾಹವೈಭವಗಳು, ಅಮಂಗಳಕಾಲದಲ್ಲಿ ಅನೇಕ ಮಹಾದಾನಗಳು, ಜನಸಾಮಾನ್ಯೋಪಕಾರಧರ್ಮಗಳು ಪೂರ್ವಕ್ಕಿಂತಲೂ ಅತ್ಯಧಿಕವಾಗಿ ನಡೆಯಿಸಲ್ಪಡುತ್ತವೆ. ಇವೇ ವೇದೋಕ್ತಮುಖ್ಯವಾದ ಧರ್ಮಗಳು.

ಮತ್ತು ಸಕಲಧರ್ಮಶಾಸ್ತ್ರಗಳಲ್ಲೂ ಶೂದ್ರರಿಗೆ ಪಂಚಮಹಾಯಜ್ಞ ಗಳು, ವೈಶ್ವದೇವ, ಆಹ್ನಿಕ, ಷೋಡಶಕರ್ಮಗಳು, ದೇವಾರ್ಚನೆ, ಪುರಾ ಣಾದಿಸ್ತೋತ್ರ ಪಠನ, ಅಶೌಚ, ಶ್ರಾದ್ಧ ಮೊದಲಾದ ವಿಧಿಗಳು, ಮೋಕ್ಷ ಧರ್ಮಾನುಷ್ಠಾನ, ಮಂತ್ರೋಪದೇಶದೀಕ್ಷಾವಿಧಿಗಳು, ಜ್ಞಾನಿಗಳಾಗಿದ್ದರೆ ಬ್ರಾಹ್ಮಣಾದಿಗಳಿಗೂ ಜ್ಞಾನವನ್ನು ಕೊಡುವ ಅಧಿಕಾರ, ಇತ್ಯಾದಿ ವೇದೋಕ್ತಧರ್ಮಾಧಿಕಾರವು ಅಪಾರವಾಗಿರುವುದು.

**ವೇದಾರ್ಥಜ್ಞಾನ**

ಸಾಂಗವೇದವನ್ನು ಅಧ್ಯಯನಮಾಡಿ ವಿಚಾರಪೂರ್ವಕ ವೇದಾರ್ಥ ವನ್ನು ತಿಳಿದುಕೊಂಡು ಅದರಂತೆ ಅನುಷ್ಠಾನಮಾಡಿ ಸಕಲಶ್ರೇಯಸ್ಸು ಗಳನ್ನು ಹೊಂದಬೇಕೆಂಬ ಅಭಿಪ್ರಾಯ ಸರ್ವಸಮ್ಮತ. ಅನುಷ್ಠಾನವಿಲ್ಲದೆ

ಬರಿಯ ಅಧ್ಯಯನಕ್ಕೂ ಜ್ಞಾನಕ್ಕೂ ಯಾವ ಪ್ರಯೋಜನವೂ ಇಲ್ಲವೆಂದು ಅನೇಕ ಶಾಸ್ತ್ರಗಳ ಮೂಲಕ ಶಬರ ಕುಮಾರಿಲಾದಿಗಳು ಹೇಳುತ್ತಾರೆ. ಜೈಮಿನಿ ಯಾಸ್ಕ ಮೊದಲಾದವರು ಯಥೋಚಿತಫಲವಿರುವುದೆಂದು ಅಭಿಪ್ರಾಯಪಡುತ್ತಾರೆ. ಶಕ್ತರಿಗೆ ಅನುಷ್ಠಾನದಿಂದ ಬರುವ ಫಲಕ್ಕೆ ಸಮವಾದ ಫಲವು ಅಶಕ್ತರಿಗೆ ಅಧ್ಯಯನದಿಂದಲೂ ಅಥವಾ ಜ್ಞಾನದಿಂದಲೂ ಬರುವುದೆಂದು ಅದ್ವೈತ ವಿಶಿಷ್ಟಾದ್ವೈತಾಚಾರ್ಯರುಗಳು ಹೇಳುತ್ತಾರೆ. ಸಹಸ್ರನಾಮ ಭಗವದ್ಗೀತಾ ಪಾರಾಯಣದಿಂದಲೇ ಅರ್ಥ ಜ್ಞಾನಕ್ಕೆ ಬರುವ ಫಲವು ಬರುತ್ತದೆಯೆಂದು ನಿರೂಪಿಸಿರುತ್ತಾರೆ.

ಐದು ವರ್ಷದ ಸಾಮಂತರಾಜಕುಮಾರನು ತಾಯಿ ಮೊದಲಾದವರಿಂದ ಕಲಿಸಲ್ಪಟ್ಟ ಪ್ರಾರ್ಥನಾವಾಕ್ಯಗಳನ್ನು ಅರ್ಥಜ್ಞಾನವಿಲ್ಲದೆ ಸಾರ್ವಭೌಮನ ಸನ್ನಿಧಾನದಲ್ಲಿ ಹೇಳಿ ಶರಣಾಗತನಾದರೆ ಸಾರ್ವಭೌಮನು ಪ್ರಸನ್ನನಾಗಿ ರಕ್ಷಿಸುವಹಾಗೆ ಮಂತ್ರಾರ್ಥಜ್ಞಾನವು ಹೇಳುವವನಿಗೆ ತಿಳಿಯದಿದ್ದರೂ ಕೇಳುವ ದೇವತೆಗಳಿಗೆ ತಿಳಿಯುವುದಾದುದರಿಂದ ಅಶಕ್ತರ ವಿಷಯದಲ್ಲಿ ಪಾರಾಯಣವೇ ಸಾಕೆಂದು ಅಭಿಪ್ರಾಯ.

ಆದುದರಿಂದಲೇ ಈಗ ನಡೆಯುವ ವೇದೋಕ್ತ ಸಂಸ್ಕಾರಗಳಾದ ಉಪನಯನ ವಿವಾಹ ಶ್ರಾದ್ಧ ಮೊದಲಾದ ಕರ್ಮಗಳಲ್ಲಿ ಅರ್ಥಕರ್ತೃವಿಗೂ, ಕೊನೆಗೆ ಉಪಾಧ್ಯಾಯರಿಗೂ ತಿಳಿಯದಿದ್ದರೂ ಬಾಧಕವಿಲ್ಲವೆಂದು ಹೇಳುವುದಕ್ಕೆ ಅವಕಾಶವಿದೆ. ಇಂತಹ ಅಭಿಪ್ರಾಯದಿಂದಲೇ ಕೆಲವು ವೈದಿಕರು "ವೇದಕ್ಕೆ ಅರ್ಥವೇ ಇಲ್ಲ, ಬರಿಯ ಉಚ್ಚಾರಣೆಯಿಂದಲೇ ಫಲ" ಎಂದು ಹೇಳುತ್ತಿದ್ದರು. ಅವರ ಮತವನ್ನು ಜೈಮಿನಿ ವಿಸ್ತಾರವಾಗಿ ನಿರಾಕರಿಸಿರುತ್ತಾರೆ. ಅಂತೂ ಸಂಪ್ರದಾಯಸಂರಕ್ಷಣೆಯಲ್ಲಿ ಪೂರ್ವಕಾಲದವರ ಔದಾರ್ಯವು ಅಪಾರವಾಗಿರುವುದು. ಅದರೆ ಆಲಸ್ಯಕ್ಕೆ ಕಾರಣವಾಗಬಾರದೆಂದು ತಿಳಿಯಬೇಕು.

ಈ ಆಲಸ್ಯಪ್ರಸಂಗದಲ್ಲಿ ಮತ್ತೊಂದು ವಿಷಯವು ಪ್ರಸಕ್ತವಾಗುತ್ತದೆ. ವೇದಾಧ್ಯಯನ ಮೊದಲಾದ ವಿದ್ಯಾಭ್ಯಾಸವನ್ನು ಹುಡುಗರಿಗೆ ಮಾಡಿಸುವ ಜವಾಬ್ದಾರಿ ತಂದೆ ಮೊದಲಾದ ಆಚಾರ್ಯರಿಗೆ ಸೇರಿದುದೆಂದು ಪ್ರಾಚೀನ ಕಾಲದ ಪ್ರಾಭಾಕರಮತ. ಇದು "ಅಧ್ಯಾಪನವಿಧಿಪ್ರಯುಕ್ತಮಧ್ಯಯ

ನಮ್" ಎಂಬ ವಾದ, ಆಚಾರ್ಯತ್ವವೆಂಬ ನಿತ್ಯಕರ್ಮವಾಗಿ ಧರ್ಮವೆಂದು ಇವರ ಅಭಿಪ್ರಾಯ.

ಕುಮಾರಿಲರ ಅಭಿಪ್ರಾಯವೇತೆಂದರೆ, ಆಚಾರ್ಯತ್ವವು ಜೀವನೋಪಾಯ. ಇಷ್ಟವಿದ್ದರೆ ವಹಿಸಬಹುದು, ಇಲ್ಲದಿದ್ದರೆ ದೋಷವಿಲ್ಲ. ಬಾಲಕರ ವಿದ್ಯಾಭ್ಯಾಸ ಅವರ ಜವಾಬ್ದಾರಿಯೇ ಹೊರತು ಆಚಾರ್ಯರುಗಳ ಜವಾಬ್ದಾರಿಯಲ್ಲವೆಂದು ಸಿದ್ಧಾಂತ ಮಾಡಿರುತ್ತಾರೆ. ಇದು "ಅಧ್ಯಯನ ವಿಧಿಪ್ರಯುಕ್ತಮಧ್ಯಯನಮ್" ಎಂಬ ವಾದ. ಈ ಪಕ್ಷವನ್ನೇ ಈಗಿನ ವೇದಾಂತಿಗಳು ಅನುಮೋದಿಸಿರುತ್ತಾರೆ. ಇದರಲ್ಲಿ ಲೋಕಯೋಗಕ್ಷೇಮ ನಿರ್ವಾಹಕರಾದ ವಿದ್ವಾಂಸರು ತಮ್ಮ ಜವಾಬ್ದಾರಿಯನ್ನು ಸಡಿಲಮಾಡಿಕೊಂಡಿರುವ ಆಲಸ್ಯವು ಸ್ಪಷ್ಟವಾಗಿರುತ್ತದೆ. ಇದೇ ಈಗಿನ ಸಂಪ್ರದಾಯದಲ್ಲಿರುವ ಸಾರಾಂಶ.

## ವೇದಾರ್ಥ

ವೇದಕ್ಕೆ ಅರ್ಥಮಾಡುವ ಸಂದರ್ಭದಲ್ಲಿ ವಾಕ್ಯಗಳಿಗೆ ಉದ್ದೇಶವೇನಿರಬಹುದೆಂದು ವಿಚಾರಿಸಿದರೆ, ವೇದದಲ್ಲಿ ಹೇಳಿರುವ ಕರ್ಮಗಳನ್ನು ಮನುಷ್ಯನು ಮಾಡಬೇಕು. ಮನುಷ್ಯನ ಸ್ವಭಾವದಲ್ಲಿ ಪ್ರಯೋಜನವನ್ನುದ್ದೇಶಿಸದೆ ಮೂಢನು ಸಹ ಪ್ರವರ್ತಿಸುವುದಿಲ್ಲ. ಪ್ರಯೋಜನದ ದೃಷ್ಟಿಯಿಲ್ಲದೆ ಪ್ರಯತ್ನವಿರುವ ಪಕ್ಷದಲ್ಲಿ ಬುದ್ಧಿಗೆ ಪ್ರಯೋಜನವೇನಿರುವುದು ? ಆದುದರಿಂದ ವೇದಾರ್ಥವನ್ನು ತಿಳಿದುಕೊಂಡು ಮಾಡಲ್ಪಡಬೇಕಾದ ಕರ್ಮಗಳಿಗೆ ಪ್ರಯೋಜನವೆಂಬ ಫಲವಿರಬೇಕು. ಫಲವೇ ವೇದಾರ್ಥಾನುಷ್ಠಾನಕ್ಕೆ ಉದ್ದೇಶವಾದರೆ, ಫಲಂ ವೇದಾರ್ಥಃ ಎಂದು ಕುಮಾರಿಲಸಂಪ್ರದಾಯವು. ಇದರಿಂದ ವೇದದಲ್ಲಿರುವ ವಿಧಿಪ್ರತ್ಯಯಗಳಿಗೆ ಇಷ್ಟಸಾಧನತ್ವವು ಅರ್ಥ ಎಂದು ನಿರ್ಣಯ.

ವೇದೋಕ್ತವಾದ ಕರ್ಮಗಳನ್ನು ನಿತ್ಯ, ನೈಮಿತ್ತಿಕ, ಕಾಮ್ಯ ಎಂದು ಮೂರು ಪ್ರಕಾರ ವಿಭಾಗಿಸಿರುವರು. ಕಾಮ್ಯಕರ್ಮಗಳೆಂದರೆ ಸ್ವರ್ಗ ಪಶುವೃಷ್ಟಿ ಮೊದಲಾದ ಫಲಕ್ಕಾಗಿ ಮಾಡುವ ಕರ್ಮಗಳು. ಮನುಷ್ಯನು ಈ ಜನ್ಮದಲ್ಲಿ ಅನುಭವಿಸುವ ಸುಖದುಃಖಗಳೆಲ್ಲಕ್ಕೂ ಪೂರ್ವಜನ್ಮದಲ್ಲಿ ಮಾಡಿದ

ಪುಣ್ಯ ಪಾಪ ಕರ್ಮಗಳೇ ಕಾರಣವಾಗಿರುವುವು. ಪ್ರಾಚೀನ ಕರ್ಮಮೂಲ ವಿಲ್ಲದೆ ಈಗಿನ ಯಾವ ಸುಖದುಃಖವೂ ಬರಲಾರದು. ಇವುಗಳೆಲ್ಲವೂ ಕಾಮ್ಯಕರ್ಮಗಳ ಫಲವೆಂದು ತಿಳಿಯಬೇಕು. ಪುತ್ರಪಶುವೃಷ್ಟ್ಯಾದಿ ಪ್ರಯೋಜನಕ್ಕಾಗಿ ಈ ಜನ್ಮದಲ್ಲೇ ಕರ್ಮಗಳನ್ನು ಮಾಡಬಹುದು. ಅವು ಗಳಲ್ಲಿ ಕೆಲವು ಫಲಿಸದಿರುವುದಕ್ಕೆ ಕಾರಣ ಪ್ರಬಲಪ್ರತಿಬಂಧಕವೆಂದರಿಯ ಬೇಕು. ಕರ್ಮಕ್ಕೆ ಫಲ ಈ ಜನ್ಮದಲ್ಲಿ ಬಾರದಿದ್ದರೂ ಜನ್ಮಾಂತರದಲ್ಲಿ ಬರುವುದು. ಸ್ವರ್ಗ ಮೊದಲಾದ ಫಲ ಜನ್ಮಾಂತರದಲ್ಲೇ, ದೇಶಾಂತರ ದಲ್ಲೇ, ಬರುವಂತಹ ಫಲ.

ನೈಮಿತ್ತಿಕಕರ್ಮಗಳೆಂದರೆ ಮನೆ ಸುಟ್ಟುಹೋಗುವುದು, ಯಾಗ ಕೆಟ್ಟುಹೋಗುವುದು. ಇಂತಹ ಸಂದರ್ಭದಲ್ಲಿ ಕೆಲವು ಕ್ರಮಗಳನ್ನು ಮಾಡ ಬೇಕೆಂದು ವಿಧಿಗಳಿರುವುವು. ಅವುಗಳಿಂದ ಇಂತಹ ಅಸಂದರ್ಭಕ್ಕೆ ಕಾರಣ ವಾಗಿರುವ ಪಾಪವು ಪರಿಹಾರವಾಗಿ ಮುಂದೆ ಇಂತಹ ತೊಂದರೆ ತಪ್ಪುವುದು. ಕೆಲವು ನೈಮಿತ್ತಿಕಕರ್ಮಗಳು ಪಿತೃ ಪುತ್ರ ಮಿತ್ರ ಕಲತ್ರ ಮೊದಲಾದವರ ಅನುಕೂಲಕ್ಕಾಗಿ ವಿಧಿಸಲ್ಪಡುವುವು.

ನಿತ್ಯಕರ್ಮಗಳೆಂದರೆ ಇಂತಹ ಫಲದೃಷ್ಟಿಯಿಲ್ಲದೆ ಹಿಂದಿನ ಕಾಲದಲ್ಲಿ ಮಾಡಿದ ಪಾಪಕ್ಷಯಕ್ಕಾಗಿಯೇ ಮಾಡಬೇಕಾದ ಕರ್ಮಗಳು. ಅವು ಗಳನ್ನು ಆಯಾ ಕಾಲದಲ್ಲಿ ಮಾಡದಿದ್ದರೆ ಹೊಸದಾಗಿ ಪಾಪ ಹುಟ್ಟುವುದು. ಅದು ಹುಟ್ಟದಿರುವುದಕ್ಕಾಗಿಯೂ ಅವುಗಳನ್ನು ಮಾಡಬೇಕು. ಈ ಅಭಿ ಪ್ರಾಯವೆಲ್ಲವನ್ನೂ ಮನಸ್ಸಿನಲ್ಲಿಟ್ಟುಕೊಂಡು "ನೂರು ಶಾಸ್ತ್ರಗಳಿದ್ದರೂ ಆಶೆಯಿಂದ ಮನುಷ್ಯನಿಗೆ ಪ್ರವೃತ್ತಿಯಿರುವ ಹಾಗೆ ಪ್ರವೃತ್ತಿಯಿರಲಾರದು. "ನ ಹಿ ವಿಧಿಶತೇನಾಪಿ ತಥಾ ಪ್ರವರ್ತತೇ ಯಥಾ ಲೋಭೇನ" ಎಂದು ಬರೆಯುತ್ತಾರೆ.

ಕುಮಾರಿಲ ಭಟ್ಟಾಚಾರ್ಯರ ಮತದಲ್ಲಿ ವೇದಾರ್ಥ ಈ ಪ್ರಕಾರವಾದರೆ ಅದರ ಹಾಗೆ ಪ್ರಾಚೀನಪ್ರಾಭಾಕರರ ಅಭಿಪ್ರಾಯದಲ್ಲಿ ವೇದಾರ್ಥ ಬೇರೆ ವಿಧವಾಗಿತ್ತು. ಅದೆಂತೆಂದರೆ ವೇದಕ್ಕೆ ಫಲದಲ್ಲಿ ದೃಷ್ಟಿಯಿಲ್ಲ, ನಿಯೋಗ ದಲ್ಲಿ ದೃಷ್ಟಿ. ನಿಯೋಗವೆಂದರೆ ಅಪ್ರತಿಹತವಾದ, ಅನುಲ್ಲಂಘನೀಯವಾದ ಸಾರ್ವಭೌಮನ ಆಜ್ಞೆಯಂತಿರುವ ವೇದವೆಂಬ ಮಹಾಪುರುಷನ ಆಜ್ಞೆ.

ಅದು ವೇದವೆಂಬ ಶಬ್ದದಲ್ಲಿರುವ ವಿಲಕ್ಷಣಶಕ್ತಿ. ನಿಯೋಗಕ್ಕೆ ನಿಯೋಜ್ಯ ವಿಷಯ ಎರಡೇ ಬೇಕಾದುದು. ಯಾರಿಗೆ ಅಪ್ಪಣೆ ? ಯಾವ ವಿಷಯದಲ್ಲಿ ಅಪ್ಪಣೆ? ಇಷ್ಟೇ ಬೇಕಾದುದು, ಏತಕ್ಕೆ ಅಪ್ಪಣೆಯೆಂಬ ಅಂಶವಿಲ್ಲ.ಅದಿದ್ದರೆ ಅದಕ್ಕಿಂತಲೂ ದೈನ್ಯ. ಅಶಕ್ತಿ ಬೇರೆ ಇಲ್ಲ. ಆಜ್ಞೆಯೆಂಬ ನಿಯೋಗಕ್ಕೆ ಫಲದಲ್ಲಿ ದೃಷ್ಟಿಯಿಲ್ಲ. ಆದರೆ ಕಾಮ್ಯಕರ್ಮಗಳಿಂದ ಫಲವುಂಟಾಗುವುದು. ಅದು ನಿಯೋಜ್ಯ ವಿಶೇಷಣವು. ನಿಯೋಜ್ಯವೆಂದರೆ ನಿಯೋಗವನ್ನು ನೆರವೇರಿಸುವವನು. ಆರ್ಯರಲ್ಲಿ ಗೃಹಸ್ಥರಾಗಿರುವವರು ಸ್ವರ್ಗದಲ್ಲಿ ಅಪೇಕ್ಷೆಯುಳ್ಳವರಾದರೆ ಜ್ಯೋತಿಷ್ಟೋಮ ಯಾಗವನ್ನು ನೆರವೇರಿಸಬೇಕೆಂದು ''ಜ್ಯೋತಿಷ್ಟೋಮೇನ ಸ್ವರ್ಗಕಾಮೋಯಜೇತ'' ಎಂಬ ವಾಕ್ಯಕ್ಕೆ ಅರ್ಥ. ಸಾಮಾನ್ಯವಾಗಿ ಪುರುಷರು ಮೊದಲು ನಿಯೋಜ್ಯರಾಗುತ್ತಾರೆ. ಸ್ವರ್ಗದಲ್ಲಿ ಅಪೇಕ್ಷೆಯುಳ್ಳವನು ಅಧಿಕಾರಿಯಾಗಿ ನಿಲ್ಲುತ್ತಾನೆ. ಅಧಿಕಾರವೇ ಸ್ವರ್ಗಾಪೇಕ್ಷೆ. ಆದುದರಿಂದ ಪುರುಷಬುದ್ಧಿ ಮೂಲಕವು ಫಲದೃಷ್ಟಿ. ನಿಯೋಗಕ್ಕೆ ಅದರಲ್ಲಿ ದೃಷ್ಟಿಯಿಲ್ಲ. ಅನಂತರ ಯಾಗವನ್ನು ಅನುಷ್ಠಾನ ಮಾಡುತ್ತಾನೆ. ಆವಾಗ ಇವನು ಕರ್ತನಾಗುತ್ತಾನೆ. ಮೊದಲು ನಿಯೋಜ್ಯನು, ಅನಂತರ ಅಧಿಕಾರಿಯು, ಅನಂತರ ಕರ್ತನು. ಏವಂಚ ನಿಯೋಗವು ನನಗೆ ಸೇರಿದುದು. ಅದು ನನ್ನ ಕೆಲಸವೆಂದು ತಿಳಿದುಕೊಳ್ಳುವುದು ನಿಯೋಜ್ಯತೆ. ಫಲದಲ್ಲಿ ಅಪೇಕ್ಷೆ ಅಧಿಕಾರ. ಯಾಗವನ್ನು ಮಾಡಿ ಅದರ ಮೂಲಕ ನಿಯೋಗವನ್ನು ನೆರವೇರಿಸುವುದು ಕರ್ತೃತ್ವ. ಹೀಗೆ ನಿಯೋಗವೇ ವೇದಾರ್ಥವು.

ನಿತ್ಯನೈಮಿತ್ತಿಕಕರ್ಮಗಳಲ್ಲಿ ನಿಯೋಗಕ್ಕೆ ಫಲವೇ ಇಲ್ಲ. ಭಟ್ಟಮತದಂತೆ ಪಾಪಕ್ಷಯವೂ ಪ್ರತ್ಯವಾಯಪರಿಹಾರವೂ ಇವರಿಗೆ ಫಲವೆಂದಭಿಪ್ರಾಯವಿಲ್ಲ. ಫಲದೃಷ್ಟಿಯಿಲ್ಲದೆ ನನಗೆ ಕರ್ತವ್ಯವೆಂದು ತಿಳಿದು ಅವುಗಳನ್ನು ಮಾಡಬೇಕು. ಇವುಗಳಲ್ಲಿ ಫಲವಿಲ್ಲದೇ ಇದ್ದರೆ ಅಧಿಕಾರವು ಹೇಗೆಂದರೆ ಬದುಕಿರುವುದೇ ಅಧಿಕಾರ. ಆದುದರಿಂದಲೇ ''ಯಾವಜ್ಜೀವಂ ಅಗ್ನಿ ಹೋತ್ರಂ ಜುಹೋತಿ'' ಎಂದು ಶುಚಿಯಾಗಿ ಬದುಕಿರುವವರೆಗೂ ಸಾಯಂ ಪ್ರಾತಃ ಅಗ್ನಿ ಹೋತ್ರವನ್ನು ಮಾಡಬೇಕೆಂದು ನಿಯೋಗ. ರಾಜಕಿಂಕರನು ರಾಜನ ಅಪ್ಪಣೆಗೆ ವಿಷಯವಾದುದನ್ನು ಮಾಡಿ ಅಪ್ಪಣೆಯನ್ನು

ನೆರವೇರಿಸಿದೆನೆಂದು ಸಂತೋಷಪಡುವ ಹಾಗೆ ವೇದಕಿಂಕರನು ನಿಯೋಗಕ್ಕೆ ವಿಷಯವಾದ ನಿತ್ಯನೈಮಿತ್ತಿಕಕರ್ಮಗಳನ್ನು ಮಾಡಿ ನಿಯೋಗವೆಂಬ ಧರ್ಮವನ್ನು ನೆರವೇರಿಸಿದೆನೆಂದು ಸಂತೋಷಪಡುವನು. ಈ ಅಭಿಪ್ರಾಯ ದಲ್ಲಿ ಧರ್ಮವು ಒಂದು ಪುರುಷಾರ್ಥವಾಗಿತ್ತು.

ಈ ರೀತಿಯಾದ ನಿತ್ಯನೈಮಿತ್ತಿಕನಿಯೋಗವು, ಪುರುಷನನ್ನು ರಾಜ ಪುರುಷರು ಕತ್ತುಹಿಡಿದು ಕೆಲಸವನ್ನು ಮಾಡಿಸುವಹಾಗೆ, ಕರ್ಮಗಳನ್ನು ಮಾಡಿಸತಕ್ಕ ಮಹಾಭೂತವಲ್ಲ. ನೀನು ನಿಯೋಜ್ಯನು, ನೀನು ಮಾಡ ಬೇಕೆಂದು ತಿಳಿಯಿಸುತ್ತದೆ. ರಾಗಾಂಧನಾಗಿ, ಮೂಢನಾಗಿ ನಿಯೋಗವನ್ನು ಲಕ್ಷ್ಯಮಾಡದಿದ್ದರೆ ರಾಜಾಜ್ಞೆಯನ್ನುಲ್ಲಂಘನೆ ಮಾಡಿದವನಿಗೆ ರಾಜದಂಡ ನದ ಹಾಗೆ ಇಲ್ಲೇ ಸಂಘಬಹಿಷ್ಕರಣವೆಂಬ ಪತನವು ಸಿದ್ಧಿಸುವುದು. ಇದೇ ಇಲ್ಲೇ ನರಕಾನುಭವವು. ಕಳ್ಳತನವನ್ನೂ ದುರಾಚಾರವನ್ನೂ ಮಾಡಬಾರ ದೆಂದು ಶಾಸ್ತ್ರಗಳೂ ರಾಜಾಜ್ಞೆಯೂ ಇದ್ದರೂ ರಾಗಾಂಧರಾಗಿ ಮಾಡು ತ್ತಾರೆ. ಶಾಸ್ತ್ರವೇ ಆಗಲಿ, ರಾಜಾಜ್ಞೆಯಾಗಲಿ, ಪರಮೇಶ್ವರನೇ ಆಗಲಿ ಕೆಟ್ಟಕೆಲಸವನ್ನು ಮಾಡುವಾಗ ಕೈಗಳನ್ನು ಕತ್ತರಿಸುವುದಿಲ್ಲ. ಅನಂತರ ತಿಳಿಯದಿದ್ದರೆ ಕಳ್ಳನೇ ಜಯಿಸಿಕೊಂಡನು. ತಿಳಿದರೆ ಇಲ್ಲೇ ದಂಡಿಸಲ್ಪಡು ವನು. ಇಷ್ಟೇ ವೇದೋಕ್ತವಾದ ನಿತ್ಯನೈಮಿತ್ತಿಕಕರ್ಮಗಳ ನಿಯೋಗಕ್ಕೂ ಗತಿಯನ್ನು ಹೇಳಬೇಕು.

ಈ ಸಿದ್ಧಾಂತದ ಅಭಿಪ್ರಾಯದ ಮೇಲೆಯೇ ಹಿಂದೆ ಈ ಅಭಿಪ್ರಾಯ ವಿರಬಹುದು. ಅದೆಂತೆಂದರೆ—ಪಾಪವೆಂಬ ಅದೃಷ್ಟವಿಲ್ಲ. ಎಂದರೆ ಯಾಗಾದಿ ಕರ್ಮಗಳಿಂದ ಪುಣ್ಯವೆಂಬ ಅದೃಷ್ಟವು ಹುಟ್ಟಿ ಸ್ವರ್ಗವು ಕಾಲಾಂತರದಲ್ಲಿ ಬರುವಹಾಗೆ ಬ್ರಹ್ಮಹತ್ಯಾದಿ ಕೆಟ್ಟಕೆಲಸದಿಂದ ಪಾಪವೆಂಬ ಅದೃಷ್ಟವು ಹುಟ್ಟಿ ಅದರಿಂದ ಕಾಲಾಂತರದಲ್ಲಿ ನರಕವೆಂಬ ದುಃಖಾನುಭವ ವಿಲ್ಲ. ಕೆಟ್ಟಕೆಲಸಗಳಿಗೆ ಇಲ್ಲೇ ರಾಜಾದಿಗಳಿಂದಲೂ ಪರಸ್ಪರ ಜನರಿಂದಲೂ ಶಿಕ್ಷೆ. ಪ್ರತ್ಯಕ್ಷನರಕವನ್ನು ಬಿಟ್ಟು ಪರೋಕ್ಷನರಕವನ್ನು ಕಲ್ಪಿಸಬೇಕಾಗಿಲ್ಲ. ಅಂತಹ ಕಲ್ಪನೆ ದುರಾಚಾರಕ್ಕೆ ಅವಕಾಶವನ್ನೇ ಕೊಡುವುದು ಎಂದು ಕೆಲವು ಮೀಮಾಂಸಕರ ಅಭಿಪ್ರಾಯವಿತ್ತು. ಇಂತಹ ಅಭಿಪ್ರಾಯದಿಂದ "ಭಯ ದಿಂದ ಮನುಷ್ಯರಿಗೆ ಪ್ರವೃತ್ತಿ ನಿಶ್ಚಯ—ಭಯಾತ್ ಪ್ರವೃತ್ತಿಃ ಧ್ರುವ ಭಾವಿನೀ" ಎಂದು ಪ್ರಾಭಾಕರರು ಬರೆಯುತ್ತಾರೆ.

ಕೆಲವು ಮೀಮಾಂಸಕರ ಅಭಿಪ್ರಾಯದಲ್ಲಿ ಅಧರ್ಮವೆಂಬ ಅದೃಷ್ಟವೂ ಅದರ ಫಲವಾದ ನರಕಾನುಭವವೂ ನರಕಲೋಕವಿಭಾಗವೂ ಮೊದಲಾದ ಅಂಶಗಳು ಬಹು ವಿಸ್ತಾರವಾಗಿರುವುವು.

ಫಲವಿಲ್ಲದೆ ಬರಿಯ ನಿತ್ಯನೈಮಿತ್ತಿಕಕರ್ಮಾನುಷ್ಠಾನದಿಂದ ಏನು ಸುಖವೆಂದರೆ, ಧಾರ್ಮಿಕನು, ಸದಾಚಾರಪರನು, ಪೂಜ್ಯನು, ಮರ್ಯಾದಾರ್ಹನು ಇತ್ಯಾದಿ ಈ ಲೋಕದಲ್ಲಿ ಯಶಸ್ಸೇ ಮುಖ್ಯವಾಗಿ ಸುಖವಾಗಿರುವುದು. ಕೇವಲ ಯಶಸ್ಸಿಗಾಗಿ ಲೋಕದಲ್ಲಿ ಮಾಡುವ ಪ್ರಯತ್ನಗಳನ್ನು ವಿವರಿಸಬೇಕಾಗಿಲ್ಲ. ಯಶಸ್ಸೆಂಬ ಕೀರ್ತಿ ಕೆಲವು ಸಂದರ್ಭದಲ್ಲಿ ಮುಂದೆ ದ್ರವ್ಯಾರ್ಜನೆ ಮೊದಲಾದುವುಗಳಿಗೆ ಕಾರಣವಾಗಿರುವುದು ಲೋಕದಲ್ಲಿ ಕಾಣುವುದು. ಆದರೂ ಕೇವಲ ಕೀರ್ತಿಗಾಗಿ ಪ್ರಯತ್ನಗಳೂ ಬಹಳವಾಗಿರುವುವು. ಮುಖ್ಯವಾಗಿ ಸಕಲ ಪ್ರಾಣಿಗಳಲ್ಲೂ ಸಂಘಬಹುಮಾನವೆಂಬುದು ಪರಮಸುಖವೆಂಬುದರಲ್ಲಿ ಸಂಶಯವಿಲ್ಲ. ಇದನ್ನೇ ಪಂಡಾಪೂರ್ವವೆಂದು ಆ ಸಿದ್ಧಾಂತದವರ ವ್ಯವಹಾರ. ಇದರಿಂದ ವೇದದಲ್ಲಿರುವ ವಿಧಿಪ್ರತ್ಯಯಗಳಿಗೆ ಕೃತಿಸಾಧ್ಯತ್ವವೆಂಬ ಕರ್ತವ್ಯತ್ವವೆಂದು ಅರ್ಥ. ಇದೇ ಕಾರ್ಯವಾಕ್ಯಾರ್ಥ. ಕಾರ್ಯವೇ ನಿಯೋಗ ಎಂದು ನಿರ್ಣಯ.

ಕುಮಾರಿಲಭಟ್ಟಾಚಾರ್ಯ ಮೊದಲಾದವರು ಈ ಅಭಿಪ್ರಾಯವು ಲೋಕಾಯತಸಮ್ಮತವಾದ ನಾಸ್ತಿಕಮತಕ್ಕೆ ಸಮ್ಮತವೆಂದು ನಿರಾಕರಿಸಿರುತ್ತಾರೆ.

ಆದರೂ ಈಗಿನ ಅಭಿಪ್ರಾಯಕ್ಕೂ ಕುಮಾರಿಲಾದಿಗಳ ಅಭಿಪ್ರಾಯಕ್ಕೂ ಅನೇಕ ವಿಷಯಗಳಲ್ಲಿ ಆಶ್ಚರ್ಯಕರವಾದ ವ್ಯತ್ಯಾಸಗಳಿರುತ್ತವೆ. ಮತ್ತು ಪುರಾಣಾದಿಗಳಿಗೆಲ್ಲಾ ವಿಚಿತ್ರ ರೀತಿಯಲ್ಲಿ ಅವರು ಅಭಿಪ್ರಾಯಗಳನ್ನು ಕಲ್ಪಿಸಿರುತ್ತಾರೆ. ಅವುಗಳೆಲ್ಲವನ್ನೂ ಸೂಚಿಸುವುದಕ್ಕೆ ಅವಕಾಶವಿಲ್ಲದಿದ್ದರೂ ಕೆಲವನ್ನು ಸೂಚಿಸುತ್ತೇವೆ.

ಯಾವ ರೀತಿಯಲ್ಲಾದರೂ ಪರೋಪಕಾರವೇ ಪುಣ್ಯ, ಅಪಕಾರವೇ ಪಾಪವೆಂದು —

ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರನ್ಥಕೋಟಿಭಿಃ
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಮ್ ॥

ಎಂದು ಈಗ ಸರ್ವಸಮ್ಮತವಾದ ಪುಣ್ಯಪಾಪಲಕ್ಷಣವು. ಇದನ್ನು ಕುಮಾರಿಲರು ನಿರಾಕರಿಸಿರುವುದು ಈ ಪ್ರಕಾರವಿರುತ್ತದೆ — ಸುರಾಪಾನದಲ್ಲಿ ಉಪಕಾರವೂ ಇಲ್ಲ, ಅಪಕಾರವೂ ಇಲ್ಲ. ದುರಾಚಾರದಲ್ಲಿ ಪರೋಪಕಾರವೂ ಇರುತ್ತದೆ. ಅದು ಪಾಪವಲ್ಲದೇ ಹೋಗಲಿ, ಅದು ಪುಣ್ಯವಾಗಲಿ ಎಂದು ಆತಿವಾದ ಮಾಡಿರುತ್ತಾರೆ. ವೇದದಲ್ಲಿ ಯಾವುದು ಧರ್ಮವೆಂದು ಹೇಳಿದೆಯೋ ಅದೇ ಧರ್ಮ. ಉಪಕಾರವು ಧರ್ಮಲಕ್ಷಣವಲ್ಲವೆಂದು ನಿರ್ಣಯಿಸಿರುತ್ತಾರೆ.

ಭಾರತ ಕಥೆಯಲ್ಲಿ ಭೀಷ್ಮಾಚಾರ್ಯರು ನಿತ್ಯಬ್ರಹ್ಮಚಾರಿಯೆಂದು ಇದ್ದರೂ ಅವರು ಯಾಗವನ್ನು ಮಾಡಿದರೆಂದು ಒಂದು ಸಂದರ್ಭದಲ್ಲಿರುವುದರಿಂದ ಅವರಿಗೆ ವಿವಾಹವಾಗಿತ್ತೆಂದು ಬರೆಯುತ್ತಾರೆ. ಸೀತೆ ಭೂಪ್ರವೇಶ ಮಾಡಿದ ಮೇಲೆ ಶ್ರೀರಾಮನು ಸುವರ್ಣಸೀತಾಪ್ರತಿಮೆಯನ್ನಿಟ್ಟುಕೊಂಡು ಅಶ್ವಮೇಧಯಾಗವನ್ನು ಮಾಡಿದನೆಂಬ ವಿಚಾರದಲ್ಲಿ ಬೇರೆ ವಿವಾಹ ಮಾಡಿಕೊಂಡೇ ಯಾಗವನ್ನು ಮಾಡಿದನು ; ಲೋಕಾಪವಾದ ಪರಿಹಾರಕ್ಕಾಗಿ ಸುವರ್ಣ ಸೀತಾಪ್ರತಿಮೆಯನ್ನು ಇಟ್ಟುಕೊಂಡರೆಂದು ಬರೆಯುತ್ತಾರೆ.

ದ್ರೌಪದೀ ವಿಷಯದಲ್ಲಿ ದ್ರುಪದರಾಜ್ಯಲಕ್ಷ್ಮಿಯನ್ನು ಪಂಚಪಾಂಡವರು ಹಂಚಿಕೊಂಡರೆಂದರ್ಥವೆಂದು ತಾತ್ಪರ್ಯವನ್ನು ಕಲ್ಪಿಸುತ್ತಾರೆ. ಅಥವಾ ಪಂಚಪಾಂಡವರ ಹೆಂಡತಿಯರು ಐದು ಜನರಿಗೂ ದ್ರೌಪದಿಯೆಂದೇ ಹೆಸರು ಎಂದೊಂದು ಕಲ್ಪನೆ ಮಾಡಲ್ಪಟ್ಟಿದೆ. ಈ ಪ್ರಕಾರ ದ್ರೌಪದೀ ವಿಷಯದಲ್ಲಿ ಬಹು ವಿಧ ಕಲ್ಪನೆಗಳನ್ನು ಕಲ್ಪಿಸಿರುತ್ತಾರೆ. ಸಾವಿತ್ರ್ಯುಪಾಖ್ಯಾನದಲ್ಲಿ ಅಂಗುಷ್ಠ ಮಾತ್ರ ಪ್ರಮಾಣವುಳ್ಳ ಸತ್ಯವಂತನ ಜೀವಾತ್ಮನನ್ನು ಯಮಕಿಂಕರನು ಎಳೆದುಕೊಂಡು ಹೋದರೆಂಬ ಸಂದರ್ಭದಲ್ಲಿ ಜೀವಾತ್ಮನು ವಿಭುವು, ಅಪರಿಮಿತ ಪ್ರಮಾಣವುಳ್ಳವನೆಂದು ಸಿದ್ಧಾಂತಮಾಡಿ ಭಾರತ ವಚನವು ಕಾವ್ಯಶೋಭಾನಿ ೯ ರ್ಥವೆಂದು ನಿರ್ಣಯಿಸಿರುವರು.

ಪುರಾಣಕಥೆಗಳಲ್ಲಿ ಹೇಗೆ ಕೇಳುತ್ತೇವೋ ಹಾಗೆಯೇ ನಡೆಯಿತೆಂದು ಆಗ್ರಹ ಕೂಡದು. ಅವುಗಳ ನೀತಿಯನ್ನು ಗ್ರಹಿಸಬೇಕೆಂದು ನಿರ್ಣಯಿಸಿರುತ್ತಾರೆ. ಇತ್ಯಾದಿ ವಿಷಯಗಳು ತಂತ್ರವಾರ್ತಿಕದಲ್ಲಿ ಹೇಳಲ್ಪಟ್ಟಿರು

ತ್ತವೆ. ಕಾಲಕ್ರಮದಲ್ಲಿ ಗ್ರಂಥಕಾರರ ಅಭಿಪ್ರಾಯಭೇದಗಳು ಆಶ್ಚರ್ಯ ಕರಗಳಲ್ಲ.

**ಆತ್ಮಾ**

ಈ ದರ್ಶನದಲ್ಲಿ ದೇಹಾತಿರಿಕ್ತವಾದ ಆತ್ಮವಸ್ತುವನ್ನು ಸಾಧಿಸಿರುವ ಕ್ರಮವೆಂತೆಂದರೆ— ದೇಹೇಂದ್ರಿಯಾದಿಗಳೇ ಆತ್ಮ ವಸ್ತುವಾದರೆ ಬುದ್ಧಿ ಸುಖ ದುಃಖಾದಿಗಳು ದೇಹಾದಿಗಳಿಗೆ ಸೇರಿದವೆಂದು ಹೇಳಬೇಕು. ದೇಹಕ್ಕೆ ಸೇರಿದರೆ ರೂಪರಸ ಸ್ಪರ್ಶಗಳಂತೆ ಇತರರಿಗೂ ಗೋಚರವಾಗಬೇಕಾಗುತ್ತದೆ. ರೂಪಾದಿಗಳಂತೆ ಸದಾ ದೇಹದಲ್ಲಿರಬೇಕಾಗುತ್ತದೆ. ಆದ್ದರಿಂದ ದೇಹಕ್ಕೆ ಸೇರಿದುದಲ್ಲ. ಒಳಗೆ ಸರ್ವಾನುಭವಸಿದ್ಧವಾದ ಬುದ್ಧಿ ಸುಖ ದುಃಖ ಕಾಮ ಕ್ರೋಧ ದ್ವೇಷ ದಯೆ ದಾಕ್ಷಿಣ್ಯ ಮೊದಲಾದ ಅನಂತ ಭಾವಗಳಿಗೆ ಆಧಾರ ವಾಗಿ ಪ್ರತಿಪ್ರಾಣಿಯುಲ್ಲೂ ಬೇರೆಬೇರೆಯಾಗಿರುವ ವಸ್ತುವೇ ಆತ್ಮನು ಎಂದು ಸಾಮಾನ್ಯವಾಗಿ ಚಾರ್ವಾಕೇತರರೆಲ್ಲರೂ ಅಂಗೀಕರಿಸಿರುವರು.

ಈ ವಿಷಯದಲ್ಲಿ ಬೌದ್ಧರ ಅಭಿಪ್ರಾಯವಿದು— ವಿಜ್ಞಾನವೆಂಬ ಮನಸ್ಸೇ ಚಿತ್ತ, ಅದೇ ಆತ್ಮ. ಅವನ ಸ್ವಭಾವಗಳೇ ಸುಖ ದುಃಖ ಭಯ ಕೋಪ ಮೊದಲಾದ ಭಾವಗಳು. ಆ ಚಿತ್ತವು ಪ್ರತಿಕ್ಷಣದಲ್ಲೂ ವಿಚಿತ್ರ ವಾಗಿ ಪರಿಣಮಿಸುವುದು. ಆದುದರಿಂದಲೇ ಪ್ರತಿ ಪ್ರಾಣಿಗೂ ಸಂಸ್ಕಾರ ವೆಂಬ ವಾಸನಾಗುಣವಾಗಿ ವಿಚಿತ್ರಗಳಾದ ಭಾವಗಳು ಬರುವುವು. ವಿಜ್ಞಾ ನವೇ ಆತ್ಮನು. ಅದೇ ಅಂತರವಸ್ತುವೆಂದು ನಿರ್ಣಯ.

ಇದಕ್ಕೆ ಪ್ರತಿಯಾಗಿ ಇತರ ದಾರ್ಶನಿಕರೆಲ್ಲರೂ ಆ ವಿಜ್ಞಾನವಸ್ತುವಿ ಗಿಂತಲೂ ಬೇರೆಯಾದ ನಿತ್ಯವಾದ ಆತ್ಮನೆಂಬ ದ್ರವ್ಯ, ಧಾತು ಮೊದಲಾದ ಶಬ್ದಗಳಿಂದ ಹೇಳಲ್ಪಡುವ ವಸ್ತುವನ್ನಂಗೀಕರಿಸಿರುವರು. ಆದರೂ ಆ ಆತ್ಮನಿಗೆ ಬೌದ್ಧರ ವಿಜ್ಞಾನಸ್ವಭಾವವನ್ನು ಒಂದೊಂದು ರೀತಿಯಲ್ಲಿ ಎಲ್ಲರೂ ಅಂಗೀಕರಿಸಿರುವರು. ವಿಜ್ಞಾನ, ಅದರ ಸ್ವಭಾವಗಳು ಆತ್ಮವಸ್ತುವಿನ ಸ್ವಾಭಾವಿಕವಾದ ಧರ್ಮವಲ್ಲ. ಕಾರಣಸಾಮಗ್ರಿಯಿಂದ ಆತ್ಮನಲ್ಲಿ ಹುಟ್ಟುವುವು. ಕಾರಣವಿಲ್ಲದಿದ್ದರೆ ಇಲ್ಲವೆಂದು ತಾರ್ಕಿಕರ ಅಭಿಪ್ರಾಯ. ಚಿತ್ತವೆಂಬ ಅಂತಃಕರಣವೊಂದು ಸರ್ವ ಪ್ರಾಣಿಗಳಿಗೂ ಉಂಟು. ಅದರ

ವಿಭವವೇ ಇವೆಲ್ಲ. ಆತ್ಮನಿಗೂ ಚಿತ್ತಕ್ಕೂ ಭೇದ ತಿಳಿಯದಿರುವುದರಿಂದ ಆತ್ಮನಲ್ಲಿದೆಯೆಂದು ತಿಳಿಯುವರು. ಭೇದಜ್ಞಾನ ಬಂದರೆ ಈ ತೊಂದರೆ ಯೆಲ್ಲಾ ತಪ್ಪುವುದೆಂದು ಪ್ರಾಯಃ ಇತರರೆಲ್ಲರೂ ತಿಳಿಯುವರು.

ಮೀಮಾಂಸಕರು ಹೇಳುವುದೇತೆಂದರೆ—ತಾರ್ಕಿಕ ಮತವನ್ನೂ ಬೌದ್ಧ ಮತವನ್ನೂ ಸೇರಿಸಿರುವರು. ಪ್ರಾಯಃ ಇವರು ಮಧ್ಯಸ್ಥ ಮಾರ್ಗ ದಲ್ಲಿರುವರೆಂದು ತಿಳಿಯಬೇಕು. ದ್ರವ್ಯರೂಪವಾದ ಆತ್ಮ ವಸ್ತುವಿಗೇಯೇ ವಿಜ್ಞಾನ ವಾದಿಗಳ ಚಿತ್ತ ಸ್ವಭಾವವನ್ನು ಹೇಳುವರು. ಆದರೆ ಆ ಸ್ವಭಾ ವಕ್ಕೆ ಶಕ್ತಿವ್ಯಕ್ತಿಯೆಂಬ ಸೂಕ್ಷ್ಮ ಸ್ಥೂಲಸ್ವಭಾವವಿರುವುದು. ಕಾರಣ ಸಾಮಗ್ರಿಯಿಂದ ಸ್ಥೂಲ ಸ್ವಭಾವವು ಬರುವುದು. ಕಾರಣವಿಲ್ಲದಿದ್ದರೆ ಸೂಕ್ಷ್ಮಸ್ವಭಾವದಲ್ಲಿರುವುದು, ಶಕ್ತಿ ರೂಪದಿಂದಿರುವುದೆಂದರ್ಥ. ಇದರಿಂದ ಸರ್ವ ವ್ಯವಹಾರವನ್ನು ನಿರ್ವಹಿಸುವರು.

ಇಂತಹ ಆತ್ಮವಸ್ತುಗಳು ಅಸಂಖ್ಯಾತ, ಸರ್ವವ್ಯಾಪಕಗಳು, ಶರೀ ರೇಂದ್ರಿಯ ಸಂಯೋಗವಿಯೋಗಗಳೇ ಜನನ ಮರಣಗಳು. ಇಂತಹ ಶರೀರ ಗಳು ದೇವ ತಿರ್ಯಕ್ ಮನುಷ್ಯ ಸ್ಥಾವರವೆಂದು ಇತರರು ಹೇಳುವಂತೆಯೇ ನಾಲ್ಕು ಪ್ರಕಾರಗಳು. ಪ್ರಾಭಾಕರ ಮತದಲ್ಲಿ ಮನುಷ್ಯ ತಿರ್ಯಕ್ ಎಂದು ಎರಡೇ ವಿಧ ಶರೀರವೆಂದಭಿಪ್ರಾಯ.

ಈ ಆತ್ಮವಸ್ತುಗಳೆಲ್ಲವೂ ಮೇಲ್ಕಂಡ ಚೈತನ್ಯಸ್ವರೂಪವೆಂಬ ಪ್ರಕಾರ ದಲ್ಲಿ ಸಮವಾದುದರಿಂದ ಉಪನಿಷತ್ತುಗಳಲ್ಲಿ ಒಬ್ಬನೇ ಆತ್ಮನೆಂದು ಹೇಳುವ ರೆಂದು ಕುಮಾರಿಲರು ಬರೆಯುತ್ತಾರೆ. ಇಂತಹ ಆತ್ಮನಿಗೆ ಸರ್ವವಿಧ ಸುಖ ವನ್ನೂ ಸರ್ವೈಶ್ವರ್ಯವನ್ನೂ ಸರ್ವಶಕ್ತಿಯನ್ನೂ ಹೊಂದುವ ಯೋಗ್ಯತೆ ಸರ್ವದಾ ಇರುವುದು. ಆದರೆ ಪಾಪವೆಂಬ ಪ್ರತಿಬಂಧಕದಿಂದ ತಡೆಯ ಲ್ಪಟ್ಟಿರುವುದು. ಪ್ರತಿಬಂಧಕವು ಯಜ್ಞಯಾಗಾದಿ ಕರ್ಮಗಳಿಂದ ಎಷ್ಟೆಷ್ಟು ನಿವೃತ್ತಿಯಾದರೆ ಅಷ್ಟಷ್ಟು ಸುಖಾನುಭವವು ಹೊರಬೀಳುವುದು. ಈ ಅಭಿ ಪ್ರಾಯ ಈ ತಂತ್ರವಾರ್ತಿಕ ಶ್ಲೋಕದಲ್ಲಿರುವುದು —

ಸರ್ವಾವಾಪ್ತಿಸಮರ್ಥೋಽಸೌ ಪ್ರಕೃತ್ಯಾಽಽತ್ಮಾ ಸದೇಷ್ಯತೇ
ಕಶ್ಚಿತ್ತು ಪ್ರತಿಬನ್ಧೋಽಸ್ಯ ಕರ್ಮಭಿಸ್ಸೋಽಪನೀಯತೇ ॥

ಇದೇ ಅಂಶವು ಛಾಂದೋಗ್ಯೋಪನಿಷತ್ತಿನಲ್ಲೂ ಇರುವುದು—

ನ ಪಶ್ಯೋ ಮೃತ್ಯುಂ ಪಶ್ಯತಿ ನ ರೋಗಂ ನೋತ ದುಃಖಿತಾಮ್
ಸರ್ವಂ ಹಿ ಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶಃ ॥

ಈ ಆತ್ಮವಸ್ತುವು ಸ್ವಸಂವೇದ್ಯ, ಸ್ವಪ್ರಕಾಶ, ತನ್ನನ್ನು ತಾನೇ ತಿಳಿದು ಕೊಳ್ಳುವುದು. ಇಂತಹ ಆತ್ಮನಿಗೆ ನಿತ್ಯವಾದ ಜ್ಞಾನವೆಂಬ ಧರ್ಮವಿರುವುದು ಎಂದು ಶಬರ ಸ್ವಾಮಿಗಳು ಹೇಳುತ್ತಾರೆ.

ಈ ವಿಜ್ಞಾನಾತಿರಿಕ್ತ ಆತ್ಮನ ಸಿದ್ಧಿಯನ್ನು ಪ್ರತ್ಯಭಿಜ್ಞಾ ಪ್ರತ್ಯಕ್ಷವೆಂಬ ಅನುಭವದಿಂದ ಹೇಳುತ್ತಾರೆ. ಅದೆಂತೆಂದರೆ—"ಅನ್ಯೇದ್ಯುಃ ದೃಷ್ಟೇ ಅಪರೇದ್ಯುಃ ಅಹಮಿದಮದರ್ಶಮಿತಿ ಭವತಿ ಪ್ರತ್ಯಯಃ" ಬೇರೆ ದಿನದಲ್ಲಿ ನೋಡಿದ ವಸ್ತುವನ್ನು ಮತ್ತೊಂದು ದಿನದಲ್ಲಿ ನಾನು ನೋಡಿದೆನು ಎಂಬ ಅನುಭವವೇ ಪ್ರತ್ಯಭಿಜ್ಞಾ ಪ್ರತ್ಯಕ್ಷ. ಈ ಅನುಭವ ಮನುಷ್ಯ ಸಾಮಾನ್ಯಕ್ಕೆ ಅಬಾಧಿತವಾಗಿ ಸ್ವರಸವಾಗಿ ಬರುವುದು. ಇಂತಹ ಅನುಭವವಿಲ್ಲವೆಂದು ಯಾರೂ ಹೇಳುವುದಿಲ್ಲ. ಇದರಲ್ಲಿ ದಿನಗಳು ಹೇಗೆ ಬೇರೆಯೋ, ಜ್ಞಾನಗಳು ಹೇಗೆ ಬೇರೆಯೋ ಹಾಗೆ ನೋಡತಕ್ಕವನಾದ ತಾನೂ, ನೋಡಲ್ಪಟ್ಟ ವಿಷಯವೂ ಒಂದಾಗಿ ಗೋಚರವಾಗುವುದು. ಆದುದರಿಂದ ನಾನು ಎಂಬ ವಸ್ತು ಸ್ಥಿರ, ನೋಡುವಿಕೆ ಎಂಬ ಜ್ಞಾನ ಅಸ್ಥಿರ ಎಂದು ನಿರ್ಣಯವಾದರೆ ಕ್ಷಣಿಕ ವಿಜ್ಞಾನವೇ ಆತ್ಮವೆಂಬ ಬೌದ್ಧಮತವು ನಿರಾಕೃತವಾಗುವುದು.

ಲೋಕದಲ್ಲಿ ಹೊರಗಿನ ವಸ್ತುಗಳಲ್ಲಿ ಕರ್ತೃ, ಕರ್ಮ, ಕ್ರಿಯೆ ಎಂಬ ಭೇದ ಅನುಭವಸಿದ್ಧವಾಗಿರುವ ಹಾಗೆ ಒಳಗಿನ ವಸ್ತುಗಳಲ್ಲೂ ನಾನು ಎಂಬ ಕರ್ತೃ, ನೋಡು ಎಂಬ ಕ್ರಿಯೆ, ಇದು ಎಂಬ ಕರ್ಮ ಸಹಜವಾಗಿ, ಅಬಾಧಿತವಾಗಿ ಬೇರೆ ಬೇರೆ ತೋರುತ್ತಿರುವಲ್ಲಿ ಈ ಮೂರೂ ಒಂದು ಎಂಬ ಅಭಿಪ್ರಾಯದಿಂದ ಈ ಅನುಭವವನ್ನು ಭ್ರಾಂತಿ ಎಂದು ಹೇಳುವುದು ಸ್ವರಸವಲ್ಲ. ಲೋಕಾನುಭವ ವಿರುದ್ಧವಾಗಿಯೇ ತತ್ತ್ವದ ಸ್ಥಿತಿಯೆಂದು ಬೌದ್ಧರ ಅಭಿಪ್ರಾಯ. ಇದು ಈ ಶ್ಲೋಕದಿಂದ ವ್ಯಕ್ತವಾಗುತ್ತದೆ—

ಇನ್ದ್ರಿಯೈರುಪಲಬ್ಧಂ ಯತ್ತತ್ತತ್ತ್ವೇವ ಭವೇದ್ಯದಿ
ಜಾತಾಸ್ತತ್ತ್ವವಿದೋ ಬಾಲಾಸ್ತತ್ತ್ವಜ್ಞಾನೇನ ಕಿಂ ತದಾ ॥

ಎಂದು ವಿಜ್ಞಾನವಾದಿಗಳು ಅಭಿಪ್ರಾಯಪಡುವರು. ಇದಕ್ಕೆ ಮೀಮಾಂಸ

ಕರು ಹೇಳುವುದೇನೆಂದರೆ— ಅಬಾಧಿತವಾದ ಲೋಕಾನುಭವವಿದೆಯೋ ಅದ ರಂತೆ ವಸ್ತುಗಳಿರುವಲ್ಲಿ ಹೇಗೆ ಅನುಭವವಿದೆಯೋ ಅದರಂತೆ ವಸ್ತುಗಳಿಲ್ಲ, ಹೇಗೆ ಅನುಭವವಿಲ್ಲವೋ ಅದರಂತೆ ವಸ್ತುಗಳಿವೆ ಎಂದು ಹೇಳಿದರೆ ಕುದುರೆ ಯಿಲ್ಲ, ಕೊಂಬಿದೆ ಎಂದು ಹೇಳಿದ ಹಾಗಾಗುತ್ತದೆ. ಆದುದರಿಂದ ವಿಜ್ಞಾ ನಾತ್ಮವಾದವು ಲೋಕಾನುಭವ ವಿರುದ್ಧ.

ವಿಜ್ಞಾನಕ್ಕಿಂತಲೂ ಬೇರೆ ಆತ್ಮನಿದ್ದರೆ ವಿಜ್ಞಾನವನ್ನು ಬಿಟ್ಟು ಆತ್ಮ ಸ್ವರೂಪವನ್ನು, ಘಟವನ್ನು ಬಿಟ್ಟು ಪಟವನ್ನು ತೋರಿಸುವ ಹಾಗೆ ತೋರಿಸು. ತೋರಿಸಲಸಾಧ್ಯವಾದರೆ, ಆತ್ಮನೇ ಇಲ್ಲವೆಂದು ಆಯಾ ಆತ್ಮರ ಸುಖ ದುಃಖಾನುಭವಗಳು ಆಯಾ ಆತ್ಮರಿಗೇಯೇ ಗೋಚರವಾಗಿ ಇತರರಿಗೆ ತಿಳಿಯಪಡಿಸುವುದು ಹೇಗೆ ಸಾಧ್ಯವಿಲ್ಲವೋ ಹಾಗೆ ಆತ್ಮನೆಂಬ ವಸ್ತು ಆಯಾ ಆತ್ಮನು ಸ್ವರೂಪವೆಂಬ ಅನುಭವದಿಂದಲೇ ತಿಳಿಯತಕ್ಕ ವಸ್ತುವಾದ್ದರಿಂದ ಇತರರಿಗೆ ತಿಳಿಯಪಡಿಸಲು ಸಾಧ್ಯವಿಲ್ಲ. ಅವನವನ ಅನುಭವಕ್ಕೆ ಮಾತ್ರ ಗೋಚರವಾದ ವಸ್ತುವನ್ನು ಇತರರಿಗೆ ತೋರಿಸಲಸಾಧ್ಯವಾದ್ದರಿಂದ ವಸ್ತುವೇ ಇಲ್ಲವೆಂದರೆ ಒಬ್ಬರ ವಿಜ್ಞಾನವನ್ನು ಮತ್ತೊಬ್ಬನಿಗೆ ತೋರಿಸಲು ಸಾಧ್ಯವಾದುದರಿಂದ ವಿಜ್ಞಾನ ಸಹ ಇಲ್ಲವೆಂದು ಹೇಳಬಹುದು. ಹಾಗಾದರೆ ಆತ್ಮಸ್ವರೂಪವನ್ನು ಶ್ರುತಿಗಳೂ ಗುರುಗಳೂ ಹೇಗೆ ಉಪದೇಶಿಸುವರು ಎಂದರೆ ದೇಹೇಂದ್ರಿಯಾದಿಗಳನ್ನೂ ಆತ್ಮನನ್ನೂ ಒಂದೆಂದು ಭ್ರಮಿಸಿರು ವವರಿಗೆ ದೇಹವೂ ಆತ್ಮಸ್ವರೂಪವಲ್ಲ, ಇಂದ್ರಿಯಗಳೂ ಆತ್ಮಸ್ವರೂಪವಲ್ಲ ಎಂದು ಪರಿಶುದ್ಧಾತ್ಮ ಸ್ವರೂಪವನ್ನು ನಿಷೇಧರೂಪದಿಂದ ತಿಳಿಯಪಡಿಸು ತ್ತಾರೆ.

## ಮೋಕ್ಷ ಮತ್ತು ಪರಮಾತ್ಮಾ

ಇಂತಹ ಜೀವಾತ್ಮನಿಗೆ ಬುದ್ಧಿ ಸುಖದುಃಖಾದಿಗಳ ಸೂಕ್ಷ್ಮರೂಪ ವಾದ ಶಕ್ತಿ ಸ್ವಾಭಾವಿಕವಾಗಿರುವುದರಿಂದ ಇದರ ಅಭಿವ್ಯಕ್ತಿ ಎಂಬ ಸರ್ವ ಕಾಮಾವಾಪ್ತಿಸಿದ್ಧಿ ಶುಭರೂಪವಾಗಿ ದೋಷಸಂಬಂಧವಿಲ್ಲದೆ ನಿರತಿಶಯ ವಿಕಾಸಾವಸ್ಥೆಯನ್ನು ಹೊಂದಿ ಶ್ರುತಿಸಿದ್ಧವಾದ ಪರಮಾತ್ಮಪ್ರಾಪ್ತಿಯೇ ಪರಮ ಪುರುಷಾರ್ಥವೆಂದು ತಂತ್ರವಾರ್ತಿಕವ್ಯಾಕರಣಾಧಿಕರಣದಲ್ಲಿ ಕುಮಾ ರಿಲ ಭಟ್ಟಾಚಾರ್ಯರು ನಿರೂಪಿಸಿರುವರು. ಇಂತಹ ಮೋಕ್ಷವು ಪರಮಾತ್ಮ

ಸಾಮ್ಯವೆಂದು ಶ್ರುತಿಯಲ್ಲಿ ಹೇಳಿರುವುದನ್ನು ಅನೇಕ ಯುಕ್ತಿಗಳಿಂದಲೂ ಪ್ರಮಾಣಗಳಿಂದಲೂ ಪಾರ್ಥಸಾರಥಿ ಮಿಶ್ರರು 'ಶಾಸ್ತ್ರದೀಪಿಕೆ'ಯಲ್ಲಿ ಸಿದ್ಧಾಂತ ಮಾಡಿರುವರು.

ಪರಮಾತ್ಮ ವಿಷಯದಲ್ಲಿ ಕುಮಾರಿಲರು 'ಶ್ಲೋಕವಾರ್ತಿಕ' ಗ್ರಂಥ ಪ್ರಾರಂಭದಲ್ಲೇ,

ವಿಶುದ್ಧಜ್ಞಾನದೇಹಾಯ ತ್ರಿವೇದೀ ದಿವ್ಯಚಕ್ಷುಷೇ
ಶ್ರೇಯಃ ಪ್ರಾಪ್ತಿನಿಮಿತ್ತಾಯ ನಮಃ ಸೋಮಾರ್ಧಧಾರಿಣೇ ।।

ಎಂದು ಪರಮೇಶ್ವರ ನಮಸ್ಕಾರಮಾಡಿ ಗ್ರಂಥವನ್ನು ಬರೆಯುತ್ತಾರೆ. ಈ ಮಂಗಳ ಶ್ಲೋಕದಲ್ಲಿ ಪ್ರಥಮಪಾದದಲ್ಲಿ ಅಪ್ರಾಕೃತಶುದ್ಧಸತ್ತ್ವಮಯವಾದ ಸ್ವಪ್ರಕಾಶ ವಸ್ತು ಅವರಿಗೆ ರೂಪವೆಂದರ್ಥವು. ಎರಡನೆಯ ಪಾದದಲ್ಲಿ ಅನಾದಿಕಾಲ ಸಿದ್ಧವಾದ ವೇದಮೂಲಕವಾಗಿಯೇ ಅವನು ಸಕಲ ವ್ಯಾಪಾರವನ್ನು ಮಾಡುವವನೆಂದರ್ಥ. ಮೂರನೆಯ ಪಾದದಲ್ಲಿ ಪರ ಮೇಶ್ವರನ ಪ್ರೀತಿಯೇ ಅಪೂರ್ವವೆಂದೂ ಅವನೇ ಸರ್ವಕರ್ಮ ಸಮಾರಾ ಧ್ಯನು, ಸರ್ವಫಲಪ್ರದನೆಂಬ ಭಾಗವತ ಸಿದ್ಧಾಂತವು ಸೂಚಿಸಲ್ಪಡುವುದು. ನಾಲ್ಕನೆಯ ಪಾದದಲ್ಲಿ ಅರ್ಧ ಪ್ರಕಾಶ, ಅರ್ಧ ತಮಸ್ಸು ಈ ಸ್ಥಿತಿಯಲ್ಲಿರುವ ಚಂದ್ರವೌಳಿಯೆಂದರೆ ಅಜ್ಞಾನಿಗಳಿಗೆ ಅವನ ಸ್ವರೂಪವು ತಿಳಿಯದಿದ್ದರೂ ಜ್ಞಾನಿಗೆ ಗೋಚರವೆಂದರ್ಥವು. ಇಂತಹ ಪರಮೇಶ್ವರನ ಅನುಗ್ರಹ ವಿಲ್ಲದೆ ನಿರತಿಶಯಸುಖವೆಂಬ ಮೋಕ್ಷವು ಲಭ್ಯವಲ್ಲವೆಂಬ ಅಭಿಪ್ರಾಯವು ಸ್ಪಷ್ಟವಾಗಿ ತಿಳಿದುಬರುತ್ತದೆ.

ಈ ಅಂಶವನ್ನು 'ಶಾಸ್ತ್ರದೀಪಿಕೆ'ಯಲ್ಲಿ ಪಾರ್ಥಸಾರಥಿಮಿಶ್ರರು ಪುರುಷೋತ್ತಮನ ಅನುಗ್ರಹವನ್ನು ಭಗವದ್ಗೀತಾವಚನಗಳಿಂದ ಸಮ ರ್ಥಿಸಿ ಸಾಧಿಸಿರುವರು. ಅನಂತರಕಾಲದ ಮೀಮಾಂಸಾಶಾಸ್ತ್ರಕಾರ ರೆಲ್ಲರೂ ದೇವತಾನಿರಾಕರಣಪ್ರಕರಣದಲ್ಲಿ ವ್ಯಾಖ್ಯಾನ ಮಾಡಿದ ಅಪರಾಧ ಕ್ಕಾಗಿ ಪರಮೇಶ್ವರನ ಪಾದಾರವಿಂದಗಳಲ್ಲಿ ಶರಣಾಗತಿಯನ್ನು ಮಾಡಿರು ತ್ತಾರೆ. ಆದುದರಿಂದ ವೇದಾಂತ ಭಕ್ತಿಮಾರ್ಗಕ್ಕೂ ಮೀಮಾಂಸಾ ಸಿದ್ಧಾಂತಕ್ಕೂ ಸ್ವಲ್ಪವೂ ವ್ಯತ್ಯಾಸವಿಲ್ಲ. ಪ್ರಾಯಶಃ ವೈದಿಕೋತ್ತಮರಾದ ಬ್ರಾಹ್ಮಣವಿದ್ವಾಂಸರೇ ಮೀಮಾಂಸಾಗ್ರಂಥಕಾರರಾದುದರಿಂದ ಈ ಪರಿ ವರ್ತನೆ ಆಗಿರಬಹುದು.

ಗ್ರಹೈಕತ್ವಾಧಿಕರಣದಲ್ಲಿ ಪರಮಾತ್ಮಸ್ವರೂಪವನ್ನು ಸಕಲವೇದಗಳೂ ಅವನಿಗೆ ಶರೀರವಾಗಿರುವುದನ್ನೂ ಅವನ ಅಭಿಪ್ರಾಯಾನುಸಾರವಾಗಿ ವೇದಕ್ಕೆ ಅರ್ಥವನ್ನು ಹೇಳಬೇಕೆಂಬುದನ್ನೂ ಶ್ರುತಿಸ್ಮೃತಿಗಳು ಅವನ ಆಜ್ಞೆ ಎಂಬ ದೃಷ್ಟಿಯಿಂದ ಸ್ಪಷ್ಟಪಡಿಸಿರುವರು.

## ಮೋಕ್ಷಸಾಧನ



ಆದರೂ ಈ ವಿಷಯದಲ್ಲಿ ಒಂದಭಿಪ್ರಾಯ ತೋರುವುದು. ಪೂರ್ವಕಾಲದಲ್ಲಿ ವೈದಿಕಮತವೂ ಔಪನಿಷದಮತವೂ ಸ್ವತಂತ್ರಗಳಾಗಿ ಶುದ್ಧವಾಗಿ ಮಿಶ್ರವಿಲ್ಲದೆ ಇದ್ದುವು. ಆಗ ಪರಸ್ಪರ ನಿಂದಾವಾದಗಳು ಬಹಳವಾಗಿದ್ದುವು. ವೇದವಾದರತರು ಕುರುಡರಾಗಿ, ಮೂಢರಾಗಿ, ಕಾಮಪರವಶರಾಗಿ, ಸ್ವರ್ಗಕ್ಕಿಂತಲೂ ಬೇರೆ ಪುರುಷಾರ್ಥವಿಲ್ಲವೆಂದು ವಾದಿಸುತ್ತ, ಮೋಕ್ಷವನ್ನು ನಿಂದಿಸುತ್ತ ನಾಸ್ತಿಕರಾಗಿ ಇರುತ್ತಾರೆಂದು ಉಪನಿಷತ್ತು ಭಗವದ್ಗೀತಾ ಮೊದಲಾದ ಗ್ರಂಥಗಳಲ್ಲಿ ತ್ರಯೀಧರ್ಮವೆಂಬ ಶುದ್ಧವೈದಿಕಮತವನ್ನು ನಿಂದಿಸಿರುತ್ತದೆ. ಉಪನಿಷತ್ತುಗಳೆಲ್ಲವೂ ಕಟ್ಟುಕಥೆಗಳು, ಅವುಗಳಿಗೆ ಅರ್ಥವೇ ಇಲ್ಲವೆಂದು ಶುದ್ಧವಾದ ಔಪನಿಷದ ಮತವನ್ನು ಪ್ರಾಚೀನ ಮೀಮಾಂಸಕರು ನಿಂದಿಸುತ್ತಿದ್ದರು. ''ವೇದೋಷರಾ ವೇದಾನ್ತಾಃ'' ವೇದಾಂತಗಳು ಬಂಜರು ಜಮೀನುಗಳೆಂದರ್ಥ. ನಮ್ಮ ಪೂರ್ವಾಚಾರ್ಯರುಗಳು ಈ ಅಂಶವನ್ನು ಖಂಡಿಸಿ ವೇದಾಂತಾರಂಭವನ್ನು ಸಮರ್ಥಿಸಿರುತ್ತಾರೆ. ಇದೇ ಅಭಿಪ್ರಾಯವು ''ಸಾಙ್ಖ್ಯಯೋಗೌ ಪೃಥಕ್ ಬಾಲಾಃ ಪ್ರವದನ್ತಿ ನ ಪಣ್ಡಿತಾಃ'' ಎಂದು ಭಗವದ್ಗೀತೆಯಲ್ಲಿ ಅನುವಾದಿಸಲ್ಪಟ್ಟಿರುವುದು.

ಅನಂತರ ಕಾಲದಲ್ಲಿ ಯೋಗಮತವೆಂಬ ಕರ್ಮಮಾರ್ಗವಾದ ವೈದಿಕಮತವೂ ಸಾಂಖ್ಯಮತವೆಂಬ ಜ್ಞಾನಮಾರ್ಗವಾದ ಔಪನಿಷದ ಮತವೂ ಮಿಶ್ರವಾದುವು. ಅಭಿಪ್ರಾಯವನ್ನೇ ಅನುಸರಿಸಿ ಕುಮಾರಿಲಭಟ್ಟಾಚಾರ್ಯರು ಜ್ಞಾನವೂ ಕರ್ಮವೂ ಮೋಕ್ಷಕ್ಕೆ ಸಾಧನವೆಂದು ನಿರ್ಣಯಿಸಿರುವರು. ಕರ್ಮವೆಂಬುದರಲ್ಲಿ ಕಾಮ್ಯ ಕರ್ಮಗಳನ್ನು ಸ್ವರೂಪತಃ ಬಿಟ್ಟು ನಿತ್ಯನೈಮಿತ್ತಿಕ ಕರ್ಮಗಳನ್ನು ಪ್ರಾಚೀನ ಪಾಪಪರಿಹಾರಕ್ಕಾಗಿಯೂ ಅಕರಣ ನಿಮಿತ್ತ ಪ್ರತ್ಯವಾಯ ಪರಿಹಾರಾರ್ಥವಾಗಿಯೂ ಮಾಡಬೇಕು.

ಅಕರಣ ನಿಮಿತ್ತ ಪ್ರತ್ಯವಾಯವೆಂದರೆ ಶ್ರುತಿಸ್ಮೃತಿಗಳು ಈಶ್ವರನ ಆಜ್ಞೆ ಯಾದ್ದರಿಂದ ಅವನ ಅಪ್ಪಣೆಯನ್ನು ಉಲ್ಲಂಘಿಸಿರುವುದು ಅಕರಣ ನಿಮಿತ್ತ ಪ್ರತ್ಯವಾಯ. ಇದರ ಪರಿಹಾರವೆಂದರೆ ಅವನ ಆಜ್ಞೆಯನ್ನು ನೆರವೇರಿಸಿ ಅವನ ಅಭಿಪ್ರಾಯಾನುಸಾರವಾಗಿ ತನ್ನ ಅಭಿಪ್ರಾಯವನ್ನು ತರುವುದು ಇದೇ ಈಶ್ವರಸಾಧರ್ಮ್ಯ. ಜ್ಞಾನವೆಂದರೆ ಇಂತಹ ಕರ್ಮಗಳನ್ನು ಮಾಡುತ್ತ ಆತ್ಮೋಪಾಸನೆ ಎಂಬ ಸ್ವಾತ್ಮಶರೀರಕ ಪರಮಾತ್ಮೋಪಾಸನಾ ರೂಪವಾದ ಪರಬ್ರಹ್ಮವಿದ್ಯೆ. ಇದು ಶ್ರವಣ ಮನನ ನಿದಿಧ್ಯಾಸನ ಗಳಿಂದ ಆತ್ಮ ಪರಮಾತ್ಮ ಸಾಕ್ಷಾತ್ಕಾರರೂಪವಾಗಿ ಪರಮಾತ್ಮನ ಅನುಗ್ರಹದಿಂದ ಸರ್ವದುಃಖ ನಿವೃತ್ತಿಪೂರ್ವಕ ಸ್ವಾಭಾವಿಕ ನಿರತಿಶಯ ಸುಖವಿಕಾಸವೆಂಬ ಪರಮಾತ್ಮ ಸಾಮ್ಯಲಾಭಕ್ಕೆ ಸಾಧನವಾಗುವುದು.

ಈಶ್ವರನಿಗೂ ಜೀವಾತ್ಮ ಮೊದಲಾದ ಇತರ ಪ್ರಪಂಚಕ್ಕೂ ಶರೀ ರಾತ್ಮ ಭಯಸಂಬಂಧವೆಂಬ ನಿಯಾಮ್ಯನಿಯಾಮಕಭಾವವನ್ನು ವ್ಯೋಮ ಶರೀರ,ವೇದಶರೀರ, ವೇದಪುರುಷ ಮೊದಲಾದ ಅಂತರ್ಯಾಮಿ ಬ್ರಾಹ್ಮಣ ದೃಷ್ಟಿಮೂಲಕ ವ್ಯವಹಾರಗಳಿಂದ ಸ್ಪಷ್ಟಪಡಿಸಿರುವರು. ಇಲ್ಲಿ ವ್ಯೋಮ ಶರೀರವೆಂಬ ಪದದಿಂದ "ಖಂ ಬ್ರಹ್ಮ" ಎಂಬ ಉಪನಿಷತ್ತಿನ ವಾಕ್ಯವು ಹೃದಯದಲ್ಲಿರಬೇಕು. ಇದರಿಂದ ಶರೀರಾತ್ಮಭಾವವಿರುವ ಸ್ಥಲದಲ್ಲಿ ದೇವ, ಮನುಷ್ಯ ಮೊದಲಾದ ವ್ಯವಹಾರಗಳಂತೆ "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ಅಭೇದ ವ್ಯವಹಾರವು ಶರೀರಾತ್ಮಭಾವ ಸಂಬಂಧ ಮೂಲಕವೆಂದು ನಿರ್ಣಯವಾಗುವುದು. ಮತ್ತು ಶ್ರುತಿಯಲ್ಲಿ ವಿಧಿಸಲ್ಪಟ್ಟಿರುವ ಆತ್ಮಜ್ಞಾನ ವನ್ನು ವಿಚಾರ, ಮನನ, ಉಪಾಸನ ಎಂರು ಮೂರು ವಿಧವಾಗಿ ವಿಂಗಡಿಸಿ ಜಿಜ್ಞಾಸಾಮನನಗಳಿಗೆ ಐಹಿಕ ಆಮುಷ್ಮಿಕವೆಂಬ ಅಭ್ಯುದಯ ಫಲ ಸಂಬಂಧವನ್ನೂ ಉಪಾಸನೆಗೆ ಪುನರಾವೃತ್ತಿ ಇಲ್ಲದ ಪರಮಾತ್ಮ ಪ್ರಾಪ್ತಿ ಎಂಬ ಪರಮೇಶ್ವರ ಸಾಮ್ಯವೆಂಬ ಫಲಸಂಬಂಧವನ್ನೂ ಹೇಳಿರುತ್ತಾರೆ. ಈ ಪರಮಾತ್ಮ ಪ್ರಾಪ್ತಿಯೆಂಬ ನಿಶ್ಶ್ರೇಯಸ್ಸಿನಲ್ಲಿ ಅಭ್ಯುದಯವೆಂಬ ಫಲವು ಸಿಂಧುಬಿಂದು ನ್ಯಾಯದಿಂದ ಅಡಗಿರುವುದೆಂದು ತಿಳಿಯಬೇಕು.

ಮೀಮಾಂಸಾ ಶಾಸ್ತ್ರಕಾರರು ಉಪನಿಷತ್ತುಗಳಿಗೆ ಹೇಳುವ ಅರ್ಥವು ಕುಮಾರಿಲರ ಅಭಿಪ್ರಾಯವನ್ನನುಸರಿಸಿ 'ಶಾಸ್ತ್ರದೀಪಿಕೆ'ಯಲ್ಲಿ ಸ್ಪಷ್ಟವಾ

ಗಿರುವುದು. "ಆತ್ಮೈವೇದಂ ಸರ್ವಂ" ಎಂಬ ವಾಕ್ಯಕ್ಕೆ ಸರ್ವಕ್ಕೂ ಆತ್ಮನು ಭೋಕ್ತಾ ಎಂದರ್ಥ. ವೈದಿಕ ಪ್ರಯೋಗಗಳು ಹೀಗೆಯೇ ಇರುತ್ತವೆ. "ಯಃ ಕಾಮಯೇತ ರಾಷ್ಟ್ರಂಸ್ಯಾಮಿತಿ. ಯಃ ಕಾಮಯೇತ ಸರ್ವಮಿದಂ ಭವೇಯಮಿತಿ"—ಇತ್ಯಾದಿ ಭೋಗ್ಯಭೋಕ್ತೃಗಳಿಗೆ ಅಭೇದದಲ್ಲಿ ಶ್ರುತಿಗಳು ಇರುವುವು.

"ಯತ್ರ ಹಿ ದ್ವೈತಮಿವ ಭವತೀ" ತ್ಯಾದಿ ಭೇದನಿಷೇಧ ವಾಕ್ಯಗಳು ಸರ್ವ ಭೋಗವೂ ಕ್ಷಣಿಕವಾದುದರಿಂದ ಇಲ್ಲದಿರುವುದಕ್ಕೂ ಇದ್ದುದಕ್ಕೂ ವ್ಯತ್ಯಾಸವಿಲ್ಲವೆಂದು ಹೇಳಿ ಭೋಗದಲ್ಲಿ ವೈರಾಗ್ಯವನ್ನೂ ಮೋಕ್ಷದಲ್ಲಿ ರುಚಿಯನ್ನೂ ಉಂಟುಮಾಡುವುವು.

"ಯತ್ರತ್ವಸ್ಯ ಸರ್ವಮಾತ್ಮೈವ"–ಇತ್ಯಾದಿ ಪ್ರಪಂಚ ಪ್ರತಿಷೇದ ವಾಕ್ಯಗಳು ಮೋಕ್ಷದಲ್ಲಿ ಸಕಲ ಸಂಬಂಧವೂ ನಿವೃತ್ತಿಯಾಗಿರುವುದರಿಂದ ತನಗೆ ತಾನೇ ಸರ್ವವೆಂದು ದರಿದ್ರರು ಹೇಳಿಕೊಳ್ಳುವಂತೆ ಉಪದೇಶಿಸುವುವು.

ಪ್ರಪಂಚದ ಸೃಷ್ಟಿಪ್ರಲಯಾದಿ ವಾಕ್ಯಗಳು ಕರ್ಮಮಹಿಮೆಯನ್ನು ಬೋಧಿಸುವುವು. ಹೇಗೆಂದರೆ, ಕರ್ಮಗಳ ಪರಿಪಾಕ ದಸೆ ಬಂದರೆ ಒಂದೇ ಕ್ಷಣದಲ್ಲಿ ಸಕಲವೂ ಲಯವಾಗುವುದು, ಉದಯಿಸುವುದು, ಇಂತಹ ಮಹಿಮೆಯುಳ್ಳದ್ದು ಕರ್ಮವೆಂದು ಕರ್ಮವನ್ನು ಸ್ತೋತ್ರ ಮಾಡುವುವು.

ಈ ಪ್ರಕಾರದಲ್ಲಿ ಸಕಲೋಪನಿಷತ್ತುಗಳ ತಾತ್ಪರ್ಯವನ್ನು ತಿಳಿಯಬೇಕು. 'ಪ್ರಕರಣಪಂಚಿಕೆ'ಯಲ್ಲೂ ಈ ರೀತಿಯಾದ ಅಭಿಪ್ರಾಯವೇ ಸೂಚಿಸಲ್ಪಟ್ಟಿರುವುದು.

## ವಿರೋಧ ವಿಚಾರ

'ತಂತ್ರವಾರ್ತಿಕ' ಗ್ರಂಥ ಪ್ರಕಾರ ಜೀವಾತ್ಮ ಪರಮಾತ್ಮ ಸ್ವರೂಪವೂ ಮೋಕ್ಷವೂ ಮೋಕ್ಷ ಸಾಧನಗಳಾದ ಕರ್ಮಜ್ಞಾನಗಳೂ ಮೇಲ್ಕಂಡ ಹಾಗೆ ನಿರ್ಣಯಿಸಲ್ಪಟ್ಟರೆ ಇದಕ್ಕೆ ವಿರುದ್ಧವಾಗಿ 'ಶ್ಲೋಕವಾರ್ತಿಕ ಗ್ರಂಥದಲ್ಲಿ ಹೇಳಿರುವುದು ಹೇಗೆ ಸಮಂಜಸವಾಗುವುದು ? ಅಲ್ಲಿ ಹೇಳಿರುವುದು ಹೇಗೆಂದರೆ— ಈಶ್ವರನು ಇಲ್ಲ ; ಪ್ರಪಂಚ ಸೃಷ್ಟಿ ಪ್ರಳಯಗಳಿಲ್ಲ

ದೇಹಾತಿರಿಕ್ತ ಆತ್ಮಜ್ಞಾನವು ಯಜ್ಞಯಾಗಾದಿ ಕರ್ಮಗಳಿಗೆ ಉಪಯೋಗವೇ ವಿನಾ ಮೋಕ್ಷಕ್ಕೆ ಬೇಕಾಗಿಲ್ಲ. ಜ್ಞಾನದಿಂದ ಕರ್ಮಕ್ಕೆ ವಿನಾಶವಿಲ್ಲ. ಕಾಮ್ಯಕರ್ಮಗಳನ್ನು ಬಿಟ್ಟು ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡುವುದರಿಂದಲೂ ಈ ಜನ್ಮದಲ್ಲಿ ಸುಖದುಃಖಗಳನ್ನು ಅನುಭವಿಸುವುದರಿಂದಲೂ ಪ್ರಾಚೀನಕರ್ಮಗಳನ್ನು ವಿನಾಶಪಡಿಸಿದರೆ ಅವುಗಳ ಮೂಲಕವಾಗಿ ಬರುವ ಶರೀರೇಂದ್ರಿಯಸಂಬಂಧವು ನಿವೃತ್ತಿಯಾದರೆ ಕರ್ಮವೆಂಬ ಕಾರಣವು ಇಲ್ಲದೇ ಇರುವುದರಿಂದ ಜನ್ಮವೆಂಬ ಕಾರ್ಯವು ನಿಂತುಹೋಗಿ ಆತ್ಮನು ಸ್ವಸ್ವರೂಪಸ್ಥಿತಿಯಲ್ಲಿ ನಿಂತುಬಿಡುವನು. ಇದೇ ಮೋಕ್ಷವೆಂದು ಬರೆದಿರುವರು.

ಪ್ರಾಯಶಃ ಈ ಅಭಿಪ್ರಾಯವು ತಾರ್ಕಿಕಸಿದ್ಧಾಂತವನ್ನು ಅನುಸರಿಸಿರುವುದು. ಪ್ರಾಭಾಕರಮತಕ್ಕೆ ಸೇರಿದ 'ಪ್ರಕರಣಪಂಚಿಕಾ' ಗ್ರಂಥದಲ್ಲೂ ಶಾಲಿಕಾನಾಥರು 'ಶ್ಲೋಕವಾರ್ತಿಕ'ದ ಪ್ರಕಾರ ಮೋಕ್ಷವನ್ನು ಅನುಮೋದಿಸಿರುತ್ತಾರೆ. ಇಲ್ಲಿ ಭೋಗದಿಂದ ಕರ್ಮಕ್ಷಯವನ್ನು ಹೇಳಿರುವುದರಿಂದ ಏಕಭವಿಕಪಕ್ಷವು ಇವರಿಗೆ ಸಮ್ಮತವೆಂದು ಹೇಳಬಹುದು. ಅದೆಂತೆಂದರೆ—ಮನುಷ್ಯಜನ್ಮ ಪರಂಪರೆಯಲ್ಲಿ ಪೂರ್ವಜನ್ಮದಲ್ಲಿ ಮಾಡಿದ ಸಕಲಕರ್ಮಗಳಿಗೂ ಅದರ ಮುಂದಿನ ಜನ್ಮದಲ್ಲಿ ಫಲವು. ಅಲ್ಲಿ ಮಾಡಿದ ಸಕಲ ಕರ್ಮಗಳಿಗೂ ಅದರ ಮುಂದಿನ ಜನ್ಮದಲ್ಲಿ ಫಲವು. ಇದರಿಂದ ಕರ್ಮಗಳಲ್ಲಿ ಸಂಚಿತ, ಆಗಾಮಿ, ಪ್ರಾರಬ್ಧವೆಂಬ ಮೂರು ರಾಶಿಗಳು. ಇಲ್ಲಿ ಆಗಾಮಿ, ಪ್ರಾರಬ್ಧ ಎಂದು ಎರಡೇ ರಾಶಿಗಳು. ಹಿಂದಿನ ಜನ್ಮದ ಕರ್ಮಗಳೆಲ್ಲವೂ ಆಗಾಮಿ ಎಂದು ನಿರ್ಣಯವಾಗುತ್ತದೆ. ಹೀಗಾದರೆ ಈ ಜನ್ಮದಲ್ಲಿ ಕಾಮ್ಯಕರ್ಮಗಳನ್ನು ಮಾಡದೆ ಹಿಂದಿನ ಜನ್ಮದ ಕರ್ಮಗಳೆಲ್ಲವನ್ನೂ ಅನುಭವದಿಂದಲೂ ನಿತ್ಯನೈಮಿತ್ತಿಕ ಕರ್ಮಗಳಿಂದಲೂ ವಿನಾಶಪಡಿಸಿ ಮುಂದಿನ ಜನ್ಮವಿಲ್ಲದೆ ನಿಲ್ಲಬಹುದೆಂದು ಅಭಿಪ್ರಾಯವಾಗುವುದು. ಇದೇ ಏಕಭವಿಕ ಪಕ್ಷ. ಇದು ವ್ಯಾಕರಣಾಧಿಕರಣಕ್ಕೆ ವಿರುದ್ಧವಾಗಿರುವುದು. ಆದರೆ ಈ 'ಶ್ಲೋಕವಾರ್ತಿಕ'ದ ಕೊನೆಯ ಶ್ಲೋಕದಲ್ಲಿ—

ಏವಂ ಯೇ ಯುಕ್ತಿಭಿಃ ಪ್ರಾಹುಸ್ತೇಷಾಂ ದುರ್ಲಭಮುತ್ತರಮ್

ಎಂದು ಬರೆದಿರುವರು. ಕೇವಲ ಯುಕ್ತಿಗಳಿಂದ ಹೀಗೆ ಯಾರು ಹೇಳು

ವರೋ ಅವರಿಗೆ ಸರಿಯಾದ ಉತ್ತರವು ಯಾರಿಂದಲೂ ಹೇಳಲು ಸಾಧ್ಯವಿಲ್ಲವೆಂದರ್ಥ. ಇದರಿಂದ 'ಶ್ಲೋಕವಾರ್ತಿಕ' ಗ್ರಂಥವು ಬರಿಯ ಯುಕ್ತಿಮೂಲಕವು, ವ್ಯಾಕರಣಾಧಿಕರಣವು ಶ್ರುತಿಮೂಲಕವು, ಶ್ರುತಿಶರಣರು ವ್ಯಾಕರಣಾಧಿಕರಣಪ್ರಕಾರ ನಡೆಯಬೇಕೆಂದು ಸಿದ್ಧಾಂತ. ಇದು ಅವರ ವಾಕ್ಯದಿಂದಲೇ ಸ್ಪಷ್ಟವಾಗುತ್ತದೆ.

## ಪ್ರಮಾಣ

ಇಂದ್ರಿಯ ಮೊದಲಾದ ಕಾರಣಗಳಿಂದುಂಟಾಗುವ ಜ್ಞಾನಕ್ಕೇಯೇ ಪ್ರಮಾಣವೆಂದು ವ್ಯವಹಾರ. ಪ್ರಮಾಣಪದವು ಪ್ರಮೇಯವನ್ನುಂಟುಮಾಡುವುವೆಂಬರ್ಥದಲ್ಲಿ ಇಂದ್ರಿಯ ಲಿಂಗ ಸಾದೃಶ್ಯ ಶಬ್ದ ಉಪಪಾದ್ಯ ಇವುಗಳ ಅಭಾವ ಎಂದು ಆರು ವಿಧಿಗಳನ್ನು ಬೋಧಿಸುವುದು. ಪ್ರಮಾಣಪದವು ಪ್ರಮೆಯೆಂಬ ಜ್ಞಾನವನ್ನು ಬೋಧಿಸಿದರೆ ಆರು ವಿಧ ಜ್ಞಾನಗಳೆಂದರ್ಥ.

ಪ್ರಮೆ, ಬುದ್ಧಿ, ಉಪಲಬ್ಧಿ ಮೊದಲಾದ ಪದಗಳಿಂದ ಹೇಳಲ್ಪಡುವ ಜ್ಞಾನವೆಂಬುದು ಸೂಕ್ಷ್ಮವಾದ ಅತೀಂದ್ರಿಯವಾದ ಕ್ರಿಯೆ. ಆದುದರಿಂದ ಕರ್ತೃ, ಕರ್ಮ, ಕರಣವೆಂಬ ಕಾರಕಗಳಿಂದ ಪಾಕಾದಿಕ್ರಿಯೆಯಂತೆ ಕರ್ತೃವಾದ ಆತ್ಮನಲ್ಲಿ ಉದಯಿಸುವುದು. ಪ್ರಾಕಟ್ಯ, ದೃಷ್ಟತಾ, ಜ್ಞಾತತಾ ಮೊದಲಾದ ಪದಗಳಿಂದ ಹೇಳಲ್ಪಡುವ ಪ್ರಕಾಶವೆಂಬ ಇದರ ಫಲದಿಂದ ಇದು ಕಲ್ಪಿಸಲ್ಪಡಬೇಕಾಗಿರುವುದು. ಪಾಕಗಮನಾದಿ ಕ್ರಿಯೆಗಳು ಅನೇಕ ಕಾರಕಗಳ ವ್ಯಾಪಾರದಿಂದುಂಟಾಗಿ ಓದನಾದಿ ಫಲವನ್ನುಂಟುಮಾಡುವ ಹಾಗೆ ಪ್ರಕಾಶವೆಂಬ ಫಲವನ್ನು ಇದು ಉಂಟುಮಾಡಿ ಅದರಿಂದ ಅನುಮಿಸಲ್ಪಡಬೇಕಾಗಿರುವುದರಿಂದ ಇದು ಅನುಮೇಯಜ್ಞಾನವಾದ. ಇಂತಹ ಕ್ರಿಯಾರೂಪಜ್ಞಾನವೇ ಪ್ರಮಾಣಪದದ ಮುಖ್ಯಾರ್ಥ. ಇದಕ್ಕೆ ಕರಣವಾಗಿರುವ ಇಂದ್ರಿಯಲಿಂಗಾದಿಗಳಲ್ಲಿ ಉಪಚಾರದಿಂದ ಪ್ರಮಾಣಪದ ಪ್ರಯೋಗವು. ಇದು ಭಟ್ಟಮತ.

ಹೀಗೆ ಪ್ರಾಭಾಕರಮತದಲ್ಲೂ ಕಾರಕಗಳಿಂದ ಕ್ರಿಯೆ ಎಂಬ ಸೂಕ್ಷ್ಮರೂಪವಾದ ಜ್ಞಾನವೆಂಬ ವ್ಯಾಪಾರವೂ ಆತ್ಮನಲ್ಲಿ ಉದಯಿಸುವುದು. ಇದು

ಭಟ್ಟಮತದಂತೆ ಅತೀಂದ್ರಿಯ. ಇದರ ಫಲವು ಪ್ರಾಕಟ್ಯದಂತೆ ಸಂವೇದನು. ಈ ಸಂವೇದನದಲ್ಲಿ ಗ್ರಾಹ್ಯವೆಂಬ ಘಟಾದಿವಸ್ತುವೂ ಗ್ರಾಹಕನೆಂಬ ಜೀವಾತ್ಮವಸ್ತುವೂ ಗ್ರಹಣವೆಂಬ ಸಂವೇದನವೂ— ಈ ಮೂರೂ ತೋರುವುವು. ಈ ಸಂವೇದನವನ್ನು ತ್ರಿಪುಟೀಜ್ಞಾನವೆಂದು ಹೇಳುವರು. ಈ ಸಂವೇದನದಲ್ಲಿ ಸಂವೇದನವೂ ತೋರುವುದರಿಂದ ಸಂವೇದನವನ್ನು ಸ್ವಯಂಪ್ರಕಾಶವೆಂದೆನ್ನುವರು. ಇದು ನವೀನಪ್ರಾಭಾಕರರ ಮತ. ಆತ್ಮನು ಅಹಂಪ್ರತ್ಯಯಗೋಚರನಲ್ಲ. ಸಂವೇದನದಲ್ಲಿ ಕರ್ತೃವಾಗಿ ಆಶ್ರಯವಾಗಿರುವಿಕೆಯೇ ಆತ್ಮನ ವ್ಯವಹಾರಕ್ಕೆ ಕಾರಣ, ಆತ್ಮನಿಗೆ ಸಂವೇದನದಲ್ಲಿ ಭಾಸವಿಲ್ಲವೆಂದು ವೃದ್ಧಪ್ರಾಭಾಕರಮತ. ಈ ಸಂವೇದನವು ಆತ್ಮನಲ್ಲಿರುವುದು; ಪ್ರಾಕಟ್ಯವು ವಿಷಯದಲ್ಲಿರುವುದೆಂದು ಭಟ್ಟಮತ. ಜ್ಞಾನಸಂವೇದನಪದಗಳು ಭಿನ್ನಾರ್ಥಗಳೆಂದು ಪ್ರಾಭಾಕರಮತ.

ಇಂತಹ ಜ್ಞಾನವು ಸ್ಮೃತಿಯೆಂದೂ ಅನುಭವವೆಂದೂ ಎರಡು ವಿಧ. ಅನುಭವವೇ ಪ್ರಮಾಣವೆಂದು ಹೇಳಿ, ತರ್ಕಮತದಂತೆ ಸ್ಮೃತಿ ಪ್ರಮಾಣವಲ್ಲವೆಂದು ಪ್ರಾಭಾಕರರ ಮತ. ಭಟ್ಟಮತದಲ್ಲಿ ಅನಧಿಗತಾಧಿಗನ್ತೃ ಎಂಬ ವಿಶೇಷಣವನ್ನು ಜ್ಞಾನಕ್ಕೆ ಕೊಟ್ಟು ಸ್ಮೃತಿಯನ್ನು ದೂರಮಾಡುವರು. ಅಧಿಗತಾಧಿಗನ್ತೃ ಎಂದರೆ ತಿಳಿದ ವಿಷಯವನ್ನು ತಿಳಿಯಿಸುವುದೆಂದರ್ಥ, ಸ್ಮೃತಿ ತಿಳಿದ ವಿಷಯವನ್ನೇ ತಿಳಿಸುವುದೆಂದು ಅಭಿಪ್ರಾಯ.

ಪ್ರಾಯಶಃ ಪ್ರಪಂಚದಲ್ಲಿ ಪ್ರಮಾಣಜ್ಞಾನವೇ ಅಧಿಕವಾಗಿಯೂ ಅಪ್ರಮಾಣವಾದ ಭ್ರಾಂತಿ ದೋಷಮೂಲಕ ಅಲ್ಪವಾಗಿಯೂ ಇರುವುದರಿಂದ ಯಥಾರ್ಥ್ಯವೆಂಬ ಪ್ರಾಮಾಣ್ಯವು ಸ್ವತಃ ಗ್ರಾಹ್ಯ. ಭ್ರಾಂತಿಸ್ಥಲದಲ್ಲಿ ಪ್ರವೃತ್ತಿ ವಿಫಲವಾಗುವುದರಿಂದ ವಿಸಂವಾದವೆಂಬ ವಿಫಲಪ್ರವೃತ್ತಿಯಿಂದ ಅಯಾಥಾರ್ಥ್ಯವೆಂಬ ಅಪ್ರಾಮಾಣ್ಯವು ಗೊತ್ತಾಗುವುದು. ಇದೇ ಪರತೋಗ್ರಾಹ್ಯವು. ಈ ಸ್ವತಸ್ತ್ವಪರಸ್ತ್ವವಿಚಾರವು ತರ್ಕಮತದಲ್ಲಿ ವಿಸ್ತರಿಸಲ್ಪಟ್ಟಿರುವುದು.

ಜ್ಞಾನವೆಂಬ ಪ್ರಮಾಣವು ಪ್ರತ್ಯಕ್ಷ, ಅನುಮಾನ. ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿ ಎಂದು ಆರು ವಿಧ.

ಆತ್ಮ, ಮನಸ್ಸು, ಇಂದ್ರಿಯ,ವಿಷಯ ಇವುಗಳ ಪರಸ್ಪರಾನುಕೂಲ್ಯ

ದಿಂದಲೂ ಪ್ರಕಾಶ ಮೊದಲಾದ ಸಹಕಾರಿಸಾಮಗ್ರೀಸಹಾಯದಿಂದಲೂ ಉಂಟಾಗುವ ಜ್ಞಾನವೇ ಪ್ರತ್ಯಕ್ಷವೆಂಬ ಸಾಕ್ಷಾತ್ಕಾರ. ಇದು ಸರ್ವವಾದಿ ಸಮ್ಮತ. ಮನಸ್ಸು ಸೇರಿ ಆರು ಇಂದ್ರಿಯಗಳಾದುದರಿಂದ ಪ್ರತ್ಯಕ್ಷವು ಆರು ಪ್ರಕಾರ. ಶಬ್ದ ಸ್ಪರ್ಶ ರೂಪ ರಸ ಗಂಧಗಳೆಂಬ ಐದು ವಿಷಯಗಳು ಐದು ಬಾಹ್ಯೇಂದ್ರಿಯಗಳಿಂದ ತಿಳಿಯಲ್ಪಡುವುವು. ಆತ್ಮನು ಅವನಲ್ಲಿ ಹುಟ್ಟುವ ಸುಖ ದುಃಖ ಇಚ್ಛಾ ದ್ವೇಷ ಮೊದಲಾದುವುಗಳು ಮನಸ್ಸಿನಿಂದ ತಿಳಿಯಲ್ಪಡುವುವು. ದೂರತ್ವ ಸೂಕ್ಷ್ಮತ್ವ ಮೊದಲಾದ ವಿಷಯದೋಷ ಗಳು. ಕಾಚ, ಕಾಮಲ ಅನವಧಾನ ನಿದ್ರಾ ಮೊದಲಾದ ಕರಣದೋಷಗಳು ಇಲ್ಲದಿರುವಾಗ, ಬರುವಂಥ ಜ್ಞಾನವು ಪ್ರಮಾಣ. ಮತ್ತು ಇದಕ್ಕೆ ಸುಪರಿ ನಿಶ್ಚಿತತ್ವವೆಂಬ ಅಬಾಧಿತತ್ವವೂ ಇರಬೇಕು. ಎಂದರೆ ಉಂಟಾದ ಜ್ಞಾನವು ತಪ್ಪಾದುದೆಂದು ಮುಂದೆ ತಿಳಿಯಲ್ಪಡದಿರಬೇಕು. ಈ ಪ್ರಕಾರವಿಲ್ಲದಿದ್ದರೆ ಮಿಥ್ಯಾಜ್ಞಾನವಾಗುವುದು. ಅದು ಸಂಶಯ ಭ್ರಾಂತಿ ಸಂಭಾವನೆ ಅನವ ಧಾರಣ ಮೊದಲಾದ ಬಹುಪ್ರಭೇದವುಳ್ಳದ್ದು.

ತಾರ್ಕಿಕರು ಹೇಳುವ ಮೂರು ವಿಧವಾದ ಅಲೌಕಿಕಪ್ರತ್ಯಕ್ಷಗಳನ್ನು ಇವರು ಅಂಗೀಕರಿಸುವುದಿಲ್ಲ. ಅವುಗಳು ಮಾನಸಿಕಜ್ಞಾನವೆಂದು ನಿರ್ಣಯ. ಮಿಕ್ಕ ವಿಷಯಗಳಲ್ಲಿ ತರ್ಕಮತಕ್ಕೂ ಈ ಮತಕ್ಕೂ ಪ್ರಾಯಶಃ ವ್ಯತ್ಯಾಸ ವಿಲ್ಲ. ನಿರ್ವಿಕಲ್ಪಕ ಸವಿಕಲ್ಪಕ ವಿಷಯದಲ್ಲಿ ಧರ್ಮಧರ್ಮಿಗಳು, ಜಾತಿ ವ್ಯಕ್ತಿಗಳು ಜಾತಿರೂಪದಿಂದಲೂ ವ್ಯಕ್ತಿರೂಪದಿಂದಲೂ ತೋರದೆ ವಸ್ತು ರೂಪದಿಂದ ತೋರಿದರೆ ನಿರ್ವಿಕಲ್ಪಕ. ಜಾತಿಯಾಗಿಯೂ ವ್ಯಕ್ತಿಯಾ ಗಿಯೂ ತೋರಿದರೆ ಸವಿಕಲ್ಪಕ. ಜಾತಿರೂಪವೆಂದರೆ ಅನೇಕವ್ಯಕ್ತಿಸಂಬಂಧ ವೆಂಬ ಅನುವೃತ್ತಿ. ಅನುವೃತ್ತಿ ತೋರದಿರುವ ಜ್ಞಾನವು ಇದು ಗೋವು ಎಂಬುದು. ಅದು ತೋರಿದ ಜ್ಞಾನವು ಇದೂ ಗೋವು ಎಂಬುದು. ಎರಡ ನೆಯ ಜ್ಞಾನದಲ್ಲಿ ಹಿಂದೆ ಇಂತಹ ವ್ಯಕ್ತಿಯನ್ನು ನೋಡಿದುದರ ಸ್ಮರಣೆ ಬೆರೆಯುವುದು. ಏವಂಚ ಅನುವೃತ್ತಿಯೇ ವಿಕಲ್ಪಶಬ್ದಾರ್ಥವು. ಅದರ ಭಾನಾಭಾನಗಳಿಂದ ವಿಭಾಗವು. ಈ ಅಂಶವು ಭಾಟ್ಟಪ್ರಾಭಾಕರೋಭಯ ಸಮ್ಮತವು.

ಅನುಮಾನಪ್ರಮಾಣ ವಿಷಯದಲ್ಲಿ ಮುಖ್ಯವಾಗಿ ಹೇತುವಿಗೆ ವ್ಯಾಪ್ತಿ

ರಬೇಂಬ ಯೋಗ್ಯತೆಯಿರಬೇಕು. ವ್ಯಾಪ್ತಿಯೆಂಬುದು ಸಾಹಚರ್ಯನಿಯಮವು, ನಿಯಮವೇನ ತಪ್ಪದೆ ಹೇತು ಇರುವ ಸ್ಥಲದಲ್ಲಿ ಸಾಧ್ಯವಿರಬೇಕೆಂಬ ವ್ಯವಸ್ಥೆ ಎಂದು ತಾರ್ಕಿಕಮತ. ಇದಕ್ಕೆ ಪ್ರತಿಯಾಗಿ ಬೌದ್ಧರು ಹೇಳುವುದೆಂತೆಂದರೆ ಅವಿನಾಭಾವವು ವ್ಯಾಪ್ತಿ, ವಿನಾಭಾವವಿರಬಾರದು ಎಂದರೆ ಸಾಧ್ಯವನ್ನು ಬಿಟ್ಟು ಹೇತು ಇರಬಾರದು. ಸಾಧ್ಯವಿಲ್ಲದ ಸ್ಥಲದಲ್ಲಿ ಹೇತುವಿರಬಾರದೆಂದರ್ಥವು. ಮೀಮಾಂಸಕಮತದಲ್ಲಿ ವ್ಯಾಪ್ತಿಯೆಂದರೆ ಅದೊಂದು ಸಂಬಂಧವು, ಸಂಯೋಗ, ಸಮವಾಯ, ಆಧಾರಾಧೇಯಭಾವ, ಕಾರ್ಯಕಾರಣಭಾವ ಮೊದಲಾದ ಪ್ರಸಿದ್ಧ ಸಂಬಂಧಗಳಂತೆ ಹೇತುಸಾಧ್ಯಗಳಿಗೆ ವ್ಯಾಪ್ತಿಯೆಂಬ ಸಂಬಂಧವಿರುವುದು. ಅದಕ್ಕೆ ನಿಯಮವೆಂದು ಹೆಸರು. ಇಂತಹ ಸಂಬಂಧವು ಸಾಹಚರ್ಯದಿಂದಲೂ ಅವಿನಾಭಾವದಿಂದಲೂ ತಿಳಿಯಲ್ಪಡತಕ್ಕದೆಂದು ನಿರ್ಣಯವು. ಇದರಿಂದ ವ್ಯಾಪ್ತಿಯನ್ನು ಅನ್ವಯ, ವ್ಯತಿರೇಕ, ಅನ್ವಯವ್ಯತಿರೇಕವೆಂದು ಮೂರು ಪ್ರಕಾರ ಮಾಡತಕ್ಕ ಅವಕಾಶವಿಲ್ಲವೆಂದು ಸಿದ್ಧಾಂತವಾಗುತ್ತದೆ. ಉಳಿದ ವಿಷಯಗಳಲ್ಲಿ ತರ್ಕಮತಕ್ಕೂ ಅದ್ವೈತಮತಕ್ಕೂ ಇದೇ ಮಧ್ಯಮಾರ್ಗವಾದುದರಿಂದ ಅವುಗಳೆರಡರಲ್ಲೂ ವಿಸ್ತರವಿರುವುದು.

ಉಪಮಾನದಲ್ಲಿ ಪದಪದಾರ್ಥಗಳ ವಾಚ್ಯವಾಚಕಭಾವವೆಂಬ ಶಕ್ತಿಜ್ಞಾನವು ತರ್ಕಮತದಂತೆ ಸಮ್ಮತವಲ್ಲ. ಅರಣ್ಯದಲ್ಲಿ ಗವಯವ್ಯಕ್ತಿಯಲ್ಲಿ ಗೋಸಾದೃಶ್ಯವನ್ನು ನೋಡಿದರೆ ಗವಯಸಾದೃಶ್ಯವು ಊರಲ್ಲಿರುವ ಗೋವ್ಯಕ್ತಿಯಲ್ಲಿ ತೋರಿಬರುತ್ತದೆ. ಇಂತಹ ಗೋವಿನಲ್ಲಿರುವ ಗವಯಸಾದೃಶ್ಯಜ್ಞಾನವು ಉಪಮಾನಪ್ರಮಾಣವು.

ಶಬ್ದಪ್ರಮಾಣದಲ್ಲಿ ಪದಗಳ ಸಾಮರ್ಥ್ಯದಿಂದಲೇ ಪದಾರ್ಥಗಳಿಗಿರುವ ಪರಸ್ಪರ ಸಂಬಂಧವೆಂಬ ವಾಕ್ಯಾರ್ಥವು ತಿಳಿಯಲ್ಪಡುವುದೆಂದು ಪ್ರಾಭಾಕರರು ಹೇಳುವರು. ಇದಕ್ಕೆ ಅನ್ವಿತಾಭಿಧಾನವಾದವೆಂದು ಹೆಸರು. ಭಟ್ಟರ ಅಭಿಪ್ರಾಯದಲ್ಲಿ ಪದಗಳಿಂದ ಪದಾರ್ಥಗಳು ಮಾತ್ರ ಗೊತ್ತಾಗುವುವು. ಅವುಗಳ ಸಂಬಂಧವೆಂಬ ವಾಕ್ಯಾರ್ಥವು ಪದಾರ್ಥಗಳ ಸಾಮರ್ಥ್ಯದಿಂದ ಗೊತ್ತಾಗುವುದು. ಪದಗಳ ಸಾಮರ್ಥ್ಯದಿಂದಲ್ಲವೆಂದು ನಿರ್ಣಯವು. ಇದಕ್ಕೆ ಅಭಿಹಿತಾನ್ವಯವಾದವೆಂದು ಹೆಸರು. ಮಿಕ್ಕ ವಿಷಯಗಳು ವೇದವಾಕ್ಯಾರ್ಥ ಪ್ರಕರಣದಲ್ಲಿರುವುವು.

ಅರ್ಥಾಪತ್ತಿಯೆಂದರೆ ತಿಳಿಯದಿರುವ ಅಂಶವನ್ನು ತಿಳಿಯುವು ದೆಂದರ್ಥ. ಇದು ಸಕಲಪ್ರಮಾಣಗಳಿಗೂ ಸಾಧಾರಣ. ಆದರೆ ತಿಳಿಯು ವುದಕ್ಕೆ ಸಾಧನಗಳು ಬೇರೆ ಬೇರೆಯಾಗಿರುವುದರಿಂದ ಬೇರೆ ಬೇರೆ ಪ್ರಮಾಣ ಗಳೆಂದು ವಿಭಾಗವು. ಈ ಅರ್ಥಾಪತ್ತಿಪ್ರಮಾಣದಲ್ಲಿ ವ್ಯಾಪ್ತಿ ಮೊದಲಾದ ಸಂಬಂಧವಿಲ್ಲ. ಆದರೆ ಉಪಪಾದ್ಯೋಪಪಾದಕಭಾವವೆಂಬ ಸಂಬಂಧವಿರು ವುದು. ದೇವದತ್ತನು ಮನೆಯಲ್ಲಿಲ್ಲವೆಂದು ತಿಳಿದರೆ ಹೊರಗೆ ಹೋಗಿ ದ್ದಾನೆಂದು ತಿಳಿಯುತ್ತೇವೆ. ಮನೆಯಲ್ಲಿಲ್ಲದಿರುವುದಕ್ಕೂ ಹೊರಗೆ ಹೋಗಿ ರುವುದಕ್ಕೂ ನಿಯಮವೆಂಬ ವ್ಯಾಪ್ತಿಯಿಲ್ಲ, ಕಾರ್ಯಕಾರಣಭಾವ ಮೊದ ಲಾದ ಯಾವ ಸಂಬಂಧವೂ ಇಲ್ಲ. ಉಪಪಾದ್ಯೋಪಪಾದಕಭಾವವಿರುವುದು. ಹೋಗಿರುವುದಿಲ್ಲದಿದ್ದರೆ ಮನೆಯಲ್ಲಿಲ್ಲದಿರುವುದು ಅನುಪಪನ್ನವಾಗುವುದು. ಹೊರಗಿರುವುದು ಮನೆಯಲ್ಲಿಲ್ಲದಿರುವುದಕ್ಕೆ ಉಪಪಾದಕವು. ಮನೆಯಲ್ಲಿ ಲ್ಲದಿರುವುದು ಉಪಪಾದ್ಯವು. ಇಂತಹ ಪ್ರಮಾಣದಿಂದ ವೇದಾರ್ಥಕ್ಕೆ ಬಹೂಪಯೋಗವಿದೆ. ಒಂದುದಾಹರಣೆ—ಯಾಗದಿಂದ ಸ್ವರ್ಗ ಬರುತ್ತ ದೆಂದರೆ ಯಾಗವೆಂಬುದೊಂದು ಇಚ್ಛೆ, ಇದು ಇಂದ್ರನಿಗೆ ಸೇರಿದುದು ನನ್ನ ದಲ್ಲವೆಂಬ ಸಂಕಲ್ಪ. ಇದು ಉತ್ತರಕ್ಷಣದಲ್ಲೇ ವಿನಾಶವಾಗುವುದು. ಸ್ವರ್ಗವು ಕಾಲಾಂತರದಲ್ಲಿ ಬರುವುದು. ಇಂತಹ ಯಾಗವು ಸ್ವರ್ಗಕ್ಕೆ ಹೇಗೆ ಕಾರಣ ವಾಗುವುದೆಂದು ಸಂದೇಹ ಬಂದರೆ ಮಧ್ಯೇ ದ್ವಾರವು ಕಲ್ಪಿಸಲ್ಪಡುತ್ತದೆ. ಅದಕ್ಕೆ ಅಪೂರ್ವವೆಂದು ಹೆಸರು. ಅಪೂರ್ವವಿಲ್ಲದಿದ್ದರೆ ಸ್ವರ್ಗಕ್ಕೆ ಯಾಗವು ಸಾಧನವಾಗಲಾರದು, ಇದೇ ಅನ್ಯಥಾನುಪಪತ್ತಿ. ಅಪೂರ್ವವನ್ನು ಮಧ್ಯೇ ಅಂಗೀಕರಿಸಿದರೆ ಈ ಅನುಪಪತ್ತಿ ಪರಿಹರಿಸಲ್ಪಡುವುದು. ಇಂತಹ ಪ್ರಯೋ ಜನಗಳು ಅಸಂಖ್ಯಾತಗಳಾಗಿರುವುವು.

ಅನುಪಲಬ್ಧಿಯೆಂದರೆ ವಸ್ತುವನ್ನು ಗ್ರಹಿಸುವ ಮೇಲ್ಕಂಡ ಐದು ಪ್ರಮಾಣಗಳಿರುವುದರಿಂದ ವಸ್ತುವಿಲ್ಲವೆಂದು ತಿಳಿಯುವುದು. ವಸ್ತು ವಿದ್ದರೆ ಯಾವ ಪ್ರಕಾರದಿಂದಲಾದರೂ ತಿಳಿಯಬಹುದಾಗಿತ್ತು. ವಸ್ತು ತಿಳಿಯಲಿಲ್ಲವಾದುದರಿಂದ ವಸ್ತುವಿಲ್ಲವೆಂದು ತಿಳಿಯುತ್ತೇವೆ. ಇದೇ ಅನು ಪಲಬ್ಧಿ.

ಹೀಗೆ ಆರು ಪ್ರಮಾಣಗಳ ನಿರೂಪಣೆ. ಪ್ರಪಂಚ ಪ್ರಮಾಣವೆಂದರೆ

ತಿಳಿಯದಿರುವ ವಸ್ತುವಿನ ತಿಳಿಯುವಿಕೆ. ಒಂದೇ ವಸ್ತುವನ್ನು ಅನೇಕಾವರ್ತಿ ನೋಡಿದರೂ ವಿಶೇಷಾಂಶಗಳು ಗೊತ್ತಾಗುವುದರಿಂದ ಮೊದಲು ತಿಳಿಯದ ವಿಷಯವು ತಿಳಿದಂತಾಗುವುದು.

ಅಭಾವವೆಂಬ ಪದಾರ್ಥವನ್ನೇ ಪ್ರಾಭಾಕರರು ಅಂಗೀಕರಿಸದಿರುವುದರಿಂದ ಅಭಾವವನ್ನು ಗ್ರಹಿಸತಕ್ಕ ಅನುಪಲಬ್ಧಿಯೆಂಬ ಪ್ರಮಾಣವು ಅವರಿಗೆ ಬೇಕಾಗಿಲ್ಲ. ಅಭಾವವೆಂಬುದಿಲ್ಲದಿದ್ದರೆ ಭೂತಲದಲ್ಲಿ ಘಟವಿಲ್ಲವೆಂಬ ಪ್ರತ್ಯಕ್ಷ ಜ್ಞಾನಕ್ಕೆ ಬರಿಯ ಭೂತಲವೇ ವಿಷಯವೆಂದು ಹೇಳಬೇಕು. ಇದು ಭೂತಲವು ಎಂಬ ಪ್ರತ್ಯಕ್ಷ ಜ್ಞಾನಕ್ಕೂ ಭೂತಲದಲ್ಲಿ ಘಟವಿಲ್ಲವೆಂಬ ಪ್ರತ್ಯಕ್ಷ ಜ್ಞಾನಕ್ಕೂ ವ್ಯತ್ಯಾಸವೇನೆಂದರೆ, ಘಟಸ್ಮೃತಿಯೊಡನೆ ಸೇರಿರುವ ಬರಿಯ ಭೂತಲಪ್ರತ್ಯಕ್ಷವೇ ಭೂತಲದಲ್ಲಿ ಘಟವಿಲ್ಲವೆಂಬ ಪ್ರತ್ಯಕ್ಷವು. ಸ್ಮೃತಿಯಿಲ್ಲದೇ ಬರುವ ಪ್ರತ್ಯಕ್ಷವು ಇದು ಭೂತಲವೆಂಬುದೆಂದು ಸಿದ್ಧಾಂತ.

ಮತ್ತು ಅನುಮಾನಪ್ರಮಾಣದಿಂದಲೇ ಅತೀಂದ್ರಿಯವಾದ ಕಾರಣಗಳಲ್ಲಿರುವ ಕಾರ್ಯಾನುಕೂಲಶಕ್ತಿ ಮೊದಲಾದುವುಗಳನ್ನು ಪ್ರಾಭಾಕರರು ಸಾಧಿಸುವರು. ಅನುಮಾನವು ಅತೀಂದ್ರಿಯವಸ್ತುಗಳನ್ನು ಸಾಧಿಸಲಾರದು. ಹಾಗಾದರೆ ಧರ್ಮವು ಮೊದಲಾದ ವಸ್ತುಗಳು ಅನುಮಾನದಿಂದ ಸಿದ್ಧಿಸಿದರೆ ವೇದದ ಮಹಿಮೆಯೇ ಹೋಯಿತೆಂದು ಭಾಟ್ಟರ ಅಭಿಪ್ರಾಯ. ಅಪೂರ್ವ ಮೊದಲಾದ ವಸ್ತುಗಳು ಅರ್ಥಾಪತ್ತಿಪ್ರಮಾಣದಿಂದ ಸಿದ್ಧಿಸುವುದೆಂದು ಹೇಳುವರು.

**ಸಾರಾಂಶ**

ಹೀಗೆ ಮೀಮಾಂಸಕ ದರ್ಶನದಲ್ಲಿ ಪದಾರ್ಥಗಳ ವಿಷಯವು ಪ್ರಾಯಃ ತಾರ್ಕಿಕ ದರ್ಶನದಂತೆ ಇರುವುದು. ಸಂಖ್ಯಾಶಕ್ತಿ ಸಾದೃಶ್ಯ ಅಪೂರ್ವ ಅಂಧಕಾರ ಮೊದಲಾದ ಅಧಿಕ ಪದಾರ್ಥಗಳನ್ನಂಗೀಕರಿಸಿದರೂ ಪ್ರಕ್ರಿಯಾಂಶದಲ್ಲಿ ವಿಶೇಷ ವ್ಯತ್ಯಾಸವಿಲ್ಲ. ಕಾರ್ಯಕಾರಣ, ಜಾತಿವ್ಯಕ್ತಿ, ಗುಣಗುಣಿ ಮೊದಲಾದುವುಗಳಿಗೆ ತಾರ್ಕಿಕರಂತೆ ಭೇದವನ್ನು ಪ್ರಾಭಾಕರರು ಅಂಗೀಕರಿಸಿರುವರು. ಭೇದಾಭೇದವು ಭಟ್ಟಸಮ್ಮತವು. ಸಾರಾಂಶವೇನೆಂದರೆ—ವಿವಿಧ ವಿಚಿತ್ರ ರಚನಾರೂಪವಾದ ಚೇತನಾ ಚೇತನಾತ್ಮಕ

ಪ್ರಪಂಚವು ಪ್ರಾರಂಭವಾಗುವುದಕ್ಕೂ ಈ ರೀತಿ ಪ್ರವಹಿಸುವುದಕ್ಕೂ ಕ್ರಮೇಣ ಈ ಪ್ರವಾಹವು ಶಾಂತವಾಗುವುದಕ್ಕೂ ಕಾರಣವೇನಾದರೂ ಇದೆಯೋ ಇಲ್ಲವೇ ಎಂಬ ವಿಚಾರವೇ ತತ್ತ್ವ ವಿಚಾರದಲ್ಲಿ ಮುಖ್ಯವಾದ ದರ್ಶನ ವಿಚಾರವು. ಇದರಲ್ಲಿ ಪ್ರಪಂಚ ಪ್ರವಾಹವು ಪ್ರತ್ಯಕ್ಷವಾಗಿರುವುದರಿಂದಲೂ ಇದರಲ್ಲಿ ಸಕಲ ಪ್ರಾಣಿಗಳೂ ತಮ್ಮ ತಮ್ಮ ಇಷ್ಟಕ್ಕಾಗಿ ಪ್ರಯತ್ನ ಮಾಡಿ ಇಷ್ಟಾರ್ಥಗಳನ್ನು ಹೊಂದಿ ಸುಖವನ್ನು ಅನುಭವಿಸುತ್ತಿರುವುದರಿಂದಲೂ ಪ್ರವಾಹವನ್ನೇ ಅಪಲಾಪಮಾಡುವುದು ಪ್ರತ್ಯಕ್ಷವಿರುದ್ಧವು. ಇದಕ್ಕೆ ಆದಿಯೂ ಅಂತವೂ ಯಾರಿಗೂ ಗೋಚರವಿಲ್ಲ. ಯುಕ್ತಿಯಿಂದ ಹೇಳಿದರೆ ಪ್ರತಿಯುಕ್ತಿ ಬೇಕಾದಷ್ಟಿರುವುದರಿಂದ ಪರ್ಯವಸಾನವಾಗಲಾರದು. ಆದುದರಿಂದ ಪ್ರಪಂಚದ ಸೃಷ್ಟಿಪ್ರಳಯಗಳಲ್ಲಿ ಸಂಪೂರ್ಣವೆಂಬುದಿಲ್ಲ. ಅಲ್ಲಲ್ಲಿ ಆಗತಕ್ಕ ವ್ಯತ್ಯಾಸಗಳು ಪ್ರತ್ಯಕ್ಷವು. ಈಗಿರುವ ಹಾಗೆ ಈ ಪ್ರಪಂಚವು ಯಾವಾಗಲೂ ಇರುವುದು, ಇದಕ್ಕೆ ಆದಿಯಿಲ್ಲ, ಅಂತವೂ ಇಲ್ಲ. ಇವುಗಳಿಗೆ ಕಾರಣವೂ ಬೇಕಾಗಿಲ್ಲ. ಸೂರ್ಯ ಚಂದ್ರ ಖಗೋಳ ಭೂಗೋಳ ಪರ್ವತ ಸಮುದ್ರ ನದಿ ಮೊದಲಾದುವು ಯಾವಾಗಲೂ ಇರತಕ್ಕುವು. ಆದರೆ ಪ್ರತಿಯೊಂದು ವಸ್ತುವಿಗೂ ಸ್ವಾಭಾವಿಕವಾಗಿ ಅಚಿಂತ್ಯ ಶಕ್ತಿಗಳಿರುವುವು. ಕೆಲವು ಲೋಕಾನುಭವಕ್ಕೆ ಗೋಚರವು. ಕೆಲವು ಪರೀಕ್ಷಕರ ಅನುಭವಕ್ಕೆ ಗೋಚರವು. ಆದರೆ ಲೋಕಾನುಭವಕ್ಕೆ ಗೋಚರವಾದ ಅಂಶಕ್ಕೆ ಬಾಧಕವಿಲ್ಲದೆ ಅಧಿಕವಾದ ಅಂಶಗಳನ್ನು ತಿಳಿದುಕೊಳ್ಳಬಹುದು. ಪುಣ್ಯಪಾಪ ಸ್ವರ್ಗನರಕ ಆತ್ಮ ಜನ್ಮಾಂತರ ಮೊದಲಾದುವು ಅನಾದಿ ಪರಂಪರೆಯಾಗಿ ಹಿರಿಯರು ಅಂಗೀಕರಿಸಿರುವ ವೇದಮೂಲಕ ತಿಳಿಯಲ್ಪಡಬೇಕೆಂದು ನಂಬಿರುವರು. ಯುಕ್ತಿಯಿಂದ ಸಾಧ್ಯವಿಲ್ಲ. ಇದೇ ವೈದಿಕರ ರಹಸ್ಯ.

ಇಂತಹ ವೇದಕ್ಕೆ ಪ್ರತಿಯಾಗಿ ಬೌದ್ಧಾದ್ಯಾಗಮಗಳು ವಿರುದ್ಧವಾದ ಅಭಿಪ್ರಾಯಗಳನ್ನು ಪ್ರಕಾಶಪಡಿಸುತ್ತಲಿದ್ದವು. ಅವುಗಳು ಸರ್ವಜ್ಞರಾದ ಸುಗತ ಕಪಿಲಾನದಿಗಳಿಂದ ರಚಿಸಲ್ಪಟ್ಟಿವೆ. ಅವು ಪ್ರಮಾಣತಮವೆಂದು ಅವರ ವಾದ. ಅದಕ್ಕೆ ಪ್ರತಿಯಾಗಿ ಈಶ್ವರನು ಮಾಡಿದನು, ಅವನು ಅನಾದಿಸರ್ವಜ್ಞನು, ಸರ್ವಶಕ್ತನು, ಕರುಣಾನಿಧಿಯೆಂದು ತಾರ್ಕಿಕ ವೇದಾಂತ ಮೊದಲಾದವರು ತಿಳಿಯುವರು.

ಈಶ್ವರ ವಿಷಯದಲ್ಲಿ ಸಂದೇಹವಿರುವುದರಿಂದ ಈ ವಾದವು ನಿರ್ಮೂಲವಾಗುವುದೆಂಬ ಅಭಿಪ್ರಾಯದಿಂದ ಅಪೌರುಷೇಯತ್ವವೇ ವೇದಕ್ಕೆ ಇರುವ ಅತಿಶಯವೆಂದು ಈಶ್ವರವಾದಿಗಳೆನ್ನು ನಿರಾಕರಿಸುವರು.

ಈ ಪ್ರಕಾರವಾದ ಸಂದರ್ಭದಲ್ಲಿ ಅತಿವಾದಗಳನ್ನು ಮಾಡಿದರೂ ಸಕಲ ಶಾಸ್ತ್ರಗಳೂ ಸಕಲಾಗಮಗಳೂ ಸಕಲ ದರ್ಶನಗಳೂ ಲೋಕಹಿತಕ್ಕಾಗಿ, ವಿಷಯ ವೈರಾಗ್ಯಕ್ಕಾಗಿ, ರಾಗದ್ವೇಷ ನಿವೃತ್ತಿಗಾಗಿ ಹೊರಟಿರುವುದರಿಂದ ಪ್ರಾಮಾಣ್ಯವನ್ನು ಅಂಗೀಕರಿಸಬೇಕು. ಸಕಲ ಅಭಿಪ್ರಾಯಗಳಿಗೂ ವೇದಾಂತವೆಂಬ ಉಪನಿಷತ್ತುಗಳೇ ಮೂಲ. ಕೆಲವು ಶೂನ್ಯವಾದ ಮೊದಲಾದುವುಗಳಲ್ಲಿ ಅತಿವಾದವಿದ್ದರೂ ತಾತ್ಪರ್ಯದೃಷ್ಟಿಯಲ್ಲಿ ಪ್ರಾಮಾಣ್ಯವು ಇರುವುದೆಂದು 'ತಂತ್ರವಾರ್ತಿಕ ಸ್ಮೃತ್ಯಧಿಕರಣ'ದಲ್ಲಿ ಶಾಂತ್ಯುಪದೇಶವನ್ನು ಕುಮಾರಿಲ ಭಟ್ಟಾಚಾರ್ಯರು ಸೂಚಿಸಿರುವರು.

> ಮಹತಾಮಪಿ ಕೇಷಾಚಿದಂತಿವಾದಾಃ ಪೃಥಗ್ವಿಧಾಃ
> ತತ್ತದರ್ಥಪ್ರಶಂಸಾದಿ ತತ್ಪರತ್ವಾದಬಾಧಿತಾಃ ॥

ಪ್ರಾಯಶಃ ಮಹಾತ್ಮರಾದ ವಿದ್ವಾಂಸರು ಕೆಲವು ವಿಷಯಗಳಿಗೆ ಪ್ರಾಶಸ್ತ್ಯವನ್ನು ಹೇಳುವುದಕ್ಕಾಗಿ ಅತಿವಾದಗಳನ್ನು ವಿಚಿತ್ರವಾಗಿ ಮಾಡಿದ್ದಾರೆ. ಅವುಗಳನ್ನು ಬಾಧಕಗಳಾಗಿ ತಿಳಿಯಬಾರದು. ಗುಣಾಂಶವನ್ನು ಗ್ರಹಿಸಿ ಸಂತೋಷಪಡಬೇಕು,



೯

# ಅದ್ವೈತ ದರ್ಶನ

## ಉಪನಿಷತ್ತುಗಳು

ಉಪನಿಷತ್ತುಗಳಿಗೆ ವೇದಾಂತವೆಂದು ನಾಮಧೇಯ. ಉಪನಿಷತ್ತು ಎಂದರೆ ಪರಬ್ರಹ್ಮನ ಸ್ವರೂಪವನ್ನು ಸ್ಪಷ್ಟವಾಗಿ ತಿಳಿಯಿಸುವ ಗ್ರಂಥಗಳೆಂದು ಅರ್ಥ. ಈ ಗ್ರಂಥಗಳು ಋಗ್ವೇದ ಯಜುರ್ವೇದ ಮೊದಲಾದ ವೇದಗಳ ಕೊನೆಯ ಭಾಗಗಳಾದುದರಿಂದ ವೇದಾಂತ—ವೇದಗಳ ಅಂತ—ಎಂದು ವ್ಯವಹಾರವಿರುವುದು. ವೇದಗಳಲ್ಲಿ ಸಂಹಿತೆ, ಬ್ರಾಹ್ಮಣ, ಆರಣ್ಯಕವೆಂದು ಮೂರು ಭಾಗಗಳಿರುವುವು. ಪದ್ಯಗದ್ಯ ರೂಪಗಳಾದ ಮಂತ್ರಭಾಗಕ್ಕೆ ಸಂಹಿತೆಯೆಂದೂ, ಅವುಗಳಿಗೆ ವ್ಯಾಖ್ಯಾನ ರೂಪವಾದ ಗ್ರಂಥಗಳಿಗೆ ಬ್ರಾಹ್ಮಣವೆಂದೂ, ಅರಣ್ಯದಲ್ಲಿರುವ ಋಷಿಗಳು ನಿಯಮಪೂರ್ವಕವಾಗಿ ಕಲಿಯುತ್ತಿದ್ದ ರಹಸ್ಯವಾದ ಭಾಗಕ್ಕೆ ಆರಣ್ಯಕವೆಂದೂ ವ್ಯವಹಾರ. ಈ ಉಪನಿಷತ್ತುಗಳಲ್ಲಿ ಕೆಲವು ಸಂಹಿತಾ ಭಾಗದಲ್ಲೂ, ಕೆಲವು ಬ್ರಾಹ್ಮಣ ಭಾಗದಲ್ಲೂ, ಕೆಲವು ಆರಣ್ಯಕ ಭಾಗದಲ್ಲೂ ಇದ್ದರೂ ಸಾಮಾನ್ಯವಾಗಿ ಎಲ್ಲಕ್ಕೂ ವೇದಾಂತವೆಂದು ಹೆಸರು. ಈಗ ಈಶಾವಾಸ್ಯೋಪನಿಷತ್ತೆಂಬ ಹದಿನೆಂಟು ಮಂತ್ರಗಳುಳ್ಳ ಒಂದು ಗ್ರಂಥ ಶುಕ್ಲಯಜುಸ್ಸಂಹಿತೆಯ ಕೊನೆಯ ಭಾಗದಲ್ಲಿರುವುದರಿಂದ ವೇದಾಂತವೆಂಬ ನಾಮಧೇಯ ಇದಕ್ಕೆ ಮುಖ್ಯವಾಗಿ ಕಾಣಲ್ಪಡುವುದು. ಒಂದು ಕಾಲದಲ್ಲಿ ವೇದವೂ ಉಪನಿಷತ್ತೂ ಬೇರೆ ಬೇರೆಯಾಗಿಯೇ ಇದ್ದುವು. ಅನಂತರ ಶಾಖಾವಿಭಾಗ ಕಾಲದಲ್ಲಿ ಅಧ್ಯಯನ ಸೌಕರ್ಯಕ್ಕಾಗಿ ಅಲ್ಲಲ್ಲಿ ಮಿಶ್ರವಾಗಿರಬಹುದು.

ವೇದಾಂತ ಪದದ ತತ್ತ್ವಾರ್ಥವಿದು : ಶಾಸ್ತ್ರ ವ್ಯವಹಾರದಲ್ಲಿ ಅಂತ ಪದಕ್ಕೆ ಕೊನೆಯೆಂದರ್ಥದ ಮೇಲೆ ನಿರ್ಣಯವೆಂದರ್ಥ ಪ್ರಸಿದ್ಧ. ದೃಷ್ಟಾಂತ, ಸಿದ್ಧಾಂತ, ವೇದಾಂತ ಈ ಮೂರು ಪದಗಳಲ್ಲಿ ದೃಷ್ಟಾಂತ ಪದವು ನೋಡಿ ಬಂದ ನಿರ್ಣಯವೆಂದರ್ಥದಲ್ಲಿರುವುದು. ಸಿದ್ಧಾಂತ ಪದವು

ಯುಕ್ತಿಯಿಂದ ಸಾಧಿಸಲ್ಪಟ್ಟ ನಿರ್ಣಯವೆಂದರ್ಥದಲ್ಲಿರುವುದು. ಹೀಗಾ ದರೆ ವೇದಾಂತ ಪದವು ಅನಾದಿ ಪರಂಪರೆಯಾಗಿ ಉಪದೇಶ ಮೂಲಕ ಬಂದ ನಿರ್ಣಯವೆಂದರ್ಥವನ್ನು ಕೊಡುವುದು. ಏವಂಚ ದೃಷ್ಟಾಂತ, ಸಿದ್ಧಾಂತ, ವೇದಾಂತ—ಈ ಮೂರು ಪದಗಳು ಕ್ರಮವಾಗಿ ಪ್ರತ್ಯಕ್ಷ, ಅನುಮಾನ, ಶಬ್ದವೆಂಬ ಮೂರು ಪ್ರಮಾಣಗಳ ಮೂಲಕ ಬಂದ ನಿರ್ಣಯ ವೆಂದರ್ಥದಲ್ಲಿ ಪ್ರವೃತ್ತವಾದುವು. ವೇದಾಂತ ಪದವು ಕೇಳಿ ಬಂದ ನಿರ್ಣಯವನ್ನು ಬೋಧಿಸುವ ಗ್ರಂಥಗಳಲ್ಲೂ ಪ್ರಯೋಗಿಸಲ್ಪಟ್ಟು ವ್ಯವ ಹಾರಕ್ಕೆ ಬಂದಿರುವುದು. ಹೀಗೆ ವೃತ್ತಾಂತ, ಏಕಾಂತ ಮೊದಲಾದ ಪದಗಳ ಅರ್ಥವನ್ನೂ ತಿಳಿದುಕೊಳ್ಳಬಹುದು.

ಈ ಉಪನಿಷತ್ತುಗಳು ಈಗ ನೂರಾರು ಇರುವುವು. ಆದರೂ ಪೂರ್ವಾ ಚಾರ್ಯರು ಕೆಲವರು ಹತ್ತು, ಕೆಲವರು ಹನ್ನೆರಡು, ಈ ಪ್ರಕಾರವಾಗಿ ಪರಿಗ್ರಹಿಸಿರುವರು. ಆಯಾ ಉಪನಿಷತ್ತನ್ನು ಮಾತ್ರ ಪರಿಶೀಲಿಸಿ ತಾತ್ಪರ್ಯವನ್ನು ನಿರ್ಣಯಿಸಿದರೆ ಹತ್ತೂ ಹತ್ತು ದಾರಿಯಲ್ಲಿರುವ ಹಾಗೆ ಕಾಣುವುದು. ಹೀಗೆ ಕಾಣುವುದರಿಂದ ಪ್ರತಿದಾರ್ಶನಿಕರೂ ತಮ್ಮ ತಮ್ಮ ದರ್ಶನವೇ ಔಪನಿಷದ ದರ್ಶನವೆಂದು ಹೇಳಲು ಅವಕಾಶವಾಯಿತು.

## ವೇದಾಂತ ಸೂತ್ರ

ಇದನ್ನು ನೋಡಿ ಉಪನಿಷತ್ತುಗಳಿಗೆಲ್ಲಾ ಒಂದೇ ತಾತ್ಪರ್ಯವಿರ ಬೇಕೆಂದು ಉಪನಿಷತ್ತುಗಳಿಗೆ ವ್ಯಾಖ್ಯಾನವೆಂಬ ಸೂತ್ರಗ್ರಂಥಗಳನ್ನು ಔಡುಲೋಮಿ, ಆಶ್ಮರಥ್ಯ, ಕಾಶಕೃತ್ಸ್ನ, ಜೈಮಿನಿ, ಮೊದಲಾದವರು ಬರೆ ದರು. ಅವುಗಳೆಲ್ಲವನ್ನೂ ಪರಾಮರ್ಶೆಮಾಡಿ ವೇದವ್ಯಾಸರೆಂಬ ಬಾದ ರಾಯಣಾಚಾರ್ಯರು 'ಬ್ರಹ್ಮಸೂತ್ರ' ವೆಂಬ ವೇದಾಂತ ಸೂತ್ರವನ್ನು ಸಂಗ್ರಹಿಸಿದರು. ಜೈಮಿನಿ ಹಿಂದಿನ ಪೂರ್ವಮೀಮಾಂಸಾ ಸೂತ್ರಗಳನ್ನು ಸಂಗ್ರಹಿಸಿ ಈಗಿರುವ ಪೂರ್ವಮೀಮಾಂಸಾ ಸೂತ್ರಗ್ರಂಥವನ್ನು ಬರೆದ ಹಾಗೂ, ಪಾಣಿನಿ ಅನೇಕ ವ್ಯಾಕರಣ ಸೂತ್ರಗ್ರಂಥಗಳನ್ನು ನೋಡಿ ಅಷ್ಟಾ ಧ್ಯಾಯಿಯೆಂಬ ಸೂತ್ರಗ್ರಂಥವನ್ನು ಬರೆದ ಹಾಗೂ, ಪಿಂಗಳನಾಗನು ಛಂದ ಸ್ಸೂತ್ರಗಳನ್ನು ನೋಡಿ ಛಂದಶ್ಶಾಸ್ತ್ರವನ್ನು ಬರೆದ ಹಾಗೂ, ಆಪಸ್ತಂಬಾದಿ

ಮಹರ್ಷಿಗಳು ಹಿಂದಿನ ಶ್ರೌತಸೂತ್ರಗಳನ್ನು ನೋಡಿ ಶ್ರೌತಸೂತ್ರಗಳೆಂಬ ಕಲ್ಪಸೂತ್ರಗಳನ್ನು ಬರೆದ ಹಾಗೂ —ಇದೂ ಹಿಂದಿನ ಸೂತ್ರಗಳ ಸಂಗ್ರಹ· ನಮ್ಮ ಸಂಪ್ರದಾಯದಲ್ಲಿ ಯಾವುದು ಹೊಸದಲ್ಲ.

ಜೈಮಿನಿಸೂತ್ರಕ್ಕೆ ಪೂರ್ವಮೀಮಾಂಸೆ, ಧರ್ಮಮೀಮಾಂಸೆ ಯೆಂದೂ, ಬಾದರಾಯಣ ಸೂತ್ರಕ್ಕೆ ಉತ್ತರಮೀಮಾಂಸೆ, ಬ್ರಹ್ಮ ಮೀಮಾಂಸೆಯೆಂದೂ ವ್ಯವಹಾರ.

ಉಪನಿಷತ್ತುಗಳು ವೇದಗಳಿಗೆ ಸೇರಿದ ಗ್ರಂಥಗಳಾದುದರಿಂದ ವೇದ ವ್ಯಾಖ್ಯಾನವಾದ ಬ್ರಹ್ಮಮೀಮಾಂಸಾಶಾಸ್ತ್ರ ಪೂರ್ವಮೀಮಾಂಸೆ ಎಂದೂ, ವೇದಾಂತವ್ಯಾಖ್ಯಾನವಾದ ಬ್ರಹ್ಮಮೀಮಾಂಸಾಶಾಸ್ತ್ರ ಉತ್ತರಮೀಮಾಂಸೆ ಎಂದೂ ವ್ಯವಹಾರ.

ವೇದವೆಂದರೆ ತಪಸ್ವಿಗಳಾದ, ಮಹಾತ್ಮರಾದ ಋಷಿಗಳು ಮತ್ತು ಪರಮೇಶ್ವರನ ಅಭಿಪ್ರಾಯ. ಇದನ್ನು ಪ್ರಕಾಶಪಡಿಸುವ ಗ್ರಂಥಗಳಿಗೂ ವೇದವೆಂದು ವ್ಯವಹಾರ. ಇಲ್ಲಿ ತಪಸ್ಸೆಂದರೆ—

ಅಹಿಂಸಾ ಸತ್ಯವಚನಮಾನೃಶಂಸ್ಯಂ ದಮೋ ದಯಾ
ಏತತ್ತಪೋ ವಿದುರ್ಧೀರಾರ್ನ ಶರೀರಸ್ಯ ಶೋಷಣಮ್ ॥

ಎಂದು ಅಹಿಂಸಾದಿ ಮಹಾವ್ರತದಲ್ಲಿರುವವರು ತಪಸ್ವಿಗಳೆಂದು 'ಪರಾಶರ ಮಾಧವೀಯ'ದಲ್ಲಿ ಉದಾಹರಿಸಲ್ಪಟ್ಟ ಕೂರ್ಮಪುರಾಣ ವಚನವು ಸ್ಮರಿಸ ಲ್ಪಡಬೇಕು. ಇಂತಹ ವೇದಾರ್ಥ ವಿಚಾರಶಾಸ್ತ್ರಕ್ಕೆ ಮೀಮಾಂಸೆ. ಎಂದು ಹೆಸರು. ಇದನ್ನು ಲಾಘವ ತರ್ಕವೆನ್ನುತ್ತಾರೆ. ಗಹನವಾದ ಮಾರ್ಗ ವನ್ನು ಬಿಟ್ಟು ಸುಲಭವಾದ ಮಾರ್ಗದಲ್ಲಿ ಮಾಡುವ ವಿಚಾರಕ್ಕೆ ಲಾಘವ ತರ್ಕವೆಂದರ್ಥ. ಈ ರೀತಿ ಮಾಡಲ್ಪಡುವ ವಿಚಾರಶಾಸ್ತ್ರವೂ ಸಹ ವೇದಕ್ಕೆ ಸಂಬಂಧಪಟ್ಟು ವೇದದಲ್ಲೇ ಸೇರಿದಂತಿರುವುದರಿಂದ ವಿಚಾರಶಾಸ್ತ್ರವನ್ನು ವೇದದಂತೆ ಗೌರವಿಸುವರು, ಪೂಜಿಸುವರು. ಏವಂಚ ಪೂಜ್ಯವಾದ ವಿಚಾರ ಶಾಸ್ತ್ರಕ್ಕೆ ಮೀಮಾಂಸೆಯೆಂದು ನಾಮಧೇಯ. ವೇದಮಯವಾದ ಮಹಾ ತ್ಮರ ಹೃದಯವನ್ನೂ ವೇದವೆಂದು ಕುಮಾರಿಲ, ಮೇಧಾತಿಥಿ ಮೊದಲಾದ ವರು ಹೇಳಿರುವರು.

ಲಾಘವ ತರ್ಕಕ್ಕೆ ಒಂದುದಾಹರಣೆ—"ಏತಯಾ ನಿಷಾದಸ್ಥಪತಿಂ

ಯಾಜಯೇತ್'' ಎಂದು ವೇದದಲ್ಲಿ ಒಂದು ಯಜ್ಞದ ಪ್ರಕರಣದಲ್ಲಿರುವುದು. ನಿಷಾದಸ್ಥಪತಿ ಯಾಗವನ್ನು ಮಾಡಬಹುದು ಎಂದು ಇದರ ಅರ್ಥ. ನಿಷಾದಸ್ಥಪತಿ ಎಂದರೆ ಯಾರು ? ಎಂಬು ವಿಚಾರ. ನಿಷಾದ ಪದಕ್ಕೆ ಸಾಮಾನ್ಯವಾಗಿ ಶೂದ್ರ ಜಾತಿಯುವನೆಂದರ್ಥ. ಸ್ಥಪತಿ ಪದಕ್ಕೆ ಶಿಲ್ಪಿಯೆಂದರ್ಥ. ಶೂದ್ರಜಾತಿಯುವನಾದ ಶಿಲ್ಪಿಗೆ ಉಪನಯನವಿಲ್ಲ, ವೇದಾಧ್ಯಯನವಿಲ್ಲ, ಮಂತ್ರ ತಿಳಿಯದು, ಅಗ್ನ್ಯಾಧಾನವಿಲ್ಲ, ಅಗ್ನಿಯಿಲ್ಲ. ಅವನಿಗೆ ಯಜ್ಞವೆಂದರೆ ಹೇಗೆ ಸಾಧ್ಯ ? ಅದಕ್ಕಾಗಿ ನಿಷಾದ ಜಾತಿಯುವನಾದ ಒಬ್ಬ ಪ್ರಭುವಿಗೆ ಸೇರಿದ ಶಿಲ್ಪಿಯಾಗಿರುವ ಬ್ರಾಹ್ಮಣನೋ ಕ್ಷತ್ರಿಯನೋ ಎಂದರ್ಥಮಾಡಬೇಕೆಂದು ಕೆಲವರು ಹೇಳುವರು. ''ಬ್ರಾಹ್ಮಣ ಪರಿಚಾರಕ'', ''ಶೂದ್ರಸೇವಕ'' ಮೊದಲಾದ ಅನೇಕ ಪದಗಳಿಗೆ ಆಯಾ ಜಾತಿಯುವನೆಂದರ್ಥವೇ ಲೋಕದಲ್ಲಿ ಪ್ರಸಿದ್ಧವಾಗಿರುವಾಗ ನಿಷಾದ ಸ್ಥಪತಿಪದಕ್ಕೂ ನಿಷಾದ ಜಾತಿಯುವನಾದ ಶಿಲ್ಪಿಯೆಂದರ್ಥವೇ ಸುಲಭವಾಗಿ ತೋರುವುದು ; ನಿಮ್ಮ ಅರ್ಥ ಕಷ್ಟವಾದುದು ಎಂದು ಸಿದ್ಧಾಂತ ಮಾಡಿರುತ್ತಾರೆ. ಶೂದ್ರನಿಗೆ ಯಜ್ಞವು ಹೇಗೆಂದರೆ, ವೇದ ಹೇಳಿದ ಮೇಲೆ ನಿಮ್ಮ ಆಕ್ಷೇಪಣೆಯೇನು ? ಆ ಯಜ್ಞಕ್ಕೆ ಬೇಕಾದ ಮಂತ್ರಗಳನ್ನು ಕಲಿತುಕೊಂಡು ಅವನೂ ಯಜ್ಞವನ್ನು ಮಾಡಲಿ ಎಂದು ಸುಲಭವಾದ ಮಾರ್ಗದಲ್ಲಿ ಪದಗಳಿಗೆ ಉಪದ್ರವವಿಲ್ಲದೆ ಅರ್ಥವನ್ನು ನಿರ್ಣಯಿಸುವರು. ಇದೇ ಲಾಘವತರ್ಕ.

## ಉಪವರ್ಷ ವೃತ್ತಿ

ಇಲ್ಲಿ ಉತ್ತರಮೀಮಾಂಸಾಶಾಸ್ತ್ರವನ್ನು ಶಾರೀರಕಮೀಮಾಂಸೆಯೆಂದು ಹೇಳುತ್ತಾರೆ. ಶಾರೀರಕಪದಕ್ಕೆ ಶರೀರದೊಳಗಿರುವ ಆತ್ಮನೆಂದರ್ಥ. ಆತ್ಮವಿಚಾರ ಶಾಸ್ತ್ರವಾದುದರಿಂದ ಅಧ್ಯಾತ್ಮಶಾಸ್ತ್ರವೆಂದೂ ಹೇಳುತ್ತಾರೆ. ಈ ಶಾರೀರಕವೆಂಬ ಪದ ''ಶಾರೀರ ಆತ್ಮಾ''ಎಂಬ ಉಪನಿಷತ್ತು ಮೂಲಕವಾಗಿ ಬಂದಿರುವುದು. ಶಾರೀರಕ ಪದವನ್ನು ಉಪವರ್ಷಾಚಾರ್ಯರು ಮೊದಲು ಪ್ರಯೋಗಿಸಿರುತ್ತಾರೆ. ಅನಂತರ ಭಾಷ್ಯಕಾರರೂ ಉಪಯೋಗಿಸಿದ್ದಾರೆ.

ಈ ಉಪವರ್ಷಾಚಾರ್ಯರು ಪೂರ್ವಮೀಮಾಂಸಾ ಸೂತ್ರಕ್ಕೂ ಉತ್ತರಮೀಮಾಂಸಾ ಸೂತ್ರಕ್ಕೂ ವಿಪುಲವಾದ ವೃತ್ತಿಯೆಂಬ ವ್ಯಾಖ್ಯಾನವನ್ನು ಬರೆದಿರುವರು. ಇವರನ್ನೇ ವೃತ್ತಿಕಾರರೆಂದು ಕರೆದು ಈ ವೃತ್ತಿಗ್ರಂಥದ ವಾಕ್ಯಗಳನ್ನು ಶಬರಾಚಾರ್ಯರು, ಶಂಕರಾಚಾರ್ಯರು, ರಾಮಾನುಜಾಚಾರ್ಯರು ಮೊದಲಾದವರು ಉದಾಹರಿಸಿರುವರು. ಈ ವೃತ್ತಿಕಾರರ ಸಿದ್ಧಾಂತ ಸಮುಚ್ಚಯವಾದವು, ಎಂದರೆ ಕರ್ಮವೂ ಜ್ಞಾನವೂ ಸೇರಿ ಮೋಕ್ಷಕ್ಕೆ ಸಾಧನವೆಂದರ್ಥ. ಈ ಉಪವರ್ಷಾಚಾರ್ಯರ ಅಭಿಪ್ರಾಯದಲ್ಲಿ ವೇದ ಕರ್ಮಕಾಂಡ, ಜ್ಞಾನಕಾಂಡವೆಂದು ಎರಡು ಭಾಗವುಳ್ಳದ್ದು. ಪೂರ್ವಭಾಗ ಕರ್ಮಕಾಂಡ. ಉತ್ತರ ಭಾಗವಾದ ವೇದಾಂತ ಜ್ಞಾನಕಾಂಡ. ಈ ಕರ್ಮಜ್ಞಾನಗಳು ಸಮಪ್ರಧಾನವಾಗಿ ಮೋಕ್ಷಕ್ಕೆ ಕಾರಣ. ಕರ್ಮದಿಂದ ಅನಿಷ್ಟನಿವೃತ್ತಿಯೆಂಬ ಪ್ರತಿಬಂಧಕನಿವೃತ್ತಿಯೆಂದೂ, ಜ್ಞಾನದಿಂದ ಇಷ್ಟಪ್ರಾಪ್ತಿಯೆಂಬ ಆನಂದ ಸುಖಾನುಭವವೆಂದೂ ತಿಳಿಯಬಹುದು.

ರಾಮಾನುಜ ಸಿದ್ಧಾಂತದ ಸಂಪ್ರದಾಯದ ಪ್ರಕಾರ ಈ ಉಪವರ್ಷಾಚಾರ್ಯರೇ ಬೋಧಾಯನಾಚಾರ್ಯರೆಂದು ಅಭಿಪ್ರಾಯ. ಬೋಧಾಯನಾಚಾರ್ಯರಿಗೇಯೇ ಉಪವರ್ಷಾಚಾರ್ಯರೆಂಬ ನಾಮಧೇಯವೆಂದು ತಿಳಿಯುವರು. ಉಪವರ್ಷರಿಗೂ ವೃತ್ತಿಗ್ರಂಥಕ್ಕೂ, 'ಕೃತಕೋಟಿ' ಯೆಂಬ ನಾಮಧೇಯವುಂಟೆಂದು ವೈಜಯಂತಿ, ಕೇಶವ ಮೊದಲಾದ ನಿಘಂಟುಗಳಿಂದ ತಿಳಿದುಬರುವುದು. ಕೃತಕೋಟಿನಾಮಧೇಯ ಅತಿ ಪ್ರಾಚೀನವಾದ 'ಮಣಿಮೇಖಲೆ'ಯೆಂಬ ದ್ರಾವಿಡ ಪ್ರಬಂಧದಲ್ಲೂ ಪ್ರಪಂಚ ಹೃದಯದಲ್ಲೂ ಕಾಣಲ್ಪಡುವುದು.

ಹೀಗೆ ವೃತ್ತಿಕಾರರಾದ ಉಪವರ್ಷಾಚಾರ್ಯರ ಸಿದ್ಧಾಂತವಾದ ಸಮ ಪ್ರಧಾನಜ್ಞಾನಕರ್ಮಸಮುಚ್ಚಯವಾದವನ್ನು ಶಂಕರ ಭಾಸ್ಕರ ಯಾದವಪ್ರಕಾಶ ರಾಮಾನುಜ ಪೂರ್ಣಪ್ರಜ್ಞರಲ್ಲಿ, ಯಾದವಪ್ರಕಾಶಾಚಾರ್ಯರು ಮಾತ್ರ ಅಂಗೀಕರಿಸಿರುವರು. ಉಳಿದವರು ಕರ್ಮ ಸಹಾಯವು ಜ್ಞಾನಕ್ಕೆ ಬೇಕೇ ಹೊರತು ಅದು ಜ್ಞಾನಕ್ಕೆ ಸಮವಾಗಿ ನಿಲ್ಲುವುದಿಲ್ಲವೆಂದು ಅಭಿಪ್ರಾಯಪಡುವರು. ಆ ಸಹಾಯದ ವಿಷಯದಲ್ಲಿ ಪ್ರತಿಯೊಬ್ಬರಿಗೂ ಸೂಕ್ಷ್ಮವಾದ, ಗಹನವಾದ ಪ್ರಭೇದಗಳಿರುವುವು.

## ವಾಕ್ಯಗ್ರಂಥ

ಈ ಉಪನಿಷತ್ತುಗಳಲ್ಲಿ ಛಾಂದೋಗ್ಯೋಪನಿಷತ್ತಿಗೆ ಆತ್ರೇಯವಂಶ್ಯರಾದ ಟಂಕಾಚಾರ್ಯರೆಂಬ ಬ್ರಹ್ಮನಂದಿಗಳು ವಾಕ್ಯವೆಂಬ ವ್ಯಾಖ್ಯಾನವನ್ನು ಬರೆದಿದ್ದರು. ದ್ರಮಿಡಾಚಾರ್ಯರೆಂಬುವರು ಅದಕ್ಕೆ ಭಾಷ್ಯವನ್ನು ಬರೆದರು. ಈ ಗ್ರಂಥಗಳ ವಾಕ್ಯಗಳನ್ನು ಪೂರ್ವಾಚಾರ್ಯರು ಉದಾಹರಿಸಿರುವರು. ಇವುಗಳಲ್ಲಿ ಕೆಲವು ವಾಕ್ಯಗಳನ್ನುದಾಹರಿಸಿ ಅದ್ವೈತ ಸಿದ್ಧಾಂತವನ್ನು ಇವರು ಸ್ಥಾಪಿಸಿರುತ್ತಾರೆಂದು ಸಂಕ್ಷೇಪಶಾರೀರಕ ಕರ್ತರಾದ ಸರ್ವಜ್ಞಾತ್ಮಮುನಿ ಬರೆಯುತ್ತಾರೆ. ಇವರು ಹೀಗೆ ಬರೆಯುವುದಕ್ಕೆ ಭಾಸ್ಕರಭಾಷ್ಯವೇ ಮೂಲ. ಅದರಲ್ಲಿ ಕೆಲವು ವಾಕ್ಯಗಳನ್ನು ಉದಾಹರಿಸಿ ಪ್ರಾಚೀನವೃದ್ಧ ಸಂಪ್ರದಾಯವನ್ನು ಶ್ರೀ ಶಂಕರಾಚಾರ್ಯರು ಪರಿತ್ಯಾಗ ಮಾಡಿದರೆಂದು ಆಕ್ಷೇಪಿಸಿರುತ್ತಾರೆ, ಅನಂತರ ರಾಮಾನುಜಾಚಾರ್ಯರ ಕೆಲವು ವಾಕ್ಯಗಳನ್ನು ಉದಾಹರಿಸಿ ವಿಶಿಷ್ಟಾದ್ವೈತ ಸಂಪ್ರದಾಯವನ್ನೇ ಟಂಕದ್ರಮಿಡರು ಸ್ಥಾಪಿಸಿರುವರು ಎಂದು ವ್ಯಾಖ್ಯಾನ ಮಾಡಿರುತ್ತಾರೆ. ಆದುದರಿಂದ ಈ ಟಂಕದ್ರಮಿಡಾಚಾರ್ಯರನ್ನು ಎಲ್ಲರೂ ತಂತಮ್ಮ ಸಂಪ್ರದಾಯಪ್ರವರ್ತಕರೆಂದು ತಿಳಿಯುವರು. ಈಗ ಸಮಗ್ರವಾಗಿ ಅವರ ಗ್ರಂಥಗಳು ಲುಪ್ತಗಳಾಗಿರುವುವು.

ಇದರಿಂದ ಉಪನಿಷತ್ತುಗಳಿಗೆ ಬಾದರಾಯಣಾಚಾರ್ಯರಂತೆ ಇತರರೂ ವ್ಯಾಖ್ಯಾನವನ್ನು ಬರೆದು ಸಿದ್ಧಾಂತಗಳನ್ನು ಸ್ಥಾಪಿಸುತ್ತಿದ್ದರೆಂದು ತಿಳಿದುಬರುತ್ತದೆ. ಆದುದರಿಂದಲೇ ಪೂರ್ವಾಚಾರ್ಯರು ದಶೋಪನಿಷತ್ತುಗಳಿಗೆ ಭಾಷ್ಯಗಳನ್ನೂ, ಉಪನಿಷದ್ವಾಕ್ಯಾರ್ಥಗಳ ಸಂಗ್ರಹವನ್ನೂ, ಉಪನಿಷತ್ಸಾರಭೂತವಾದ ಭಗವದ್ಗೀತಾ ಭಾಷ್ಯವನ್ನೂ, ಬಾದರಾಯಣ ಸೂತ್ರಕ್ಕೆ ಭಾಷ್ಯವನ್ನೂ ಬರೆದು ತಮ್ಮ ತಮ್ಮ ಸಂಪ್ರದಾಯಾನುಸಾರ ಸಿದ್ಧಾಂತವನ್ನೂ ಸ್ಥಾಪಿಸುತ್ತಲಿದ್ದರು.

## ಭಾಷ್ಯಗ್ರಂಥ

ಹೀಗೆ ಹಿಂದಿನ ಬ್ರಹ್ಮಸೂತ್ರ ಭಾಷ್ಯಗಳ ಅಭಿಪ್ರಾಯಗಳು ಶಂಕರ ಭಾಷ್ಯದಲ್ಲಿ ಅನುವದಿಸಲ್ಪಟ್ಟಿದ್ದರೂ ಪ್ರಕೃತದಲ್ಲಿ ಅವುಗಳೆಲ್ಲವೂ ಶಿಥಿಲವಾಗಿ

ಶಂಕರಭಾಷ್ಯವೊಂದೇ ಟೀಕಾಟಿಪ್ಪಣಿಗಳಿಂದ ಅಭಿವೃದ್ಧಿಯಾಗಿ ಹಳೆಯ ದಾಗಿರುವುದು.

ಅನಂತರ ಪ್ರಾಯಶಃ ಅವರ ಸಮೀಪಕಾಲದಲ್ಲಿಯೇ, ಎಂಟನೆಯ ಶತಮಾನದಲ್ಲಿ ಭಾಸ್ಕರಾಚಾರ್ಯರೆಂಬುವರು ಬ್ರಹ್ಮಸೂತ್ರಕ್ಕೂ, ಉಪನಿಷತ್ತುಗಳಿಗೂ, ಭಗವದ್ಗೀತೆಗೂ ಭಾಷ್ಯವನ್ನು ಬರೆದು ಶಂಕರಾಚಾರ್ಯರ ಅಭಿಪ್ರಾಯಗಳನ್ನು ನಿರಾಕರಿಸಿ ಶಂಕರಾಚಾರ್ಯರಿಗಿಂತಲೂ ಪ್ರಾಚೀನರಾದ ಭರ್ತೃಪ್ರಪಂಚರೇ ಮೊದಲಾದವರಿಂದ ಸ್ಥಾಪಿಸಲ್ಪಟ್ಟ ಬ್ರಹ್ಮಪರಿಣಾಮವಾದವನ್ನೂ ಸ್ಥಾಪಿಸಿರುವರು. ಅನಂತರ ಹತ್ತನೆಯ ಶತಮಾನದಲ್ಲಿ ಯಾದವಪ್ರಕಾಶಾಚಾರ್ಯರೆಂಬುವರು ಈ ಭಾಸ್ಕರಾಚಾರ್ಯರ ಅಭಿಪ್ರಾಯವನ್ನು ಪರಿಷ್ಕರಿಸಿ ಬೇರೆ ಸಂಪ್ರದಾಯವನ್ನು ಸ್ಥಾಪಿಸಿದರು. ಭಾಸ್ಕರಾಚಾರ್ಯರದು ಔಪಾಧಿಕ ಭೇದಾಭೇದವಾದ. ಯಾದವಪ್ರಕಾಶಾಚಾರ್ಯರದು ಸ್ವಾಭಾವಿಕ ಭೇದಾಭೇದವಾದ. ಅನಂತರ ಹನ್ನೆರಡನೆಯ ಶತಮಾನದಲ್ಲಿ ರಾಮಾನುಜಾಚಾರ್ಯರೂ, ಹದಿಮೂರನೆಯ ಶತಮಾನದಲ್ಲಿ ಮಧ್ವಾಚಾರ್ಯರೂ ಬ್ರಹ್ಮಸೂತ್ರ ಮೊದಲಾದುವುಗಳಿಗೆ ಭಾಷ್ಯಗಳನ್ನು ಬರೆದು ತಮ್ಮ ತಮ್ಮ ಸಿದ್ಧಾಂತಗಳನ್ನು ಸ್ಥಾಪಿಸಿರುವರು. ಆಯಾ ಭಾಷ್ಯಗಳಿಗೂ ಟೀಕಾಟಿಪ್ಪಣಿಗಳು ವಿಶೇಷವಾಗಿ ದಕ್ಷಿಣ ದೇಶದಲ್ಲಿ ಬೆಳೆಯುತ್ತಿರುವುವು.

ಹೀಗೆಯೇ ಸುಮಾರು ಹದಿನೈದನೆಯ ಶತಮಾನದಲ್ಲಿ ಶ್ರೀಕಂಠಶಿವಾಚಾರ್ಯರೆಂಬುವರು ಶೈವವಿಶಿಷ್ಟಾದ್ವೈತವೆಂಬ ಭಾಷ್ಯವನ್ನು ಶಿವೋತ್ಕರ್ಷಪರವಾಗಿ ಬರೆದಿರುವರು. ಅದಕ್ಕೆ ಅಪ್ಪಯ್ಯದೀಕ್ಷಿತರೆಂಬ ಮಹಾವಿದ್ವಾಂಸರು 'ಶಿವಾರ್ಕಮಣಿ ದೀಪಿಕೆ'ಯೆಂಬ ದೊಡ್ಡ ವ್ಯಾಖ್ಯಾನವನ್ನು ಬರೆದಿರುತ್ತಾರೆ.

ಹೀಗೆಯೇ ಉತ್ತರದೇಶದ ವಲ್ಲಭಮತದಲ್ಲೂ ನಿಂಬಾರ್ಕಮತದಲ್ಲೂ ಸೂತ್ರಕ್ಕೆ ಭಾಷ್ಯಗಳೂ ಅವುಗಳ ಟೀಕಾಟಿಪ್ಪಣಿಗಳೂ ಬಹಳವಾಗಿ ಪ್ರಚಾರದಲ್ಲಿರುವುವು.




# ಶ್ರೀ ಶಾಂಕರಸಿದ್ಧಾಂತ ಸರಣಿ

## ವ್ಯವಹಾರ ಮಾರ್ಗ

ಶ್ರೀ ಶಂಕರಾಚಾರ್ಯರು ಮೊದಲಾದವರಿಂದ ಪ್ರಕಾಶಿಸಲ್ಪಟ್ಟಿರುವ ಅದ್ವೈತಸಿದ್ಧಾಂತವನ್ನು ನಿರೂಪಿಸಬೇಕಾಗಿದ್ದರೆ ದರ್ಶನಪರಿಚಯದೃಷ್ಟಿಯಿಂದ ಶ್ರೀ ಶಂಕರಾಚಾರ್ಯರ ಸಿದ್ಧಾಂತಸರಣಿಯನ್ನು ಪೀಠಿಕಾರೂಪವಾಗಿ ತಿಳಿಯಬೇಕಾದುದು ಅವಶ್ಯಕವೆಂದು ಅವರ ಸರಣಿ ಸಂಕ್ಷೇಪವಾಗಿ ಸೂಚಿಸಲ್ಪಡುವುದು.

ಸಾಮಾನ್ಯವಾಗಿ ದರ್ಶನಗಳ ತಾರತಮ್ಯವನ್ನು ಪರಿಶೀಲಿಸಿದರೆ ಬೌದ್ಧಾಭಿಪ್ರಾಯಕ್ಕೂ ಸಾಂಖ್ಯಾಭಿಪ್ರಾಯಕ್ಕೂ ಸರ್ವಾಂಶದಲ್ಲೂ ಪಕ್ಷಪ್ರತಿಪಕ್ಷಭಾವವಿರುವುದೆಂದು ಅನೇಕಾವರ್ತಿ ನಿರೂಪಿಸಲ್ಪಟ್ಟಿರುವುದು. ಈ ಪಕ್ಷಪ್ರತಿಪಕ್ಷಭಾವವೆಂಬ ವಿರೋಧವನ್ನು ಶಮನ ಮಾಡತಕ್ಕುದಾಗಿಯೇ ಅರ್ಹತಸಂಪ್ರದಾಯ ಇರುವುದೆಂದು ತಿಳಿಯಬಹುದು. ಅವರ ಸಿದ್ಧಾಂತ ಅನೇಕಾಂತವಾದ. ಒಂದು ದೃಷ್ಟಿಯಲ್ಲಿ ಸಾಂಖ್ಯರು ಹೇಳುವುದು ಸರಿಯಾಗಿರುವುದು, ಮತ್ತೊಂದು ದೃಷ್ಟಿಯಲ್ಲಿ ಬೌದ್ಧರು ಹೇಳುವುದು ಸರಿಯಾಗಿರುವುದೆಂದು ಹೇಳುವುದೇ ಅನೇಕಾಂತವಾದ. ಅವರು ಸರ್ವದರ್ಶನಗಳ ಅನ್ಯೋನ್ಯವಿರೋಧವನ್ನು ಶಮನಮಾಡತಕ್ಕ ದರ್ಶನ ತಮ್ಮದೆಂದು ಹೇಳಿರುವರು. ಈ ಮಾರ್ಗವನ್ನೇ ಪ್ರಾಯಶಃ ಪಾತಂಜಲರೂ ಕುಮಾರಿಲ ಮೀಮಾಂಸಕರೂ ಭರ್ತೃಪ್ರಪಂಚ ಮೊದಲಾದ ಪ್ರಾಚೀನವೇದಾಂತಿಗಳೂ ಭಾಸ್ಕರ, ಯಾದವಪ್ರಕಾಶ ಮೊದಲಾದ ನವೀನವೇದಾಂತಿಗಳೂ ಆಶ್ರಯಿಸಿರುವರು. ಇವರೆಲ್ಲರೂ ಮಧ್ಯಸ್ಥರೀತಿಯಲ್ಲಿರುವರು. ನ್ಯಾಯವೈಶೇಷಿಕ ದರ್ಶನಗಳು ಸಹ ವ್ಯವಸ್ಥಿತಮಧ್ಯಸ್ಥವಾದಗಳಾಗಿಯೇ ಇರುವುವು. ಇವುಗಳಲ್ಲಿ ಸತ್ ಎಂಬುದೂ ಉಂಟು, ಅಸತ್ ಎಂಬುದೂ ಉಂಟು ; ನಿತ್ಯವೂ ಉಂಟು, ಅನಿತ್ಯವೂ ಉಂಟು ; ಕ್ಷಣಿಕವೂ ಉಂಟು, ಸ್ಥಿರವೂ ಉಂಟು ; ಆದರೆ ಒಂದೇ ವಸ್ತು ಸದಸದ್ರೂಪವಾಗುವುದಿಲ್ಲ, ; ನಿತ್ಯಾನಿತ್ಯರೂಪವಾಗು

ವುದಿಲ್ಲ. ಸತ್ ಬೇರೆ. ಅಸತ್ ಬೇರೆ ; ನಿತ್ಯ ಬೇರೆ, ಅನಿತ್ಯ ಬೇರೆ, ಇದೇ ವ್ಯವಸ್ಥಿತವಮಾಧ್ಯಸ್ಥ್ಯವು.

ಇವರ ಮಧ್ಯೇ ಇರುವ ಶ್ರೀ ಶಂಕರಾಚಾರ್ಯರು ಒಂದು ವಿಧವಾದ ದರ್ಶನಗಳ ಮಾಧ್ಯಸ್ಥ್ಯದಲ್ಲಿರುವರೆಂದು ದರ್ಶನದೃಷ್ಟಿಯಿಂದ ತಿಳಿಯ ಬಹುದು. ಜಾಗ್ರುತ್ ಸ್ವಪ್ನ ಸುಷುಪ್ತಿಯೆಂಬ ಮನುಷ್ಯರ ಮೂರು ವಿಧವಾದ ಪ್ರತಿ ದಿವಸದ ಅವಸ್ಥಾಭೇದದೃಷ್ಟಿಯಿಂದ ಮನುಷ್ಯಜೀವಮಾನದಲ್ಲಿ.ವ್ಯವ ಹಾರಾವಸ್ಥಾ, ವಿಚಾರಾವಸ್ಥಾ, ವಿಜ್ಞಾನಾವಸ್ಥಾ ಎಂದು ಮೂರು ಪ್ರಕಾರ ವಾಗಿರುವ ದಶಾಭೇದದೃಷ್ಟಿಯಿಂದ ಇವರ ಸರಣಿ ಹೊರಟಿರುವುದೆಂದು ತಿಳಿದುಬರುತ್ತದೆ. ಬೃಹದಾರಣ್ಯಕೋಪನಿಷತ್ತು ಮೊದಲಾದುವುಗಳಲ್ಲಿ ಜಾಗ್ರುತ್ ಸ್ವಪ್ನ ಸುಷುಪ್ತ್ಯವಸ್ಥೆಗಳನ್ನು ನಿರೂಪಿಸಿ ಸುಷುಪ್ತ್ಯವಸ್ಥೆಯನ್ನೇ ಪರಮಾರ್ಥದಶೆಯೆಂಬ ಮೋಕ್ಷಕ್ಕೆ ಉದಾಹರಣೆಯಾಗಿ ನಿರೂಪಿಸಿರುತ್ತದೆ. ಈ ಅಂಶವನ್ನು ನ್ಯಾಯಾಚಾರ್ಯರಾದ ಗೌತಮರೂ ವಾತ್ಸ್ಯಾಯನ ಮೊದ ಲಾದವರೂ (೪–೧–೬೩) ವಿಶದಪಡಿಸಿರುವರು. ಆದುದರಿಂದ ದರ್ಶನಗಳ ಅಭಿಪ್ರಾಯಗಳನ್ನು ಮೂರು ವಿಧವಾಗಿ ವಿಭಾಗ ಮಾಡುವುದಕ್ಕೆ ಅವಕಾಶ ವಾಗಿರಬಹುದು, ಜಾಗ್ರದವಸ್ಥೆಯೇ ವ್ಯವಹಾರಾವಸ್ಥೆ. ಇವರಲ್ಲಿ ಪ್ರಮಾಣಪ್ರಮೇಯವ್ಯವಸ್ಥೆ : ಅದನ್ನು ಅನುಸರಿಸಿ ವ್ಯವಹಾರವ್ಯವಸ್ಥೆ ಕಾರ್ಯಕಾರಣಭಾವ, ಪುಣ್ಯಪಾಪ, ಸ್ವರ್ಗನರಕ, ಕರ್ಮಜ್ಞಾನ, ಈಶ್ವರ ಐಶ್ವರ್ಯ, ನಿಯಾಮ್ಯನಿಯಾಮಕ, ಸೃಷ್ಟಿಸ್ಥಿತಿಸಂಹಾರಗಳು, ಭ್ರಮೆ, ಪ್ರಮೆ, ಸುಖದುಃಖ, ಗುರುಶಿಷ್ಯ, ಬಂಧಮೋಕ್ಷ ಮೊದಲಾದುವುಗಳ ವ್ಯವಸ್ಥೆ. ಇವುಗಳೆಲ್ಲವೂ ಈಗಿನ ತಾರ್ಕಿಕಮೀಮಾಂಸಕ ಮೊದಲಾದವರು ಅಂಗೀಕರಿಸುವ ಹಾಗೆ ಅಂಗೀಕರಿಸಿ ಇವಕ್ಕೆ ಅನುಗುಣವಾದ ದರ್ಶನಗಳು, ಗ್ರಂಥಗಳು, ಉಪದೇಶಗಳು—ಇವುಗಳೆಲ್ಲವನ್ನೂ ಸಾರ್ಥಕಗೊಳಿಸುವುದು ಮೊದಲನೆಯ ಮಾರ್ಗ. ಇದೇ ಪರಿಣಾಮವಾದ, ವ್ಯವಹಾರಮಾರ್ಗ. ಇದು ಪ್ರತ್ಯಕ್ಷಾದಿಸಕಲಪ್ರಮಾಣಗಳಿಗೂ ವಿರೋಧವಿಲ್ಲದ ಮಾರ್ಗ. ಇದನ್ನೇ ಪರಮಾರ್ಥವೆಂದು ಬಹುದರ್ಶನಗಳು ಅಭಿಪ್ರಾಯಪಟ್ಟಿರುವುವು.

ಈ ಮಾರ್ಗವು "ಉಪಾಸನಾಕಾಂಡವೆಂಬ ಅನೇಕ ಉಪನಿಷತ್ತು ಗಳಿಗೆ ಆವಶ್ಯಕವಾಗಿರುವುದರಿಂದ ಸೂತ್ರಕರ್ತರಾದ ಬಾದರಾಯಣಾ

ಚಾರ್ಯರು ನಿರೂಪಿಸಿರುತ್ತಾರೆ. "ನಿಷೇಧಮಾಡಲಿಲ್ಲ"ವೆಂದು ಶ್ರೀಮದಾಚಾರ್ಯರೇ ಆರಂಭಣಾಧಿಕರಣ ಪೀಠಿಕೆಯಲ್ಲಿ ಹೇಳಿರುತ್ತಾರೆ. ಮಂದಾಧಿಕಾರಿಗಳಿಗೆ ಈ ಮಾರ್ಗವೇ ಮೊದಲು ಅವಲಂಬನವು.

## ವಿಚಾರಮಾರ್ಗ

ಈ ಮಾರ್ಗದಲ್ಲಿದ್ದು ಚಿತ್ತಶುದ್ಧಿ, ವೈರಾಗ್ಯ, ವಿವೇಕ ಮೊದಲಾದ ಗುಣಗಳನ್ನು ಸಂಪಾದಿಸಿಕೊಂಡರೆ ಎರಡನೆಯ ಮಾರ್ಗವಾದ ವಿಚಾರಾವಸ್ಥೆಯೆಂಬ ವಿವರ್ತಮಾರ್ಗಕ್ಕೆ ಅರ್ಹರಾಗುತ್ತಾರೆ. ಇವರು ಮಧ್ಯಮಾಧಿಕಾರಿಗಳು. ಈ ಎರಡನೆಯ ಮಾರ್ಗದಲ್ಲಿ ಮೊದಲು ನಿರೂಪಿಸಲ್ಪಟ್ಟಿರುವ ಸಕಲವ್ಯವಸ್ಥೆಯೂ ದುರ್ನಿರೂಪವು, ಅನಿರ್ವಚನೀಯವು, ಮಿಥ್ಯೆಯು, ಅಸತ್ಯವು, ಅನೃತವು, ಅವಿದ್ಯೆಯು, ಮಾಯೆಯು, ಕಲ್ಪಿತವು, ದುಃಖಾತ್ಮವು, ಹೇಯವು, ಸ್ವಾಪ್ನಪ್ರಪಂಚದಂತೆ ವಿನಶ್ವರವು. ಅಸಾರವು. ಸಾಂಖ್ಯರು ಹೇಳುವಂತೆ ಸತ್ತಲ್ಲ, ಸೌಗತರು ಹೇಳುವಂತೆ ಅಸತ್ತಲ್ಲ. ಆರ್ಹತರು ಹೇಳುವಂತೆ ಸದಸತ್ತೂ ಅಲ್ಲ. ಉಭಯವಿಲಕ್ಷಣವು ನಾಲ್ಕನೆಯ ಕೋಟಿಯಲ್ಲಿರುವುದು.

ಈ ಅಂತಸ್ತಿನಲ್ಲಿ ಪ್ರಪಂಚವನ್ನು ನಿರೂಪಿಸಿ ಸ್ವಾಪ್ನಪ್ರಪಂಚವನ್ನು ದೃಷ್ಟಾಂತವಾಗಿಟ್ಟು ಪ್ರಬೋಧ ದಶೆಯಲ್ಲಿ ನಿಶ್ಶೇಷವಿನಾಶವನ್ನು ಉಪದೇಶಿಸುವ ಮಾರ್ಗವಿದು. ಇದಕ್ಕೆ ವಿವರ್ತವಾದವೆಂದು ತಾತ್ಪರ್ಯ, ಇದೇ ಈಗಿನ ಅದ್ವೈತಸಿದ್ಧಾಂತಗ್ರಂಥಗಳ ಸಾರಾಂಶ. ಇದೇ ವೇದಾಂತ ವಿಚಾರಮಾರ್ಗ. ಇದು ಮಧ್ಯಮಾಧಿಕಾರಿಗಳ ಮಾರ್ಗ.

## ವಿಜ್ಞಾನಮಾರ್ಗ

ಈ ಮಾರ್ಗದಲ್ಲಿ ಬಹುಕಾಲ ಪರಿಶ್ರಮಪಟ್ಟವರು ಮೂರನೆಯ ಸೋಪಾನವೆಂಬ ಸುಷುಪ್ತ್ಯವಸ್ಥಾಸದೃಶವಾದ ಪರಮಾರ್ಥಾವಸ್ಥೆಗೆ, ಉತ್ತಮಾಧಿಕಾರಕ್ಕೆ ಅರ್ಹರಾಗುವರು. ಇದೇ ಪ್ರತಿಷೇಧವಾದ. ಪರಮಾರ್ಥವಾದ ಗಾಢ ನಿದ್ರಾವಸ್ಥೆಯೆಂಬ ಸುಷುಪ್ತಿದಶೆಯಲ್ಲಿ ಜಾಗ್ರತ್ಪ್ರಪಂಚವೂ ಸ್ವಾಪ್ನಪ್ರಪಂಚವೂ ಅದೃಶ್ಯವಾಗಿ, ಎಂದರೆ ಆತ್ಮವ್ಯತಿರಿಕ್ತವಾದ

ಸರ್ವವೂ ನಿವೃತ್ತಿಯಾಗಿ ಆತ್ಮಾನುಭವಮಾತ್ರವಿರುವ ಹಾಗೆ, ಪರಮಾರ್ಥ ದೆಶೆಯಲ್ಲಿ ಆತ್ಮವ್ಯತಿರಿಕ್ತಸರ್ವಪ್ರತಿಷೇಧವನ್ನು ಶ್ರುತಿ ಉಪದೇಶಿಸುತ್ತದೆ. ಇದೇ ಬ್ರಹ್ಮಾವಸಾನ ಪ್ರತಿಷೇಧಮಾರ್ಗ. ಈ ಮಾರ್ಗವನ್ನು ಅದ್ವೈತ ಸಿದ್ಧಾಂತ ಸಂಪ್ರದಾಯಪ್ರವರ್ತಕರಾದ ಗೌಡಪಾದಾಚಾರ್ಯರು ಈ ಪ್ರಕಾರ ನಿರೂಪಿಸಿರುವರು—

ನ ನಿರೋಧೋ ನ ಚೋತ್ಪತ್ತಿರ್ನ ಬದ್ಧೋ ನ ಚ ಸಾಧಕಃ
ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ ॥

ಇಲ್ಲಿ ಸರ್ವಪ್ರತಿಷೇಧವೆಂಬ ಶೂನ್ಯವಾದವೇ ಆಪಾತತಃ ತೋರುತ್ತದೆ. ಆದರೆ ಪ್ರತಿಷೇಧಕ್ಕೆ ಆಶ್ರಯವಿಲ್ಲದೆ ಅವಕಾಶವಿಲ್ಲದಿರುವುದರಿಂದ ಸರ್ವಪ್ರತಿ ಷೇಧವು ಸಾಧ್ಯವಿಲ್ಲ. ಬ್ರಹ್ಮಾವಸಾನಪ್ರತಿಷೇಧವೇ, ಬ್ರಹ್ಮನಲ್ಲಿ ಸಕಲ ಪ್ರಪಂಚ ಪ್ರತಿಷೇಧವೇ ಶ್ಲೋಕಕ್ಕೆ ತಾತ್ಪರ್ಯವೆಂದು ಭಾಷ್ಯಕಾರರು ನಿರ್ಣಯಿಸಿ "ನೇತಿನೇತಿ" ಎಂಬ ಶ್ರುತಿಗೂ ಇದೇ ತಾತ್ಪರ್ಯವೆಂದು "ಪ್ರಕೃತೈತಾವತ್ತ್ವಮ್" ಎಂಬ ಸೂತ್ರಭಾಷ್ಯದಲ್ಲೂ ಸಿದ್ಧಾಂತ ಮಾಡಿರುವರು. ಇದೇ ವಿಜ್ಞಾನಮಾರ್ಗ. ಜೀವನ್ಮುಕ್ತಿಮಾರ್ಗ, ಪರಮಾರ್ಥದಶೆ, ಉತ್ತಮಾಧಿಕಾರಮಾರ್ಗ.

ಇದರಲ್ಲಿ ಪ್ರಥಮಮಾರ್ಗವೇ ಸರ್ವರಿಗೂ ಅವಲಂಬನ. ಅದರಲ್ಲಿ ಶಿಕ್ಷಿತರಾದವರಿಗೇಯೇ ಸೋಪಾನಾರೋಹಣಾಧಿಕಾರವೆಂದು ವ್ಯವಹಾರ ಮಾರ್ಗದಲ್ಲಿ ಸಂಪೂರ್ಣಾಭಿಪ್ರಾಯವನ್ನು ಸೂಚಿಸಿರುವರು.

ಈ ರೀತಿ ಶ್ರೀಶಾಂಕರಸರಣಿಯ ವಿವರಣೆ ಉತ್ಪ್ರೇಕ್ಷಿತವಲ್ಲ. ಭಾಸ್ಕರ ಭಾಷ್ಯಕಾರರು ಅಧಿಕಾರಿ ಭೇದದಿಂದ ಪ್ರಾಮಾಣಿಕಶಾಸ್ತ್ರ ವಿಭಾಗವು ಸರಿಯಲ್ಲವೆಂದು ಈ ಸಿದ್ಧಾಂತವನ್ನು ಆಕ್ಷೇಪಿಸಿರುವುದರಿಂದ ಇದು ಸ್ಪಷ್ಟವಾಗಿರುತ್ತದೆ. ಅಧಿಕಾರಭೇದದಿಂದ ಉಪದೇಶಭೇದಗಳಿಗೆ ವಿರೋಧಪರಿಹಾರವು ಬೌದ್ಧಸಿದ್ಧಾಂತದಲ್ಲೂ, "ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ" ಎಂದು ಇತರ ಸಿದ್ಧಾಂತಗಳಲ್ಲೂ ಸ್ಪಷ್ಟವಾಗಿರುವುದು.

## ವೇದಾಂತವು ಬೌದ್ಧ ಪ್ರತಿಪಕ್ಷವು

ಶ್ರೀ ಶಂಕರಾಚಾರ್ಯರ ಸಂಪ್ರದಾಯ ಪ್ರಕಾರ ಸಕಲಜೀವಾತ್ಮರೂ ಒಂದು: ಜೀವನೇ ಬ್ರಹ್ಮನೆಂದೂ ಉಪನಿಷತ್ತುಗಳಿಗೆ ತಾತ್ಪರ್ಯವಾದರೆ

ವೇದಾಂತವಾದವು ಬೌದ್ಧಸಿದ್ಧಾಂತಕ್ಕೆ ಸ್ಪಷ್ಟವಾಗಿ ಪ್ರತಿಪಕ್ಷವಾಗಿರುವುದು ಎಂದು ತಿಳಿದುಬರುತ್ತದೆ. ಬೌದ್ಧದರ್ಶನವು ನೈರಾತ್ಮ್ಯದರ್ಶನ, ಎಂದರೆ ಆತ್ಮನಿಲ್ಲವೆಂದರ್ಥ. ವೇದಾಂತದರ್ಶನ ಅಧ್ಯಾತ್ಮದರ್ಶನ, ಎಂದರೆ ಆತ್ಮನನ್ನು ಸಾಧಿಸುವ ದರ್ಶನವೆಂದರ್ಥ. ಇಲ್ಲಿ ಎರಡು ಉದಾಹರಣೆಗಳು— ತಾನು ಎಂಬ ಭಾವವಿದ್ದರೆ ಮತ್ತೊಬ್ಬನು ಎಂಬ ಭಾವವು ಅದರ ಜತೆಯಲ್ಲೇ ಇರುವುದು. ಸ್ವಪರವಿಭಾಗವಿದ್ದರೆ ರಾಗದ್ವೇಷಗಳಿಗೆ ಅವಕಾಶವು. ಬೇಕು ಬೇಡವೆಂಬ ರಾಗದ್ವೇಷಗಳು ಬಂದರೆ ಕಾಮ, ಕ್ರೋಧ, ಈರ್ಷ್ಯೆ, ಅಸೂಯೆ ಮೊದಲಾದ ಅನರ್ಥಗಳು ಸಿದ್ಧವು. ಇಂತಹ ದುಃಖನಿವೃತ್ತಿಗೆ ಆತ್ಮನೇ ಇಲ್ಲವೆಂಬ ಭಾವವೇ ನೈರಾತ್ಮ್ಯದರ್ಶನದ ರಹಸ್ಯ ಎಂದು ಒಂದು ಅಂಶ. ಮತ್ತು ನಾನು ಎಂಬ ಒಂದು ವಸ್ತುವಿದ್ದರೆ ಇಲ್ಲಿಂದ ಭಯ, ಅಲ್ಲಿಂದ ಭಯ ಎಂದು ಸರ್ವದಾ ಚಿಂತೆ ಇರುವುದು. ನಾನು ಎಂಬ ವಸ್ತುವೇ ಇಲ್ಲದಿದ್ದರೆ ಯಾರಿಗೆ ಎಲ್ಲಿಂದ ಭಯವೆಂದು ಎರಡನೆಯ ಅಂಶ.

> ಆತ್ಮನಿ ಸತಿ, ಪರಸಂಜ್ಞಾ ಸ್ವಪರವಿಭಾಗಾತ್ ಪರಿಗ್ರಹದ್ವೇಷೌ
> ಉಭಯೋಸ್ಸಂಪ್ರತಿಬದ್ಧಾಃ ಸರ್ವೇ ಭಾವಾಃ ಪ್ರಜಾಯನ್ತೇ ॥
> ಯತಸ್ತತೋ ವಾಸ್ತು ಭಯಂ ಯದ್ಯಹಂ ನಾಮ ಕಿಂಚನ
> ಅಹಮೇವ ನ ಕಿಂಚಿಚ್ಚೇತ್ ಭಯಂ ಕಸ್ಯ ಭವಿಷ್ಯತಿ ॥

ಇದಕ್ಕೆ ಪ್ರತಿಯಾಗಿಯೇ "ತತ್ತ್ವಮಸಿ, ಅಯಮಾತ್ಮಾ ಬ್ರಹ್ಮ, ದ್ವಿತೀಯಾದ್ವೈ ಭಯಂ ಭವತಿ" ಇತ್ಯಾದಿ ಶ್ರುತಿಗಳು ಹೊರಟಿರುವುವು. ಇವುಗಳಲ್ಲಿ ಸರ್ವ ಜೀವಾತ್ಮರುಗಳೂ ಒಂದು ಜೀವನೇ ಬ್ರಹ್ಮನು, ಪರನು ಬೇರೆಯಿಲ್ಲ ಎಂದು ಸಿದ್ಧಾಂತ ಮಾಡಿರುವುದರಿಂದ ಆತ್ಮನಿದ್ದರೂ ಪರನಿಲ್ಲ, ರಾಗದ್ವೇಷಾದಿಗಳಿಗೇ ಅವಕಾಶವಿಲ್ಲ. ಆತ್ಮನು ಒಬ್ಬನೇ ಇರುವನು. ಎರಡನೆಯ ವಸ್ತುವೇ ಇಲ್ಲ, ಭಯಕ್ಕೂ ಅವಕಾಶವಿಲ್ಲ. ರಾಗದ್ವೇಷಗಳನ್ನೂ ನಿವೃತ್ತಿಮಾಡಬೇಕಾದರೆ ಐಕಾತ್ಮ್ಯವಾದವೇ ಸರಿಯಾಗಿರುವಲ್ಲಿ ನೈರಾತ್ಮ್ಯವಾದವು ಸರಿಯಲ್ಲವೆಂದು ಅಭಿಪ್ರಾಯ. ಹೀಗೆ ಔಪನಿಷದಸಿದ್ಧಾಂತದಲ್ಲಿ ಅನೇಕ ವಿಷಯಗಳು ಬೌದ್ಧಸಿದ್ಧಾಂತ ವಿಷಯಗಳಿಗೇ ಪ್ರತಿಪಕ್ಷಗಳಾಗಿರುವುವೆಂದು ಶಾಂಕರಸಂಪ್ರದಾಯದಲ್ಲಿ ವ್ಯಕ್ತವಾಗುತ್ತದೆ.

ಮತ್ತು —ವಿಜ್ಞಾನಕ್ಕೆ ನಿತ್ಯತ್ವ, ಏಕತ್ವ ಮೊದಲಾದುವನ್ನು ಹೇಳು

ವುದರಿಂದ ಅಪರಾಧವು ಅತ್ಯಲ್ಪವೆಂದು ವಿಜ್ಞಾನವಾದಿಗಳು ವೇದಾಂತವಾದ ವನ್ನು ಹೇಳುವರು. ವೇದಾಂತಿಗಳು ಹೀಗೆ ಹೇಳುತ್ತಾರೆ—ಬೌದ್ಧಮತವು ವೇದಾಂತ ಮತದ ಬಹು ಸಮೀಪಕ್ಕೆ ಬಂದಿರುತ್ತದೆ. ಆದರೂ ಪರಮಾರ್ಥ ವಾದ ಅಂಶವನ್ನು ಮಾತ್ರ ತಿಳಿಯಲಿಲ್ಲ ಎಂದು. ಈ ಪ್ರಕಾರ ಸಮರಸ ವಾದ ವೈಚಿತ್ರ್ಯವೂ ಕಾಣುವುದು. "ತೇಷಾಮಲ್ಪಾಪರಾಧಂ ತು ದರ್ಶನಂ ನಿತ್ಯತೋಕ್ತಿತಃ" ಎಂದು 'ತತ್ತ್ವಸಂಗ್ರಹ'ದಲ್ಲಿರುವುದು. "ನೈತತ್ ಬುದ್ಧೇನ ಭಾಷಿತಮ್" ಎಂದು 'ಮಾಂಡೂಕ್ಯಕಾರಿಕೆ'ಯಲ್ಲಿ ರುವುದು.

## ಪದಾರ್ಥವ್ಯವಸ್ಥೆ

ಈ ಸಿದ್ಧಾಂತದಲ್ಲಿ ವಸ್ತು ವ್ಯವಸ್ಥಾಕ್ರಮ ಹೇಗೆಂದರೆ—ತತ್ತ್ವ, ಅತತ್ತ್ವವೆಂದು ಪದಾರ್ಥ ಎರಡು ವಿಧ. ಇದನ್ನೇ ಆತ್ಮ, ಅನಾತ್ಮ ಎಂದು ಹೇಳಬಹುದು. ತತ್ತ್ವವೆಂದರೆ ಯಾವ ಕಾಲದಲ್ಲೂ ಬಾಧೆಯಿಲ್ಲದ, ನಿವೃತ್ತಿಯಿಲ್ಲದ, ಶಾಶ್ವತವಾದ ಬ್ರಹ್ಮನು. ಇವನು ಪರಿಪೂರ್ಣಜ್ಞಾನಾ ನಂದಸ್ವರೂಪನು, ಅಪರೋಕ್ಷಸ್ವರೂಪನು, ಪರಿಚ್ಛೇದವೆಂಬ ದೇಶಕಾಲ ವಸ್ತು ಸಂಕೋಚವಿಲ್ಲದವನು, ಸತ್ತೆಂಬ ಸತ್ತಾಸ್ವರೂಪನು, ನಿತ್ಯಶುದ್ಧ ಬುದ್ಧಮುಕ್ತಸ್ವರೂಪನು, ನಿರ್ವಿಶೇಷನು. ಇದರ ವಿವರಣೆ ಮುಂದಿರು ವುದು.

ಸರ್ವಪ್ರಕಾರದಲ್ಲೂ ಇದಕ್ಕೆ ವ್ಯತಿರಿಕ್ತವಾಗಿರುವುದು. ಅತತ್ತ್ವವು ಅದು ಅನಿರ್ವಾಚ್ಯ, ಅತ್ಯಂತಾಸತ್ ಎಂದು ಎರಡು ಪ್ರಕಾರ. ಪ್ರತ್ಯಕ್ಷಾ ದಿಪ್ರಮಾಣಗೋಚರವಾಗಿರುವ ಗವಾಶ್ವಘಟಪಟಾದಿವಸ್ತುಗಳು ಅನಿರ್ವಾಚ್ಯ. ಶಶಶೃಂಗ, ಕೂರ್ಮರೋಮ ಮೊದಲಾದ ಪದಾರ್ಥ ಅತ್ಯಂತಾಸತ್, ತುಚ್ಛ, ಶೂನ್ಯ. ಅನಿರ್ವಚನೀಯವಸ್ತುಗಳು ಸತ್ತಾಸ್ವರೂಪನಾದ ಬ್ರಹ್ಮನಲ್ಲಿ ಆರೋಪಿತ, ಕಲ್ಪಿತ. ಅಧ್ಯಸ್ತವಾದುದರಿಂದ ಬ್ರಹ್ಮಧರ್ಮವಾಗಿ ತೋರಿ ಬರುವ ಸತ್ತ್ವವೇ ಗವಾದಿ ವಸ್ತುಗಳಲ್ಲೂ ಸತ್ತಾದಾತ್ಮ್ಯವೆಂಬ ನಾಮ ಧೇಯದಿಂದ ಇರುವುದು. ಇಂತಹ ಸತ್ತ್ವವಿಲ್ಲದಿರುವುದು ಅಸತ್ಪದಾರ್ಥ. ಇವಕ್ಕೆ ಪ್ರಮಾಣಸಂಬಂಧವಿಲ್ಲ, ಕಾಲಸಂಬಂಧವಿಲ್ಲ ಕೇವಲ ಶಶಶೃಂಗವೆಂಬ

ಶಬ್ದದಿಂದುಂಟಾಗುವ ನಿರ್ವಿಷಯಖ್ಯಾತಿಯೆಂಬ ವಿಕಲ್ಪಕ್ಕೆ ಗೋಚರವಾಗಿರುವುದು. ಪ್ರತೀತಿಯೆಂಬ ಪ್ರಮಾಣ ಜ್ಞಾನಗೋಚರವಲ್ಲ.

ಅನಿರ್ವಾಚ್ಯವು ವ್ಯಾವಹಾರಿಕ, ಪ್ರಾತಿಭಾಸಿಕ ಎಂದು ಎರಡು ವಿಧ. ವ್ಯಾವಹಾರಿಕವು ಗವಾದಿಗಳು. ಪ್ರಾತಿಭಾಸಿಕವು ಭ್ರಾಂತಿಯಲ್ಲಿ ತೋರಿಬರುವ ರಜ್ಜುಸರ್ಪಾದಿಗಳು.

ವ್ಯಾವಹಾರಿಕವಸ್ತು ಪ್ರಕೃತಿ, ಪ್ರಕೃತಿವಿಕೃತಿ, ವಿಕೃತಿ, ಉದಾಸೀನವೆಂದು ಸಾಂಖ್ಯರು ಹೇಳುವಂತೆ ನಾಲ್ಕು ಪ್ರಕಾರ. ಪ್ರಕೃತಿಯೆಂದರೆ ಮೂಲಜ್ಞಾನ, ಮಾಯೆ, ಅವಿದ್ಯೆ ಮೊದಲಾದ ಶಬ್ದಗಳಿಂದ ಹೇಳಲ್ಪಡುವ ಪ್ರಪಂಚದ ಪೂರ್ವಸ್ಥಿತಿ. ಪ್ರಕೃತಿವಿಕೃತಿಯೆಂದರೆ ಮಹತ್ ಅಹಂಕಾರ ಪಂಚತನ್ಮಾತ್ರೆಗಳು. ಕೆಲವರು ಮಹದಹಂಕಾರಗಳನ್ನು ಮನೋವೃತ್ತಿಯಲ್ಲೇ ಸೇರಿಸುವರು. ವಿಕೃತಿಯೆಂದರೆ ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು, ಮನಸ್ಸು, ಪ್ರಾಣ ಎಂದು ಹನ್ನೆರಡು. ಉದಾಸೀನವೆಂದರೆ, ಗುಣಕರ್ಮ ಸಾಮಾನ್ಯ ಸಂಖ್ಯಾಶಕ್ತಿ ಮೊದಲಾದುವು. ಸತ್ತ್ವ ರಜಸ್ಸು ತಮಸ್ಸು ರೂಪ ರಸ ಗಂಧ ಸ್ಪರ್ಶ ಶಬ್ದ ಪರಿಮಾಣ ಸಂಯೋಗ ವಿಭಾಗ ದ್ರವತ್ವ ಸ್ನೇಹಗಳೆಂಬ ಹದಿಮೂರು ಗುಣಗಳು. ಗಮನಾಗಮನಾದಿ ರೂಪದಿಂದ ಕರ್ಮವೆಂಬ ಕ್ರಿಯೆ ಬಹುವಿಧ. ಗೋತ್ವಘಟತ್ವಾದಿ ಜಾತಿಯೇ ಸಾಮಾನ್ಯವು. ಕೆಲವರು ಆಕಾರಾತಿರಿಕ್ತ ಜಾತಿಯನ್ನು, ಅಖಂಡೋಪಾದಿಯನ್ನು ಒಪ್ಪುವುದಿಲ್ಲ. ಗುಣಾದಿಗಳಲ್ಲೂ ಇರುವುದರಿಂದ ಸಂಖ್ಯೆ ಗುಣವಲ್ಲ, ಅತಿರಿಕ್ತವಸ್ತು. ಕಾರ್ಯಾನುಕೂಲವಾಗಿ ಕಾರಣಗಳಲ್ಲಿರುವ ಸಾಮರ್ಥ್ಯವೇ ಶಕ್ತಿ.

ಅಭಾವವೆಂಬ ವಸ್ತು ತಾರ್ಕಿಕರಂತೆ ವ್ಯವಹಾರಸೌಕರ್ಯಕ್ಕಾಗಿ ಭಟ್ಟಮತವು ಅನುಸರಿಸಲ್ಪಟ್ಟಿರುವುದು. ಅಭಾವವೆಂಬ ಒಂದು ವಸ್ತು ನಾಸ್ತಿಯೆಂಬ ಅನುಭವಕ್ಕೆ ಗೋಚರವಾಗಿರುವುದರಿಂದ ಅದನ್ನು ಗ್ರಹಿಸತಕ್ಕ ಅನುಪಲಬ್ಧಿಯೆಂಬ ಪ್ರಮಾಣವೂ ಬೇಕಾಗಿರುವುದು. ಇದರ ವಿಚಾರ ಮುಂದೆ ಬರುವುದು. ಈ ಅಭಾವವೆಂಬುದು ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ, ಅನ್ಯೋನ್ಯಾಭಾವವೆಂದು ನಾಲ್ಕು ನಾಲ್ಕು ಪ್ರಕಾರ. ಇವುಗಳ ಆಧಾರಗಳು ನಿತ್ಯವಾಗಿದ್ದರೆ ನಿತ್ಯವಾಗಿರುವುವು. ಅನಿತ್ಯವಾಗಿ

ದ್ದರೆ ಅನಿತ್ಯವಾಗಿಯೂ ಇರುವುವು. ಆದ್ದರಿಂದ ಪ್ರಪಂಚವು ಬ್ರಹ್ಮಸಲ್ಲಿ ನಿವೃತ್ತಿಯಾದರೆ ಆ ಧ್ವಂಸವು ಬ್ರಹ್ಮಸ್ವರೂಪವೆಂದು ನಿರ್ಣಯ.

ಇಲ್ಲಿ ಘಟವು ಹುಟ್ಟುವುದು ಎಂದು ಅನುಭವವಿರುವುದರಿಂದ ಈಗಿಲ್ಲ ವೆಂದು ಸಿದ್ಧ. ಇದೇ ಪ್ರಾಗಭಾವ. ಇಲ್ಲಿ ಘಟವು ನಾಶವಾಯಿತೆಂದು ಅನುಭವದಿಂದ ನಾಶವೆಂಬ ಧ್ವಂಸಾಭಾವವು ಸಿದ್ಧವು. ಧ್ವಂಸಕ್ಕೆ ಧ್ವಂಸ ವಾದರೂ ಅದು ಬೇರೆಯಲ್ಲ, ಪ್ರಥಮಧ್ವಂಸವೇ ಸಿದ್ಧಾಂತ. ವಾಯುವಿ ನಲ್ಲಿ ರೂಪವಿಲ್ಲವೆಂಬ ಅನುಭವಕ್ಕೆ ಗೋಚರವಾದುದು ಅತ್ಯಂತಾಭಾವ. ಘಟವು ಪಟವಲ್ಲ, ಮೃಗವು ಮನುಷ್ಯನಲ್ಲ ಎಂಬ ಪ್ರತೀತಿಗೆ ಗೋಚರವಾ ದುದು ಅನ್ಯೋನ್ಯಾಭಾವ. ಇದಕ್ಕೆ ಭೇದ, ವಿಭಾಗ, ಪೃಥಕ್ತ್ವ ಎಂಬ ಹೆಸರುಗಳು. ಈ ಭೇದವು, ಆಧಾರವು ಅನಾದಿಯಾಗಿದ್ದರೆ ಅನಾದಿ. ಆದುದರಿಂದ ಜೀವನಲ್ಲಿ ಬ್ರಹ್ಮಭೇದವು ಅನಾದಿ. ಜೀವನು ಬ್ರಹ್ಮ ವಾದರೆ ಆ ಭೇದ ಹೋಗುತ್ತದೆ. ಹಾಗೆ ಬ್ರಹ್ಮನಲ್ಲಿ ಜೀವ ಭೇದ ಅನಾದಿ. ಆದರೂ ಅದಕ್ಕೆ ಮೂಲಕಾರಣವಾದ ಅವಿದ್ಯೆ ಹೋದರೆ ಅದೂ ಹೋಗುವುದು.

ಬ್ರಹ್ಮನಲ್ಲಿ ಪ್ರಪಂಚಭೇದವನ್ನು ಅಂಗೀಕರಿಸಿದರೂ ಅದ್ವೈತ ಸಿದ್ಧಾಂತ ವಿರೋಧವಿಲ್ಲ. ಆ ಭೇದವು ಪರಮಾರ್ಥವಲ್ಲ. ಪರಮಾರ್ಥ ವಾದ ಭೇದವಿಲ್ಲವೆಂಬುದೇ ಅದ್ವೈತಸಿದ್ಧಾಂತ.

ಹೀಗೆ ಸಾಮಾನ್ಯವಾಗಿ ಪದಾರ್ಥಸಂಗ್ರಹವು. ಪ್ರಮೇಯ ವಿಚಾರ ದಲ್ಲಿ ಗ್ರಂಥಕಾರರ ಅಭಿಪ್ರಾಯಗಳು ಬಹುವಿಧವಾಗಿರುವುವು. ಮುಖ್ಯ ವಾಗಿ ವ್ಯವಹಾರ ವ್ಯವಸ್ಥೆಯಲ್ಲಿ ತಾತ್ಪರ್ಯವಾದುದರಿಂದ ವಿವಾದಕ್ಕೆ ಅವಕಾಶವಿಲ್ಲ.

**ಭೂತಭೌತಿಕ**

ವಿಕೃತಿಯೆಂಬ ಪದಾರ್ಥಗಳ ವಿವರಣೆ ಹೇಗೆಂದರೆ—ತ್ರಿಗುಣವಾದ ಮಾಯಾವಸ್ತುವಿನಿಂದ ಕ್ರಮವಾಗಿ ಆಕಾಶಾದಿ ಪಂಚಭೂತಗಳು ಹುಟ್ಟು ವುವು. ಪಂಚೀಕರಣವೆಂಬ ಪರಸ್ಪರ ಮಿಶ್ರಣವು ಇಲ್ಲದಿರುವುದರಿಂದ ಇವುಗಳಿಗೆ ತನ್ಮಾತ್ರಗಳೆಂದು ನಾಮಧೇಯ, ಮಿಶ್ರಿತಗಳಲ್ಲವೆಂದರ್ಥ.

ಶಬ್ದಸ್ಪರ್ಶರೂಪರಸಗಂಧಗಳು ಒಂದು, ಎರಡು, ಮೂರು, ನಾಲ್ಕು ಐದು— ಈ ಕ್ರಮದಿಂದ ಆಕಾಶಾದಿಗಳಲ್ಲಿರುವುವು. ಈ ಪಂಚಭೂತಗಳು ತ್ರಿಗುಣಮಾಯಾಕಾರ್ಯವಾದುದರಿಂದ ಸತ್ತ್ವಾದಿಗುಣತ್ರಯವುಳ್ಳುವು.

ಸತ್ತ್ವಗುಣಪ್ರಧಾನವಾದ ಪಂಚಭೂತಗಳಿಂದ ಕ್ರಮವಾಗಿ ಚಕ್ಷುರಾದಿ ಪಂಚ ಜ್ಞಾನೇಂದ್ರಿಯಗಳು ಮಿಲಿತವಾದ ಪಂಚಭೂತಸಮುದಾಯದಿಂದ ಮನಸ್ಸು ಬುದ್ಧಿ ಅಹಂಕಾರ ಚಿತ್ತಗಳೆಂಬ ನಾಲ್ಕು ಅಂತಃಕರಣಗಳು ಹುಟ್ಟುವುವು. ಸಂಶಯ ನಿಶ್ಚಯ ಗರ್ವ ಸ್ಮರಣೆಗಳೆಂಬ ವ್ಯಾಪಾರಭೇದದಿಂದ ಅಂತಃಕರಣ ಭೇದವೇ ವಿನಾ ವಸ್ತುಭೇದವಿಲ್ಲ. ರಜೋಗುಣಪ್ರಧಾನವಾದ ಪಂಚಭೂತಗಳಿಂದ ಹಸ್ತಾದಿ ಪಂಚಕರ್ಮೇಂದ್ರಿಯಗಳು ಸಮುದಾಯದಿಂದ ಪ್ರಾಣಾಪಾನ ವ್ಯಾನೋದಾನಸಮಾನಗಳೆಂಬ ಪಂಚಪ್ರಾಣಗಳು ಹುಟ್ಟುವುವು. ಇಲ್ಲಿಯೂ ವೃತ್ತಿಭೇದದಿಂದ ಭೇದವು, ವಸ್ತುಭೇದವಿಲ್ಲ.

ತಮೋಗುಣಪ್ರಧಾನವಾದ ಅಪಂಚೀಕೃತಭೂತಗಳಿಂದ ಪಂಚೀಕೃತಭೂತಗಳು ಹುಟ್ಟುವುವು. ಪಂಚೀಕರಣವೆಂದರೆ ಒಂದು ಭೂತದ ಅರ್ಧಭಾಗವೂ ಇತರ ಭೂತಗಳ ಅಂಶಗಳಾದ ಅರ್ಧಭಾಗವೂ ಸೇರಿ, ಶುದ್ಧ ಚಿನ್ನ ತಾಮ್ರದೊಡನೆ ಸೇರಿ ಕೆಲಸಕ್ಕೆ ಉಪಯೋಗವಾಗುವಂತೆ, ಬ್ರಹ್ಮಾಂಡ ಸೃಷ್ಟಿಗೆ ಉಪಯೋಗವಾಗಿರುವುದು.

ಈ ತತ್ತ್ವಗಳಲ್ಲಿ ಅಪಂಚೀಕೃತಭೂತಪಂಚಕವೇ ಬುದ್ಧಿ, ಮನಸ್ಸು, ದಶೇಂದ್ರಿಯಗಳು, ಪಂಚಪ್ರಾಣಗಳು ಸೇರಿ ಜೀವಾತ್ಮರಿಗೆ ಹದಿನೇಳು ಅವಯವಗಳುಳ್ಳ ಲಿಂಗಶರೀರವಾಗಿ ಮೋಕ್ಷಪರ್ಯಂತವಿರುವುದು. ಹಿರಣ್ಯಗರ್ಭನೆಂಬ ಪ್ರಥಮಜೀವನ ಲಿಂಗಶರೀರಕ್ಕೆ ಮಹತ್ತತ್ತ್ವವೆಂದೂ ನಮ್ಮಗಳ ಲಿಂಗಶರೀರಕ್ಕೆ ಅಹಂಕಾರತತ್ತ್ವವೆಂದೂ ವ್ಯವಹಾರ. ಹಿರಣ್ಯಗರ್ಭನ ಲಿಂಗಶರೀರ ವನವೃಕ್ಷ ನ್ಯಾಯದಿಂದ ಸಕಲ ಜೀವಲಿಂಗಶರೀರಗಳ ಸಮಷ್ಟಿ, ಸಮೂಹ. ಇವನೇ ಸೂತ್ರಾತ್ಮಾ, ಪ್ರಾಣ ಎಂದು ಪ್ರಸಿದ್ಧಿ

ಪಂಚೀಕೃತ ಪಂಚಭೂತಗಳಿಂದ ಬ್ರಹ್ಮಾಂಡವೂ ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕು ವಿಧ ಸ್ಥೂಲಶರೀರಗಳೂ, ಅವರವರ ಕರ್ಮಾಧೀನವಾಗಿ ಬರುವುವು. ಜರಾಯುವೆಂದರೆ ಗರ್ಭದ

ಚೀಲ. ಇದರಿಂದ ಹೊರಗೆ ಬರುವ ಮನುಷ್ಯಪಶ್ವಾದಿಗಳ ಶರೀರ ಜರಾಯುಜ. ಅಂಡಜವೆಂದರೆ ಮೊಟ್ಟೆಗಳ ಮೂಲಕ ಜನಿಸುವ ಪಕ್ಷಿಸರ್ಪಾದಿಗಳು. ಸ್ವೇದಜವೆಂದರೆ ಔಷ್ಣ್ಯ, ಸೆಕೆ ಇವುಗಳಿಂದ ಹುಟ್ಟುವುವು, ಕ್ರಿಮಿಕೀಟಾದಿಗಳು. ಉದ್ಭಿಜ್ಜ ಎಂದರೆ ಭೂಮಿಯನ್ನು ಭೇದಿಸಿಕೊಂಡು ಹೊರಗೆ ಬರುವ ವೃಕ್ಷಗುಲ್ಮಾದಿಗಳು. ಪ್ರಪಂಚದಲ್ಲಿ ಸೂಕ್ಷ್ಮ ಸ್ಥೂಲವಸ್ತುಗಳೆಲ್ಲವೂ ಆಯಾ ಜೀವಾತ್ಮರ ಸ್ಥೂಲಶರೀರಗಳು. ಇಲ್ಲೂ ವನವೃಕ್ಷನ್ಯಾಯದಿಂದ ಸಮಸ್ತ ಸ್ಥೂಲಶರೀರಸಮಷ್ಟಿಯೇ ವಿರಾಟ್ಪುರುಷನು.

**ಪಂಚಕೋಶ**

ಸೂಕ್ಷ್ಮಶರೀರವೂ ಸ್ಥೂಲಶರೀರವೂ ಸೇರಿ ಚೈತನ್ಯಕ್ಕೆ ಆವರಣವಾಗಿರುವುದರಿಂದ ಪಂಚಕೋಶವೆಂದು ಉಪದೇಶಿಸುವರು. ಕೋಶವೆಂದರೆ ತೀಕ್ಷ್ಣವಾದ ಕತ್ತಿ ಮೊದಲಾದ ವಸ್ತುಗಳನ್ನಿಡುವ ಚೀಲ, ಒರೆ. ಈ ಸ್ಥೂಲಶರೀರವೇ ಅನ್ನಪರಿಣಾಮವಾದುದರಿಂದ ಪ್ರತ್ಯಕ್ಷವಾದ ಕೋಶವು. ಅನ್ನಮಯ. ಸೂಕ್ಷ್ಮ ಶರೀರದಲ್ಲಿ ಪಂಚಪ್ರಾಣಗಳೂ, ಕರ್ಮೇಂದ್ರಿಯಗಳೂ ಸೇರಿ ಪ್ರಾಣಮಯಕೋಶವೆನ್ನಲ್ಪಡುವುದು. ಮನಸ್ಸು ಜ್ಞಾನೇಂದ್ರಿಯಗಳು ಸೇರಿ ಮನೋಮಯಕೋಶವೆನ್ನಲ್ಪಡುವುದು. ಬುದ್ಧಿ, ಜ್ಞಾನೇಂದ್ರಿಯಗಳು ಸೇರಿ ವಿಜ್ಞಾನಮಯಕೋಶವಾಗುವುದು. ಹೀಗೆ ಸೂಕ್ಷ್ಮಶರೀರ ಮೂರು ಕೋಶಗಳಾಯಿತು. ವಿಜ್ಞಾನಮಯಕೋಶವೇ ಕರ್ತೃತ್ವ ಭೋಕ್ತೃತ್ವ ಸುಖ ದುಃಖ ಇಚ್ಛೆ ರಾಗದ್ವೇಷ ಪುಣ್ಯ ಪಾಪ ಪರಲೋಕಸಂಚಾರ ಮೊದಲಾದ ವ್ಯಾಪಾರವುಳ್ಳದ್ದು. ಇದೇ ವ್ಯಾವಹಾರಿಕ ಜೀವವೆನ್ನಲ್ಪಡುವುದು.

ಇಂತಹ ಸೂಕ್ಷ್ಮ ಸ್ಥೂಲಶರೀರಕ್ಕೆ ಕಾರಣವಾಗಿರುವ ಅವಿದ್ಯೆ ಎಂಬ ಅಜ್ಞಾನವೇ ವ್ಯಷ್ಟಿದೃಷ್ಟಿಯಿಂದ ಜೀವಾತ್ಮನಿಗೆ ಕಾರಣಶರೀರವಾಗಿಯೂ, ಕೋಶದಂತೆ ಆವರಣರೂಪವಾಗಿಯೂ ಆನಂದಪ್ರಚುರವಾಗಿಯೂ ಇರುವುದರಿಂದ ಆನಂದಮಯಕೋಶವಾಗಿರುವುದು. ಗಾಢನಿದ್ರಾವಸ್ಥೆಯಲ್ಲಿ ಸ್ಥೂಲ ಸೂಕ್ಷ್ಮ ಶರೀರಗಳ ಉಪಯೋಗವಿಲ್ಲದೇ ಇದ್ದರೂ ಅವಿದ್ಯಾಶಕ್ತಿಯಿಂದ ಸುಖಾನುಭವವೆಂದು ತಿಳಿಯುವರು. ಆದುದರಿಂದ ಹೀಗೆ ಕಾರಣ ಕಾರ್ಯ ಶರೀರಗಳನ್ನು ಪಂಚಕೋಶವೆಂದು ವ್ಯವಹರಿಸುವರು.

ಈ ಪ್ರಕಾರ ಪದಾರ್ಥಸಂಗ್ರಹವು ಬ್ರಹ್ಮಾನಂದ, ತ್ರ್ಯಂಬಕಶಾಸ್ತ್ರಿ ಮೊದಲಾದವರ ಗ್ರಂಥಗಳನ್ನು ಅನುಸರಿಸಿರುವ ಪಂಡಿತರತ್ನಂ ಕಸ್ತೂರಿ ರಂಗಾಚಾರ್ಯರವರ 'ಅರ್ಥಸಂಗ್ರಹ' ಗ್ರಂಥದ ಸಾರಾಂಶ.

## ಪ್ರಲಯ

ಪ್ರಪಂಚಸೃಷ್ಟಿ ಈ ಪ್ರಕಾರವಾದರೆ ಪ್ರಲಯವಿವರಣೆ ಹೀಗಿರುವುದು—ಪ್ರಲಯವು ನಿತ್ಯ, ಪ್ರಾಕೃತ, ನೈಮಿತ್ತಿಕ, ಆತ್ಯಂತಿಕ ಎಂದು ನಾಲ್ಕುವಿಧ. ಪ್ರತಿದಿವಸದಲ್ಲೂ ಪ್ರಾಣಿಗಳಿಗೆ ಬರುವ ಗಾಢನಿದ್ರೆಯೆಂಬ ಸುಷುಪ್ತ್ಯವಸ್ಥೆಯೇ ನಿತ್ಯಪ್ರಲಯ. ಇದರಲ್ಲಿ ಪ್ರಾಣಿಗಳ ಸಮಸ್ತಶಕ್ತಿಗಳೂ ಕಾರಣರೂಪದಲ್ಲಿದ್ದು ಪ್ರಬೋಧದಶೆಯಲ್ಲಿ ಕಾರ್ಯರೂಪಕ್ಕೆ ಬರುವುವು. ಆದುದರಿಂದ ಪುಣ್ಯಪಾಪ ಸ್ಮೃತಿ ಮೊದಲಾದುವುಗಳಿಗೆ ಬಾಧಕವಿಲ್ಲ. ಸುಷುಪ್ತಿದಶೆಯಲ್ಲಿ ಮನಸ್ಸಿಗಿರುವ ಜ್ಞಾನಶಕ್ತಿ ಕ್ರಿಯಾಶಕ್ತಿಗಳಲ್ಲಿ ಜ್ಞಾನಶಕ್ತಿ ಲೀನವಾಗುತ್ತದೆ. ಕ್ರಿಯಾಶಕ್ತಿ ಮಾತ್ರ ತನ್ನ ಕೆಲಸವನ್ನು ಮಾಡುತ್ತಿರುತ್ತದೆ. ಇದರಿಂದ ಅಂತಃಕರಣವೆಂಬ ಅಹಂಕಾರವು ವಿನಾಶವಾಗುತ್ತದೆ ಎಂದು ವ್ಯವಹಾರ.

ಪ್ರಾಕೃತಪ್ರಲಯವೆಂದರೆ ಪ್ರಕೃತಿಯೆಂಬ ಮಾಯೆಯಲ್ಲಿ ಬ್ರಹ್ಮನೊಡನೆ ಬ್ರಹ್ಮಾಂಡವಿನಾಶ. ಆ ಬ್ರಹ್ಮನೂ ಆ ಬ್ರಹ್ಮಲೋಕಕ್ಕೆ ಹೋಗಿ ಸೇರಿರುವ ಇತರ ಜೀವಾತ್ಮರೂ ಬ್ರಹ್ಮಸಾಕ್ಷಾತ್ಕಾರದಿಂದ ವಿದೇಹಕೈವಲ್ಯವೆಂಬ ಪರಮ ಮೋಕ್ಷವನ್ನು ಹೊಂದುವರು. ಇದರಿಂದ ಜೀವನ್ಮುಕ್ತಿ, ವಿದೇಹಕೈವಲ್ಯವೆಂಬ ಪರಮಮುಕ್ತಿ ಎಂದು ಮುಕ್ತಿ ಎರಡು ವಿಧ. ಜೀವನ್ಮುಕ್ತರೆಂದರೆ ಬ್ರಹ್ಮ ಸಾಕ್ಷಾತ್ಕಾರವಾಗಿ ಅವಿದ್ಯಾಲೇಶದ ಸಂಬಂಧದಿಂದ ಇಲ್ಲಿಯೇ ಲೋಕಾನುಗ್ರಹಕ್ಕಾಗಿ ಸಂಪ್ರದಾಯಪ್ರವರ್ತಕರಾಗಿ ಇರತಕ್ಕವರು. ಪರಮಮುಕ್ತರೆಂದರೆ ದೇಹಪಾತಾನಂತರ ಎಲ್ಲಿದ್ದರೆ ಅಲ್ಲೇ ಪರಬ್ರಹ್ಮಭಾವವನ್ನು ಹೊಂದಿದವರು.

ನೈಮಿತ್ತಿಕಪ್ರಲಯವೆಂದರೆ ಬ್ರಹ್ಮನ ಅಹೋರಾತ್ರಿಗಳಲ್ಲಿ ನಡೆಯುವ ಲೋಕತ್ರಯಪ್ರಲಯ.

ಮೋಕ್ಷವೇ ಆತ್ಯಂತಿಕಪ್ರಲಯ. ಇದು ಸರ್ವಜೀವಮೋಕ್ಷವೆಂದು

ಒಂದು ಪಕ್ಷ. ಆಯಾ ಜೀವಾತ್ಮರುಗಳ ಮೋಕ್ಷವೆಂದು ಮತ್ತೊಂದು ಪಕ್ಷ. ಇದು ವಿದ್ಯೆಯೆಂಬ ಬ್ರಹ್ಮಾತ್ಮ ಸಾಕ್ಷಾತ್ಕಾರದಿಂದ ಉಂಟಾಗುವ ಅವಿದ್ಯಾ ನಿವೃತ್ತಿರೂಪವಾಗಿದೆ.

ಹಿಂದಿನ ಮೂರು ಪ್ರಲಯಗಳೂ ಕರ್ಮಸಂಬಂಧನಿವೃತ್ತಿಯಿಂದ ಉಂಟಾಗತಕ್ಕುವು. ಇದು ಜ್ಞಾನದಿಂದಲೇ ಸಾಧ್ಯವೆಂದು ವಿಶೇಷವು.

## ಅವಚ್ಛೇದ

ಸಾಮಾನ್ಯವಾಗಿ ಸರ್ವದರ್ಶನಗಳಲ್ಲೂ ಪ್ರಮಾತಾ, ಪ್ರಮಾಣ, ಪ್ರಮೇಯ, ಪ್ರಮಾ ಎಂದು ಪ್ರಪಂಚವೆಲ್ಲವನ್ನೂ ನಾಲ್ಕುರಾಶಿ ಮಾಡಿ ವ್ಯವಹಾರ ನಡೆಯುವುದು. ರಾಗದ್ವೇಷಗಳಿಂದ ಪ್ರವೃತ್ತಿನಿವೃತ್ತಿಯನ್ನು ಮಾಡುವವನು ಪ್ರಮಾತನು. ಅವನು ಏತರಿಂದ ವಸ್ತುಗಳನ್ನು ತಿಳಿಯು ವನೋ ಅದೇ ಪ್ರಮಾಣವು. ತಿಳಿಯಲ್ಪಡುವ ವಸ್ತುಗಳು ಪ್ರಮೇಯವು. ತಿಳಿಯುವಿಕೆಯೆಂಬುದು ಪ್ರಮೆ. ಈ ನಾಲ್ಕು ವಿಧಭೇದದಲ್ಲಿ ಸಕಲ ವಸ್ತುಗಳೂ ಸೇರಿರುವುವು. ಈ ಸಿದ್ಧಾಂತದಲ್ಲಿ ಸಕಲವಸ್ತುಗಳೂ ಬ್ರಹ್ಮನಲ್ಲಿ ಕಲ್ಪಿತಗಳಾಗಿರುವುದರಿಂದ ಚೈತನ್ಯಸ್ವರೂಪನಾದ ಬ್ರಹ್ಮನನ್ನು ಬಿಟ್ಟು ವಸ್ತುಗಳನ್ನು ಹೇಳಲು, ಕೇಳಲು, ತಿಳಿಯಲು ಸಾಧ್ಯವಿಲ್ಲದಿರುವುದರಿಂದ ಯಾವ ವಸ್ತುವನ್ನು ಹೇಳಬೇಕಾದರೂ ಚೈತನ್ಯವನ್ನು ಸೇರಿಸಿಕೊಂಡೇ ಹೇಳಬೇಕು. ಇದರಲ್ಲಿ ಅಂತಃಕರಣಾವಚ್ಛಿನ್ನ ಚೈತನ್ಯ ಪ್ರಮಾತನಾಗುತ್ತಾನೆ. ಅಂತಃಕರಣವ್ಯಾಪಾರಾವಚ್ಛಿನ್ನ ಚೈತನ್ಯವು ಪ್ರಮಾಣವಾಗುವುದು. ಘಟಪಟಾದ್ಯವಚ್ಛಿನ್ನಚೈತನ್ಯವು ಪ್ರಮೇಯವು. ಅಂತಃಕರಣಶಕ್ತಿಯಿಂದ ಘಟಪಟಾದ್ಯವಚ್ಛಿನ್ನಚೈತನ್ಯ ಪ್ರಕಾಶವೇ ಪ್ರಮೆ. ಹೀಗೆ ಚೈತನ್ಯವನ್ನು ಸರ್ವವಸ್ತುಗಳೊಡನೆ ಸೇರಿಸಿ ವ್ಯವಹರಿಸುವುದರಿಂದ ಸರ್ವವೂ ಚೈತನ್ಯದಲ್ಲಿ ಕಲ್ಪಿತವೆಂಬ ಭಾವನೆ ದೃಢವಾಗುವುದು. ಇಲ್ಲಿ ಅವಚ್ಛಿನ್ನವೆಂಬ ಪದದ ಅರ್ಥವನ್ನು ತಿಳಿಯಬೇಕು. ಅದೆಂತೆಂದರೆ—

ಉದ್ದವಾದ ಕಟ್ಟಿಗೆಯನ್ನು ಕೊಡಲಿಯಿಂದ ಕತ್ತರಿಸುವ ಹಾಗೆ ದೊಡ್ಡ ವಸ್ತುವನ್ನು ಚಿಕ್ಕದಾಗಿ ಮಾಡಿಕೊಳ್ಳುವುದಕ್ಕೆ ಅವಚ್ಛೇದವೆಂದು ಹೆಸರು. ಗಜಕಡ್ಡಿಯ ಅಂಗುಲದ ಗೆರೆಗಳು ಉದಾಹರಣೆ. ಅವಚ್ಛೇದಕ್ಕೆ

ಕಾರಣವಾಗಿರುವ ಕೊಡಲಿ ಮೊದಲಾದುವು ಅವಚ್ಛೇದಕ, ಕತ್ತರಿಸಲ್ಪಟ್ಟ ಭಾಗವು ಅವಚ್ಛಿನ್ನ, ಅವಚ್ಛೇದ, ಅವಚ್ಛೇದಕ, ಅವಚ್ಛಿನ್ನವೆಂಬ ಪದಗಳಿಗೆ ಪರ್ಯಾಯ ಪದಗಳಾಗಿ ವ್ಯಾವೃತ್ತಿ, ವ್ಯಾವರ್ತಕ, ವ್ಯಾವರ್ತ್ಯ, ವಿಶೇಷ ವಿಶೇಷಣ ವಿಶೇಷ್ಯ, ಭೇದ ಭೇದಕ ಭೇದ್ಯ. ಉಪಧಾನ ಉಪಾಧಿ ಉಪಧೇಯ, ಉಪಲಕ್ಷಣ ಉಪಲಕ್ಷಕ ಉಪಲಕ್ಷ್ಯ ಎಂದು ವ್ಯವಹರಿಸುವರು.

ಇಲ್ಲಿ ಅವಚ್ಛೇದಕಕ್ಕೂ ಉಪಾಧಿಗೂ ಸ್ವಲ್ಪ ವ್ಯತ್ಯಾಸವಿರುವುದು. ಒಂದು ವಾಕ್ಯದಲ್ಲಿ ಉದ್ದೇಶ್ಯ, ವಿಧೇಯವೆಂದು ವಿಭಾಗವಿರುವುದು. ತಿಳಿದ ಅಂಶವು ಉದ್ದೇಶ್ಯ. ತಿಳಿಯಿಸಲ್ಪಡುವ ಅಂಶವು ವಿಧೇಯ. ಇವನು ದಾಕ್ಷಿಣಾತ್ಯನು ಎಂಬ ವಾಕ್ಯದಲ್ಲಿ ಇವನು ಎಂಬ ಅಂಶ ಉದ್ದೇಶ್ಯ. ದಾಕ್ಷಿಣಾತ್ಯನೆಂಬ ಅಂಶ ವಿಧೇಯ. ಹೀಗೆ "ದೇವದತ್ತನು ಊಟ ಮಾಡಿದನು", "ಯಜ್ಞದತ್ತನು ಬ್ರಾಹ್ಮಣನು"—ಮೊದಲಾದ ವಾಕ್ಯಗಳಲ್ಲಿ ಪ್ರಾಯಶಃ ಮೊದಲ ಪದ ಉದ್ದೇಶ್ಯವಾಚಕ. ಎರಡನೆಯ ಪದ ವಿಧೇಯವಾಚಕ. "ದಂಡವಿಶಿಷ್ಟಪುರುಷನು ಹೊರಟುಹೋದನು" ಎಂಬ ವಾಕ್ಯದಲ್ಲಿ ಹೊರಟುಹೋದನೆಂಬ ವಿಧೇಯಾಂಶದಲ್ಲಿ ದಂಡವೂ ಸೇರಿರುತ್ತದೆ. "ದಂಡವಿಶಿಷ್ಟಪುರುಷನು ಊಟ ಮಾಡಿದನು" ಎಂಬ ವಾಕ್ಯದಲ್ಲಿ ಊಟ ಮಾಡುವ ಅಂಶವಲ್ಲಿ ದಂಡವು ಸೇರುವುದಿಲ್ಲ. ದಂಡಕ್ಕೆ ಊಟದ ಯೋಗ್ಯತೆಯಿಲ್ಲ. ವಿಧೇಯಾಂಶದಲ್ಲಿ ಸೇರಿದರೆ, ಅನ್ವಯಿಸಿದರೆ ಅವಚ್ಛೇದಕವು. ಅನ್ವಯಿಸದಿದ್ದರೆ ಉಪಾಧಿಯೆಂದು ವ್ಯತ್ಯಾಸವನ್ನೂ ತಿಳಿಯಬೇಕು.

ಅಪರಿಚ್ಛಿನ್ನ ಚೈತನ್ಯಸ್ವರೂಪವಾದ ಬ್ರಹ್ಮವಸ್ತುವೇ ಪರಿಚ್ಛಿನ್ನ ಚೈತನ್ಯನಾದ ಜೀವನಾಗಬೇಕಾದರೆ ಅವಚ್ಛೇದಕ ಬೇಕು. ಮನಸ್ಸೆಂಬ ಅಂತಃಕರಣವೇ ಅವಚ್ಛೇದಕ. ಅಂತಃಕರಣಾವಚ್ಛಿನ್ನ ಚೈತನ್ಯಕ್ಕೆ ಜೀವಾತ್ಮನೆಂದು ಹೆಸರು. ಅಂತಃಕರಣವನ್ನು ಉಪಾಧಿಯಾಗಿ ಮಾಡಿಕೊಂಡರೆ ಅಂತಃಕರಣೋಪಹಿತ ಚೈತನ್ಯವು ಜೀವಸಾಕ್ಷಿಯು.

ಮೂಲಪ್ರಕೃತಿಯೆಂಬ ಮಾಯೆಯಿಂದ ಅವಚ್ಛಿನ್ನ ಚೈತನ್ಯವೇ ಅಪರಬ್ರಹ್ಮನು, ಪರಮೇಶ್ವರನು, ಮಾಯೋಪಹಿತಚೈತನ್ಯವು, ಈಶ್ವರಸಾಕ್ಷಿ ಇತ್ಯಾದಿ ವ್ಯವಹಾರಗಳಿರುವುವು.

## ಈಶ್ವರ

ಚೈತನ್ಯಸ್ವರೂಪನಾದ ಬ್ರಹ್ಮನೆಂಬ ವಸ್ತು ಪರಬ್ರಹ್ಮ. ಅಪರಬ್ರಹ್ಮನೆಂದು ಎರಡು ವಿಧ. ಈ ಪ್ರಪಂಚಕ್ಕೆ ಮೂಲಕಾರಣವಾದ ಮಾಯೆ ಎಂಬ ಅವಿದ್ಯಾ ವಿಶಿಷ್ಟಪರಬ್ರಹ್ಮನೇ ಅಪರಬ್ರಹ್ಮನೆಂದು, ಈಶ್ವರನೆಂದು ತಿಳಿಯಬೇಕು. ಆ ಮೂಲಾವಿದ್ಯೆಯ ಅನಂತಶಕ್ತಿಗಳು ಸಕಲಜೀವಾವಿದ್ಯೆಗಳಾಗಿ ಇರುವುವು, ಎಂದು ಒಂದು ಸಂಪ್ರದಾಯ. ವನವೃಕ್ಷನ್ಯಾಯದಿಂದಲೋ ಸಮಷ್ಟಿವ್ಯಷ್ಟಿ ಭಾವವೆಂಬ ಕಾರ್ಯಕಾರಣಭಾವ ನ್ಯಾಯದಿಂದಲೋ ಜೀವವಿದ್ಯೆಗಳ ಸಮೂಹವೇ, ಸಮಷ್ಟಿಯೇ ಮೂಲಾವಿದ್ಯೆಯೆಂದು ಮತ್ತೊಂದು ಸಂಪ್ರದಾಯ. ಹೇಗಾದರೂ ತಮ್ಮ ತಮ್ಮ ಅವಿದ್ಯಾನಿವೃತ್ತಿಗಾಗಿ ಎಲ್ಲರಿಗೂ ವಿದ್ಯೆಯೆಂಬ ಜ್ಞಾನವು ಆವಶ್ಯಕ. ಮೂಲವಿದ್ಯೆಗೆ ಗೋಚರವಾಗಿಯೂ ಆಶ್ರಯವಾಗಿಯೂ ಇರುವ ಶುದ್ಧಚೈತನ್ಯವೇ ಈಶ್ವರನು, ಸರ್ವಜ್ಞನು, ಸರ್ವೇಶ್ವರನು, ಸರ್ವಾಂತರ್ಯಾಮಿ, ಜಗತ್ಕಾರಣನು ಎಂದು ಹೇಳಲ್ಪಡುವನು.

ಇಂತಹ ಅವಿದ್ಯೆಯೆಂಬ ಮಾಯಾವಿಶಿಷ್ಟ ಈಶ್ವರನು ಜಗತ್ಕಾರಣವಾದರೆ ಮಾಯಾಪ್ರಾಧಾನ್ಯ ದೃಷ್ಟಿಯಿಂದ ಉಪಾದಾನ ಕಾರಣವೆಂದೂ, ಚೈತನ್ಯ ಪ್ರಾಧಾನ್ಯ ದೃಷ್ಟಿಯಿಂದ ನಿಮಿತ್ತಕಾರಣವೆಂದೂ, ಇದರಿಂದ ಅಭಿನ್ನನಿಮಿತ್ತೋಪಾದಾನವಾದವೇ ವೇದಾಂತ ಸಿದ್ಧಾಂತವೆಂದೂ ನಿರ್ಣಯ.

ಇಲ್ಲಿ ಅವಿದ್ಯೆಯೆಂಬ ಮಾಯೆಯನ್ನು ಪರಿಣಾಮ್ಯುಪಾದಾನವೆಂದೂ ಚೈತನ್ಯವನ್ನು ವಿವರ್ತೋಪಾದಾನವೆಂದೂ ವ್ಯವಹರಿಸುವರು. ಭೂಷಣಾದಿಗಳಿಗೆ ಸುವರ್ಣದಂತೆ ಕಾರಣವಾಗಿರುವುದು ಪರಿಣಾಮ್ಯುಪಾದಾನವು; ಹಗ್ಗವನ್ನು ಸರ್ಪವಾಗಿ ತಿಳಿಯುವ ಸ್ಥಲದಲ್ಲಿ, ಸರ್ಪಕ್ಕೆ ಹಗ್ಗವು ಕಾರಣವಾಗಿರುವಂತೆ ಪ್ರಪಂಚಕ್ಕೆ ಬ್ರಹ್ಮವು ಕಾರಣವಾಗಿರುವುದು ವಿವರ್ತೋಪಾದಾನವೆಂದು ಅರ್ಥ.

## ಪ್ರತ್ಯಕ್ಷಪ್ರಮಾಣ

"ವ್ಯವಹಾರೇ ಭಟ್ಟನಯಃ" ಎಂದು ವ್ಯವಹಾರದಲ್ಲಿ ಭಾಟ್ಟಮತವನ್ನು ಇಟ್ಟುಕೊಂಡಿರುವುದರಿಂದ ಭಟ್ಟಮತಪ್ರಕಾರ ಪ್ರತ್ಯಕ್ಷ, ಅನುಮಾನ,

ಉಪಮಾನ, ಶಬ್ದ, ಅರ್ಥಾಪತ್ತಿ, ಅನುಪಲಬ್ಧಿಯೆಂದು ಆರು ಪ್ರಮಾಣಗಳು.

ಮನಸ್ಸೆಂಬ ಅಂತಃಕರಣಾವಚ್ಛಿನ್ನಚೈತನ್ಯವೇ ಜೀವಾತ್ಮನು, ನಾನು ಎಂಬ ವ್ಯವಹಾರಕ್ಕೆ ಗೋಚರನು, ಸರ್ವಸಾಕ್ಷಿ, ಸರ್ವವ್ಯವಹಾರವನ್ನು ಮಾಡುವವನು ; ಪ್ರಮಾತೃಚೈತನ್ಯವೆಂದು ಹೆಸರು. ಈ ಅಂತಃಕರಣವು ಇಂದ್ರಿಯ, ಲಿಂಗ, ಶಬ್ದ ಮೊದಲಾದ ವಸ್ತುಗಳ ಸಹಾಯದಿಂದ ಘಟಪಟ ಮೊದಲಾದ ವಿಷಯಗಳ ಸಂಬಂಧವನ್ನು ಹೊಂದುವುದು. ಇದೇ ವಸ್ತುಗಳ ಆಕಾರವನ್ನು ಹೊಂದುವುದೆಂದು ವ್ಯವಹಾಗ. ಇದೇ ಅಂತಃಕರಣ ವೃತ್ತಿ. ಇಂತಹ ವೃತ್ತ್ಯವಚ್ಛಿನ್ನಚೈತನ್ಯಕ್ಕೆ ಪ್ರಮಾಣಚೈತನ್ಯವೆಂದು ಹೆಸರು. ಘಟಪಟಾದ್ಯವಚ್ಛಿನ್ನಚೈತನ್ಯಗಳೇ ವಿಷಯಗಳು. ಈ ಅಂತಃಕರಣವೃತ್ತಿ ಘಟಪಟಾದಿ ವಸ್ತುಗಳಿಗೂ ತದವಚ್ಛಿನ್ನ ಚೈತನ್ಯಕ್ಕೂ, ಕನ್ನಡಿ ಮುಖಕ್ಕೆ ಅಭಿವ್ಯಂಜಕದಂತೆ ಅಭಿವ್ಯಂಜಕವಾಗಿ, ಕನ್ನಡಿ ಮುಖದ ಪ್ರತಿಬಿಂಬವನ್ನು ಗ್ರಹಿಸುವ ಹಾಗೆ ಘಟಾದಿವಸ್ತು ಪ್ರತಿಬಿಂಬವನ್ನು, ತದವಚ್ಛಿನ್ನಚೈತನ್ಯವೂ ಪ್ರತಿಬಿಂಬವನ್ನು ಹೊಂದುವುದು. ಇಲ್ಲಿ ಅಂತಃಕರಣಾವಚ್ಛಿನ್ನಚೈತನ್ಯವೂ ಅಂತಃಕರಣವೃತ್ತ್ಯವಚ್ಛಿನ್ನಚೈತನ್ಯವೂ ಘಟಾದಿ ವಿಷಯಾವಚ್ಛಿನ್ನಚೈತನ್ಯವೂ—ಮೂರೂ ಹೊರಗೆ ವಿಷಯದೇಶದಲ್ಲಿ ಸೇರುವುವು. ಇಲ್ಲಿ ಅವಚ್ಛೇದಕಗಳು ಬೇರೆ ಬೇರೆಯಾದರೂ ದೇಶಭೇದವಿಲ್ಲದಿರುವುದರಿಂದ ಅವಚ್ಛಿನ್ನಗಳೆಲ್ಲ ಒಂದಾಗುವುವು. ಇದರಿಂದ ಘಟಪಟಾದಿ ವಸ್ತುಗಳೆಂದು ವ್ಯವಹರಿಸಲ್ಪಡುವುವು. ಅನುಮಾನಾದಿ ಪರೋಕ್ಷಸ್ಥಲದಲ್ಲಿ ವೃತ್ತಿ ಇಂದ್ರಿಯ ಸಂಬಂಧವಿಲ್ಲದಿರುವುದರಿಂದ ಹೊರಗೆ ಹೋಗುವುದಿಲ್ಲ. ಮೂರೂ ಒಂದಾಗುವುದಿಲ್ಲ. ಅಲ್ಲಿ ತೋರುವ ಬೆಂಕಿ ಮೊದಲಾದ ವಸ್ತುಗಳು ಪ್ರತ್ಯಕ್ಷಗಳಲ್ಲ.

ಸೂರ್ಯನಂತೆ ಸ್ವಪ್ರಕಾಶಸ್ವರೂಪವಾದ ಪರಬ್ರಹ್ಮವೆಂಬ ಚೈತನ್ಯವೇ ಜ್ಞಾನಪದಕ್ಕೆ ಮುಖ್ಯವಾದ ಅರ್ಥ. ಸೂರ್ಯನಿಗೆ ಮೇಘಖಂಡಗಳಂತಿರುವ ಅಜ್ಞಾನವೆಂಬ ಆವರಣವನ್ನು ತೆರೆಯನ್ನು ಮನಸ್ಸೆಂಬ ಅಂತಃಕರಣವು ತೆಗೆಯುವುದು. ಅಂತಃಕರಣವೃತ್ತಿಯಲ್ಲಿ ಹಿಂದೆ ಹೇಳಿದಂತೆ ಪ್ರತಿಫಲಿತಚೈತನ್ಯವೇ ಪ್ರಮಾಣಫಲವೆಂಬ ಮುಖ್ಯವಾದ ಜ್ಞಾನ.

ಅವಕ್ಕೆ ಅವಚ್ಛೇದಕವಾಗಿಯೂ ಉಪಕಾರಕವಾಗಿಯೂ ಇರುವ ಅಂತಃ ಕರಣ ವೃತ್ತಿ ಉಪಚಾರದಿಂದ ಪರಂಪರೆಯಾಗಿ ಜ್ಞಾನವೆಂದು ವ್ಯವಹರಿಸಲ್ಪಡುವುದು.

ಸ್ವಭಾವವಾಗಿ ಚೈತನ್ಯವು ನಿತ್ಯವಾಗಿದ್ದರೂ ಅಂತಃಕರಣ ವ್ಯಾಪಾರವು ಇಂದ್ರಿಯಾದಿಮೂಲಕ ಹೊಸದಾಗಿ ಹುಟ್ಟುವುದರಿಂದ ಚೈತನ್ಯವೆಂಬ ಜ್ಞಾನಕ್ಕೆ ಉತ್ಪತ್ತಿ ವಿನಾಶ ಮೊದಲಾದ ವ್ಯವಹಾರ. ಹೀಗೆ ಅಂತಃಕರಣ ವೃತ್ತಿಗೆ ಎರಡು ವಿಧವಾದ ಫಲ. ವಿಷಯಕ್ಕೂ ಚೈತನ್ಯಕ್ಕೂ ಅನಾದಿಯಾಗಿ ಆವರಣವಾಗಿರುವ ಅಜ್ಞಾನವನ್ನು ನಿವೃತ್ತಿಮಾಡುವುದು ಒಂದು ; ಇದಕ್ಕೆ ಆವರಣ ಭಂಗವೆಂದು ಹೆಸರು. ವಿಷಯಸ್ಫುರಣವೆಂಬುದು ಮತ್ತೊಂದು. ಇದಕ್ಕೆ ವಿಷಯ ಸಮರ್ಪಣೆ ಪ್ರತಿಫಲನವೆಂದು ಫಲಿತಾರ್ಥ. ಆನಂತರ ಹಾನೋಪಾದಾನಾದಿ ವ್ಯವಹಾರಗಳು ಸರ್ವಲೋಕಪ್ರಸಿದ್ಧಗಳು.

ಪ್ರತ್ಯಕ್ಷಜ್ಞಾನ ನಿರ್ವಿಕಲ್ಪಕ, ಸವಿಕಲ್ಪಕವೆಂದು ಎರಡು ಪ್ರಕಾರ. ನಿರ್ವಿಶೇಷ ಶುದ್ಧವಸ್ತುಸ್ವರೂಪಮಾತ್ರವನ್ನು ಗ್ರಹಿಸುವುದು ನಿರ್ವಿಕಲ್ಪಕ. ಇದಕ್ಕೆ ಅಖಂಡಾಕಾರವೃತ್ತಿಯೆಂದು ಹೆಸರು. "ದಶಮಸ್ತ್ವಮಸಿ", "ತತ್ತ್ವಮಸಿ" ಮೊದಲಾದ ವಾಕ್ಯಗಳಿಂದಲೂ ನಿರ್ವಿಕಲ್ಪಕಪ್ರತ್ಯಕ್ಷ ಬರುವುದೆಂದು ಸಂಪ್ರದಾಯ. ಈ ವಿಚಾರ ಮುಂದಿರುವುದು.

**ಅನುಮಾನ**

ಅನುಮಾನ ಪ್ರಮಾಣದಲ್ಲಿ ಹೇತುಸಾಧ್ಯಗಳಿಗ ನಿಯತವಾದ ಸಂಬಂಧವೆಂಬ ವ್ಯಾಪ್ತಿಯೇ ಮುಖ್ಯ. ಇಂತಹ ನಿರುಪಾಧಿಕ ಸಂಬಂಧವೆಂಬ ವ್ಯಾಪ್ತಿಯುಳ್ಳ ವಸ್ತುವೇ ಲಿಂಗಸಾಧನ, ಹೇತು, ಯುಕ್ತಿ, ನ್ಯಾಯ, ತರ್ಕ, ಅನುಮಾನ ಮೊದಲಾದ ಶಬ್ದಗಳಿಗೆ ಅರ್ಥ. ಈ ವ್ಯಾಪ್ತಿ ಕಾರ್ಯಕಾರಣಭಾವ, ಸಾಮಾನ್ಯವಿಶೇಷಭಾವ, ಆಧಾರಾಧೇಯಭಾವ, ನಿವರ್ತ್ಯನಿವರ್ತಕಭಾವ, ಪಾಲ್ಯಪಾಲಕಭಾವ, ಈಶ್ವರೈಶ್ವರ್ಯಭಾವ, ನಿಯಾಮ್ಯನಿಯಾಮಕಭಾವ—ಮೊದಲಾದ ಸಂಬಂಧಮೂಲಕವಾಗಿ ಅನುಭವಕ್ಕೆ ಬರುವುದು. ದೀಪದಲ್ಲಿ ಬೆರಳನ್ನಿಟ್ಟು ಸುಡುವುದನ್ನು ಕಂಡು ಮಕ್ಕಳು ಸಹ ಸಕಲದೀಪಗಳು ಸುಡುತ್ತವೆಂದು ತಿಳಿದುಕೊಳ್ಳುವುವು. ಹೀಗೆ ಒಂದಾವರ್ತಿ

ನೋಡುವುದರಿಂದಲೂ ಅನೇಕಾವರ್ತಿ ನೋಡುವುದರಿಂದಲೂ ವ್ಯಾಪ್ತಿ ತಿಳಿಯಲ್ಪಡುವುದು.

ಈ ಅನುಮಾನಪ್ರಮಾಣದಲ್ಲಿ ಪಕ್ಷ, ಸಾಧ್ಯ, ಹೇತು—ಈ ಮೂರೂ ಮುಖ್ಯ. ಈ ಮೂರೂ ಸರಿಯಾಗಿದ್ದರೆ ಸದ್ಧೇತುವೆಂದು ಹೆಸರು. ದೋಷ ವಿದ್ದರೆ ಹೇತ್ವಾಭಾಸವೆಂದು ವ್ಯವಹಾರ. ಈ ವಿಚಾರ ತರ್ಕದರ್ಶನದಲ್ಲಿ ವಿಸ್ತರಿಸಲ್ಪಟ್ಟಿರುವುದು.

ನ್ಯಾಯವಾಕ್ಯಗಳಾದ ಪ್ರತಿಜ್ಞಾ ಹೇತೂದಾಹರಣೋಪನಯನಿಗಮನ ಗಳಲ್ಲಿ ಐದೂ ಆವಶ್ಯಕವಿಲ್ಲ. ಮೊದಲ ಮೂರು ಅಥವಾ ಕೊನೆಯ ಮೂರು ಸಾಕೆಂದು ಅಭಿಪ್ರಾಯ.

ಉಪಮಾನಪ್ರಮಾಣವು ಭಾಟ್ಟಮತದಂತೆ ಸಾದೃಶ್ಯವನ್ನು ಗ್ರಹಿಸು ವುದು, ನ್ಯಾಯಮತದಂತೆ ಪದಪದಾರ್ಥಗಳ ಸಂಬಂಧವನ್ನು ಗ್ರಹಿಸುವಂತ ಹದಲ್ಲ.

**ಅರ್ಥಾಪತ್ತಿ**

ಶಬ್ದ ಪ್ರಮಾಣದಲ್ಲಿ ವಿಸ್ತರವಿರುವುದರಿಂದ ಅರ್ಥಾಪತ್ತಿಯನ್ನೂ ಅನುಪಲಬ್ಧಿಯನ್ನೂ ಮೊದಲು ನಿರೂಪಿಸಲಾಗುತ್ತದೆ. ಅರ್ಥಾಪತ್ತಿ ಯೆಂದರೆ ಒಂದಂಶದಿಂದ ಮತ್ತೊಂದು ಅಂಶವನ್ನು ಕಲ್ಪಿಸುವುದು, ತಿಳಿಯು ವುದು. ದೇವದತ್ತನು ಪುಷ್ಟನಾಗಿದ್ದಾನೆ ; ಹಗಲು ಊಟ ಮಾಡುವುದಿಲ್ಲ ವೆಂದು ತಿಳಿದರೆ ರಾತ್ರಿ ಭೋಜನವಿಲ್ಲದೆ ಪುಷ್ಟಿ ಬರಲಾರದೆಂದು ರಾತ್ರಿ ಭೋಜನವನ್ನು ತಿಳಿಯುತ್ತೇವೆ. ದೇವದತ್ತನು ಮನೆಯಲ್ಲಿಲ್ಲವೆಂದು ತಿಳಿದರೆ ಹೊರಗೆ ಹೋಗಿದ್ದಾನೆಂದು ತಿಳಿಯುತ್ತೇವೆ. ಇದೇ ಅರ್ಥಾಪತ್ತಿ ಪ್ರಮಾಣ. ಇಂತಹ ನ್ಯಾಯದಿಂದ ವೇದದಲ್ಲಿ ವಾಕ್ಯಾರ್ಥನಿರ್ಣಯವು ಬಹುವಾಗಿರುತ್ತದೆ.

ವಿಶ್ವಜಿತ್ ಎಂಬ ಯಾಗವನ್ನು ಮಾಡಬೇಕು ಎಂದು ವಾಕ್ಯವಿರು ತ್ತದೆ. ಸ್ವರ್ಗಕ್ಕಾಗಿ ಎಂದು ಅಲ್ಲಿ ಪೂರ್ತಿಮಾಡಿಕೊಳ್ಳುವುದು. ದರ್ಶ ಪೂರ್ಣಮಾಸ ಯಾಗದಿಂದ ಸ್ವರ್ಗ ಬರುತ್ತದೆ ಎಂದು ತಿಳಿದರೆ ಯಾಗ ವೆಂಬ ಕ್ರಿಯೆ ಈಗಲೇ ನಷ್ಟವಾಯಿತು. ಸ್ವರ್ಗವು ಜನ್ಮಾಂತರದಲ್ಲಿ

ಬರುತ್ತದೆ. ಸ್ವರ್ಗಕ್ಕೆ ಯಾಗವು ಹೇಗೆ ಕಾರಣವೆಂದು ಸಂದೇಹ ಬಂದ ಯಾಗದಿಂದ ಅಪೂರ್ವವೆಂಬ ಪುಣ್ಯವು ಹುಟ್ಟಿ ಅದರ ಮೂಲಕ ಸ್ವರ್ಗಕ್ಕೆ ಯಾಗವು ಕಾರಣವೆಂದು ತಿಳಿಯುವುದು. ಇವು ಮೊದಲಾದುವು ಉದಾಹರಣೆಗಳು.

## ಅನುಪಲಬ್ಧಿ

ಅನುಪಲಬ್ಧಿಪ್ರಮಾಣವೆಂದರೆ ಒಂದು ಸ್ಥಲದಲ್ಲಿ ಯಾವುದೋ ಒಂದು ವಸ್ತುವಿಲ್ಲವೆಂದು ತಿಳಿಯಬೇಕಾದರೆ ಹಿಂದೆ ಹೇಳಿದ ಪ್ರತ್ಯಕ್ಷ ಮೊದಲಾದ ಐದು ಪ್ರಮಾಣಗಳಲ್ಲಿ ಯಾವುದೂ ಇಲ್ಲದಿದ್ದರೆ ವಸ್ತುವಿಲ್ಲ ವೆಂದು ತಿಳಿಯುತ್ತೇವೆ. ಇದೇ ಅನುಪಲಬ್ಧಿ ಪ್ರಮಾಣ. ಯಾವುದಾದರೂ ಒಂದು ವಸ್ತುವನ್ನು ಬಹು ವಿಧವಾಗಿ ಹುಡುಕಿ ನೋಡುತ್ತೇವೆ. ಯಾವ ಮಾರ್ಗವೂ ಇಲ್ಲದೆ ಇರುವಿಕೆಯೇ ಅನುಪಲಬ್ಧಿ. ಉಪಲಬ್ಧಿಯೆಂದರೆ ಹಿಂದಿನ ಪ್ರಮಾಣಗಳು; ಅವುಗಳಿಲ್ಲದಿರುವುದು ಅನುಪಲಬ್ಧಿ.

## ಶಬ್ದಪ್ರಮಾಣ

ವೇದಾಂತದರ್ಶನಗಳಲ್ಲಿ ವಾಕ್ಯಾರ್ಥವಿಚಾರವೇ ಮುಖ್ಯವಾದುದ ರಿಂದ ಶಬ್ದ ಪ್ರಮಾಣವಿಚಾರ ಬಹುಮುಖ್ಯ. ಶಬ್ದಪ್ರಮಾಣವೆಂದರೆ ಭಾಷೆ. ಈಗ ಸಂಸ್ಕೃತ ಭಾಷೆಯಲ್ಲೇ ಶಬ್ದ ಪ್ರಮಾಣಸ್ವರೂಪವನ್ನು ನಿರೂಪಿಸಿದರೂ ನ್ಯಾಯಗಳು ಸಕಲ ಭಾಷೆಗಳಿಗೂ ಸಮನಾಗಿರುವುವು. ವೇದವೇದಾಂತಗ್ರಂಥಗಳು ಸಂಸ್ಕೃತ ಭಾಷಾಮಯವಾಗಿರುವುದರಿಂದ ವೇದಾದಿಶಾಸ್ತ್ರಗಳನ್ನೇ ಶಬ್ದಪ್ರಮಾಣವೆಂದು ತಿಳಿಯಬೇಕು. ಅಕ್ಷರಗಳ ಸಮುದಾಯವೇ ಪದ. ಪದಸಮುದಾಯವೇ ವಾಕ್ಯ. ವಾಕ್ಯಸಮುದಾಯವೇ ಪ್ರಬಂಧ. ವೇದವೆಂಬ ಪ್ರಬಂಧ ಸೃಷ್ಟ್ಯಾದಿ ಕಾಲದಲ್ಲಿ ಪರಮೇಶ್ವರನಿಂದ ಪೂರ್ವಕಲ್ಪದಲ್ಲಿದ್ದಂತೆಯೇ ಉಪದೇಶಿಸಲ್ಪಟ್ಟು ಆ ಲಾಗಾಯಿತು ಮಹಾಪ್ರಳಯಪರ್ಯಂತ ಏಕರೂಪದಲ್ಲಿದ್ದು ವಿನಾಶವಾದರೂ ಪುನಃ ಕಲ್ಪಾದಿಯಲ್ಲಿ ಹೀಗೆಯೇ ಉಪದೇಶಿಸಲ್ಪಡುತ್ತದೆಯಾದುದರಿಂದ ವೇದವನ್ನು ಶಾಶ್ವತವೆಂದೂ ಪುರುಷರು ಮಾಡಲಿಲ್ಲವೆಂದೂ ಪ್ರಸಿದ್ಧಿ.

ವಾಕ್ಯಗಳೇ ಶಬ್ದಪ್ರಮಾಣವಾದರೆ ವಾಕ್ಯ ಯಾವ ತಾತ್ಪರ್ಯದಿಂದ ಹೊರಟಿರುವುದೋ ಅಂತಹ ಅರ್ಥದಲ್ಲಿ ಅದು ಪ್ರಮಾಣ. ಬೇರೆ ಅರ್ಥದಲ್ಲಿ ಪ್ರಮಾಣವಲ್ಲ. ವಾಕ್ಯದಿಂದ ತಾತ್ಪರ್ಯಕ್ಕೆ ವಿರೋಧವಿಲ್ಲದೆ ಅರ್ಥಜ್ಞಾನ ಬರಬೇಕಾದರೆ ಆಕಾಂಕ್ಷಾ, ಯೋಗ್ಯತೆ, ಆಸತ್ತಿ, ತಾತ್ಪರ್ಯ— ಎಂಬ ನಾಲ್ಕು ಅಂಶಗಳು ಇರಬೇಕು.

ಆಕಾಂಕ್ಷೆಯೆಂದರೆ ಪದಾರ್ಥಗಳಿಗೆ ಪರಸ್ಪರ ಜಿಜ್ಞಾಸೆ. ಕ್ರಿಯಾಪದದ ಅರ್ಥಕ್ಕೆ ಕಾರಕ ಪದಾರ್ಥಗಳ ಜಿಜ್ಞಾಸೆಯಿದೆ, ಕಾರಕಪದಾರ್ಥಗಳಿಗೆ ಕ್ರಿಯಾಪದಾರ್ಥಗಳ ಜಿಜ್ಞಾಸೆಯಿದೆ.

ಯೋಗ್ಯತೆಯೆಂದರೆ ಪದಾರ್ಥಗಳ ಪರಸ್ಪರಾನ್ವಯವೆಂಬ ಸಂಬಂಧಕ್ಕೆ ಬಾಧೆಯಿಲ್ಲದಿರಬೇಕು. "ವಹ್ನಿನಾ ಸಿಂಚೇತ್, ಉದಕೇನಾದೀಪಯೇತ್" ಎಂಬಲ್ಲಿ ಬೆಂಕಿಯಿಂದ ತಂಪುಮಾಡುವುದಕ್ಕೂ ನೀರಿಂದ ಸುಡುವುದಕ್ಕೂ ಸಂಬಂಧವಿಲ್ಲ.

ಆಸತ್ತಿಯೆಂದರೆ ಪದಾರ್ಥಗಳ ಸ್ಮೃತಿಗಳಿಗೆ ವ್ಯವಧಾನವಿಲ್ಲದಿರಬೇಕು. ವ್ಯವಧಾನವೆಂಬ ವಿಲಂಬವಿದ್ದರೆ ಹಿಂದಿನದು ಮರೆತುಹೋಗುವುದು, ಆದುದರಿಂದಲೇ ಕೆಲವು ಪದಗಳಿಗೆ ಬೇಕಾದ ಪದಗಳನ್ನು ಕಲ್ಪನೆ ಮಾಡಿಕೊಳ್ಳುತ್ತಾರೆ. "ಬಾಗಿಲು" ಎಂದರೆ "ತೆಗೆಯಬೇಕು" ಎಂಬ ಪದವು ಸಿದ್ಧವು.

ತಾತ್ಪರ್ಯವೆಂದರೆ ವಾಕ್ಯಪ್ರಯೋಗವನ್ನು ಮಾಡಿದವನ ಅಭಿಪ್ರಾಯವೆಂದು ಪ್ರಾಯಶಃ ಎಲ್ಲರೂ ತಿಳಿದಿರುವರು. ಹಾಗಾದರೆ ಅರ್ಥಜ್ಞಾನವಿಲ್ಲದೆ ಮಂತ್ರಗಳನ್ನು, ಇತರ ಭಾಷಾವಾಕ್ಯಗಳನ್ನು ಬಹುಜನರು ಪ್ರಯೋಗ ಮಾಡುತ್ತಾರೆ. ಇತರರಿಗೆ ಅರ್ಥವಾಗುತ್ತದೆ, ಆದುದರಿಂದ ಮೊದಲು ಹೇಳಿದವನ ಅಭಿಪ್ರಾಯವನ್ನು ಹುಡುಕಬೇಕು. ವೈದಿಕ ಸಂಪ್ರದಾಯದಲ್ಲಿ ವೇದಕ್ಕೂ ಉಪನಿಷತ್ತುಗಳಿಗೂ ಕಾಲದೇಶಮೂಲ ಯಾವುದೂ ಇಲ್ಲದಿರುವುದರಿಂದ ಸರಿಯಾದ ಅರ್ಥವನ್ನು ಕೊಡತಕ್ಕ ಯೋಗ್ಯತೆಯೇ ತಾತ್ಪರ್ಯವೆಂದು ನಿರ್ಣಯಿಸಬೇಕು. ಆದುದರಿಂದಲೇ ಅವರವರು ತಾತ್ಪರ್ಯನಿರ್ಣಯ ಮಾಡಿಕೊಂಡು ವಿಚಿತ್ರ ಮಾರ್ಗಗಳಲ್ಲಿ ಹೊರಡುವುದಕ್ಕೆ ಅವಕಾಶವಾಯಿತು. ಲೌಕಿಕವಾಕ್ಯಗಳಲ್ಲೇ ಟೀಕೆಗಳನ್ನು ಮಾಡಿ

ನಾನಾವಿಧ ಅಭಿಪ್ರಾಯಗಳನ್ನು ಕಲ್ಪಿಸುತ್ತಿರುವಲ್ಲಿ ಅನಾದಿಕಾಲದ ವಾಕ್ಯಗಳಿಗೆ ವಿವಿಧ ತಾತ್ಪರ್ಯಭೇದಕಲ್ಪನೆ ಆಶ್ಚರ್ಯವಲ್ಲ. ಆದುದರಿಂದ ಸಂಪ್ರದಾಯ ಮುಖ್ಯ

**ಲಕ್ಷಣಾ**

ಪದಗಳ ಅರ್ಥಜ್ಞಾನವು ಪ್ರತ್ಯೇಕ ಬಿಡಿಸಿ ಬಿಡಿಸಿ ಬರುವುವು. ವಾಕ್ಯಾರ್ಥ ಜ್ಞಾನವೆಂದರೆ ಪದಾರ್ಥಗಳನ್ನೆಲ್ಲಾ ಒಟ್ಟಾಗಿ ಸೇರಿಸಿ ಬರುವ ಜ್ಞಾನ. 'ರಾಜಾ ರಾಷ್ಟ್ರಂ ಪಾಲಯತಿ'' ಎಂಬ ವಾಕ್ಯದಲ್ಲಿ ಪದಗಳಿಂದ ಪದಾರ್ಥಜ್ಞಾನವು, ಪದದ ಸಾಮರ್ಥ್ಯದಿಂದ ಬರುವುದು, ಸಾಮರ್ಥ್ಯವೇ ಶಕ್ತಿ. ಪದವು ಶಕ್ತಿ. ಅರ್ಥವು ಶಕ್ಯ. ಈ ಪದಾರ್ಥಗಳ ಸಂಬಂಧವು ಸಾಕ್ಷಾತ್ತಾಗಿದ್ದರೆ ಶಕ್ತಿಯೆಂದೂ, ಪರಂಪರೆಯಾಗಿದ್ದರೆ ಲಕ್ಷಣವೆಂದೂ ವಿಭಾಗ. ಗೌಣಪ್ರಯೋಗವೆಂಬುದೂ ಲಕ್ಷಣೆಯಲ್ಲಿ ಸೇರುತ್ತವೆ. ''ಗಂಗಾ ಪ್ರವಹತಿ'', ಗಂಗಾಯಾಂ ಘೋಷಃ'', ''ಸಿಂಹೋ ಮಾಣವಕಃ'' ಇವು ಮೊದಲಾದುವು ಕ್ರಮವಾಗಿ ಉದಾಹರಣೆಗಳು. ಗಂಗಾ ಪ್ರವಹತಿ ಎಂದರೆ ಗಂಗೆ ಹರಿಯುತ್ತದೆ ಎಂದರ್ಥ. ಗಂಗಾಯಾಂ ಘೋಷಃ ಎಂದರೆ ಗಂಗಾನದಿತೀರದಲ್ಲಿರುವ ಹಳ್ಳಿಯೆಂದರ್ಥ. ಸಿಂಹೋ ಮಾಣವಕಃ ಎಂದರೆ ಹುಡುಗನು ಸಿಂಹಸದೃಶ ಪರಾಕ್ರಮಶಾಲಿಯೆಂದರ್ಥ. ಇವೇ ಶಕ್ತಿ ಲಕ್ಷಣ ಗೌಣಗಳು,

ಪುನಃ ಲಕ್ಷಣೆ ಜಹಲ್ಲಕ್ಷಣಾ, ಅಜಹಲ್ಲಕ್ಷಣಾ, ಜಹದಜಹಲ್ಲಕ್ಷಣಾ ಎಂದು ಮೂರು ಪ್ರಕಾರ. ಸಹಜವಾದ ಅರ್ಥವನ್ನು ಬಿಟ್ಟು ಬೇರೆ ಅರ್ಥವನ್ನು ಮಾಡುವುದು ಜಹಲ್ಲಕ್ಷಣಾ, ಜಹತ್ ಎಂದರೆ ಸಹಜವಾದ ಅರ್ಥವನ್ನು ಬಿಡುವುದು. ''ವಿಷಂ ಭುಂಕ್ಷ್ವ'' ಎಂಬ ಉದಾಹರಣೆಯಲ್ಲಿ ವಿಷವನ್ನು ತಿನ್ನು ಎಂದು ಸಹಜವಾದ ಅರ್ಥ. ಈ ವಾಕ್ಯವನ್ನು ಯಾವ ಸಂದರ್ಭದಲ್ಲಿ ಯಾವನು ಹೇಳಿದನೆಂದು ವಿಚಾರಿಸಿದರೆ ಶತ್ರುವಿನ ಮನೆಯಲ್ಲಿ ಊಟಕ್ಕೆ ಹೋಗುತ್ತಿರುವವನನ್ನು ನೋಡಿ ಹಿತಚಿಂತಕನು ಹೇಳಿದ ವಾಕ್ಯವಿದು. ಆಗ ವಿಷಂ = ಶತ್ರು ಗೃಹಾನ್ನವನ್ನು ಭುಂಕ್ಷ್ವ = ಊಟ ಮಾಡಬೇಡವೆಂಬರ್ಥವನ್ನು ಕೊಡುವುದು. ಇಲ್ಲಿ ಪದಗಳ ಮುಖ್ಯಾರ್ಥಗಳು ಬಿಡಲ್ಪಟ್ಟವು.

ಅಜಹಲ್ಲಕ್ಷಣೆಯೆಂದರೆ ಸಹಜವಾದ ಅರ್ಥವನ್ನು ಬಿಡದೆ ಹೆಚ್ಚು ಅರ್ಥವನ್ನು ತಿಳಿಯುವುದು. "ಮಂಚಾಃ ಕ್ರೋಶನ್ತಿ" ಎಂಬಲ್ಲಿ ಮಂಚ ಗಳು ಕೂಗುತ್ತವೆಂದು ಸಹಜವಾದ ಅರ್ಥ. ಇದಕ್ಕೆ ಮಂಚದಲ್ಲಿರು ವವರು ಕೂಗುತ್ತಾರೆಂದು ಅರ್ಥ.

ಜಹದಜಹದಲ್ಲಕ್ಷಣೆಯೆಂದರೆ, ಪದಗಳ ಸಹಜವಾದ ಅರ್ಥದಲ್ಲಿ ಒಂದಂಶವನ್ನು ಬಿಟ್ಟು ಒಂದು ಅಂಶವನ್ನು ಬಿಡದಿರುವುದು. "ಸೋಽಯಂ ದೇವದತ್ತಃ" ಎಂಬ ಉದಾಹರಣೆಯಲ್ಲಿ ಸಃ ಎಂಬ ಪದಕ್ಕೆ ಆ ದೇಶಕಾಲ ದಲ್ಲಿದ್ದ ಮನುಷ್ಯನೆಂದರ್ಥ. ಅಯಂ ಎಂಬ ಪದಕ್ಕೆ ಈ ದೇಶಕಾಲದಲ್ಲಿ ರುವ ದೇವದತ್ತನೆಂದರ್ಥ. ಆ ದೇಶಕಾಲಗಳು ಈಗಿಲ್ಲ, ಈ ದೇಶಕಾಲಗಳು ಆಗಿಲ್ಲ. ಆದುದರಿಂದ ಎರಡು ಅಂಶಗಳನ್ನು ಬಿಟ್ಟು ಮನುಷ್ಯನೆಂಬ ವಿಶೇ ಷ್ಯಾಂಶವನ್ನು ಮಾತ್ರ ಇಟ್ಟುಕೊಂಡು ಆತನು ದೇವದತ್ತನೆಂದು ತಿಳಿಯು ತ್ತೇವೆ. ಇಂತಹ ಸ್ವರೂಪಮಾತ್ರಜ್ಞಾನದಿಂದ ಅವನು ದೇವದತ್ತನೋ ? ಅಲ್ಲವೋ? ಎಂಬ ಸಂಶಯವು ನಿವರ್ತಿಸುತ್ತದೆ. ಹಾಗೆಯೇ "ತತ್ತ್ವಮಸಿ" ಎಂಬ ವೇದಾಂತವಾಕ್ಯದಲ್ಲಿ ತತ್ ಎಂದರೆ ಸರ್ವಶಕ್ತಿ ಮೊದಲಾದ ಸಕಲಗುಣವುಳ್ಳ ಬ್ರಹ್ಮನೆಂದರ್ಥ. ತ್ವಂ ಎಂದರೆ ಅಲ್ಪ ಶಕ್ತಿ ಮೊದಲಾದ ಸಕಲ ದೋಷವುಳ್ಳ ನೀನು ಎಂದರ್ಥ. ಈ ಎರಡಕ್ಕೂ ವಿರುದ್ಧ ವಿಶೇ ಷಣಗಳಿರುವುದರಿಂದ ಐಕ್ಯವು ಬರಲಾರದು. ಅದಕ್ಕಾಗಿ ವಿಶೇಷಣಾಂಶ ಗಳನ್ನು ಬಿಟ್ಟು ನೀನೇ ಬ್ರಹ್ಮ ಎಂದು ಐಕ್ಯವನ್ನುಪದೇಶಿಸುವುದಕ್ಕೆ ಹೊರಟಿ ರುವ ವಾಕ್ಯವಿದೆಂದು ತಾತ್ಪರ್ಯಾರ್ಥ. ಈ ರೀತಿಯ ತಾತ್ಪರ್ಯವನ್ನು ನಿರ್ಣಯಿಸಿ ವಾಕ್ಯಾರ್ಥವನ್ನು ತಿಳಿಯಬೇಕು. ಲೋಕಪ್ರಸಿದ್ಧಿಯಿಂದ ತೋರುವ ಅರ್ಥಕ್ಕಿಂತಲೂ ತಾತ್ಪರ್ಯನಿರ್ಣಯದಿಂದ ತಿಳಿಯುವ ಅರ್ಥವೇ ಪ್ರಬಲವೆಂದು ಸಿದ್ಧಾಂತ. ನಿರ್ವಿಶೇಷಬ್ರಹ್ಮಸಾಕ್ಷಾತ್ಕಾರವೆಂಬ ವಾಕ್ಯ ಜನ್ಯಜ್ಞಾನ ಅವಿದ್ಯಾ ನಿವೃತ್ತಿಮೂಲಕ ಸಕಲಭೇದಪ್ರಪಂಚ ನಿವರ್ತಕ ವಾಗಿ ಮೋಕ್ಷಸಾಧನವಾಗುವುದೆಂದು ಭಾವ.

**ಅನಿರ್ವಚನೀಯ ಪ್ರಪಂಚ**

ಪ್ರಪಂಚವು ಅನಿರ್ವಚನೀಯ ಎಂಬುದು ಮುಖ್ಯವಾಗಿ ಈ

ಸಿದ್ಧಾಂತದಲ್ಲಿ ತಿಳಿಯಬೇಕಾದ ಅಂಶ. ಈ ಪ್ರಪಂಚವನ್ನು ಸುವರ್ಣ ಪರಿಣಾಮವಾದ ಭೂಷಣದಂತೆ ಬ್ರಹ್ಮದ ಪರಿಣಾಮವೆಂದು ಕೆಲವರು ತಿಳಿಯುವರು. ಬ್ರಹ್ಮದ ಇಚ್ಛೆಯಿಂದ ಪ್ರಳಯಕಾಲದಲ್ಲಿ ಉಳಿದಿರುವ ಪರಮಾಣುಗಳ ಸಮೂಹದಿಂದ ವಿಚಿತ್ರಪ್ರಪಂಚವು, ಬೀಜದಿಂದ ಅಂಕುರ ಹುಟ್ಟುವಹಾಗೆ, ಹೊಸದಾಗಿ ಹುಟ್ಟುವುದೆಂದು ಕೆಲವರು ತಿಳಿಯುವರು. ಇವುಗಳಲ್ಲಿ ಒಂದು ಪರಿಣಾಮವಾದ ಮತ್ತೊಂದು ಆರಂಭವಾದ. ಈ ಸಿದ್ಧಾಂತದಲ್ಲಿ ಈ ಪ್ರಪಂಚ ಬ್ರಹ್ಮದ ವಿವರ್ತವೆಂದು ಅಭಿಪ್ರಾಯ. ವಿವರ್ತವೆಂದರೆ ಒಂದು ವಸ್ತು ತನ್ನ ಸ್ವರೂಪಕ್ಕೆ ಹಾನಿಯಿಲ್ಲದೆ ಮತ್ತೊಂದು ವಸ್ತುವಾಗಿ ಆಗುವುದು, ಹಾಗೆ ಕಾಣುವುದು. ಇದಕ್ಕೆ ಅಧ್ಯಾಸವೆಂದೂ ಹೆಸರು. ಹಗ್ಗವು ದೋಷಸಹಿತವಾದ ದೃಷ್ಟಿಯಿಂದ ಸರ್ಪವಾಗಿ ಆಗು ವುದು, ಹಾಗೆ ಕಾಣುವುದು. ಆಗುವುದಕ್ಕೆ ಅರ್ಥಾಧ್ಯಾಸವೆಂದೂ ಕಾಣು ವುದಕ್ಕೆ ಜ್ಞಾನಾಧ್ಯಾಸವೆಂದೂ ವ್ಯವಹಾರ. ಹೀಗೆ ಬ್ರಹ್ಮವು ವಿಚಿತ್ರ ಪ್ರಪಂಚರೂಪವಾಗಿ ಆಗುವುದು ಮತ್ತು ಕಾಣುವುದು. ಇದೇ ಅನಿರ್ವಚ ನೀಯವಾದ .ಪ್ರಪಂಚವೂ ಬ್ರಹ್ಮವೂ ಒಂದೆಂದು ಹೇಳಲು ಸಾಧ್ಯವಿಲ್ಲ, ಬೇರೆಯೆಂದು ಹೇಳಲೂ ಸಾಧ್ಯವಿಲ್ಲವೆಂದರ್ಥ. ಆದುದರಿಂದ ಪ್ರಪಂಚ ಬ್ರಹ್ಮದಲ್ಲಿ ಕಲ್ಪಿತ, ಆರೋಪಿತ, ಅಧ್ಯಸ್ತ ಎಂದು ನಿರ್ಣಯ.

### ಅನಿರ್ವಚನೀಯ ಖ್ಯಾತಿ

ಈ ಸಿದ್ಧಾಂತಕ್ಕೆ ಅನಿರ್ವಚನೀಯಖ್ಯಾತಿವಾದವೆಂದು ಪ್ರಸಿದ್ಧಿ, ಎಂದರೆ ಭ್ರಾಂತಿಯೆಂಬ ಜ್ಞಾನವೂ ಅದಕ್ಕೆ ವಿಷಯವಾದ ರಜ್ಜುಸರ್ಪ ಶುಕ್ತಿರಜತ ಮೊದಲಾದ ವಸ್ತುಗಳೂ ಅನಿರ್ವಚನೀಯಗಳೆಂದು ನಿರ್ಣ ಯಿಸಲ್ಪಟ್ಟಿರುವುವು.

ಮೊದಲು ಮನುಷ್ಯನಿಗೆ ಸ್ವಲ್ಪ ಬೆಳಕು, ಕಾಚ, ಮೊದಲಾದ ದೋಷಸಹಿತದೃಷ್ಟಿಯಿಂದ ಹಗ್ಗವು ಹಗ್ಗವೆಂದು ತಿಳಿಯದೆ ಸಾಮಾನ್ಯ ವಾಗಿ ಕುಂಡಲಾಕಾರವಾದ ಎದುರಿಗಿರುವ ಒಂದು ವಸ್ತುವೆಂದು ತೋರು ವುದು, ಈ ತೋರುವಿಕೆ ಅಂತಃಕರಣವೃತ್ತಿಯೆಂಬ ಜ್ಞಾನ. ಇದರಿಂದ ಎದುರಿಗಿರುವ ವಸ್ತುವಿಗೂ ತದವಚ್ಛಿನ್ನಚೈತನ್ಯಕ್ಕೂ ಆವರಣವಾಗಿರುವ

ಅವಿದ್ಯೆ ನಿವೃತ್ತಿಯಾಗಿ ವಸ್ತುವೂ ಚೈತನ್ಯವೂ ಸ್ಫುರಣವಾಗುವುದು. ಎಂದರೆ ಎದುರಿಗಿರುವ ವಸ್ತ್ವಂಶದಲ್ಲೂ ಅಂತಃಕರಣವೃತ್ತಿಯೆಂಬ ಜ್ಞಾನದಲ್ಲೂ ಪ್ರತಿಬಿಂಬಿತವಾಗುವುದು.

ಹೀಗಾದರೂ ಹಗ್ಗದ ಸ್ವರೂಪವೂ ಅದಕ್ಕೆ ಅವಚ್ಛೇದಕವಾಗಿರುವ ಚೈತನ್ಯ ಸ್ವರೂಪವೂ ಕಾಣದಿರುವುದರಿಂದ ಅವುಗಳಿಗೆ ಆವರಣವಾಗಿರುವ ಅಜ್ಞಾನವೆಂಬ ಅವಿದ್ಯೆ ಹಾಗೆಯೇ ಇದ್ದು ದೋಷ, ಸರ್ಪ, ಸಂಸ್ಕಾರ ಮೊದಲಾದುವುಗಳ ಸಹಾಯದಿಂದ ತತ್ಕಾಲದಲ್ಲಿ ಸರ್ಪವಾಗಿಯೂ ಸರ್ಪಾಕಾರಾಂತಃಕರಣ ವೃತ್ತಿರೂಪವಾಗಿಯೂ ಪರಿಣಮಿಸುವುದು. ಈ ಸರ್ಪವೂ, ಇದರ ಜ್ಞಾನವೂ ತಮಗೆ ಆಶ್ರಯವಾಗಿರುವ ಸಾಕ್ಷಿಚೈತನ್ಯವೆಂಬ ಜೀವಾತ್ಮನಿಗೆ ಗೋಚರವಾಗುವುವು. ಇಲ್ಲಿ ಅಂತಃಕರಣಾವಚ್ಛಿನ್ನ ಚೈತನ್ಯ. ವೃತ್ತ್ಯವಚ್ಛಿನ್ನ ಚೈತನ್ಯ, ರಜತಾವಚ್ಛಿನ್ನ ಚೈತನ್ಯ—ಮೂರೂ ಒಳಗೆ ಒಂದಾಗುವುವು. ಸರ್ಪವು ಪ್ರತ್ಯಕ್ಷವೆಂದು ನಿರ್ಣಯ. ಇದೇ ರಜ್ಜು ಸರ್ಪ, ಅದರ ಭ್ರಾಂತಿ.

ಇಲ್ಲಿ ಈ ಪ್ರಕಾರ ಹಗ್ಗದಲ್ಲಿ ಹುಟ್ಟಿದ ಸರ್ಪವು ವ್ಯವಹಾರಕ್ಕೆ, ಲೋಕಕ್ಕೆ ಉಪಯೋಗವಿಲ್ಲದಿರುವುದರಿಂದ ವ್ಯವಹಾರದೃಷ್ಟಿಯಿಂದ ಇಲ್ಲಿ ಸರ್ಪವಿಲ್ಲವೆಂಬ ಬಾಧಜ್ಞಾನ ಉತ್ತರಕ್ಷಣದಲ್ಲೇ ಬರುವುದು.

ಹೀಗೆ ಕಪ್ಪೆಚಿಪ್ಪನ್ನು ನೋಡಿ ಬೆಳ್ಳಿಯೆಂದು ಭ್ರಮಿಸುತ್ತಾರೆ. ಅಲ್ಲೂ ಅನಿರ್ವಚನೀಯ ಶುಕ್ತಿರಜತದ ಉತ್ಪತ್ತಿಯನ್ನು ತಿಳಿಯಬೇಕು. ಈ ರಜತವು ವಿಷಯಾವಚ್ಛಿನ್ನಚೈತನ್ಯದಲ್ಲಿ ಕಲ್ಪಿತವಾದರೂ ವಿಷಯಾವಚ್ಛಿನ್ನ ಚೈತನ್ಯವೂ ಅಂತಃಕರಣಾವಚ್ಛಿನ್ನಚೈತನ್ಯವೆಂಬ ಸಾಕ್ಷಿಯೂ ಒಂದಾಗಿರುವುದರಿಂದ ಅಂತಃಕರಣದಲ್ಲೇ ಇರುವ ಸುಖಾದಿಗಳಂತೆ ನಿಯಮೇನ ಸಾಕ್ಷಿಗೆ ಗೋಚರವಾಗುವುದು.

ಹೀಗೆ ಸ್ವಾಪ್ನರಥಾದಿಪದಾರ್ಥಗಳೂ ಸಹ ಪ್ರತ್ಯಕ್ಷವೆಂದು ಅನುಭವವಿರುವುದರಿಂದ ಸ್ವಪ್ನಾವಸ್ಥೆ ಸ್ಮೃತಿಯಲ್ಲಿ ಶುಕ್ತಿರಜತಾದಿಗಳಂತೆ ನಿದ್ರೆಯೆಂಬ ದೋಷಸಹಿತವಾದ ಶುದ್ಧಚೈತನ್ಯದಲ್ಲಿರುವ ಅವಿದ್ಯೆಯಿಂದ ಕಲ್ಪಿತವಾದದ್ದು. ಸ್ವಾಪ್ನಪದಾರ್ಥಗಳು ಸಾಕ್ಷಾನ್ಮಾಯಾಪರಿಣಾಮಗಳೆಂದು ಕೆಲವರ ಅಭಿಪ್ರಾಯ.

ದಾಸಾಳಿಪುಷ್ಪದ ಸಮೀಪದಲ್ಲಿರುವ ಸ್ಫಟಿಕವನ್ನು ಕೆಂಪುಸ್ಫಟಿಕ ವೆಂದು ತಿಳಿಯುವ ಭ್ರಾಂತಿ. ತಾರ್ಕಿಕರು ಹೇಳುವಂತೆ ಅನ್ಯಥಾಖ್ಯಾತಿ ಯೆಂದು ಇವರಲ್ಲೂ ಕೆಲವರು ಅಭಿಪ್ರಾಯಪಡುವರು. ಸಂಶಯ, ಸಂಭಾ ವನೆ, ಅನವಧಾರಣೆ ಮೊದಲಾದ ಜ್ಞಾನಪ್ರಭೇದಗಳು ಕಾರಣಪ್ರಭೇದ ದಿಂದ ಉದಯಿಸುವುವು. ಎಲ್ಲವೂ ಅಂತಃಕರಣವ್ಯಾಪಾರ.

ಈ ರೀತಿಯಾಗಿ ರಜ್ಜುವಿನಲ್ಲಿ ತೋರತಕ್ಕ ಸರ್ಪವು ಉತ್ತರಕ್ಷಣ ದಲ್ಲೇ ನಿವೃತ್ತಿಯಾಗುವುದರಿಂದ, ರಜ್ಜುವಿನಂತೆ ಸತ್ ಅಲ್ಲಿ ಪ್ರತೀತಿ ಗೋಚರವಾದುದರಿಂದ ಗಗನಕುಸುಮದಂತೆ ಅಸತ್ತಲ್ಲ. ಹಾಗೆ ರಜ ತಾಂತಃಕರಣವೃತ್ತಿ ಶುಕ್ತ್ಯಾಕಾರಾಂತಃಕರಣವೃತ್ತಿಯಂತೆ ಸತ್ತಲ್ಲ. ಪ್ರತೀತಿಯಿರುವುದರಿಂದ ಅಸತ್ತಲ್ಲ. ಸದಸದ್ವಿಲಕ್ಷಣ ಅನಿರ್ವಚನೀಯ. ಅನಂತರ ಇದು ಸರ್ಪವಲ್ಲ, ಹಗ್ಗವೆಂದು ಜ್ಞಾನಬರುವುದು. ಇದೇ ಬಾಧ ಜ್ಞಾನ. ಇದರಿಂದ ರಜ್ಜುಸರ್ಪವೂ ಅಪರ ಜ್ಞಾನವೂ ನಿವೃತ್ತಿಯಾಗು ವುವು.

ಇದೇ ಶುಕ್ತಿಯಲ್ಲಿ ರಜತಾಧ್ಯಾಸ. ರಜ್ಜುವಿನಲ್ಲಿ ಸರ್ಪಾಧ್ಯಾಸ. ಈ ಪ್ರಕಾರ ಪ್ರಕ್ರಿಯೆ ಇರುವುದರಿಂದ ಅನಿರ್ವಚನೀಯಖ್ಯಾತಿವಾದವೆಂದು ಪ್ರಸಿದ್ಧಿ. ಎಂದರೆ, ಭ್ರಾಂತಸ್ಥಲದಲ್ಲಿ ಸದಸದ್ವಿಲಕ್ಷಣವಾದ ವಸ್ತುವೇ ಉದಯಿಸಿ ಜ್ಞಾನಕ್ಕೆ ಗೋಚರವಾಗುತ್ತದೆ ಎಂದು ಭಾವ.

ಈ ರೀತಿಯಾದ ಪರಿಷ್ಕಾರಕ್ಕೆ ಉದ್ದೇಶ ಹೀಗಿರಬಹುದು: ಬೌದ್ಧರು ನಿರಾಲಂಬನವಾದವನ್ನು ಸ್ಥಾಪಿಸಿರುತ್ತಾರೆ, ಎಂದರೆ ವಸ್ತುವಿಲ್ಲದೆ ಜ್ಞಾನ ಮಾತ್ರವೇ ತತ್ತ್ವವೆಂದು ಭಾವ. ಇದಕ್ಕೆ—ಭ್ರಮಸ್ಥಲದಲ್ಲೂ ಸ್ವಪ್ನಸ್ಥಲ ದಲ್ಲೂ ವಸ್ತುವಿಲ್ಲದೆ ಜ್ಞಾನವಿಲ್ಲವೇ ? ಎಂದು ಹೇಳುವರು ; ಭ್ರಾಂತಿಸ್ಥಲ ದಲ್ಲೂ ತತ್ಕಾಲದಲ್ಲಿ ವಸ್ತುಗಳುದಯಿಸಿ ಜ್ಞಾನಕ್ಕೆ ಗೋಚರವಾಗುವುದೆಂದು ಹೇಳಿ ವಿಜ್ಞಾನವಾದವನ್ನು ನಿರಾಕರಿಸುವುದು ಪ್ರಯೋಜನ.

ಭಾಸ್ಕರಮತದಲ್ಲೂ ಭ್ರಾಂತಿಸ್ಥಲದಲ್ಲಿ, ತತ್ಕಾಲಮಾತ್ರದಲ್ಲಿ ಆಯಾ ಪುರುಷನಿಗೆ ಮಾತ್ರ ಗೋಚರವಾಗುವ ಸತ್ತಾದ ಸರ್ಪ ರಜತಗಳು ಹುಟ್ಟಿ ವಿನಾಶವಾಗುವುವೆಂದು ಹೇಳಿ, ವಸ್ತುವಿಲ್ಲದೆ ಜ್ಞಾನವೆಂದು ಸಿದ್ಧಾಂತಮಾಡಿ, ನಿರಾಲಂಬನವಾದವನ್ನು ನಿರಾಕರಿಸಿರುವರು.

ಈ ರೀತಿಯಾದ ಅನಿರ್ವಚನೀಯಖ್ಯಾತಿವಾದವನ್ನು ಅಂಗೀಕರಿಸದಿರುವ ಸಾಂಖ್ಯಪ್ರಾಭಾಕರ ಮೊದಲಾದವರ ಅಭಿಪ್ರಾಯ ಅಖ್ಯಾತಿವಾದ, ಜ್ಞಾನವೆಲ್ಲವೂ ಯಥಾರ್ಥ. ಭ್ರಾಂತಿಯೆಂಬುದು ಚೆನ್ನಾಗಿ ತಿಳಿಯದಿರುವಿಕೆ. ಸಾಮಾನ್ಯವಾಗಿ ತಿಳಿಯುವಿಕೆಯೆಂದರ್ಥ. ಅಖ್ಯಾತಿವಾದಸ್ವರೂಪ ಸಾಂಖ್ಯ ಸಿದ್ಧಾಂತದಲ್ಲಿ ಹಿಂದೆ ವಿವರಿಸಲ್ಪಟ್ಟಿರುತ್ತದೆ. ತಾರ್ಕಿಕರು ಅನ್ಯಥಾಖ್ಯಾತಿವಾದಿಗಳು ಎಂದರೆ ಭ್ರಾಂತಿಯಲ್ಲಿ ತೋರಿಬರುವ ವಸ್ತುಗಳು ಇಲ್ಲಿಲ್ಲದಿದ್ದರೂ ಅನ್ಯತ್ರವಿರುವುದರಿಂದ ನಿರ್ವಿಷಯಜ್ಞಾನವಿಲ್ಲವೆಂದು ಭಾವ.

ಇಂತಹ ಅನಿರ್ವಚನೀಯಖ್ಯಾತಿವಾದ ಮೊದಲಾದುವುಗಳಿಗೆ ಪ್ರತಿಪಕ್ಷವಾಗಿ ಭ್ರಾಂತಿಸ್ಥಲದಲ್ಲಿ ಅಸತ್ಖ್ಯಾತಿವಾದವನ್ನೇ ದ್ವೈತಸಿದ್ಧಾಂತದಲ್ಲಿ ಆಶ್ರಯಿಸಿರುವುದು. ಎದುರಿಗಿರುವ ಶುಕ್ತಿಗೂ ಅಂಗಡಿಯಲ್ಲಿರುವ ರಜತಕ್ಕೂ ಇಲ್ಲದ ಸಂಬಂಧವು ತೋರುವ ಹಾಗೆ, ಇಲ್ಲಿಲ್ಲದ ರಜತವು ತೋರುವುದಕ್ಕೆ ಬಾಧಕವೇನೆಂದು ತಿಳಿಯುವರು.

ಏವಂಚ ಇಂತಹ ಅನಿರ್ವಚನೀಯಖ್ಯಾತಿಯೆಂಬ ಅಧ್ಯಾಸವೇ ಅವಿದ್ಯಾ ಮೂಲಕವಾದುದರಿಂದ ಅವಿದ್ಯೆಯೇ, ಅಜ್ಞಾನವೇ ಮಾಯೆ. ಮಾಯಾವಿದ್ಯೆಗಳಿಗೆ ಆವರಣವಿಷಯದಲ್ಲಿ ಸ್ವಲ್ಪ ವ್ಯತ್ಯಾಸವಿದ್ದರೂ ಬಹುಸ್ಥಲದಲ್ಲಿ ಒಂದೇ ಅರ್ಥದಲ್ಲಿ ಪ್ರಯೋಗಿಸಿರುವುದರಿಂದ ಅತ್ಯಂತಭೇದವು ಅಭಿಮತವಲ್ಲ. ಇಂತಹ ಅವಿದ್ಯೆಯೇ ಸಂಸಾರ. ಇದರ ನಿವೃತ್ತಿಯೇ ಮೋಕ್ಷ.

## ಅನಿರ್ವಚನೀಯತಾ ಫಲ

ಇಲ್ಲಿ ವಸ್ತುಗಳು ತೋರುವುದಕ್ಕೆ ಖ್ಯಾತಿಯೆಂದೂ ಅನಂತರ ನಿವೃತ್ತಿಯಾಗುವುದಕ್ಕೆ ಬಾಧೆಯೆಂದೂ ಹೆಸರು. ಶಶಶೃಂಗ, ಗಗನಕುಸುಮ ಮೊದಲಾದುವು ಅಸತ್ತೆಂದೂ ಶೂನ್ಯವೆಂದೂ ಹೇಳಲ್ಪಡುವುವುಗಳಿಗೆ ಪ್ರಮಾಣಮೂಲಕವಾದ ಖ್ಯಾತಿಯೆಂಬ ತೋರುವಿಕೆಯಿಲ್ಲ. ಸತ್ತೆಂಬ ಪರಮಾರ್ಥವಾದ ವಸ್ತುವಿಗೆ ಬಾಧೆಯಿಲ್ಲ. ರಜ್ಜುಸರ್ಪಗಳಿಗೆ ಖ್ಯಾತಿಯೂ ಬಾಧೆಯೂ ಇರುವುದರಿಂದ, ಅಸತ್ತೆಂದೂ ಸತ್ತೆಂದೂ ಹೇಳಲಸಾಧ್ಯವಾದುದರಿಂದ, ಅವು

ಗಳು ಸದಸದ್ವಿಲಕ್ಷಣವೆಂಬ ಅನಿರ್ವಚನೀಯಗಳೆಂದು ನಿರ್ಣಯವಾದರೆ ಇದರಂತೆ ಪ್ರಪಂಚಕ್ಕೆ ಖ್ಯಾತಿಬಾಧೆಗಳು ಇರುವವು. ಪ್ರಪಂಚಕ್ಕೆ ಖ್ಯಾತಿಯೆಂಬುದು ನಿರ್ವಿವಾದ. ಬಾಧೆ ಹೇಗೆಂದರೆ, ಪರಮಾರ್ಥದಶೆಯಲ್ಲಿ ಸರ್ವಪ್ರಪಂಚವೂ ನಿವೃತ್ತವಾಗುವದು, ವಿನಾಶವಾಗುವುದು ಎಂದು ಶಾಸ್ತ್ರವು ಹೇಳುವುದರಿಂದ ನಂಬಬೇಕೆಂದು ಅಭಿಪ್ರಾಯ. ಗಾಢನಿದ್ರಾವಸ್ಥೆಯಲ್ಲಿ ಸರ್ವವೂ ಶೂನ್ಯವಾಗುವುದು ಒಂದು ನಿದರ್ಶನ. ಮತ್ತು ಘಟೋಽಸ್ತಿ, ಪಟೋಽಸ್ತಿ ಮೊದಲಾದ ಅನುಭವ ವ್ಯವಹಾರಗಳಲ್ಲಿ ತೋರಿಬರುವ ಘಟಪಟಾದಿವಸ್ತುಗಳೇ ಇತರವಸ್ತುಗಳ ನಿವೃತ್ತಿಸ್ವರೂಪ. ಆಯಾ ವಸ್ತುಸ್ವರೂಪ ತೋರುವಾಗಲೇ ವಿಚಾರಪರರಿಗೆ ಸರ್ವವಸ್ತುಗಳ ನಿವೃತ್ತಿ ಅನುಭವಸಿದ್ಧವಾಗಿರುವುದೆಂಬುದೊಂದು ಯುಕ್ತಿ. ಹೀಗೆ ಪ್ರಪಂಚಕ್ಕೆ ಬಾಧೆಯೂ ಸಿದ್ಧವಾಗುವುದು.

ಇಲ್ಲಿ ಸತ್ತ್ವಾಸತ್ತ್ವ, ನಿತ್ಯತ್ವಾನಿತ್ಯತ್ವ, ಕ್ಷಣಿಕತ್ವಾಕ್ಷಣಿಕತ್ವ, ದ್ರವ್ಯತ್ವಾದ್ರವ್ಯತ್ವ, ಕಾರ್ಯತ್ವಾಕಾರ್ಯತ್ವ, ಕಾರಣತ್ವಾಕಾರಣತ್ವ ಮೊದಲಾದ ಸರ್ವಪ್ರಕಾರದಿಂದಲೂ ನಿರ್ಣಯಿಸಲಶಕ್ಯವಾದುದೇ ಶೂನ್ಯತೆ, ಮಿಥ್ಯೆ, ಮಾಯೆ, ತುಚ್ಛ, ಅಸತ್, ಅಳೀಕ, ಭ್ರಾಂತಿಯೆಂದೂ ಬೌದ್ಧರ ವ್ಯವಹಾರ. ಈ ಸಿದ್ಧಾಂತದಲ್ಲಿ ಅಸತ್ ತುಚ್ಛ ಶೂನ್ಯ ಮೊದಲಾದ ಪದಗಳಿಗೂ ಮಿಥ್ಯೆ ಮಾಯೆ ಅವಿದ್ಯೆ ಅಳೀಕ ಮೊದಲಾದ ಪದಗಳಿಗೂ ಅರ್ಥಭೇದವನ್ನಂಗೀಕರಿಸಿ ಬೌದ್ಧಮತವನ್ನು ಅನುವಾದ ಮಾಡುವಾಗ ಶೂನ್ಯ ಮೊದಲಾದ ಪದಗಳನ್ನೂ, ಸ್ವಮತವನ್ನು ಹೇಳುವಾಗ ಮಿಥ್ಯೆ, ಮಾಯೆ, ಅಳೀಕ ಮೊದಲಾದ ಪದಗಳನ್ನೂ ಉಪಯೋಗಿಸುತ್ತಾರೆ.

ಈ ರೀತಿಯಾದ ಅರ್ಥಭೇದಮೂಲಕವಾಗಿಯೇ ಪ್ರಪಂಚ ವಿಷಯದಲ್ಲಿ ಸಾಂಖ್ಯಮತಕ್ಕೂ ಬೌದ್ಧಮತಕ್ಕೂ ಮಧ್ಯಸ್ಥವಾದ ಮಿಥ್ಯಾವಾದವಿದು ಎಂದು ಸ್ಪಷ್ಟವಾಗುತ್ತದೆ. ಇದೊಂದು ವಿಧವಾದ ವಿರೋಧಶಮನಸಾಮರಸ್ಯಪರಿಷ್ಕಾರ.

ಮತ್ತು ಈ ಪ್ರಕಾರ ಪ್ರಪಂಚವನ್ನು ಮಿಥ್ಯೆಯೆಂಬ ಮಧ್ಯಸ್ಥಸ್ಥಿತಿಯಲ್ಲಿಟ್ಟು "ಬ್ರಹ್ಮ ಸತ್ಯಂ" ಎಂದು ನಿರ್ಣಯಿಸುವುದಕ್ಕೆ ಮತ್ತೊಂದು ಕಾರಣವೂ ಇರಬಹುದು. ಬೌದ್ಧರಲ್ಲಿ ಮಾಧ್ಯಮಿಕರು ಸರ್ವಶೂನ್ಯವಾದ

ವನ್ನು ಸ್ಥಾಪಿಸಿರುವರು. ವೇದಾಂತವಾದವು ಸರ್ವಶೂನ್ಯವಾದವನ್ನು ನಿರಾಕರಿಸಿರುವುದು. ಆ ನಿರಾಕರಣ ಪ್ರಕಾರವು ಬ್ರಹ್ಮವ್ಯತಿರಿಕ್ತಸರ್ವಾಭಾವವೆಂಬ ಸರ್ವಪ್ರತಿಷೇಧರೂಪವೆಂದು "ಅಥಾತ ಆದೇಶೋ ನೇತಿ ನೇತಿ" ಎಂಬ ಶ್ರುತಿ ಹೇಳುತ್ತದೆಯೆಂದು ಭಾಷ್ಯವು ಮಾಡಲ್ಪಟ್ಟಿರುವುದು. ಪ್ರಪಂಚ ಪರಮಾರ್ಥದಶೆಯಲ್ಲಿ ಸರ್ವನಿಷೇಧಕ್ಕೆ ಪ್ರತಿಯಾಗಿ ಬ್ರಹ್ಮವ್ಯತಿರಿಕ್ತಸರ್ವನಿಷೇಧವನ್ನು ಸ್ವೀಕರಿಸಿರುವುದರಿಂದ 'ಬ್ರಹ್ಮ ಸತ್ಯಂ' ಎಂಬ ಸಿದ್ಧಾಂತ ಉದಯಿಸಿತು. ಇದರಿಂದ ಮಾಧ್ಯಮಿಕಮತವೈಲಕ್ಷಣ್ಯ ಸೂಚಿತವಾಯಿತು. 'ಜಗನ್ಮಿಥ್ಯಾ' ಎಂಬ ಅಂಶದಿಂದ ವಿಜ್ಞಾನವಾದಿಗಳಾದ ಯೋಗಾಚಾರಮತವೈಲಕ್ಷಣ್ಯದಲ್ಲಿ ಅಭಿಪ್ರಾಯವು ಸೂಚಿಸಲ್ಪಡುತ್ತದೆ. ವಿಜ್ಞಾನವಾದಿಗಳು ವಿಜ್ಞಾನಮಾತ್ರಕ್ಕೆ ಸತ್ಯತ್ವವನ್ನೂ ಬಾಹ್ಯಪ್ರಪಂಚಕ್ಕೆಲ್ಲಾ ಗಗನಕುಸುಮದಂತೆ ಶೂನ್ಯತೆಯನ್ನೂ ವ್ಯವಹಾರದಶೆಯಲ್ಲೂ ಸ್ಥಾಪಿಸುವರು. ಪ್ರಪಂಚ ಪರಮಾರ್ಥದಶೆಯಲ್ಲಿ ಶೂನ್ಯವಾದರೂ ವ್ಯವಹಾರದಶೆಯಲ್ಲಿ ಶೂನ್ಯವಲ್ಲ, ಅಸತ್ತಲ್ಲ ; ಅವಿದ್ಯಾಮಯ, ಮಾಯಾಮಯ, ಅಳೀಕ, ಮಿಥ್ಯೆ, ಅನಿರ್ವಚನೀಯ ಎಂದು ಇವರು ನಿರ್ಣಯಿಸುವರು. ಇದರಿಂದ 'ಬ್ರಹ್ಮಸತ್ಯಂ ಜಗನ್ಮಿಥ್ಯಾ' ಎಂಬ ಉಪದೇಶಕ್ಕೆ ಮಾಧ್ಯಮಿಕಯೋಗಾಚಾರರ ಸಿದ್ಧಾಂತನಿರಾಕರಣದಲ್ಲಿ ತಾತ್ಪರ್ಯವೆಂದು ಹಿಂದಿನ ದರ್ಶನಗಳ ದೃಷ್ಟಿಯಿಂದ ನಿರ್ಣಯವಾಗುತ್ತದೆ.

### ದುರ್ನಿರೂಪತ್ವ

ಮತ್ತು ಪ್ರಪಂಚಸ್ವರೂಪವನ್ನು ಖ್ಯಾತಿಬಾಧೆಗಳಿಂದ ಸದಸದ್ವಿಲಕ್ಷಣವೆಂಬ ಅನಿರ್ವಚನೀಯವೆಂದು ನಿರ್ಣಯಿಸಿರುವಹಾಗೆ ಭಾಷ್ಯಕಾರರು "ತತ್ತ್ವಾನ್ಯತ್ವಾಭ್ಯಾಂ ದುರ್ನಿರೂಪಂ" ಎಂದು ಮತ್ತೊಂದು ವಿಧವಾದ ಅನಿರ್ವಚನೀಯತ್ವವನ್ನು ಅನೇಕಾವರ್ತಿ ನಿರೂಪಿಸಿರುವರು. ಫಲದಲ್ಲಿ ಎರಡು ವಿಧವಾದ ಅನಿರ್ವಚನೀಯತ್ವವು ಒಂದಾದರೂ. ನಿರೂಪಣದಲ್ಲಿ ವಿಶೇಷಾಂಶವಿರುವುದು. ಕಾರ್ಯಕಾರಣಭಾವವಿಷಯದಲ್ಲಿ ವಾದಿಗಳ ಅಭಿಪ್ರಾಯವು ಸತ್ಕಾರ್ಯವಾದ, ಅಸತ್ಕಾರ್ಯವಾದ, ಸದಸತ್ಕಾರ್ಯವಾದವೆಂದು ಸಾಮಾನ್ಯವಾಗಿ ಮೂರು ಪ್ರಕಾರವಿರುವುದು.

ಸತ್ಕಾರ್ಯವಾದವೆಂದರೆ ಕಾರಣಕ್ಕೂ ಕಾರ್ಯಕ್ಕೂ ಐಕ್ಯವನ್ನು' ಅಭೇದವನ್ನು ಹೇಳುವುದು. ತಂತುಗಳೇ ವಸ್ತ್ರ. ಮಣ್ಣೇ ಮಡಕೆ. ಚಿನ್ನವೇ ಭೂಷಣ. ಇದು ಸಾಂಖ್ಯಸಿದ್ಧಾಂತ. ಅಸತ್ಕಾರ್ಯವಾದವೆಂದರೆ ಕಾರ್ಯ ಕಾರಣಗಳಿಗೆ ಭೇದವನ್ನು ಹೇಳುವುದು. ಹೊಸದಾಗಿ ಕಾರ್ಯವು ಹುಟ್ಟುವು ದೆಂದು ಭಾವ. ಬೀಜ ಬೇರೆ ಅಂಕುರ ಬೇರೆ. ಪುಷ್ಪ ಬೇರೆ ಫಲ ಬೇರೆ, ಶರೀರ ಬೇರೆ ಕೇಶಗಳು ಬೇರೆ—ಇದು ತಾರ್ಕಿಕಸಿದ್ಧಾಂತ. ಅನುಭವವು ಎರಡೂ ಪ್ರಕಾರವಿರುವುದರಿಂದ ಸದಸತ್ಕಾರ್ಯವಾದವೆಂಬ ಭೇದಾಭೇದ ವಾದವನ್ನು ಜೈನಪಾತಂಜಲಕುಮಾರಿಲಾದಿಗಳು ಒಪ್ಪಿರುವರು. ಹಿಂದೆ ಹೇಳಿದ ಉದಾಹರಣೆಗಳಲ್ಲಿ ಭೇದವನ್ನೂ ಅಭೇದವನ್ನೂ ಹೇಳಬಹುದೆಂದು ಇವರ ಭಾವ.

ಈ ಸಿದ್ಧಾಂತದಲ್ಲಿ ಭೇದವೂ ಇಲ್ಲ, ಅಭೇದವೂ ಇಲ್ಲ, ಭೇದಾ ಭೇದವೂ ಇಲ್ಲ. ಮತ್ತೆ "ತತ್ತ್ವಾನ್ಯತ್ವಾಭ್ಯಾಂ ದುರ್ನಿರೂಪಮ್" ಎಂಬ ಅನಿರ್ವಚನೀಯಕಾರ್ಯಕಾರಣಭಾವವು. ಕಾರಣದೃಷ್ಟಿಯಿಂದ ತತ್ತ್ವ ವೆಂಬ ಅಭೇದ ಪಕ್ಷವನ್ನೂ ಅನ್ಯತ್ವವೆಂಬ ಭೇದಪಕ್ಷವನ್ನೂ ಪರಸ್ಪರವಿರುದ್ಧ ವಾದುದರಿಂದ ಭೇದಾಭೇದಪಕ್ಷವನ್ನೂ ಒಪ್ಪದೆ ನಾಲ್ಕನೆಯ ಪಕ್ಷವಾದ ಅನಿರ್ವಚನೀಯವಾದವನ್ನು ಸ್ಥಾಪಿಸಿರುವರು.

ಈ ಸಿದ್ಧಾಂತದಲ್ಲಿ ಅದ್ವೈತವೆಂಬ ಪದವು ಎರಡು ವಿಧವಾದ ಅರ್ಥ ದಲ್ಲಿ ಉಪಯೋಗಿಸಲ್ಪಡುವುದು. ಒಂದನೆಯದು ಭೇದನಿಷೇಧ, ಎರಡನೆ ಯದು ಐಕ್ಯೋಪದೇಶ. ಬ್ರಹ್ಮನಿಗೂ ಪ್ರಪಂಚಕ್ಕೂ ಹೇಳುವ ಅದ್ವೈತವು, ಹಿಂದೆ ಹೇಳಿದ ದುರ್ನಿರೂಪತ್ವವೆಂಬ ಭೇದನಿಷೇಧ. "ಭೇದವನ್ನು ನಿಷೇಧಿಸುತ್ತೇವೆ. ಐಕ್ಯವನ್ನು ಹೇಳುವುದಿಲ್ಲ"ವೆಂದು ಸ್ಪಷ್ಟವಾಗಿ ಹೇಳಿರು ವರು.

ಜೀವನಿಗೂ ಬ್ರಹ್ಮನಿಗೂ ಹೇಳುವ ಅದ್ವೈತವು ಭೇದನಿಷೇಧ ರೂಪವಲ್ಲ, ಐಕ್ಯೋಪದೇಶರೂಪವು, ಇದೇ ಅಖಂಡೈಕರಸವೆಂಬ ವಿಶುದ್ಧಾ ದ್ವೈತ.

**ಅಧ್ಯಾಸ**

ಈ ಸಿದ್ಧಾಂತವಲ್ಲಿ ಸಕಲ ಉಪನಿಷತ್ತುಗಳೂ ಬ್ರಹ್ಮ, ಜೀವ —

ಇವರು ಇಬ್ಬರೂ ಒಂದೇ ವಸ್ತು ಎಂಬ ಅಂಶವನ್ನು ಬೋಧಿಸುವುದಕ್ಕಾಗಿ ಹೊರಟಿರುವುವೆಂದು ನಿರ್ಣಯ. ಬ್ರಹ್ಮನೆಂಬವನು ನಿತ್ಯವಾದ ಶುದ್ಧಮುಕ್ತ ಸ್ವಭಾವವುಳ್ಳವನು, ನಿರ್ವಿಶೇಷಸ್ವಭಾವದವನು. ನಿರ್ವಿಶೇಷನೆಂದರೆ ಯಾವ ವಿಧವಾದ ಭೇದವೂ ಇಲ್ಲದವನು. ಲೋಕಾನುಭವದಲ್ಲಿ ಅಹಂ ಕರ್ತಾ, ಅಹಂ ಭೋಕ್ತಾ, ಸುಖೀ, ದುಃಖೀ, ಜಾನಾಮಿ ಇವೇ ಮೊದಲಾದ ಅಹಂಕಾರ ಮಮಕಾರ ವ್ಯವಹಾರಗಳಿಂದ ಜೀವಾತ್ಮನು ಕರ್ತೃತ್ವ ಭೋಕ್ತೃತ್ವ ಸುಖಿತ್ವ ದುಃಖಿತ್ವ ಜ್ಞಾತೃತ್ವ ಮೊದಲಾದ ಧರ್ಮಗಳುಳ್ಳವನೆಂದು ತಿಳಿದು ಬರುತ್ತದೆ. ಇಂತಹ ಜೀವನಿಗೂ ಬ್ರಹ್ಮನಿಗೂ ಐಕ್ಯವನ್ನು 'ತತ್ತ್ವಮಸಿ' ಮೊದಲಾದ ಶ್ರುತಿ ಹೇಗೆ ಬೋಧಿಸುವುದು ? ಎಂದರೆ, ಪ್ರತ್ಯಕ್ಷ ಮೊದ ಲಾದ ಲೋಕಾನುಭವವು ದೋಷ ಮೂಲಕವಾಗಿಯೂ ಇರಬಹುದು. ಶಾಸ್ತ್ರವು ನಿತ್ಯನಿರ್ದೋಷ, ಅನಾದಿಸಂಪ್ರದಾಯದಿಂದ ಬಂದಿರುವುದು. ಆದ್ದರಿಂದ ಒಂದು ಚಂದ್ರನು ಎರಡಾಗಿ ದೃಷ್ಟಿದೋಷದಿಂದ ತೋರುವ ಹಾಗೆ, ಬ್ರಹ್ಮನೆಂಬ ಒಂದು ವಸ್ತು ಅವಿದ್ಯೆಯೆಂಬ ದೋಷದಿಂದ ಜೀವ, ಬ್ರಹ್ಮ ಎಂದು ಬೇರೆ ಬೇರೆಯಾಗಿ ತೋರುವುದು. ಹಾಗೆ ಬೇರೆಯಾಗಿ ತಿಳಿಯಲ್ಪಟ್ಟ ಜೀವನು ದೇಹೇಂದ್ರಿಯಾಂತಃಕರಣಗಳೊಡನೆ ಬೆರೆತ್ತು ತಾನೇ ದೇಹಾದಿಸಂಘಾತನೆಂದು ಭ್ರಮಿಸಿ ಅಹಂಕಾರಮಮಕಾರವುಳ್ಳವ ನಾಗಿ ಸಂಸಾರಸಮುದ್ರದಲ್ಲಿ ಬಿದ್ದು ಜನ್ಮಜರಾಮರಣ ಮೊದಲಾದ ದುಃಖ ವನ್ನು ಅನುಭವಿಸುತ್ತಿರುವನು. ಕರ್ತೃತ್ವಾದಿಧರ್ಮಗಳು ಹಗ್ಗದಲ್ಲಿ ತೋರುವ ಸರ್ಪದ ಹಾಗೂ ಶುಕ್ತಿಯಲ್ಲಿ ತೋರುವ ರಜತದ ಹಾಗೂ ವಾಸ್ತವವಾಗಿ ಆತ್ಮನಲ್ಲಿ ಇಲ್ಲದೆ ತೋರುತ್ತವೆ. ಇಲ್ಲದೇ ಇರತಕ್ಕ ಸ್ಥಳದಲ್ಲಿ ಇದ್ದಹಾಗೆ ತೋರುವುದೇ ಅಧ್ಯಾಸ, ಆರೋಪ, ಕಲ್ಪನೆ, ಅನಿರ್ವಚನೀಯ ಎಂದು ವ್ಯವಹಾರ.

ಹಾಗಾದರೆ ಈ ಧರ್ಮಗಳು ವಸ್ತುತಃ ಎಲ್ಲಿಯವೆಂದು ವಿಚಾರಿಸಿದರೆ ಅಹಂಕರೋಮಿ, ಅಹಂ ಜಾನಾಮಿ, ಜೀರ್ಣಃ, ಕಾಣಃ—ಇವೇ ಮೊದ ಲಾದ ಅನುಭವಗಳಲ್ಲಿ ತೋರುವ ದೇಹೇಂದ್ರಿಯ ಸಂಘಾತರೂಪವಾದ ಅಹಂಪದಾರ್ಥವೂ ಚೈತನ್ಯಸ್ವರೂಪನಾದ ಆತ್ಮನೂ ಒಂದಾಗಿ ತೋರು ವುವು. ಸಂಘಾತದಲ್ಲಿ ಸೇರಿರುವ ಅಂತಃಕರಣದಲ್ಲಿ ಬುದ್ಧಿ ಸುಖದುಃಖೇ

ಚ್ಛಾದಿಗಳಿರುವುವು. ಜನ್ಮಜರಾಮರಣಾದಿಗಳು ದೇಹದಲ್ಲಿರುವುವು. ಕುರುಡು ತನ, ಕುಂಟುತನ ಮೊದಲಾದುವು ಇಂದ್ರಿಯಗಳಲ್ಲಿರುವುವು. ಇವುಗಳು, ಕಾದ ಕಬ್ಬಿಣದ ಗುಂಡೂ ಬೆಂಕಿಯೂ ಒಂದಾಗಿ ತೋರಿ ಬೆಂಕಿಯ ಸ್ವಭಾವಗಳು ಕಬ್ಬಿಣದಲ್ಲಿ ತೋರುವ ಹಾಗೆ, ಆತ್ಮನಲ್ಲಿ ತೋರುವುವು. ಆತ್ಮನಲ್ಲಿರುವ ಚೈತನ್ಯ, ವಿಷಯಾನುಭವ, ಆನಂದ ಮೊದಲಾದ ಧರ್ಮಗಳು ಅಂತಃ ಕರಣದಲ್ಲೂ ತೋರುವುವು. ಇದರಿಂದ ಅನಾದಿಯಾಗಿ ಲೋಕವ್ಯವಹಾರ ನಡೆಯುವುದು.

ನಿರ್ವಿಶೇಷನಾದ ಬ್ರಹ್ಮನೇ ಆತ್ಮನಾದರೆ ಅಂತಃಕರಣದಲ್ಲಿ ತೋರಿ ಬರುವ ಚೈತನ್ಯ, ಆನಂದ ಮೊದಲಾದ ಧರ್ಮಗಳು ಎಲ್ಲಿಯವು ಎಂದರೆ ಆತ್ಮಸ್ವರೂಪವೇ ಈ ಧರ್ಮಗಳು. ಆದರೂ ಸ್ವರೂಪಕ್ಕಿಂತಲೂ ಬೇರೆಯಾಗಿ, ವನದಲ್ಲಿ ವೃಕ್ಷಗಳು ತೋರುವ ಹಾಗೆ ಬೇರೆಯಾಗಿ ತೋರಿ, ಅಂತಃ ಕರಣದಲ್ಲಿ ತೋರಬಹುದು. ಇಂತಹ ಅಧ್ಯಾಸಕ್ಕೆ ಅನಾದಿಯಾಗಿಯೂ ಅಪರಮಾರ್ಥವಾಗಿಯೂ ವಿಚಿತ್ರ ಶಕ್ತಿಯುಳ್ಳದ್ದಾಗಿಯೂ ಇರುವ ಅಜ್ಞಾನ ಅವಿದ್ಯೆಯೆಂಬ ಪರಬ್ರಹ್ಮನ ಶಕ್ತಿಯೇ ಕಾರಣ. ಈ ಅವಿದ್ಯೆಗೆ ಆವರಣ ಶಕ್ತಿ, ವಿಕ್ಷೇಪಶಕ್ತಿ ಎಂದೆರಡು ಸ್ವಭಾವಗಳು ಇರುವುವು. ಆವರಣಶಕ್ತಿಯಿಂದ ವಸ್ತುಸ್ವರೂಪವು ಮುಚ್ಚಲ್ಪಡುವುದು. ವಿಕ್ಷೇಪಶಕ್ತಿಯಿಂದ ವಸ್ತು ವಿಚಿತ್ರವಾಗಿ ಕಾಣುವುದು. ಇದಕ್ಕೇ ಭೇದದರ್ಶನವೆಂದು ಹೆಸರು. ಆ ಭೇದಗಳು ಸಾಮಾನ್ಯವಾಗಿ ಜ್ಞಾತಾ, ಜ್ಞಾನ, ಜ್ಞಾನಸಾಧನ, ಜ್ಞೇಯ— ಎಂದು ನಾಲ್ಕು ಪ್ರಕಾರವಾಗಿರುವುವು. ಪ್ರಪಂಚವೆಲ್ಲವೂ ನಾಲ್ಕು ರಾಶಿಯಲ್ಲೇ ಅಡಗಿರುವುದು.

### ಸಂಸಾರದುಃಖ

ಇಂತಹ ಪ್ರಪಂಚವು ಸಾಮಾನ್ಯಜನರಿಗೆ ಸುಖವಾಗಿ ತೋರಿದರೂ ವಿಚಾರಪರರಿಗೆ ದುಃಖಮೂಲ,ದುಃಖಮಿಶ್ರ, ದುಃಖಫಲವೆಂದು ಸ್ಪಷ್ಟವಾಗಿ ತಿಳಿದುಬರುವುದು. ಲೋಕದಲ್ಲಿ ಯಾವ ವಸ್ತುವೂ ಸ್ವಭಾವವಾಗಿ ಸುಖ ಕರವೆಂದು ಹೇಳಲಾಗದು. ಹಾಗಾದರೆ ಎಲ್ಲರಿಗೂ ಒಂದೇ ರೀತಿಯಲ್ಲಿರಬೇಕು. ಕಾಲಭೇದದಿಂದಲೂ ದೇಶಭೇದದಿಂದಲೂ ಪ್ರಾಣಿಭೇದದಿಂದಲೂ

ಅಭ್ಯಾಸ ಭೇದದಿಂದಲೂ ಸುಖದುಃಖವ್ಯವಸ್ಥೆ ಅವ್ಯವಸ್ಥಿತವಾಗಿಯೇ ಇರುವುದು. ಆದುದರಿಂದ ಆಯಾ ಪ್ರಾಣಿಗಳ ಮನೋಭಾವಕ್ಕಿಂತಲೂ ಯಾವ ವ್ಯವಸ್ಥೆಯನ್ನು ಯಾರೂ ಹೇಳಲಾರರು. ಸರ್ವರೂ ಸರ್ವದಾ ಸರ್ವವನ್ನು ಸುಖವಾಗಿ ಭಾವಿಸಿ ಹೊಂದಲಸಾಧ್ಯ. ಸರ್ವರೂ ಸರ್ವವನ್ನು ದುಃಖವೆಂದು ಭಾವಿಸಿ ಕ್ರಮಕ್ರಮವಾಗಿ ಸರ್ವವನ್ನು ಪರಿತ್ಯಾಗಮಾಡಲು ಸಾಧ್ಯ. ಪರಿತ್ಯಾಗಪಕ್ಷದಲ್ಲಿ ಕೇವಲ ದುಃಖಮಯವಾದ ಪ್ರಪಂಚವೆಂಬ ಸಂಸಾರವು ಆತ್ಯಂತಿಕನಿವೃತ್ತಿಯಾಗಬೇಕಾದರೆ ಮೂಲಕಾರಣವಾದ ಅಜ್ಞಾನನಿವೃತ್ತಿಯಾಗಬೇಕು. ಅದು ಭ್ರಾಂತಿ ಎಂಬ ಅವಿದ್ಯಾರೂಪವಾದುದರಿಂದ ವಿದ್ಯೆ ಎಂಬ ಪರಿಶುದ್ಧಜ್ಞಾನವು ಸಿದ್ಧಿಸಬೇಕು. ಆ ಪರಿಶುದ್ಧಜ್ಞಾನವೇ ನಿರ್ವಿಶೇಷಪರಬ್ರಹ್ಮಸಾಕ್ಷಾತ್ಕಾರ. ಜೀವಬ್ರಹ್ಮೈಕ್ಯಸಾಕ್ಷಾತ್ಕಾರ. ಇದು ತತ್ತ್ವಮಸಿ ಮೊದಲಾದ ಮಹಾವಾಕ್ಯದಿಂದ ಹುಟ್ಟತಕ್ಕ ಶಾಬ್ದಬೋಧವೆಂಬ ವಾಕ್ಯಾರ್ಥಜ್ಞಾನ. ಪರಿಶುದ್ಧವಾದ ಅಂತಃಕರಣವುಳ್ಳವರಿಗೆ ಈ ಜ್ಞಾನ ಹುಟ್ಟುವುದು. ಇಂತಹ ಬ್ರಹ್ಮಸಾಕ್ಷಾತ್ಕಾರವುಳ್ಳವರೇ ಜೀವನ್ಮುಕ್ತರು.

### ಸಂಪ್ರದಾಯಸಮ್ಮತಿ

ಇಂತಹ ಅವಿದ್ಯಾನಿವೃತ್ತಿವಿಷಯದಲ್ಲಿ ದ್ರವಿಡಭಾಷ್ಯಕಾರರಿಂದ ಹೇಳಲ್ಪಟ್ಟ ಕಥೆಯನ್ನು ಸಂಪ್ರದಾಯಜ್ಞರು ಹೀಗೆ ಹೇಳುತ್ತಾರೆಂದು ಬೃಹದಾರಣ್ಯಕೋಪನಿಷದ್ಭಾಷ್ಯದಲ್ಲಿ (೪-೧-೨೦) ಆಚಾರ್ಯರು ಹೀಗೆ ಬರೆಯುತ್ತಾರೆ—

''ಒಬ್ಬ ರಾಜಕುಮಾರನು ಹುಟ್ಟಿದ ಕಾಲದಲ್ಲಿಯೇ, ಮಾತಾಪಿತೃಗಳಿಂದ ಯಾವುದೋ ಒಂದು ಕಾರಣವಿಶೇಷದಿಂದ ಅರಣ್ಯದಲ್ಲಿ ಬಿಟ್ಟು ಬಿಡಲ್ಪಟ್ಟು, ವ್ಯಾಧನ ಮನೆಯಲ್ಲಿ ವೃದ್ಧಿ ಹೊಂದಿದವನಾಗಿ, ತಾನು ರಾಜವಂಶದಲ್ಲಿ ಹುಟ್ಟಿದವನೆಂದು ತಿಳಿಯದೆ ಬೇಡರಜಾತಿಯವನೆಂದು ತಿಳಿದು, ಆ ಜಾತಿಯ ಕೆಲಸಗಳನ್ನೇ ಮಾಡುತ್ತಾ ಇರುತ್ತಾನೆ. ಅನಂತರ ಕದಾಚಿತ್ ಪರಮಕಾರುಣಿಕನಾದ ಒಬ್ಬ ಮಹಾತ್ಮನು ಇವನ ಲಕ್ಷಣಗಳನ್ನು ನೋಡಿ ''ನೀನು ಬೇಡರ ಜಾತಿಯವನ ಮಗನಲ್ಲ, ರಾಜ್ಯಲಕ್ಷ್ಮಿಗೆ

ಯೋಗ್ಯನಾದ ರಾಜಕುಮಾರನು ; ಯಾವುದೋ ಕಾರಣವಿಶೇಷದಿಂದ ಬೇಡರವನ ಕೈಗೆ ಸಿಕ್ಕಿ ಅವನ ಮನೆಯಲ್ಲಿ ಬೆಳೆದಿರುತ್ತೀಯೆ'' ಎಂದು ಉಪದೇಶಮಾಡುವನು. ಅನಂತರ ಈ ರಾಜಕುಮಾರನು ಬೇಡರ ಜಾತಿಯವನೆಂಬ ಭ್ರಾಂತಿಯನ್ನೂ ಆ ಜಾತಿಯ ಕೆಲಸಗಳನ್ನೂ ತಕ್ಷಣ ಬಿಟ್ಟು ತಾನು ರಾಜಕುಮಾರನೆಂದು ತಿಳಿದು ವಂಶಪಾರಂಪರ್ಯವಾಗಿ ಬಂದಿರತಕ್ಕ ರಾಜ್ಯಲಕ್ಷ್ಮಿಯನ್ನು ಅನುಭವಿಸುವನು. ಇದೇ ನಿದರ್ಶನದಲ್ಲಿ ತತ್ತ್ವಮಸಿ ಎಂಬ ಉಪದೇಶ ಇರುವುದೆಂದು ಸಿದ್ಧಾಂತ.

## ಜೀವನ್ಮುಕ್ತರು

ಮತ್ತು ಈ ಪರಬ್ರಹ್ಮಸಾಕ್ಷಾತ್ಕಾರವುಳ್ಳ ಜೀವನ್ಮುಕ್ತರೆಂಬುವರು ಶ್ರೀ ಶಂಕರಾಚಾರ್ಯರ ಸಿದ್ಧಾಂತದಲ್ಲಿ ಅಂಗೀಕರಿಸಲ್ಪಟ್ಟಿರುವರು. ಅವರು "ಅವಿಚ್ಛಿನ್ನವಾಗಿ ಗುರುಶಿಷ್ಯಪರಂಪರೆಯೆಂಬ ಶಾಸ್ತ್ರಪ್ರಾಪ್ತಿ" ಎಂಬ ಸಂಪ್ರದಾಯಕ್ಕೆ ಪ್ರವರ್ತಕರಾಗಿರುವರು. ಅಂತಹವರು ಇಲ್ಲದ ಪಕ್ಷದಲ್ಲಿ ಅದ್ವೈತ ಸಿದ್ಧಾಂತಸಂಪ್ರದಾಯಪರಂಪರೆ ಹೇಗೆ ಎಂಬ ಆಕ್ಷೇಪ ಬರಬಹುದು. ಇಂತಹ ಸಂಪ್ರದಾಯ ಕೆಲವುಕಡೆ ವಿಚ್ಛಿನ್ನವಾಗಿ ವಿಲಕ್ಷಣ ಸಿದ್ಧಾಂತಗಳು ಉದಯಿಸಿರುವುವು ಎಂದು ಉಪನಿಷದ್ಭಾಷ್ಯದಲ್ಲಿ ಬರೆಯುತ್ತಾರೆ. ಬ್ರಹ್ಮಸೂತ್ರಭಾಷ್ಯದಲ್ಲೂ ಸಂಪ್ರದಾಯವನ್ನು ತಿಳಿದವರ ವಾಕ್ಯವೆಂದು ಗೌಡಪಾದಾಚಾರ್ಯರ ಮಾಂಡೂಕ್ಯೋಪನಿಷತ್ಕಾರಿಕೆಗಳನ್ನು ಉದಹರಿಸಿರುತ್ತಾರೆ.

ಇಂತಹ ಜೀವನ್ಮುಕ್ತರು ಉಚ್ಛೃಂಖಲವೃತ್ತಿಯಲ್ಲಿ ಯಥೇಷ್ಟಾಚಾರವನ್ನು ಮಾಡಲಾರರು, ಮಾಡಲೂಬಾರದು ಎಂದು ಸುರೇಶ್ವರಾಚಾರ್ಯರು 'ನೈಷ್ಕರ್ಮ್ಯಸಿದ್ಧಿ'ಯಲ್ಲಿ ಈ ಶ್ಲೋಕವನ್ನು ಬರೆದಿರುವರು—

ಬುದ್ಧಾದ್ವೈತಸತತ್ತ್ವಸ್ಯ ಯಥೇಷ್ಟಾಚರಣಂ ಯದಿ
ಶುನಾಂ ತತ್ತ್ವದೃಶಾಂ ಚೈವ ಕೋ ಭೇದೋಽಶುಚಿಭಕ್ಷಣೇ ॥

ವಿಶುದ್ಧಾದ್ವೈತಸಿದ್ಧಾಂತ ತತ್ತ್ವವನ್ನು ಸಾಕ್ಷಾತ್ಕಾರ ಮಾಡಿದವರು ಸ್ವೇಚ್ಛಾಚಾರದಲ್ಲಿರುವವರಾದರೆ ಇಂತಹ ತತ್ತ್ವಜ್ಞರಿಗೂ ಶುನಕಗಳಿಗೂ ಭೇದವೇನಿರುವುದೆಂದರ್ಥ.

ಇದರಿಂದ ಅದ್ವೈತಸಾಕ್ಷಾತ್ಕಾರ ಬಂದವರು, ಅತ್ಯಾಶ್ರಮಿಗಳು, ಅವಧೂತರು, ವಿಧಿನಿಷೇಧಶಾಸ್ತ್ರನಿರ್ಬಂಧವಿಲ್ಲದವರು, ಸ್ವೇಚ್ಛೆಯಾಗಿರ ಬಹುದೆಂಬ ಅಲೇಪಕಮತವೆಂಬ ಪ್ರಾಚೀನದುರಾಚಾರಮತವು ನಿರಾಕರಿಸ ಲ್ಪಡುವುದು.

ಇಂತಹ ಬ್ರಹ್ಮಸಾಕ್ಷಾತ್ಕಾರವುಳ್ಳ ಜೀವನ್ಮುಕ್ತರಿಗೆ ಭಿಕ್ಷಾಟನಾದಿ ದೇಹಧಾರಣವ್ಯಾಪಾರದಲ್ಲಿ ಕರ್ತೃತ್ವವೂ ಭೋಕ್ತೃತ್ವವೂ ಹೇಗೆಂದು ಸಾಮಾನ್ಯ ಜನರಿಗೆ ಆಶಂಕೆ ಬರುವುದು. ಇದಕ್ಕೆ ಆಚಾರ್ಯರ ಭಗವ ದ್ಗೀತಾಭಾಷ್ಯ ಸಮಾಧಾನವು ಹೀಗಿರುವುದು—"ಸಾಮಾನ್ಯಜನರ ಅಭಿ ಪ್ರಾಯದಲ್ಲಿ ಕರ್ತೃತ್ವಾದ್ಯಭಿಮಾನವುಳ್ಳವರೆಂದು ತೋರಿಬಂದರೂ ಅವರ ಅಭಿಪ್ರಾಯದಲ್ಲಿ ಕರ್ತೃತ್ವಾದಿ ಧರ್ಮಗಳು ಆತ್ಮನಿಗೆ ಸಂಬಂಧಪಟ್ಟವು ಗಳಲ್ಲ, ಅಂತಃಕರಣಕ್ಕೆ ಸೇರಿದುವೆಂದು ನಿಶ್ಚಯವಿರುವುದರಿಂದ ಅವಿದ್ಯಾ ಲೇಶಸಂಬಂಧವೆಂಬ ಸಂಸ್ಕಾರಮಹಿಮೆಯಿಂದ ಭಿಕ್ಷಾಟನಾದಿ ವ್ಯಾಪಾರ ಗಳು ನಡೆದರೂ ಅಭಿಮಾನಮೂಲಕವಲ್ಲ, ಬಂಧಕಗಳಲ್ಲ, ಒಬ್ಬನ ಅಭಿ ಪ್ರಾಯ ಮತ್ತೊಬ್ಬನಿಗೆ ಪ್ರತ್ಯಕ್ಷವಲ್ಲ. ತನ್ನ ಅಭಿಪ್ರಾಯದಂತೆ ಮತ್ತೊಬ್ಬ ನನ್ನು ತಿಳಿಯುವುದು ಯುಕ್ತವಲ್ಲವೆಂದು ಹೇಳಿರುವರು.

## ಶಾಸ್ತ್ರಪ್ರಮಾಣ

'ಅಹಂ.' ನಾನು ಎಂಬ ಸರ್ವಜನಪ್ರಸಿದ್ಧವಾದ ಅನುಭವಕ್ಕೆ ಆತ್ಮನೇ ಗೋಚರನೆಂದು ತಾರ್ಕಿಕ ಮೊದಲಾದವರು ಹೇಳುವರು. ಸಾಂಖ್ಯರು ಮೊದಲಾದವರು, ಬುದ್ಧಿಯೆಂಬ ಅಂತಃಕರಣವು ಗೋಚರ ವೆಂದು ತಿಳಿಯುವರು. ಈ ಸಿದ್ಧಾಂತದಲ್ಲಿ ಆತ್ಮನೂ ಅಂತಃಕರಣವೂ ಬೆರೆತುಕೊಂಡು 'ಅಹಂ ಸುಖೀ' ಇತ್ಯಾದಿ ವ್ಯವಹಾರಕ್ಕೆ ಗೋಚರವಾಗಿ ರುವುವು. ಅಹಂ ಪದಕ್ಕೆ ಮುಖ್ಯವಾಗಿ ಅಂತಃಕರಣವೆಂಬ ಮನಸ್ಸೇ ಗೋಚರವು. ಅದರ ಜೊತೆಯಲ್ಲಿ ಮಿಶ್ರನಾಗಿ ಆತ್ಮನು ಸದಾ ಪ್ರಕಾಶಿಸು ತ್ತಿದ್ದರೂ ಮಿಶ್ರವಿಲ್ಲದ ಪರಿಶುದ್ಧಜೀವಾತ್ಮಸ್ವರೂಪವನ್ನೂ ಅವನಿಗೆ ಪರ ಮಾತ್ಮೈಕ್ಯವನ್ನೂ ತಿಳಿಯುವುದಕ್ಕಾಗಿ ಶಾಸ್ತ್ರಶೋಧನೆ ಆವಶ್ಯಕ.

ಶಾಸ್ತ್ರದಿಂದಲೇ ಪರಮಾತ್ಮಸ್ವರೂಪವನ್ನು ತಿಳಿಯಬೇಕೆಂದು ಕೆಲವು

ಶಾಸ್ತ್ರಗಳು ಹೇಳುವುವು. ಶಾಸ್ತ್ರಗಳಿಗೆ ಅವನು ಗೋಚರನೇ ಅಲ್ಲವೆಂದು ಕೆಲವು ಶಾಸ್ತ್ರಗಳಿರುವುವು. ವಿರೋಧಪರಿಹಾರ ಹೇಗೆಂದರೆ—ಶಾಸ್ತ್ರವೇ ಮೊದಲಾದ ಪ್ರಮಾಣಗಳಿಂದುಂಟಾಗುವ ಜ್ಞಾನವೆಂಬ ಅಂತಃಕರಣ ವ್ಯಾಪಾರಕ್ಕೆ ಆವರಣಭಂಗ, ವಿಷಯಸ್ಫುರಣವೆಂದು ಎರಡುವಿಧ ಫಲವು. ಶಾಸ್ತ್ರದಿಂದಲೇ ತಿಳಿಯಬೇಕೆಂಬ ವಾದವು ಸೂರ್ಯನಿಗೆ ಮೋಡದಂತಿರುವ ಅಜ್ಞಾನವೆಂಬ ಆವರಣ ಭಂಗವಿಷಯವು. ಪರಮಾತ್ಮವಸ್ತು ಸ್ವಯಂ ಪ್ರಕಾಶವಾಗಿ ತೇಜೋಮಯವಾಗಿರುವುದರಿಂದ ಈ ವೃತ್ತಿಯಿಂದ ಅದರ ಸ್ಫುರಣವು ಆಗಬೇಕಾಗಿಲ್ಲ. ಸದಾ ಪ್ರಕಾಶಿಸುತ್ತದೆ. ತೆರೆಯೊಳಗಿರುವ ದೀಪದ ಪ್ರಕಾಶ ತೆರೆಯನ್ನು ತೆಗೆಯುವುದರಿಂದ ಹುಟ್ಟುವುದಿಲ್ಲ. ಇದರಿಂದ ಶಾಸ್ತ್ರಾದಿಪ್ರಮಾಣಗಳಿಗೆ ಗೋಚರವಲ್ಲವೆಂಬ ವಾದವು. ಆದುದರಿಂದ ವಿರೋಧವಿಲ್ಲವೆಂದು ತಿಳಿಯಬೇಕು.

ಈ ಶಾಸ್ತ್ರಪ್ರಮಾಣ ವಿಷಯದಲ್ಲಿ ಮತ್ತೊಂದು ವಿಷಯವನ್ನು ಅವಶ್ಯ ತಿಳಿಯಬೇಕು. ಇಂದ್ರಿಯಗಳ ಮೂಲಕ ಬರುವ ಜ್ಞಾನ ಪ್ರತ್ಯಕ್ಷ; ಉಳಿದ ಅನುಮಾನ ಮೊದಲಾದುವುಗಳಿಂದ ಬರುವ ಜ್ಞಾನ ಪರೋಕ್ಷ. ಹೀಗೆ ಪ್ರಾಯಶಃ ವ್ಯವಸ್ಥೆಯಿದ್ದರೂ ಕೆಲವು ವಿಷಯಗಳಲ್ಲಿ ವಾಕ್ಯದಿಂದಲೂ ಪ್ರತ್ಯಕ್ಷಜ್ಞಾನ ಬರುವುದುಂಟು. "ದಶಮಸ್ತ್ವಮಸಿ" ಎಂಬ ವಾಕ್ಯ ಉದಾಹರಣೆ. ಹತ್ತು ಸಾಮಾನ್ಯ ಜನರು ಒಂದೂರಿನಿಂದ ಮತ್ತೊಂದೂರಿಗೆ ಹೋಗುತ್ತಿದ್ದರು. ಮಧ್ಯೆ ದಾರಿಯಲ್ಲಿ ನದೀಪ್ರವಾಹವನ್ನು ದಾಟಿದರು. ಎಲ್ಲರೂ ಬಂದು ಸೇರಿದರೇ ಎಂದು ಲೆಕ್ಕಮಾಡುವಾಗ ಒಬ್ಬನು ತನ್ನನ್ನು ಬಿಟ್ಟು ಒಂಬತ್ತು ಜನರನ್ನು ಎಣಿಸಿ ಹತ್ತನೆಯವನು ನದಿಯ ಪಾಲಾದನೆಂದು ಅತ್ತನು. ಹೀಗೆ ಎಲ್ಲರೂ ತಂತಮ್ಮನ್ನು ಬಿಟ್ಟೇ ಲೆಕ್ಕ ಮಾಡಿ ಅಳುತ್ತಿದ್ದರು. ಎದುರಾಗಿ ಬರುತ್ತಿದ್ದ ಮನುಷ್ಯನು ವಿಚಾರಿಸಿ, ಮೂಢರೆಂದು ತಿಳಿದು ಲೆಕ್ಕಮಾಡೆಂದು ಹೇಳಿ ಒಂಬತ್ತಾದಮೇಲೆ "ದಶಮಸ್ತ್ವಮಸಿ" ನೀನು ಹತ್ತನೆಯವನು ಎಂದು ಹೇಳಿದನು. ಅವರು ಸಂತೋಷದಿಂದ ಮುಂದಕ್ಕೆ ಹೋದರು. ಇಲ್ಲಿ ಈ ವಾಕ್ಯದಿಂದ ತಾನು ಹತ್ತನೆಯವನೆಂದು ತಿಳಿದುಕೊಂಡನು. ತನ್ನನ್ನು ತಾನು ಕಣ್ಣಿಂದ ನೋಡುತ್ತಿದ್ದರೂ ಮೊದಲು ಈ ಜ್ಞಾನ ಬರಲಿಲ್ಲ. ವಾಕ್ಯವನ್ನು ಕೇಳಿದ ಮೇಲೆ

ಬಂತು. ಆದುದರಿಂದ ಈ ಜ್ಞಾನ ತನ್ನ ವಿಷಯದಲ್ಲಿ ವಾಕ್ಯದಿಂದ ಬಂದರೂ, ತಾನು ಪ್ರತ್ಯಕ್ಷವಾಗಿರುವುದರಿಂದ ಈ ಜ್ಞಾನ ಪರೋಕ್ಷಜ್ಞಾನ ವಲ್ಲ, ಪ್ರತ್ಯಕ್ಷಜ್ಞಾನವೆಂದು ಸಿದ್ಧಾಂತ. ಈ ವಿಚಾರಕ್ಕೆ ಮೂಲ ಹೀಗಿರು ವುದು. ಭೇದಭ್ರಮವು ಪ್ರತ್ಯಕ್ಷವಾಗಿರುವುದರಿಂದ ಪ್ರಬಲ. ಶಾಸ್ತ್ರದಿಂದ ಬರುವ ಜ್ಞಾನ ಪರೋಕ್ಷ, ದುರ್ಬಲ. ಇದರಿಂದ ಪ್ರತ್ಯಕ್ಷಕ್ಕೆ ಬಾಧೆ ಹೇಗೆಂದು ಶಂಕೆ ಬಂದರೆ ಇದೂ ಪ್ರತ್ಯಕ್ಷ. ಪ್ರಬಲ, ದುರ್ಬಲವಲ್ಲವೆಂದು ಸಮಾಧಾನದಲ್ಲಿ ತಾತ್ಪರ್ಯ.

ಈ ಸಿದ್ಧಾಂತದಿಂದ "ತತ್ತ್ವಮಸಿ" ಎಂಬ ಮಹಾವಾಕ್ಯವನ್ನು ಕೇಳಿದ ಮೇಲೆ ಚಿತ್ತಶುದ್ಧಿಯುಳ್ಳವನಿಗೆ 'ಅಹಂ ಬ್ರಹ್ಮಾಸ್ಮಿ' ಎಂದು ಅಪ ರೋಕ್ಷಜ್ಞಾನ ಬರುವುದು. ಇದೇ ಬ್ರಹ್ಮಾದ್ವೈತ ಸಾಕ್ಷಾತ್ಕಾರ. ಇದ ರಿಂದ ಅಜ್ಞಾನವೂ ಭೇದಭ್ರಾಂತಿಯೂ ಅದರ ಮೂಲಕವಾದ ಸಂಸಾರ ದುಃಖವೂ ನಿವೃತ್ತಿಯಾಗುವುವೆಂದೊಂದು ಸಂಪ್ರದಾಯ. ಶ್ರವಣಮನನಾ ದಿಗಳಿಂದ ಪರಿಶುದ್ಧವಾದ ಅಂತಃಕರಣವೆಂಬ ಮನಸ್ಸಿನಿಂದಲೇ ಅವಿದ್ಯಾ ನಿವೃತ್ತಿಯೆಂಬ ಮೋಕ್ಷಕ್ಕೆ ಸಾಧನವಾದ ನಿಷ್ಪ್ರಪಂಚ ಬ್ರಹ್ಮ ಸಾಕ್ಷಾತ್ಕಾರವು ಹುಟ್ಟುವುದೆಂದು ಮತ್ತೊಂದು ಸಂಪ್ರದಾಯ.

ತತ್ತ್ವಮಸಿ ವಾಕ್ಯದಿಂದ ಬರುವ ಬ್ರಹ್ಮ ಸಾಕ್ಷಾತ್ಕಾರಜ್ಞಾನವೇ ಅವಿದ್ಯಾ ನಿವರ್ತಕವೆಂಬ ಸಂಪ್ರದಾಯಕ್ಕೆ ಒಂದು ನಿದರ್ಶನವಾಗಿ ತೋರು ವುದು — ಪ್ರಾಭಾಕರ ಮೀಮಾಂಸಕ ಸಿದ್ಧಾಂತ ಪ್ರಕಾರ ಯಾಗಾದಿ ವಿಷಯ ದಲ್ಲಿ ಪ್ರವೃತ್ತಿಯನ್ನುಂಟುಮಾಡುವ ಕರ್ತವ್ಯತಾಜ್ಞಾನವು ವೇದದಲ್ಲಿರುವ ಲಿಙ್ ಲೋಟ್ ತವ್ಯಪ್ರತ್ಯಯಗಳೆಂಬ ವಿಧಿಪ್ರತ್ಯಯದಿಂದಲೇ ಹುಟ್ಟಬೇಕು. ಆ ಪ್ರತ್ಯಯಗಳ ಅರ್ಥವು ನಿಯೋಗವು ಎಂದರೆ ವೇದವೆಂಬ ಮಹಾರಾಜನ ಆಜ್ಞೆ. ಅದು ಯಾವನ ವಿಷಯದಲ್ಲಿ ಹೊರಡುವುದೋ ಅವನಿಗೆ ಆಜ್ಞೆ ಸನ್ನಿಂದ ಮಾಡಲ್ಪಡಬೇಕು, ನನಗೆ ಅದು ಕರ್ತವ್ಯ ಎಂದು ನಿಯೋಗದಲ್ಲಿ ಕರ್ತವ್ಯತಾಜ್ಞಾನ ಬರುವುದು, ಪ್ರವರ್ತಿಸುತ್ತಾನೆಂದು ನಿರ್ಣಯವು. ಅದೇ ನಿಯೋಗ. ನಿನಗೆ ಕರ್ತವ್ಯವು, ನಿನಗೆ ನಿಯೋಗವು ಮೊದಲಾದ ಶಬ್ದ ಗಳಿಂದ ಬರುವ ಜ್ಞಾನಕ್ಕೆ ವಿಷಯವಾದರೂ ಪ್ರವರ್ತಕತ್ವವಿಲ್ಲವೆಂದು ಹೇಳುತ್ತಾರೆ. ನಿಯೋಗ ಮೊದಲಾದ ಶಬ್ದಗಳು ವ್ಯವಹಾರಕ್ಕೆ ಹೊರತು ಈ ಪದಗಳಿಂದ ಬರುವ ಜ್ಞಾನವು ಪ್ರವರ್ತಕವಲ್ಲವೆಂದು ಸಿದ್ಧಾಂತ.

ಈ ಪ್ರಕಾರ ಒಂದು ನಿಯಮವಿದ್ದರೆ ನೀನೇ ಬ್ರಹ್ಮನೆಂದು ಇತರ ನೂರು ಭಾಷಾವಾಕ್ಯಗಳಿಂದಾಗಲಿ ಲೌಕಿಕಸಂಸ್ಕೃತವಾಕ್ಯಗಳಿಂದಾಗಲಿ ಮಾನಸಾದಿ ಕರಣಗಳಿಂದಾಗಲಿ ಭಾವನಾಬಲದಿಂದಾಗಲಿ ಬರುವ ಜ್ಞಾನಕ್ಕೆ ಅವಿದ್ಯಾನಿವರ್ತಕತ್ವವಿಲ್ಲ. ವೇದವಾಕ್ಯದಲ್ಲಿರುವ ತತ್ತ್ವಮಸಿವಾಕ್ಯ ಶ್ರವಣದಿಂದ ಬರುವ 'ಅಹಂ ಬ್ರಹ್ಮಾಸ್ಮಿ' ಎಂಬ ಸಾಕ್ಷಾತ್ಕಾರವೇ ನಿವರ್ತಕ ವೆಂದು ಸಂಪ್ರದಾಯ ಬಂದಿರಬಹುದೆಂದು ತೋರುತ್ತದೆ. ಆದುದರಿಂದ ವೇದಾಧಿಕಾರ ಮತ್ತು ಉಪನಿಷದಧಿಕಾರವುಳ್ಳವರಿಗೇಯೇ ಮೋಕ್ಷವೆಂಬ ನಿರ್ಣಯ ಸಮಂಜಸವಾಗುವುದು.

## ಸಾಧನಚತುಷ್ಟಯ

ಸುಖಾನುಭವವೇ ಮುಖ್ಯವಾದ ಪ್ರಯೋಜನ. ಸುಖವೇ ಆನಂದ. ಅದು ಪರಿಮಿತ, ಅಪರಿಮಿತವೆಂದು ಲೋಕಾನುಭವದಿಂದಲೂ ಶಾಸ್ತ್ರಾನು ಭವದಿಂದಲೂ ತಿಳಿದುಬರುವುದು. ಪರಬ್ರಹ್ಮನೆಂಬ ಆತ್ಮವಸ್ತು ಅಪರಿ ಮಿತ ನಿರತಿಶಯ ಸುಖರೂಪನು. ತನಗೆ ಅನುಕೂಲವಾಗಿರುವುದೆಲ್ಲವೂ ಸುಖವಾದರೆ ತನಗೆ ತಾನು ಅನುಕೂಲನೆಂಬುದಕ್ಕೆ ಸರ್ವಲೋಕಾನು ಭವವೇ ಸಾಕ್ಷಿ. ಆದುದರಿಂದಲೇ, ಶರೀರವನ್ನು ತಾನೆಂದು ಭ್ರಮಿಸಿರುವು ದರಿಂದ ಶರೀರ ಎಂತಹ ದುರವಸ್ಥೆಯಲ್ಲಿದ್ದರೂ ಅದರಲ್ಲಿ ನಿರತಿಶಯಾಭಿ ಮಾನ. ಆತ್ಮಾನಂದರೂಪವಾದ ಬ್ರಹ್ಮಾನುಭವವೇ ಪರಮಸುಖ. ಅಂತಹ ಸುಖಪ್ರಾಪ್ತಿಯೇ ಮೋಕ್ಷ, ಮುಖ್ಯಪ್ರಯೋಜನ ಎಂದು ಶಾಸ್ತ್ರ ನಿರ್ಣಯ. ಶಬ್ದಾದಿವಿಷಯ ಸಂಬಂಧದಿಂದ ಅವರವರ ಮನೋವೃತ್ತಿ ತಾರತಮ್ಯಾನುಗುಣವಾಗಿ ಅನುಭವಿಸಲ್ಪಡುವ ಸುಖವು ಪರಬ್ರಹ್ಮಾನಂದ ಸಮುದ್ರ ಜಲ ಲವಲೇಶವೆಂದು ತಿಳಿಯಬೇಕು. ಬ್ರಹ್ಮನೇ ಆನಂದರೂಪ ನಾಗಿಯೂ ಅನುಭವರೂಪನಾಗಿಯೂ ಇರುವುದರಿಂದ ಆನಂದಾನುಭವವೇ ಬ್ರಹ್ಮಸ್ವರೂಪ. ಆನಂದಾನುಭವರೂಪವಾದ ಮೋಕ್ಷವನ್ನು ಸರ್ವೇಷ್ಟ ಪ್ರಾಪ್ತಿಯೆಂದೂ ಸರ್ವಾನಿಷ್ಟನಿವೃತ್ತಿಯೆಂದೂ ತಿಳಿಯಬಹುದು. ಅನಿಷ್ಟ ನಿವೃತ್ತಿಯೆಂಬುದು ಸಕಲ ಪ್ರಪಂಚಮೂಲಕಾರಣವಾದ ಅಜ್ಞಾನವೆಂಬ ಅವಿದ್ಯಾನಿವೃತ್ತಿ. ಅವಿದ್ಯೆ ಪ್ರತಿ ಜೀವರಲ್ಲಿಯೂ ಬೇರೆಬೇರೆಯಾಗಿಯೂ

ಅನಾದಿಕಾಲದಿಂದ ಇದ್ದುಕೊಂಡು ಅವರವರ ಸಂಸಾರಕಾರಣವಾಗಿರುವುವು. ಅವರವರ ಬ್ರಹ್ಮಾತ್ಮ ಸಾಕ್ಷಾತ್ಕಾರವೆಂಬ ವಿದ್ಯೆಯಿಂದ ನಿವೃತ್ತಿಯಾಗತಕ್ಕುವು. ಆದುದರಿಂದ ಬ್ರಹ್ಮನಿಗಲ್ಲವೆ ಅವಿದ್ಯೆ, ನಮ್ಮ ಅವಿದ್ಯೆಯಿಂದ ಏನು ಪ್ರಯೋಜನವೆಂದು ಶಂಕಿಸಬಾರದು.

**ಪ್ರಯತ್ನ**

ಇಂತಹ ಅವಿದ್ಯಾನಿವೃತ್ತಿರೂಪವಾಗಿಯೂ, ನಿರತಿಶಯಾನಂದಾನುಭವರೂಪವಾಗಿಯೂ ಇರುವ ಮೋಕ್ಷವು ಪರಿಶುದ್ಧಪರಮಾತ್ಮನಾದ ಜೀವಾತ್ಮನಿಗೆ ನಿತ್ಯವಾಗಿ ಸರ್ವದಾ ಪ್ರಾಪ್ತವಾಗಿದ್ದರೂ, ಅಪ್ರಾಪ್ತವೆಂದು ಭ್ರಾಂತಿಯಿಂದ ಅದಕ್ಕೆ ಸಾಧನವಾದ ಶ್ರವಣ ಮನನ ಧ್ಯಾನಾದಿಗಳಲ್ಲಿ ಪ್ರಯತ್ನವು ಬರಬಹುದು. ಲೋಕದಲ್ಲೂ ಒಬ್ಬನು ಒಂದು ಸುವರ್ಣಾಭರಣವನ್ನು ಸೊಂಟದಲ್ಲಿಟ್ಟುಕೊಂಡು ಎಲ್ಲೋ ಹೋಯಿತೆಂದು ಭ್ರಾಂತಿಯಿಂದ ದುಃಖಪಡುತ್ತಾ ಆಪ್ತವಾಕ್ಯದಿಂದ ಭ್ರಾಂತಿ ಹೋಗಿ ಇದ್ದುದನ್ನೇ ಹೊಸದಾಗಿ ಸಿಕ್ಕಿತೆಂದು ತಿಳಿದು ಸಂತೋಷಪಡುವನು. ಹೀಗೆ ಅನಿಷ್ಟವು ವಾಸ್ತವವಾಗಿ ಇಲ್ಲದಿದ್ದರೂ ಇದೆಯೆಂಬ ಭ್ರಾಂತಿಯಿಂದ ಅದರ ನಿವೃತ್ತಿಯಲ್ಲಿ ಮತ್ತೊಂದು ನಿದರ್ಶನ—ಕತ್ತಲೆಯಲ್ಲಿ ಹೋಗುತ್ತಿರುವ ಒಬ್ಬ ಮನುಷ್ಯನು ತನ್ನ ಕಾಲಿಗೆ ಸುತ್ತಿಕೊಂಡ ಬಳ್ಳಿಯನ್ನು ಸರ್ಪವೆಂದು ತಿಳಿದು ಭಯಪಟ್ಟು ಆಪ್ತವಾಕ್ಯ, ದೀಪ ಮೊದಲಾದ ಸಾಧನದಿಂದ ಭಯನಿವೃತ್ತಿಯನ್ನು ಮಾಡಿಕೊಳ್ಳುವನು. ಇಲ್ಲಿ ಸಹಜವಾಗಿ ನಿವೃತ್ತವಾಗಿರುವ ಸರ್ಪವನ್ನು ಹೊಸದಾಗಿ ನಿವೃತ್ತಿಯಾಯಿತೆಂದು ಸಂತೋಷಪಡುತ್ತಾನೆ. ಹೀಗೆ ಮೋಕ್ಷವು ಇಷ್ಟಪ್ರಾಪ್ತಿರೂಪವಾಗಿಯೂ ಅನಿಷ್ಟನಿವೃತ್ತಿರೂಪವಾಗಿಯೂ ಸಿದ್ಧವಾಗಿದ್ದರೂ ಸಾಧನಗಳಲ್ಲಿ ಪ್ರಯತ್ನವು ನ್ಯಾಯವಾಗಿರುವುದು.

ಇಲ್ಲಿ ನಿರತಿಶಯಭಕ್ತಿಯಿಂದ ಕೇವಲ ಪರಮೇಶ್ವರ ಪ್ರೀತಿಯನ್ನೇ ಉದ್ದೇಶಿಸಿ ಮಾಡಲ್ಪಡುವ ಕರ್ಮಯೋಗವೆಂಬ ನಿತ್ಯನೈಮಿತ್ತಿಕಕರ್ಮಾನುಷ್ಠಾನವು ಪಾಪಕ್ಷಯ ಮೂಲಕ ರಾಗದ್ವೇಷನಿವೃತ್ತಿಯೆಂಬ ಚಿತ್ತಶುದ್ಧಿಯನ್ನುಂಟುಮಾಡುವುದು. ಅನಂತರ ಶ್ರವಣಮನನಧ್ಯಾನಾದಿಗಳ ಸಹಾಯದಿಂದ, ಮಹಾವಾಕ್ಯವೆಂಬ ವೇದಾಂತ ವಾಕ್ಯಗಳ ಉಪದೇಶದಿಂದ ಬ್ರಹ್ಮಸಾಕ್ಷಾತ್ಕಾರವು ಲಭಿಸುವುದೆಂದು ಸಿದ್ಧಾಂತ.

ಶ್ರವಣವೆಂದರೆ ಸಕಲೋಪನಿಷತ್ತುಗಳೂ ಬ್ರಹ್ಮಾತ್ಮೈಕತ್ವವನ್ನು ನಿರೂಪಿಸುವುದಕ್ಕಾಗಿರುವುವೆಂದು ಸದಾಚಾರ್ಯಮುಖದಿಂದ ನ್ಯಾಯ ಸಹಿತ ವಿಚಾರ ಪೂರ್ವಕವಾಗಿ ಕೇಳುವುದು. ಈ ಅಂಶವನ್ನು ಯುಕ್ತಿಗಳಿಂದ ದೃಢಪಡಿಸಿಕೊಳ್ಳುವುದು ಮನನ. ಧ್ಯಾನವೆಂದರೆ ಇತರ ವಿಷಯಗಳಲ್ಲಿ ಹೋಗದೆ ಆತ್ಮವಿಷಯದಲ್ಲೇ ಮನಸ್ಸನ್ನು ಸ್ಥಿರವಾಗಿಡುವ ಅಭ್ಯಾಸ. ಇಂತಹ ಶ್ರವಣಾದಿಗಳಲ್ಲಿ ಮೋಕ್ಷೇಚ್ಛೆಯುಳ್ಳ ಮುಮುಕ್ಷುಗಳಿಗೆ ಅಧಿಕಾರವು. ಅಂದರೆ ಅವರುಗಳಿಗೆ ಸಾಧ್ಯವೆಂದರ್ಥ. ಈ ಶ್ರವಣಾದಿಗಳಿಗೆ ನಿತ್ಯಾನಿತ್ಯವಸ್ತುವಿವೇಕ, ಇಹಾಮುತ್ರ ಫಲಭೋಗವಿರಾಗ, ಶಮದಮಾದಿ ಸಾಧನಸಂಪತ್ತು, ಮುಮುಕ್ಷುತ್ವ ಎಂಬ ನಾಲ್ಕು ಸಾಧನಗಳು ಇರಬೇಕು. ನಿತ್ಯಾನಿತ್ಯವಸ್ತುವಿವೇಕವೆಂದರೆ ಈ ಪ್ರಪಂಚದಲ್ಲಿ ಇದು ಶಾಶ್ವತ, ಇದು ಅಶಾಶ್ವತ ಎಂದು ತಿಳಿಯುವುದು. ಇಲ್ಲಿ ನಿತ್ಯವಸ್ತುವಿವೇಕದಿಂದ ಮೋಕ್ಷದಲ್ಲಿ ಇಚ್ಛೆಯೆಂಬ ಮುಮುಕ್ಷುತ್ವವೂ, ಅನಿತ್ಯವಸ್ತುವಿವೇಕದಿಂದ ಇಹಾಮುತ್ರಫಲಭೋಗವಿರಾಗವೆಂಬ ಐಹಿಕಾಮುಷ್ಮಿಕ ಸಕಲಭೋಗವೈರಾಗ್ಯವೂ ಬರುವುವು. ಅನಂತರ ಶಾಂತಿ, ದಾಂತಿ ಮೊದಲಾದ ಆತ್ಮಗುಣಪೂರ್ತಿಯೇ ಸಾಧನಸಂಪತ್ತು. ಅದೇ ಸಾಧನಚತುಷ್ಟಯ.

## ವೇದಾಂತವಾಕ್ಯಾರ್ಥವಿಚಾರ

ಬ್ರಹ್ಮಾತ್ಮೈಕತ್ವವಿದ್ಯಾನುಭವಕ್ಕಾಗಿಯೇ ಹೊರಟಿರುವ ವೇದಾಂತವಾಕ್ಯಗಳಲ್ಲಿ ಕಾರಣವಾಕ್ಯಸ್ವರೂಪವಾಕ್ಯಗಳು ಬ್ರಹ್ಮನ ಸ್ವರೂಪವನ್ನು ತಿಳಿಯಿಸುವ ಲಕ್ಷಣವಾಕ್ಯಗಳಾಗಿರುವುವು. ಲಕ್ಷಣವೆಂದರೆ ಆಯಾ ವಸ್ತುಗಳಲ್ಲಿರುವ ಮುಖ್ಯವಾದ ಸಾಧಾರಣವಲ್ಲದ ಧರ್ಮಗಳು, ಗುರುತುಗಳು. ಗೋವಿಗೆ ಗಳಕಂಬಳವೆಂಬ ನೆಲದೊಗಲು ಮೊದಲಾದುವು. ಈ ಲಕ್ಷಣವು ಸ್ವರೂಪಲಕ್ಷಣ, ತಟಸ್ಥಲಕ್ಷಣವೆಂದು ಎರಡು ವಿಧ. ವಸ್ತುಸ್ವರೂಪವನ್ನೇ ಆಯಾ ವಸ್ತುವಿಗೆ ಗುರುತಾಗಿ ಹೇಳುವುದು ಸ್ವರೂಪಲಕ್ಷಣ. ಚಂದ್ರನಿಗೆ ಪ್ರಕಾಶವು ಸ್ವರೂಪಲಕ್ಷಣ. ಇಲ್ಲಿ ಚಂದ್ರನೇ ಪ್ರಕಾಶ. ಪ್ರಕಾಶವೇ ಚಂದ್ರ. ಸೂರ್ಯನಿಗೆ ಪ್ರತಾಪ, ಸೂರ್ಯನೇ ಪ್ರತಾಪ, ಪ್ರತಾಪವೇ ಸೂರ್ಯ. ಆದರೂ ಪ್ರಕಾಶವನ್ನೂ ಪ್ರತಾಪವನ್ನೂ ಚಂದ್ರ

ಸೂರ್ಯರಿಗೆ ಮುಖ್ಯಧರ್ಮವೆಂದು ಕಲ್ಪಿಸಿಕೊಂಡು ಲಕ್ಷಣವಾಗಿ ಹೇಳು ತ್ತಾರೆ. ಹೀಗೆ ಬ್ರಹ್ಮನು ಸತ್ಯಜ್ಞಾನಾದಿಸ್ವರೂಪನಾದರೂ ಸತ್ಯತ್ವ, ಜ್ಞಾನತ್ವ ಎಂದು ಬೇರೆ ಧರ್ಮವಾಗಿ ಕಲ್ಪಿಸಿಕೊಂಡು, ವನದಲ್ಲಿ ವೃಕ್ಷ ಗಳಿರುತ್ತವೆಯೆಂದು ಹೇಳುವಹಾಗೆ, ಹೇಳುವುದು. ಇದರಿಂದ ವಸ್ತು ಸ್ವರೂಪದಲ್ಲೇ ಸೇರಿರುವ ಧರ್ಮವು ಸ್ವರೂಪಲಕ್ಷಣ.

ತಟಸ್ಥಲಕ್ಷಣವೆಂದರೆ ವಸ್ತುಸ್ವರೂಪದಲ್ಲಿ ಸೇರದೆ, ವಸ್ತುವಿನಲ್ಲಿ ಕೆಲವು ಕಾಲವಿರುವ ಗುರುತುಗಳು. ದೇವದತ್ತನ ಮನೆ ಯಾವುದೆಂದು ಕೇಳಿದರೆ "ಕಾಗೆ ಕೂತಿರುವ ಮನೆ ದೇವದತ್ತನದು" ಎಂದು ಹೇಳುತ್ತಾರೆ. ಇಲ್ಲಿ ದೇವದತ್ತನ ಮನೆಗೆ ಕಾಕವು ಸೇರಿದುದೂ ಅಲ್ಲ, ಯಾವಾಗಲೂ ಇರು ವುದೂ ಅಲ್ಲ. ಅದರಂತೆ ಜಗತ್ಕಾರಣತ್ವವು ಬ್ರಹ್ಮನಿಗೆ ತಟಸ್ಥಲಕ್ಷಣ. ತಟಸ್ಥನೆಂದರೆ ಸೇರದೆ ದೂರದಲ್ಲಿರುವವನೆಂದು ಲೋಕಪ್ರಸಿದ್ಧಿ. ಈ ಜಗತ್ಕಾರಣತ್ವವು ಪರಮಾರ್ಥ ದೃಷ್ಟಿಯಲ್ಲಿಲ್ಲದೆ ಇರುವುದರಿಂದ ತಟಸ್ಥ ಲಕ್ಷಣವಾಗುವುದು.

ಮತ್ತು ಕೆಲವು ಶ್ರುತಿವಾಕ್ಯಗಳಿಗೆ ಅರ್ಥವನ್ನು ವಿವರಿಸಿ ತತ್ತ್ವಾಂಶವು ನಿರೂಪಿಸಲ್ಪಡುವುದು. ಇಲ್ಲಿ 'ತತ್ತ್ವಮಸಿ' ಎಂಬುದು ಮುಖ್ಯಶ್ರುತಿ. ಈ ಮಹಾವಾಕ್ಯವು ಛಾಂದೋಗ್ಯೋಪನಿಷತ್ತಿನಲ್ಲಿ ಇರುವುದು. ಅಲ್ಲಿ ಅರುಣಿಯೆಂಬ ತಂದೆ ಶ್ವೇತಕೇತು ಎಂಬ ಮಗನಿಗೆ ಬ್ರಹ್ಮವಿದ್ಯೋಪ ದೇಶವನ್ನು ಮಾಡುತ್ತಾನೆಂದು ಕಥೆ. ಶ್ವೇತಕೇತು ಹುಟ್ಟಿ ಹನ್ನೆರಡು ವರ್ಷಗಳಾದರೂ ಉಪನಯನವಿಲ್ಲದೆ, ವಿದ್ಯಾಭ್ಯಾಸವಿಲ್ಲದೆ ಅಲಸನಾಗಿ ದ್ದನು. ತಂದೆ ಒಂದು ದಿನ, "ಅಯ್ಯಾ, ನಮ್ಮ ಕುಲದಲ್ಲಿ ಹೀಗಿರು ವುದು ಸರಿಯಲ್ಲ. ಎಲ್ಲಾದರೂ ಗುರುಕುಲಕ್ಕೆ ಹೋಗಿ ಉಪನಯನ ಪೂರ್ವಕ ವಿದ್ಯಾಭ್ಯಾಸವನ್ನು ಮಾಡಿಕೊಂಡು ಬಾ" ಎಂದು ಹೇಳಿದನು. ಶ್ವೇತಕೇತು ತಂದೆಯ ಅಪ್ಪಣೆ ಪ್ರಕಾರ ಹೋಗಿ ಇಪ್ಪತ್ತುನಾಲ್ಕು ವರುಷ ವಯಸ್ಸು ಪರ್ಯಂತ ಸಕಲ ವಿದ್ಯೆಯನ್ನು ಕಲಿತು ಸರ್ವಜ್ಞನೆಂದು ದುರಭಿ ಮಾನದಿಂದ ಬಂದು ಸೇರಿದನು. ಅವನ ಸ್ಥಿತಿಯನ್ನು ನೋಡಿ ತಂದೆ "ಬ್ರಹ್ಮವಿದ್ಯೋಪದೇಶವೇನಾದರೂ ಆಗಿದೆಯೇ ? ಏತಕ್ಕೆ ಪ್ರಪಂಚವೇ ಲಕ್ಷ್ಯವಿಲ್ಲದಂತೆ ಕಾಣುತ್ತೀಯೆ ? ಬ್ರಹ್ಮವನ್ನು ತಿಳಿದವನಿಗೆ ಸರ್ವವೂ

ತಿಳಿದಂತಾಗುವುದು" ಎಂದನು. ಇದನ್ನು ಕೇಳಿ ಮಗನು "ಈ ವಿಷಯ ವನ್ನು ಆ ಉಪಾಧ್ಯಾಯರು ಹೇಳಲಿಲ್ಲ, ತಾವೇ ಹೇಳಬೇಕು" ಎಂದು ಪ್ರಾರ್ಥಿಸಿದನು. ಅನಂತರ ತಂದೆ ಬ್ರಹ್ಮೋಪದೇಶ ಮಾಡುತ್ತಾನೆ, ಹೇಗೆಂದರೆ –

ಈ ಪ್ರಪಂಚವು ಸೃಷ್ಟಿಕಾಲಕ್ಕೆ ಪೂರ್ವದಲ್ಲಿ ಶೂನ್ಯವಾಗಿರಲಿಲ್ಲ. ಅತ್ಯದ್ಭುತವಾದ ಒಂದು ವಸ್ತುವಿತ್ತು. ಅದನ್ನು ಸತ್ ಎಂದು ಹೇಳ ಬಹುದು, ಅಸತ್ತಲ್ಲ. ಅಂತಹ ವಸ್ತುವಿಗೆ ಸದೃಶವಾದ ವಸ್ತು, ವಿಸದೃಶ ವಾದ ವಸ್ತು, ತನ್ನಲ್ಲಿರುವ ವಸ್ತು—ಯಾವುದೂ ಇಲ್ಲ. ಲೋಕದಲ್ಲಿ ಮಾವಿನ ಮರವೆಂಬ ಒಂದು ವಸ್ತುವಿಗೆ ಸದೃಶವಾದ ವಸ್ತು ಬೇವಿನಮರ. ವಿಸದೃಶವಾದ ವಸ್ತು ಕಲ್ಲು. ತನ್ನಲ್ಲಿರುವ ವಸ್ತು ಕೊಂಬೆ ಎಲೆ ಪುಷ್ಪ ಫಲಾದಿಗಳು. ಹೀಗೆ ಪ್ರತಿವಸ್ತುವಿಗೂ ಸಜಾತೀಯಭೇದ, ವಿಜಾತೀಯ ಭೇದ, ಸ್ವಗತಭೇದವೆಂದು—ಮೂರುವಿಧ ವಸ್ತುಗಳಿರುವುವು. ಇಂತಹ ಭೇದವು ಆ ಕಾರಣವಸ್ತುವಿಗೆ ಆ ಕಾಲದಲ್ಲಿ ಯಾವುದೂ ಇಲ್ಲ. ಆ ಬ್ರಹ್ಮನು ಇಚ್ಛಾಮಾತ್ರದಿಂದ ಸಕಲಪ್ರಪಂಚ ಮೂಲಕಾರಣವಾದ ಪಂಚ ಭೂತವೇ ಮೊದಲಾದ ವಸ್ತುಗಳನ್ನು ಸೃಷ್ಟಿಮಾಡಿ, ಬ್ರಹ್ಮಾಂಡ ಮೊದ ಲಾದ ಸೃಷ್ಟಿಗಳನ್ನು ಮಾಡುವುದಕ್ಕೆ ಹಿರಣ್ಯಗರ್ಭನೆಂಬ ಮೊದಲನೆಯ ಜೀವಾತ್ಮನನ್ನು ಸೃಷ್ಟಿಮಾಡಿ, ಅವನ ಮೂಲಕ ವಿಚಿತ್ರ ವಿವಿಧಪ್ರಪಂಚ ವನ್ನು ಸೃಷ್ಟಿಮಾಡಿದನು. ಈ ಸೃಷ್ಟಿಗೆ ಉದಾಹರಣೆ ಹೇಗೆಂದರೆ– ಒಂದು ಚಿನ್ನದ ಗಟ್ಟಿ ವಿಚಿತ್ರ ಭೂಷಣಗಳಾಗುತ್ತದೆ. ಆ ಭೂಷಣಗಳನ್ನೆಲ್ಲಾ ಕರಗಿಸಿದರೆ ಪುನಃ ಗಟ್ಟಿಯಾಗಿಯೇ ಕಾಣುವುದು. ಭೂಷಣಗಳ ನಾಮ ರೂಪಗಳು ಮಾಯವಾಗುವುವು. ಹೀಗೆ ಪ್ರಪಂಚವು ಬ್ರಹ್ಮದಿಂದ ಬಂದರೂ ನಾಮರೂಪಗಳು ಬರಿಯ ಬಾಯಿ ಮಾತಾಯಿತೇ ಹೊರತು ಸತ್ಯವಲ್ಲ. ಚಿನ್ನವೆಂಬುದೇ ಸತ್ಯ. ಆದುದರಿಂದ ಸಕಲಪ್ರಪಂಚಕ್ಕೂ ಬ್ರಹ್ಮ ನೊಬ್ಬನೇ ಆತ್ಮ, ಬೇರೆ ಆತ್ಮನಿಲ್ಲ. ಎಲಾ, ಶ್ವೇತಕೇತುವೇ ನಾನೊಬ್ಬ ಬೇರೆ ಆತ್ಮನೆಂದು ತಿಳಿದುಕೊಂಡಿರುವ ನೀನು ಬ್ರಹ್ಮನೇ ಹೊರತು ಬೇರೆ ಅಲ್ಲ ; ತತ್ತ್ವಮಸಿ ಎಂದು ಬ್ರಹ್ಮೋಪದೇಶವನ್ನು ಮಾಡಿದನು. ಅದು ಹೇಗಾಗುವುದೆಂದು ಶ್ವೇತಕೇತುವಿನ ಸಂಶಯಗಳನ್ನೆಲ್ಲಾ ಪರಿಹರಿಸುತ್ತಾ

ಒಂಬತ್ತುಸಲ ತತ್ತ್ವಮಸಿ ಎಂದು ಉಪದೇಶಿಸಿದನು. ಈ ಪ್ರಕಾರ ಸದಾಚಾರ್ಯೋಪದೇಶದಿಂದಲೇ ಬ್ರಹ್ಮೋಪದೇಶವು ಸಫಲವಾಗುವುದೆಂದು ಕಥೆ ಸಮಾಪ್ತಿಯಾಯಿತು.

ಈ ತತ್ತ್ವಮಸಿಯೆಂಬ ಉಪದೇಶಕ್ಕೆ "ಅಹಂ ಬ್ರಹ್ಮಾಸ್ಮಿ" ನಾನೇ ಬ್ರಹ್ಮನೆಂದು ಮತ್ತೊಂದು ವಾಕ್ಯ ಈ ಉಪದೇಶಾನುಸಂಧಾನವನ್ನು ತಿಳಿಯಿಸುವುದು. "ಅಯಮಾತ್ಮಾ ಬ್ರಹ್ಮ" ಎಂಬ ಮತ್ತೊಂದು ವಾಕ್ಯವು ಜೀವಬ್ರಹ್ಮರಿಗೆ ಐಕ್ಯವನ್ನುಪದೇಶಿಸುವುದು. "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ವಾಕ್ಯವು ಬ್ರಹ್ಮನೇ ಸಕಲ ಪ್ರಪಂಚವೆಂದು ಉಪದೇಶಿಸುವುದು. ಇಂತಹ ಉಪದೇಶಗಳೇ ಗುರುಶಿಷ್ಯಸಂವಾದರೂಪವಾಗಿ ಉಪನಿಷತ್ತುಗಳಲ್ಲಿ ಪ್ರಾಯಶಃ ಇರುವುವು.

ಕಾರಣವಾಕ್ಯಗಳಿಗೆ ನಿರ್ವಿಶೇಷಪರಬ್ರಹ್ಮನಲ್ಲಿ ತಾತ್ಪರ್ಯವು ಹೇಗೆ ಎಂದರೆ—ಸಕಲಪ್ರಪಂಚವೂ ಪರಮೇಶ್ವರನಿಂದ ಸೃಷ್ಟಿಸಲ್ಪಟ್ಟಿತು ಎಂದು ತಿಳಿಸುವ ವಾಕ್ಯಗಳು. ಕಾರಣದಲ್ಲೇ ಕಾರ್ಯಗಳಿರಬೇಕಾದುದರಿಂದ ಸಕಲಪ್ರಪಂಚವೂ ಪರಮೇಶ್ವರನಲ್ಲೇ ಇರುತ್ತದೆಂದು ನಿರ್ಣಯವಾದರೆ "ಪರಮಾರ್ಥದಶೆಯಲ್ಲಿ ಬ್ರಹ್ಮನಲ್ಲಿ ಸಕಲಪ್ರಪಂಚವೂ ನಿವೃತ್ತಿಯಾಗುತ್ತಿದೆ" ಎಂಬ ಸಿದ್ಧಾಂತದಲ್ಲಿ ಬೇರೆ ಕಡೆ ಪ್ರಪಂಚವು ಇರಬಹುದೆಂಬ ಸಂಶಯಕ್ಕೆ ಆಸ್ಪದವಿರುವುದಿಲ್ಲ. ಇದೇ ಸೃಷ್ಟಿವಾಕ್ಯಗಳಿಗೆ ಪರಮಾರ್ಥ ಪ್ರಯೋಜನ.

ಸಗುಣವಾಕ್ಯಗಳೆಂದರೆ, ಆಯಾ ಫಲವಿಶೇಷಗಳಿಗೆ ಸಾಧನವಾದ ಪರಮಾತ್ಮನೇ ಮೊದಲಾದ ವಸ್ತುಗಳ ಧ್ಯಾನವನ್ನು ಉಪದೇಶಿಸುವ ವಾಕ್ಯಗಳು. ಈ ಧ್ಯಾನವೇ ಅಕ್ಷಿವಿದ್ಯಾ, ಆದಿತ್ಯವಿದ್ಯಾ—ಇತ್ಯಾದಿ ವಿಭಾಗದಿಂದ ಬಹು ವಿಧವಾಗಿರುವುದು. ಇಂತಹ ವಿದ್ಯೆಗಳೂ ಸಹ ಫಲವಿಶೇಷಗಳಲ್ಲಿ ವಿರಕ್ತರಾದವರ ಚಿತ್ತಕ್ಕೆ ಐಕಾಗ್ರ್ಯವೆಂಬ ಧ್ಯಾನಶಕ್ತಿಯನ್ನು ಉಂಟುಮಾಡುತ್ತಾ ನಿರ್ವಿಶೇಷ ಬ್ರಹ್ಮಸಾಕ್ಷಾತ್ಕಾರಕ್ಕೆ ಉಪಯೋಗವಾಗುವುವು.

ಇಂತಹ ವಿದ್ಯೆಗಳಲ್ಲಿ ಪರಮಾತ್ಮೋಪಾಸನೆಯೆಂಬ ಕೆಲವು ಉಪಾಸನೆಗಳು ಅರ್ಚಿರಾದಿಮಾರ್ಗಮೂಲಕ ಸತ್ಯಲೋಕವನ್ನು ಅಥವಾ ವೈಕುಂಠ

ವೆಂಬ ಪರಮಪದಪ್ರಾಪ್ತಿಯನ್ನುಂಟುಮಾಡಿ ಅಲ್ಲಿ ನಿರ್ವಿಶೇಷಬ್ರಹ್ಮ ಸಾಕ್ಷಾತ್ಕಾರದಿಂದ ಶಾಶ್ವತವಾದ ಮೋಕ್ಷವನ್ನು ಹೊಂದುವನು ಎಂದು ತಿಳಿಯಬೇಕು.

ಅಭೇದಶ್ರುತಿಗಳು ಭೇದವನ್ನು ನಿಷೇಧಿಸುತ್ತವೆ. ನಿಷೇಧಕ್ಕೆ ಪ್ರಸಕ್ತಿ ಬೇಕು ಎಂದರೆ ನಿಷೇಧ್ಯಾಂಶವು ತಿಳಿದಿರಬೇಕು. ಸಕ್ಕರೆಯಲ್ಲಿ ಕಾರವಿಲ್ಲ ವೆಂದು ಹೇಳಿದರೆ ಕಾರವನ್ನೇ ತಿಳಿಯದಿರುವವನಿಗೆ ಏನರ್ಥವಾಗುತ್ತದೆ? ಆದುದರಿಂದ ನಿಷೇಧ್ಯವನ್ನು ತಿಳಿಯಿಸುವುದಕ್ಕಾಗಿ ಭೇದಶ್ರುತಿಗಳು ವ್ಯವ ಹಾರವಿಚಾರಪರವು. ನಿಷೇಧಶ್ರುತಿ ಪರಮಾರ್ಥದಶೆಯನ್ನುಪದೇಶಿಸು ವುದೆಂದು ನಿರ್ಣಯ. ಏವಂಚ ಸಕಲಶ್ರುತಿಗಳಿಗೂ ನಿತ್ಯಶುದ್ಧಮುಕ್ತ ಸ್ವಭಾವಪರಬ್ರಹ್ಮನಲ್ಲಿ ತಾತ್ಪರ್ಯವೆಂದು ಸಿದ್ಧಾಂತ.

**ವಿರೋಧಪರಿಹಾರ**

ಮತ್ತು ನಿಷೇಧವಿಷಯದಲ್ಲಿ ಈ ಅಂಶವು ತಿಳಿಯಬೇಕು. ಕೆಲವರು ಸತ್ಯವೆಂಬ ಸತ್ತ್ವವನ್ನು ಪಾರಮಾರ್ಥಿಕಸತ್ಯ, ವ್ಯಾವಹಾರಿಕಸತ್ಯ, ಪ್ರಾತಿ ಭಾಸಿಕ ಸತ್ಯವೆಂದು ಲೋಕವೇದದೃಷ್ಟಿಯಿಂದ ನಿರ್ಣಯಿಸಿರುವರು. ಪಾರಮಾರ್ಥಿಕಸತ್ತ್ವವು ಪರಬ್ರಹ್ಮನಲ್ಲಿ, ವ್ಯಾವಹಾರಿಕಸತ್ತ್ವವು ಆಕಾ ಶಾದಿಭೂತಭೌತಿಕವಸ್ತುಗಳಲ್ಲಿ, ಪ್ರಾತಿಭಾಸಿಕಸತ್ತ್ವವು ರಜ್ಜುಸರ್ಪ, ಶುಕ್ತಿರೂಪ್ಯ, ಸ್ವಾಪ್ನರಥಾದಿಗಳು ಮೊದಲಾದುವುಗಳಲ್ಲಿರುವುದು. ಇಲ್ಲಿ ಪ್ರಾತಿಭಾಸಿಕವಸ್ತುಗಳನ್ನು ವ್ಯವಹಾರಕ್ಕೆ ಯೋಗ್ಯವಲ್ಲವೆಂದು ವ್ಯಾವ ಹಾರಿಕಸತ್ಯರೂಪದಿಂದ ಅವುಗಳಿಲ್ಲವೆಂದು ತಿಳಿಯುತ್ತೇವೆ. ಹಾಗೆ ವ್ಯಾವ ಹಾರಿಕವಸ್ತುಗಳು ಪಾರಮಾರ್ಥಿಕರೂಪದಿಂದ ಇಲ್ಲವೆಂದು ಶಾಸ್ತ್ರದಿಂದ ತಿಳಿಯಬೇಕು. ಸ್ವರೂಪೇಣ ನಿಷೇಧವು ಅಪ್ರಾಮಾಣಿಕವಾಗುವುದೆಂದು ಸತ್ತ್ವವಿಭಾಗಕ್ಕೆ ತಾತ್ಪರ್ಯ.

ಇದರಿಂದ ಸಾಮಾನ್ಯಜನರ ವಿವಾದವೂ ಶಾಂತವಾಗುತ್ತದೆ. ಪ್ರತ್ಯಕ್ಷ ವಾಗಿರುವ ಪ್ರಪಂಚವನ್ನು ಇಲ್ಲವೆಂದು ಹೇಳುವ ಶಾಸ್ತ್ರ ಎಂತಹ ಶಾಸ್ತ್ರ ವೆಂದು ಅವರ ವಾದ.

ಪ್ರತ್ಯಕ್ಷಾದಿ ಪ್ರಮಾಸಿದ್ಧವಿರುದ್ಧಾರ್ಥಾಭಿಧಾಯಿನಃ
ವೇದಾನ್ತಾ ಯದಿ ಶಾಸ್ತ್ರಾಣಿ ಬೌದ್ಧೈಃ ಕಿಮಪರಾಧ್ಯತೇ ॥

ಎಂದು. ಪ್ರತ್ಯಕ್ಷಾದಿಪ್ರಮಾಣಕ್ಕೆ ವಿರುದ್ಧವಾಗಿ ಪ್ರಪಂಚವಿಲ್ಲವೆಂದು ಹೇಳುವ ಶಾಸ್ತ್ರವು ಶಾಸ್ತ್ರವಾದರೆ ಬೌದ್ಧರು ಮಾಡಿದ ಅಪರಾಧವೇನು ? ಅವರು ಪ್ರತ್ಯಕ್ಷಾದಿಪ್ರಮಾಣವಿರುದ್ಧವಾಗಿ ಪ್ರಪಂಚವನ್ನು ಶೂನ್ಯ—ಇಲ್ಲ ಎಂದಲ್ಲವೇ ಹೇಳುತ್ತಾರೆ ಎಂದರ್ಥ. ಏವಂಚ ಅವರು ಸ್ವರೂಪೇಣ ನಿಷೇಧ ಮಾಡುತ್ತಾರೆಂದು ತಿಳಿಯಬೇಕು.

ಈ ಪ್ರಕಾರ ಪ್ರಮಾಣಸಿದ್ಧವಾದ ಅಂಶವನ್ನು ಮಿಥ್ಯೆ ಎಂದರೆ, ಸಾಮಾನ್ಯವಾಗಿ ಸರ್ವರಿಗೂ ಆಶ್ಚರ್ಯವಾಗುತ್ತದೆ. ಏತಕ್ಕೆಂದರೆ ಮಿಥ್ಯೆ, ಸುಳ್ಳು ಎಂಬ ಪದಕ್ಕೆ ಈಗ ಜನರು ಯಾವ ಅರ್ಥವನ್ನು ತಿಳಿಯುವರೋ ಶಾಸ್ತ್ರದಲ್ಲಿ ಆ ಅರ್ಥವಲ್ಲ. ಅದು ಎಂತಹುದೆಂದರೆ ಸದಸದ್ವಿಲಕ್ಷಣವು. ಸತ್ತೆಂದರೆ ಪರಬ್ರಹ್ಮನು. ಅಸತ್ತೆಂದರೆ ಶಶಶೃಂಗ ಮೊದಲಾದ ತುಚ್ಛ ಪದಾರ್ಥಗಳು. ಇಂತಹ ಎರಡು ವಿಧವಾದ ಮಾರ್ಗದಲ್ಲೂ ಸೇರಿದುದಲ್ಲ ವೆಂದು ನಿರ್ಣಯವೇ ಮಿಥ್ಯಾಪದದ ಅರ್ಥ. ಇಂತಹ ಅರ್ಥದಲ್ಲಿ ಯಾವ ಸಿದ್ಧಾಂತಕ್ಕೂ ವಿರೋಧವಿಲ್ಲವೆಂದು ಎಲ್ಲರೂ ಹೇಳಿರುತ್ತಾರೆ.

ಅನಂತರ ಮಿಥ್ಯಾಪದಾರ್ಥ ಪರಿಷ್ಕಾರದಲ್ಲಿ ವಾಕ್ಚಾತುರ್ಯ ಮೂಲಕ ವಾಗಿಯೇ ಸಕಲ ಕೋಲಾಹಲಗಳೆಂದು ಸಾರಾಂಶವು.

ಪ್ರತ್ಯಕ್ಷಾದಿಪ್ರಮಾಣಗಳಿಗೂ ಶಾಸ್ತ್ರಕ್ಕೂ ತೋರಿಬರುವ ವಿರೋಧ ವನ್ನು ಮಂಡನಮಿಶ್ರರು ಈ ಪ್ರಕಾರ ಪರಿಹರಿಸಿರುವರು—ಲೋಕಪ್ರಸಿದ್ಧ ವಾದ ಘಟೋಽಸ್ತಿ, ಪಟೋಽಸ್ತಿ ಮೊದಲಾದ ವ್ಯವಹಾರದಲ್ಲಿ ಎರಡಂಶ ವಿರುವುದು. ಅಸ್ತಿಯೆಂಬ ಅಂಶ ಸಾಮಾನ್ಯ. ಘಟವೆಂಬ ಅಂಶ ಭೇದ ವೆಂಬ ವಿಶೇಷವು. ಇದಕ್ಕೆ ಕಾರಣವಾಗಿರುವ ಪ್ರತ್ಯಕ್ಷ ನಿರ್ವಿಕಲ್ಪಕ, ಸವಿಕಲ್ಪಕವೆಂದು ಎರಡು ಪ್ರಕಾರ. ನಿರ್ವಿಕಲ್ಪಕವು ಅಸ್ತಿ ಎಂಬ ಸತ್ತಾ ರೂಪಸಾಮಾನ್ಯವನ್ನು ಗ್ರಹಿಸುವುದು. ಸಾಮಾನ್ಯವು ತಿಳಿಯದೆ ವಿಶೇಷವು ತಿಳಿಯಲಶಕ್ಯವಾದುದರಿಂದ ವಿಶೇಷವೆಂಬ ಭೇದವು ಸವಿಕಲ್ಪಕಗ್ರಾಹ್ಯ ವಾಗುವುದು. ಸವಿಕಲ್ಪಕವು ಕಲ್ಪಿತವಾದ ಅನೇಕ ವಸ್ತುಗಳನ್ನು ಗ್ರಹಿಸು ವುದಾದ್ದರಿಂದ ಭ್ರಾಂತಿ ಸರಿಯಾದ ಪ್ರತ್ಯಕ್ಷ ಪ್ರಮಾಣವಲ್ಲ. ಪ್ರಮಾಣ ವಾದ ನಿರ್ವಿಕಲ್ಪಕ್ಕೆ ಸಾಮಾನ್ಯವೆಂಬ ಸದ್ವಸ್ತುವೇ ಗೋಚರವಾಗುವುದು ; ಭೇದವು ಗೋಚರವಲ್ಲ. ಶಾಸ್ತ್ರವು ಸಾಮಾನ್ಯವಾದ ಸದ್ವಸ್ತುವೇ ಪರ

ಮಾರ್ಥವೆಂದು ತಿಳಿಯಿಸುವುದು. ಪ್ರತ್ಯಕ್ಷವೂ ಶಾಸ್ತ್ರವೂ ಸಮಾನ ವಿಷಯ ವಾದುದರಿಂದ ವಿರೋಧವೇ ಇಲ್ಲವೆಂದು ನಿರ್ಣಯಿಸಲ್ಪಟ್ಟಿರುವುದು.

ಆ ಹುರ್ವಿಧಾತೃಪ್ರತ್ಯಕ್ಷಂ ನ ನಿಷೇದ್ಧೃವಿಪಶ್ಚಿತಃ
ನೈಕತ್ವೇ ಆಗಮಸ್ತೇನ ಪ್ರತ್ಯಕ್ಷೇಣ ವಿರುಧ್ಯತೇ ॥

ಎಂಬ ಶ್ಲೋಕದ ತಾತ್ಪರ್ಯವಿದು—ಪದಾರ್ಥವೆಂತೆಂದರೆ ಪ್ರತ್ಯಕ್ಷವು ವಿಧಾತೃ, ಸಾಮಾನ್ಯಗೋಚರವು ; ನನಿಷೇಧೃ, ವಿಶೇಷಗೋಚರವಲ್ಲ ; ಏಕತ್ವೇ ಆಗಮವೂ ಪ್ರತ್ಯಕ್ಷವೂ ಒಂದೇ ಅಂಶದಲ್ಲಿದ್ದರೆ ವಿರೋಧವೆಲ್ಲಿಯದು ಎಂದು.

ಲೋಕದಲ್ಲಿ ಸಕಲ ವಸ್ತುಗಳಲ್ಲೂ ಅಸ್ತಿತ್ವ, ಪ್ರಕಾಶ, ಇಷ್ಟತ್ವ, ನಾಮ, ರೂಪ—ಈ ಐದು ಅಂಶಗಳು ವ್ಯವಹರಿಸಲ್ಪಡುವುವು. ಘಟವು ಇದೆ. ಘಟವು ತಿಳಿಯುತ್ತದೆ. ಘಟವು ಬೇಕಾಗಿದೆ. ಘಟಕ್ಕೆ ಕಲಶ ವೆಂದು ಹೆಸರು. ಘಟವು ಗುಂಡಾಗಿದೆ ಎಂದು ಐದು ಅಂಶಗಳಲ್ಲಿ ಮೂರು ಬ್ರಹ್ಮಸ್ವರೂಪಕ್ಕೆ ಸೇರಿದುವು. ಎರಡು ಪ್ರಪಂಚಸ್ವರೂಪಕ್ಕೆ ಸೇರಿದುವು. ಬ್ರಹ್ಮನಲ್ಲೇ ಪರಮಾರ್ಥವಾದ ಅಸ್ತಿತ್ವವೂ ಪ್ರಕಾಶವೂ ಸುಖತ್ವವೂ ಇರು ವುವು. ಬ್ರಹ್ಮನೂ ಪ್ರಪಂಚವೂ ಒಂದು ಎಂದು ಭ್ರಮಿಸಿರುವುದರಿಂದ ಬ್ರಹ್ಮನ ಧರ್ಮಗಳು ಪ್ರಪಂಚದಲ್ಲಿ ತೋರುತ್ತವೆ. ನಾಮ, ರೂಪ—ಇವೆ ರಡೂ ಪ್ರಪಂಚಕ್ಕೆ ಸೇರಿದುವು. ಶಾಶ್ವತವಾದುವಲ್ಲ. ವಿನಾಶವಾಗತಕ್ಕುವು. ಆದುದರಿಂದ ಪ್ರಪಂಚಕ್ಕೆ ಬೇರೆ ಸತ್ತೆ ಇಲ್ಲ. ಆದ್ದರಿಂದಲೇ ಪ್ರಪಂಚವಿಲ್ಲ ವೆಂದು ವ್ಯವಹಾರ ಎಂದು ಒಂದಭಿಪ್ರಾಯ.

## ವಿಶೇಷಾಂಶ

ಪ್ರಾಚೀನಾದ್ವೈತಸಿದ್ಧಾಂತಿಗಳು ಯಾಗದಲ್ಲಿ ಅಪೂರ್ವವು ಹುಟ್ಟಿ ತನ್ಮೂಲಕವಾಗಿ ಸ್ವರ್ಗ ಸಿದ್ಧಿಸುವ ಹಾಗೆ ಪರಬ್ರಹ್ಮನ ಧ್ಯಾನವಿಶೇಷದಿಂದ ನಿಯೋಗವೆಂಬ ಅಪೂರ್ವವು ಹುಟ್ಟಿ ಅದರ ಮೂಲಕ ಬ್ರಹ್ಮಸಾಕ್ಷಾತ್ಕಾರ ವಾಗಿ ಅದರಿಂದ ಅವಿದ್ಯೆ ನಿವೃತ್ತಿಯಾಗಬೇಕೆಂದು ಅಭಿಪ್ರಾಯಪಡುವರು. ಇದರಲ್ಲಿ ಧ್ಯಾನನಿಯೋಗವಾದ, ನಿಷ್ಪ್ರಪಂಚೀಕರಣನಿಯೋಗವಾದ, ಇವೇ ಮೊದಲಾದ ಪ್ರಭೇದಗಳಿರುವುವು. ಇವುಗಳಿಗೆಲ್ಲಾ ಒಟ್ಟು ಪ್ರತಿಪತ್ತಿವಿಧಿ

ಯೆಂದು ಹೆಸರು. ಶ್ರೀಶಂಕರಾಚಾರ್ಯರ ಅಭಿಪ್ರಾಯದಲ್ಲಿ ನಿಯೋಗದಿಂದ ಸಾಕ್ಷಾತ್ಕಾರವೂ ಅವಿದ್ಯಾನಿವೃತ್ತಿಯೂ ಆಗಬೇಕಾದರೆ ಸ್ವರ್ಗಾದಿಗಳಂತೆ ಮೋಕ್ಷವೆಂಬುದು ಅನಿತ್ಯವಾಗಿಯೂ ದಂಡನಿವರ್ತ್ಯ ಸರ್ಪಾದಿಗಳಂತೆ ಪ್ರಪಂಚವು ವಾಸ್ತವವಾಗಿಯೂ ಆಗಬೇಕಾಗುವುದು. ಜ್ಞಾನಮಾತ್ರದಿಂದ ನಿವರ್ತ್ಯವಾಗುವ ರಜ್ಜುಸರ್ಪದಂತೆ ಕೇವಲ ಶ್ರುತಿವಾಕ್ಯಜನ್ಯಜ್ಞಾನದಿಂದಲೇ ಅವಿದ್ಯೆಯೂ ಅವಿದ್ಯಾಕಾರ್ಯವಾದ ಭೇದಪ್ರಪಂಚವೂ ನಿವೃತ್ತಿಯಾಗತಕ್ಕದ್ದು ಎಂದು ನಿರ್ಣಯಿಸುವುದೇ ಪ್ರಾಚೀನಾದ್ವೈತಕ್ಕೂ ಶಂಕರಾಚಾರ್ಯರ ಅದ್ವೈತಕ್ಕೂ ಇರುವ ವ್ಯತ್ಯಾಸ. ಇದನ್ನೇ ಅವಿಧೇಯಜ್ಞಾನವಾದವೆನ್ನುವರು. ಅದು ಹೇಗೆಂದರೆ—ನಿರ್ವಿಶೇಷ ಬ್ರಹ್ಮಸಾಕ್ಷಾತ್ಕಾರವು ಪುರುಷಪ್ರಯತ್ನ ಸಾಧ್ಯವಲ್ಲ. ಪುರುಷತಂತ್ರವಲ್ಲ. ಇದಕ್ಕೆ ಅವಿಧೇಯಜ್ಞಾನವಾದವೆಂದು ಪ್ರಸಿದ್ಧಿ. ಇತರ ದರ್ಶನಗಳಲ್ಲೂ ಪ್ರಾಚೀನಾದ್ವೈತಿಗಳ ಅಭಿಪ್ರಾಯದಲ್ಲೂ ಶಾಸ್ತ್ರದಿಂದ ವಿಧಿಸಲ್ಪಟ್ಟ ಧ್ಯಾನಾದಿಗಳನ್ನು ಅನುಷ್ಠಾನಮಾಡಿ ಸಾಕ್ಷಾತ್ಕಾರವನ್ನು ಸಂಪಾದಿಸಿ ಮೋಕ್ಷವನ್ನು ಪೊಂದಬೇಕೆಂದು ಅಭಿಪ್ರಾಯವು. ಇದಕ್ಕೆ ಶಾಸ್ತ್ರವಿಹಿತಜ್ಞಾನವಾದವೆಂದು ಪ್ರಸಿದ್ಧಿ. ಶ್ರೀಶಂಕರಾಚಾರ್ಯರ ಅಭಿಪ್ರಾಯದಲ್ಲಿ ಶಾಸ್ತ್ರವಿಹಿತಗಳಾದ ಶ್ರವಣಧ್ಯಾನಾದಿಗಳು ಚಿತ್ತಶುದ್ಧ್ಯರ್ಥವೇ ಹೊರತು ಜ್ಞಾನವು ಹುಟ್ಟುವುದಕ್ಕೋಸ್ಕರವಲ್ಲ. ಜ್ಞಾನವು ಶಬ್ದಪ್ರಮಾಣವೆಂಬ ತತ್ತ್ವಮಸಿವಾಕ್ಯದಿಂದಲೇ ಹುಟ್ಟತಕ್ಕದ್ದು. ಪ್ರಮಾಣಾದಿಗಳಿಂದ ಬರತಕ್ಕ ಜ್ಞಾನವು ವಸ್ತುತಂತ್ರವೆನ್ನಲ್ಪಡುವುದು. ಪ್ರಯತ್ನದಿಂದ ಸಾಧ್ಯವಾದ ಜ್ಞಾನವು ಪುರುಷತಂತ್ರವು. ತಂತ್ರವೆಂದರೆ ಅಧೀನವೆಂದರ್ಥ. ಯಾವುದು ನೂರು ವಿಧಾಯಕಶಾಸ್ತ್ರದಿಂದ ಮಾಡಲಶಕ್ಯವೋ ನೂರು ನಿಷೇಧಶಾಸ್ತ್ರಗಳಿಂದ ತಡೆಯಲಶಕ್ಯವೋ ಅದು ವಸ್ತುತಂತ್ರವೆಂದು ವಿವರಿಸಿರುತ್ತಾರೆ. ಕಣ್ಣು ತೆರೆದರೆ ಎದುರಿಗಿರುವ ವಸ್ತುವಿನ ಜ್ಞಾನ ಬರುತ್ತದೆ. ಇದೇ ಪ್ರಮಾಣಜ್ಞಾನ. ಇಲ್ಲಿ ನೂರು ವಿಧಾಯಕ ಶಾಸ್ತ್ರಗಳು ಉಪಕಾರಕಗಳಲ್ಲ. ನೂರು ಪ್ರತಿಷೇಧಶಾಸ್ತ್ರಗಳೂ ಅಪಕಾರಕಗಳಲ್ಲ. ನಿಷ್ಕಲ್ಮಷವಾದ ಚಿತ್ತಶುದ್ಧಿಯುಳ್ಳವನಿಗೆ ತತ್ತ್ವಮಸಿ ಎಂಬ ಶಬ್ದ ಪ್ರಮಾಣದಿಂದ ಪರಬ್ರಹ್ಮಸಾಕ್ಷಾತ್ಕಾರವೆಂಬ ಜ್ಞಾನ ಉದಯಿಸುವುದು. ಆದರಿಂದ ಸಕಲ ಅವಿದ್ಯಾಪ್ರಪಂಚವೂ ನಿವರ್ತಿಸುವುದು ಎಂದು ಸಿದ್ಧಾಂತ.

ಬೃಹದಾರಣ್ಯಕಭಾಷ್ಯದಲ್ಲಿ (೪-೧-೨೦) ಮತ್ತೊಂದು ಶಂಕಾ ಸಮಾಧಾನವನ್ನು ಹೇಳುವರು—ಬ್ರಹ್ಮವೊಂದೇ ವಸ್ತುವೆಂಬ ಸಿದ್ಧಾಂತದಲ್ಲಿ ಯಾರಿಗೆ ಉಪದೇಶವು, ಉಪದೇಶ ಮಾಡುವವನು ಯಾವನು? ಈ ವಿಭಾಗ ವಿಲ್ಲದಿರುವುದರಿಂದ ಉಪದೇಶವು ವ್ಯರ್ಥವಲ್ಲವೇ ? ಎಂದರೆ ಅದ್ವಿತೀಯ ಬ್ರಹ್ಮವೊಂದೇ ವಸ್ತುವೆಂಬ ವಿಷಯದಲ್ಲಿ ಕ್ರಿಯೆಗೆ ಅನೇಕ ಕಾರಕಗಳಿರ ಬೇಕಾದುದರಿಂದ ಉಪದೇಶವೂ ಇಲ್ಲ, ಗುರುವೂ ಇಲ್ಲ, ಶಿಷ್ಯನೂ ಇಲ್ಲ, ಉಪದೇಶಫಲವೂ ಇಲ್ಲ, ಉಪನಿಷತ್ತುಗಳೆಲ್ಲಾ ವ್ಯರ್ಥವೆಂಬುದೇ ಸಮ್ಮತ. ಅನೇಕ ವಿಷಯದಲ್ಲಿ ಆತ್ಮವಾದಿಗಳಿಗೆ ವೈಯರ್ಥ್ಯವು ಯಾರಿಗೂ ಇಷ್ಟವಿಲ್ಲ ವೆಂದು ಹೇಳಿರುತ್ತಾರೆ. ಇಲ್ಲಿ ಪರಮಾರ್ಥದೃಷ್ಟಿಯಿಂದ ವೈಯರ್ಥ್ಯವೂ ವ್ಯವಹಾರದೃಷ್ಟಿಯಿಂದ ಸಾರ್ಥಕ್ಯವೂ ಉಪನಿಷತ್ತುಗಳಿಗೆ ಇರಬಹುದೆಂದು ತಾತ್ಪರ್ಯ ಆಗುವುದು.

**ಸಾರಾಂಶ**

ಶ್ರುತಿಗಳು ಬ್ರಹ್ಮನಿಗೂ ಪ್ರಪಂಚಕ್ಕೂ, ಬ್ರಹ್ಮನಿಗೂ ಜೀವನಿಗೂ ಭೇದವಿಲ್ಲವೆಂದು ಅನೇಕ ಸಂದರ್ಭಗಳಲ್ಲಿ ತಿಳಿಯಿಸುವುವು ; ಇಂತಹ ಅಭೇದಸಾಕ್ಷಾತ್ಕಾರವೇ ಮೋಕ್ಷಸಾಧನವೆಂದು ನಿರ್ಣಯಿಸುವುವು. ಹೀಗೆ ಅನೇಕ ಸಂದರ್ಭಗಳಲ್ಲಿ ಶ್ರುತಿಗಳು ಬ್ರಹ್ಮನಿಗೂ ಪ್ರಪಂಚಕ್ಕೂ ಈಶ್ವರ ಐಶ್ವರ್ಯಭಾವವನ್ನೂ, ಬ್ರಹ್ಮಜೀವರಿಗೆ ಸ್ವಾಮಿಭೃತ್ಯಭಾವವನ್ನೂ, ನಿಯಾಮ್ಯನಿಯಾಮಕಭಾವವನ್ನೂ ಉಪದೇಶಿಸಿ ಸ್ವಾಮಿಭಾವದಿಂದ ಅವನ ಉಪಾಸನೆಯೇ, ಎಂದರೆ ಭೇದಜ್ಞಾನವೇ, ಭಕ್ತಿಯೇ ಮೋಕ್ಷಸಾಧನ ವೆಂದು ನಿರ್ಣಯಿಸುವುವು. ಹೀಗಿರುವಲ್ಲಿ ಉಪನಿಷತ್ತುಗಳಿಗೆ ವ್ಯಾಖ್ಯಾನ ಮಾಡಿರುವ ಪ್ರಾಚೀನ ವೈದಿಕರ ಅಭಿಪ್ರಾಯವಿದು—ಸಹಸ್ರ ಮಾತಾ ಪಿತೃಗಳಿಗಿಂತಲೂ ಅಧಿಕವಾದ ವಾತ್ಸಲ್ಯದಲ್ಲಿರುವ ಶ್ರುತಿಮಾತೆ ಜನಗಳ ಹಿತವನ್ನೇ ಉಪದೇಶಿಸುವಳು. ಅತ್ಯಂತಬಾಲ್ಯಾವಸ್ಥೆಯಲ್ಲಿರುವ ಶಿಶು ಪ್ರಾಯರಾದ ನಮ್ಮ ಅನುಭವಸಂಸ್ಕಾರಗಳು ಅಣುಮಾತ್ರವೂ ಉಪ ಯೋಗವಾಗಲಾರವು. ಶ್ರುತಿ ಹೇಳುವಹಾಗೆ ನಾವು ತಿಳಿಯಬೇಕೇ ಹೊರತು ಅದು ಹೇಗೆಂದು ಕೇಳುವ ಅಧಿಕಾರವೇ ಇಲ್ಲ. ಅದುದರಿಂದ

ಶ್ರುತಿಯನ್ನು ನಮ್ಮ ದಾರಿಗೆ ಸೆಳೆಯಬಾರದು. ಅದರ ದಾರಿಯಲ್ಲಿ ನಾವು ನಡೆಯಬೇಕು. ಶ್ರುತಿ ಭೇದವನ್ನೂ ಅಭೇದವನ್ನೂ ಉಪದೇಶಿಸುವುದು. ಪ್ರಮಾಣದಿಂದ ತಿಳಿಯಲ್ಪಡುವುದನ್ನು ನಂಬಬೇಕು. ಪ್ರಮಾಣದಿಂದಲೇ ವಸ್ತುಸ್ವರೂಪವನ್ನು ತಿಳಿಯಬೇಕು. ವಸ್ತುಸ್ವರೂಪವು ಭಿನ್ನವಾಗಿಯೂ ಅಭಿನ್ನವಾಗಿಯೂ ಇರುತ್ತದೆಂದು ತಿಳಿಯಿಸಿದರೆ ಅದರ ಮೇಲೆ ನಮ್ಮ ಆಕ್ಷೇಪಣೆಯೇನು ? ಭೇದವೂ ಅಭೇದವೂ ವಿರೋಧವಿರುವುದರಿಂದ ಒಂದರಲ್ಲಿರಲಾರದೆಂದು ಹೇಳಲಾಗದು. ವಿರೋಧವೂ ಅವಿರೋಧವೂ ಪ್ರಮಾಣಮೂಲಕವಾಗಿಯೇ ತಿಳಿಯಲ್ಪಡಬೇಕು. ಪ್ರಮಾಣವು ಭೇದ ವನ್ನೂ ಅಭೇದವನ್ನೂ ಒಂದರಲ್ಲಿರುವ ಹಾಗೆ ಬೋಧಿಸಿದರೆ ವಿರೋಧ ವೆಂಬುದು ಯಾವುದು ? ವಸ್ತು ಒಂದು ರೂಪದಲ್ಲೇ ಇರುತ್ತದೆಂದು ಪರಮೇಶ್ವರನು ಎಲ್ಲೂ ಹೇಳಲಿಲ್ಲ. ಆದುದರಿಂದ ಸರ್ವವಸ್ತುಗಳಿಗೂ ಭೇದವೂ ಅಭೇದವೂ ಉಂಟು. ಕಾರಣರೂಪದಲ್ಲಿ ಅಭೇದವು, ಕಾರ್ಯ ರೂಪದಲ್ಲಿ ಭೇದವು. ಸುವರ್ಣಾಭರಣಗಳು. ಕಟಕಕುಂಡಲಾಂಗುಲೀಯಕ ಗಳು ಪರಸ್ಪರ ಭಿನ್ನಗಳಾದರೂ ಸುವರ್ಣರೂಪದಲ್ಲಿ ಅಭಿನ್ನಗಳು. ಹಾಗೆ ಪ್ರಪಂಚವು ಚೇತನಾಚೇತನ ವಿಚಿತ್ರವಿವಿಧರೂಪಗಳಿಂದ ಭಿನ್ನಗಳಾದರೂ ಬ್ರಹ್ಮನೆಂಬ ಕಾರಣರೂಪದಿಂದ ಅಭಿನ್ನಗಳಾಗಿರಬಹುದು. ಆದುದರಿಂದ ಶ್ರುತಿಗಳ ಅರ್ಥವನ್ನು ವ್ಯತ್ಯಾಸಪಡಿಸಿ ಒಂದು ಅಪ್ರಮಾಣ, ಮತ್ತೊಂದು ಪ್ರಮಾಣ, ಇದು ಇವರಿಗೆ ಪ್ರಮಾಣ, ಅದು ಅವರಿಗೆ ಪ್ರಮಾಣ, ಇದು ಈಗಿನವರಿಗೆ ಪ್ರಮಾಣ. ಅದು ಅನಂತರ ಪ್ರಮಾಣ, ಈ ಪ್ರಕಾರ ಪುರುಷ ಕಲ್ಪನೆಗಳನ್ನು ಅನುಸರಿಸಬಾರದು. ನಿರ್ದೋಷ ಶ್ರುತಿಮಾತೆಯ ಮುಖ ದಿಂದ ನಿರ್ಗತವಾದ ವಾಣಿಯನ್ನು ಕೇಳಬೇಕು, ಎಂದು ಭೇದಾಭೇದವಾದಿ ಗಳ ಅಭಿಪ್ರಾಯ.

ಈ ಅಭಿಪ್ರಾಯವನ್ನು ಶ್ರೀಶಂಕರಾಚಾರ್ಯರು ಬೃಹದಾರಣ್ಯಕ ಭಾಷ್ಯದಲ್ಲಿ ಹೀಗೆ ಸೂಚಿಸಿರುತ್ತಾರೆ (೪–೩–೬). "ಶ್ರುತ್ಯರ್ಥಕಲ್ಪನಾ ಕುಶಲರಾದ ಎಲ್ಲರೂ ಉಪನಿಷತ್ತುಗಳ ಅರ್ಥವನ್ನು ಅನ್ಯಥಾ ಮಾಡುತ್ತಾರೆ. ಆ ಪ್ರಕಾರವೇ ಅರ್ಥವಾಗುವ ಪಕ್ಷದಲ್ಲಿ ಹಾಗೆಯೇ ಆಗಲಿ. ನನಗೆ ದ್ವೇಷ ವಿಲ್ಲ. ಆದರೂ ನಮ್ಮ ಮನಸ್ಸು ಒಪ್ಪುವುದಿಲ್ಲ"ವೆಂದು ಮಹಾಧೀರರಾಗಿ

ಅಪ್ಪಣೆ ಕೊಡಿಸಿದ್ದಾರೆ. ಆದುದರಿಂದ ಹಿಂದಿನ ಸಕಲವೇದವ್ಯಾಖ್ಯಾತೃಗಳ ಅಭಿಪ್ರಾಯಗಳಿಗೆ ಪ್ರತಿಕಕ್ಷಿಯಾಗಿರುವುದು ನಮ್ಮ ಅಭಿಪ್ರಾಯವೆಂದು ಸ್ಪಷ್ಟವಾಗಿರುತ್ತದೆ.

ಮತ್ತು ಹಿಂದಿನವರ ಅಭಿಪ್ರಾಯವನ್ನೆಲ್ಲಾ ಬೃಹದಾರಣ್ಯಕಭಾಷ್ಯದಲ್ಲಿ, ಮತ್ತೊಂದು ಸಂದರ್ಭದಲ್ಲಿ, ಹೀಗೆ ಸಂಗ್ರಹಿಸಿರುತ್ತಾರೆ (೫-೮-೧೨)– "ಅಕ್ಷರನೆಂಬ ಪರಬ್ರಹ್ಮನು ಚಲಿಸದಿರುವ ಮಹಾಸಮುದ್ರದಂತಿರುವನು. ಸ್ವಲ್ಪ ಚಲನೆಯಿಂದ ಕೂಡಿ ಅವನೇ ಸರ್ವಾಂತರ್ಯಾಮಿ, ಸರ್ವೇಶ್ವರನು. ಸರ್ವ ವಸ್ತುಗಳಲ್ಲೂ ಪ್ರವೇಶಿಸಿ ನಿಯಮಿಸತಕ್ಕವನಾಗಿರುತ್ತಾನೆ. ಅಧಿಕ ಚಲನೆಯಿಂದ ಕೂಡಿದರೆ ಕ್ಷೇತ್ರಜ್ಞನು, ಜೀವಾತ್ಮನಾಗುತ್ತಾನೆ. ಕ್ಷೇತ್ರಜ್ಞನೆಂಬ ಜೀವನಿಗೆ ಅಂತರ್ಯಾಮಿ ತಿಳಿಯುವುದಿಲ್ಲ. ಹೀಗೆ ಅಕ್ಷರಬ್ರಹ್ಮನೇ ಪೃಥಿವೀ ಮೊದಲಾದ ಪಂಚಮಹಾಭೂತಗಳಾಗಿ ಆಗುತ್ತಾನೆ. ಹೀಗೆ ಎಂಟು ವಿಧವಾದ ತತ್ತ್ವಗಳು ಅಕ್ಷರಬ್ರಹ್ಮನ ಅವಸ್ಥೆ, ದಶೆ, ಬದಲಾವಣೆಯೆಂದು ಕೆಲವರು ಹೇಳುವರು. ಕೆಲವರು ಅಕ್ಷರವಸ್ತುವಿನ ಶಕ್ತಿಗಳಿವು, ಆ ಅಕ್ಷರತತ್ತ್ವವು ಅನಂತಶಕ್ತಿಯುಳ್ಳದ್ದೆಂದು ಹೇಳುವರು. ಮತ್ತೆ ಕೆಲವರು ಅಕ್ಷರವಸ್ತುವಿನ ವಿಕಾರ ಈ ಪ್ರಪಂಚವೆಂದು ಹೇಳುವರು. ಈ ಕಲ್ಪನೆಗಳೆಲ್ಲಾ ಸತ್ಯವಲ್ಲ. ಹಾಗಾದರೆ ಭೇದಾನುಭವವು ಹೇಗೆಂದರೆ ಉಪಾಧಿಮೂಲಕ ಸ್ವಾಭಾವಿಕವಲ್ಲವೆಂದು ಹೇಳುತ್ತೇವೆ" ಎಂದು ವಿವರಿಸಿರುವರು.

ಈ ವಿವರಣೆಯಲ್ಲಿ ಅವಸ್ಥೆ, ಶಕ್ತಿ, ವಿಕಾರ—ಎಂದು ಹಿಂದಿನವರ ಅಭಿಪ್ರಾಯವನ್ನಿಲ್ಲಿ ಮೂರು ರಾಶಿ ಮಾಡಿರುವರು. ಸಾಮಾನ್ಯದೃಷ್ಟಿಯಲ್ಲಿ ಲೋಕಕ್ಕೆ ಇವುಗಳ ವ್ಯತ್ಯಾಸವನ್ನು ತಿಳಿಯಿಸುವುದು ಸಾಧ್ಯವಿಲ್ಲ. ಆದರೂ ಒಂದು ವಸ್ತು ಅನೇಕ ವಸ್ತುಗಳಾಗಿ ಆಗಬಹುದೆಂದು ಒಟ್ಟು ಅಭಿಪ್ರಾಯ. ಸೃಷ್ಟಿಕಾಲದಲ್ಲಿ ಅನೇಕಪ್ರಕಾರವಾಗಿರುವ ವಸ್ತುಗಳೆಲ್ಲವೂ ಪ್ರಳಯಕಾಲದಲ್ಲಿ ಒಂದೇ ಆಗುವುವು. ಇದೇ ಭೇದಾಭೇದವಾದ.

ಇಲ್ಲಿ ಜೀವಾತ್ಮ ಪರಮಾತ್ಮನೆಂಬ ವಸ್ತುಗಳನ್ನು ವಿಚಾರಿಸಿದರೆ ಪರಮಾರ್ಥವಾಗಿ ಪರಮಾತ್ಮನೇ ಜೀವಾತ್ಮನಾಗಿರುತ್ತಾನೆ. ಮೋಕ್ಷದಲ್ಲಿ ಪರಮಾತ್ಮನಾಗಿರುತ್ತಾನೆ. ನದಿಗಳು ಸಮುದ್ರವಾಗುವುದನ್ನು, ಒಂದು

ಬಿಂದು ನೀರು ಕೊಡಹಾಲಿನಲ್ಲಿ ಸೇರಿಹೋಗುವುದನ್ನು, ಉಪ್ಪುಕಾಳು ನೀರಿನಲ್ಲಿ ಕರಗಿಹೋಗುವುದನ್ನು—ದೃಷ್ಟಾಂತಗಳಾಗಿ ಹೇಳುವರು.

ಪರಮಾರ್ಥವಾಗಿರುವ ಒಂದು ವಸ್ತು ಯಾವಾಗಲೂ ಮತ್ತೊಂದು ವಸ್ತುವಾಗಲಾರದು. ಹಿಂದಿನ ದೃಷ್ಟಾಂತಗಳಲ್ಲಿ ಭೇದವು ಸೂಕ್ಷ್ಮವಾಗಿರುವುದರಿಂದ ಕಾಣುವುದಿಲ್ಲವೆಂದು ಹೇಳಬಹುದೇ ವಿನಾ ವಸ್ತ್ವೈಕ್ಯವು ಯಾವಾಗಲೂ ಇಲ್ಲ. ಆದುದರಿಂದ ಒಂದಾಗಿದ್ದುದೇ ದೋಷದಿಂದ ಎರಡಾಗಿ ಕಾಣಬಹುದು. ದೋಷ ಹೋದರೆ ಪುನಃ ಒಂದಾಗಿ ಆಯಿತೆಂದು ವ್ಯವಹಾರವೆಂದು ಶ್ರೀ ಶಾಂಕರಸಂಪ್ರದಾಯ.

ಎರಡಾಗಿರುವುದು ಒಂದಾಗುತ್ತದೆ ಎಂದು ಒಂದು ಸಿದ್ಧಾಂತ. ಒಂದಾಗಿಯೇ ಇರುವುದು ಎರಡಾಗಿ ಕಾಣುತ್ತದೆಯೆಂದು ಮತ್ತೊಂದು ಸಿದ್ಧಾಂತ. ಇವಕ್ಕೆ ಪ್ರತಿಯಾಗಿ ಎರಡಾಗಿಯೇ ಇರುವುದು, ಎರಡಾಗಿಯೇ ಮೋಕ್ಷದಲ್ಲಿ ನಿಂತುಬಿಡುವುದೆಂದು ಶ್ರೀ ರಾಮಾನುಜಾಚಾರ್ಯರ ಮತ್ತು ಆನಂದತೀರ್ಥರವರ ಸಂಪ್ರದಾಯಗಳು. ಇವುಗಳ ವಿವರಣೆ ಮುಂದಿರುವುದು.

# ೧೦

# ವಿಶಿಷ್ಟಾದ್ವೈತ

**ಸಂಪ್ರದಾಯ**

ವಿಶಿಷ್ಟಾದ್ವೈತಸಿದ್ಧಾಂತವೆಂಬುದು ಶ್ರೀಮದ್ರಾಮಾನುಜಾಚಾರ್ಯರಿಂದ ಪ್ರಚಾರಕ್ಕೆ ಬಂದಿರುವುದು. ಈ ಆಚಾರ್ಯರು ಕಾಂಚೀಪ್ರದೇಶದಲ್ಲಿ ಹನ್ನೊಂದನೆಯ ಶತಮಾನದಲ್ಲಿ ಜನಿಸಿ ತಿರುಪತಿ, ಮೇಲ್ಕೋಟೆ, ಶ್ರೀರಂಗ ಮೊದಲಾದ ಸ್ಥಳಗಳಲ್ಲಿ ಅನೇಕ ಶಿಷ್ಯಜನಸಮೂಹದೊಡನೆ ಸಂಚಾರಮಾಡಿ ಈ ಸಂಪ್ರದಾಯವನ್ನು ಪ್ರಚಾರಕ್ಕೆ ತಂದರು. ಅವರಿಗೆ ಪೂರ್ವಕಾಲ ಸುಮಾರು ಸಾವಿರಾರು ವರ್ಷಗಳ ಕಾಲದಿಂದಲೂ ಸಂಸ್ಕೃತ ದ್ರಾವಿಡಮಯವಾದ ಗ್ರಂಥಗಳಿಂದ ಈ ಸಂಪ್ರದಾಯ ಪ್ರಚಾರದಲ್ಲಿತ್ತೆಂದು ಶ್ರೀ ರಾಮಾನುಜಾಚಾರ್ಯರು ಹೇಳುತ್ತಾರೆ. ಆ ಪೂರ್ವಕಾಲದ ಆಚಾರ್ಯರು ಪರಾಶರ, ಬೋಧಾಯನ, ಟಂಕ, ದ್ರಮಿಡ, ಗುಹದೇವ, ಭಾರುಚಿ ಮೊದಲಾದವರೆಂದು ಇವರ ಗ್ರಂಥಗಳಿಂದ ತಿಳಿದುಬರುತ್ತದೆ. ಸುಮಾರು ನೂರಾರು ವರ್ಷಗಳ ಹಿಂದೆ ಅನೇಕ ಪ್ರಬಂಧ ಕರ್ತೃಗಳಾದ ನಾಥಮುನಿ, ಯಾಮುನಾಚಾರ್ಯ ಮೊದಲಾದವರುಗಳ ಸಂಸ್ಕೃತ ಗ್ರಂಥಗಳ ಮೂಲಕ ಶ್ರೀರಾಮಾನುಜಾಚಾರ್ಯರು ಶ್ರೀಭಾಷ್ಯ ಮೊದಲಾದ ಒಂಬತ್ತು ಗ್ರಂಥಗಳನ್ನು ಬರೆದಿರುತ್ತಾರೆ. ದಕ್ಷಿಣ ದೇಶದಲ್ಲಿ ಈ ಸಿದ್ಧಾಂತ ವಿಶೇಷ ಪ್ರಚಾರಾಭಿವೃದ್ಧಿಯಲ್ಲಿರುತ್ತದೆ. ನಾಥಮುನಿಗಳ ಗ್ರಂಥಗಳು ನ್ಯಾಯ ತತ್ತ್ವ, ಯೋಗರಹಸ್ಯ ಮೊದಲಾದುವು. ಯಾಮುನಾಚಾರ್ಯರ ಗ್ರಂಥಗಳು ಸಿದ್ಧಿತ್ರಯ ಮೊದಲಾದ ಎಂಟು ಗ್ರಂಥಗಳು.

ಈ ಸಿದ್ಧಾಂತಕ್ಕೆ ಕೇವಲ ಗ್ರಂಥಗಳಲ್ಲದೆ ದಿವ್ಯದೇಶಗಳೆಂಬ ಶ್ರೀರಂಗ, ಕಾಂಚಿ ಮೊದಲಾದ ನೂರಾರು ದಿವ್ಯಕ್ಷೇತ್ರಗಳು ಪ್ರಚಾರಕ್ಕೆ ಕಾರಣಗಳಾಗಿರುವುವು. ಶ್ರೀರಾಮಾನುಜಾಚಾರ್ಯರು ಸಿದ್ಧಾಂತಗ್ರಂಥಗಳನ್ನು ಬರೆದು ಸಿದ್ಧಾಂತವನ್ನು ಪ್ರಚಾರಮಾಡಿದುದಲ್ಲದೆ ಅನೇಕ ದೇಶಗಳಲ್ಲಿ

ದೇವಸ್ಥಾನಗಳ ಪರಿಷ್ಕಾರವನ್ನು ಕೈಕೊಂಡು ಮನುಷ್ಯಸಾಮಾನ್ಯವನ್ನೆಲ್ಲಾ ಸನ್ಮಾರ್ಗಕ್ಕೆ ತರಲು ಬಹುವಿಧವಾದ ಪ್ರಪಂಚೋದ್ಧಾರ ದೃಷ್ಟಿಯಲ್ಲಿ ಔದಾರ್ಯವನ್ನು ಪ್ರಕಾಶಪಡಿಸಿರುವರು. ಆದುದರಿಂದ ಅವರ ವಿಗ್ರಹ ಗಳಿಗೂ ಆಲಯಪ್ರತಿಷ್ಠೋತ್ಸವಾದಿಗಳನ್ನು ಅದ್ಯಾಪಿ ಶಿಷ್ಯರು ಕೊಂಡಾಡು ತ್ತಿರುವರು. ಈ ಸಂಪ್ರದಾಯ ಜನಸಾಮಾನ್ಯಕ್ಕೆ ದೈವಭಕ್ತಿ, ಸನ್ಮಾರ್ಗ ಮೊದಲಾದುವುಗಳಿಂದ ಬಹು ರಮಣೀಯವಾಗಿರುವುದೆಂದು ಇತರ ಸಿದ್ಧಾಂತದವರೂ ಪೂರ್ವಾಚಾರ್ಯರ ವಿಗ್ರಹಾಲಯ ಪ್ರತಿಷ್ಠಾದಿಗಳನ್ನು ಈಗೀಗ ಕೈಕೊಳ್ಳುತ್ತಿರುವರು.

ಸಾಂಖ್ಯಸಿದ್ಧಾಂತದಲ್ಲಿ ಸೇಶ್ವರಸಾಂಖ್ಯ, ನಿರೀಶ್ವರಸಾಂಖ್ಯವೆಂದು ವಿಭಾಗವಿರುವ ಹಾಗೆ ಮೀಮಾಂಸಾಸಿದ್ಧಾಂತದಲ್ಲೂ ಸೇಶ್ವರಮೀಮಾಂಸಾ, ನಿರೀಶ್ವರಮೀಮಾಂಸಾ ಎಂದು ವಿಭಾಗವಿತ್ತು. ಸೇಶ್ವರಮೀಮಾಂಸಾ ಪಕ್ಷವನ್ನು ತಾರ್ಕಿಕಾಚಾರ್ಯರಾದ ಉದಯನಾಚಾರ್ಯರು 'ಆತ್ಮತತ್ತ್ವ ವಿವೇಕ'ದಲ್ಲಿ ಉದಹರಿಸಿರುತ್ತಾರೆ. ಶಬರಸ್ವಾಮಿ ಮೊದಲಾದವರಿಂದ ಮೀಮಾಂಸೆ ನಿರೀಶ್ವರ ಪಕ್ಷದಲ್ಲೇ ಪ್ರಚಾರವಾಯಿತು. ಪೂರ್ವೋತ್ತರ ಮೀಮಾಂಸಾ ಸೂತ್ರಗಳಿಗೆ ವಿಪುಲವಾದ 'ಕೃತಕೋಟಿ'ಯೆಂಬ ವೃತ್ತಿಕಾರ ರಾದ ಉಪವರ್ಷಾಚಾರ್ಯರೆಂಬ ಬೋಧಾಯನಾಚಾರ್ಯರಿಂದ ಬಹು ಪೂರ್ವಕಾಲದಲ್ಲಿ ಸೇಶ್ವರಮೀಮಾಂಸಾ ಪಕ್ಷವು ಪ್ರಚಾರಮಾಡಲ್ಪಟ್ಟಿತ್ತು. ಉಪವರ್ಷ ವೃತ್ತಿಯನ್ನು ಶಬರ, ಶಂಕರ ಮೊದಲಾದ ಸರ್ವರೂ ಉದಾ ಹರಿಸುತ್ತಲಿರುವರು. ಆ ಸಿದ್ಧಾಂತಸಮ್ಮತವಾದ ಅನೇಕ ಪ್ರಮಾಣ ಪ್ರಮೇಯ ವ್ಯವಸ್ಥೆ ಪ್ರಾಭಾಕರಾದಿ ಗ್ರಂಥಗಳಲ್ಲಿ ಅದ್ಯಾಪಿ ಕಾಣಲ್ಪಡು ವುದು. ಅವುಗಳಲ್ಲಿ ಬಹಳ ಅಂಶಗಳು ರಾಮಾನುಜಾಚಾರ್ಯರಿಂದ ಪರಿಗ್ರಹಿಸಲ್ಪಟ್ಟು ಈ ಸಿದ್ಧಾಂತಕ್ಕೆ ಮೂಲವಾಗಿರುವುವು.

ಕುಮಾರಿಲಸಂಪ್ರದಾಯದಲ್ಲಿರುವ ಅನೇಕ ವಿಷಯಗಳು ಸಿದ್ಧಾಂತಕ್ಕೆ ಸಮ್ಮತಗಳಾಗಿರುತ್ತವೆ. ಆದುದರಿಂದ ಸೇಶ್ವರಮೀಮಾಂಸಾಪಕ್ಷವೇ ವಿಶಿಷ್ಟಾ ದ್ವೈತಪಕ್ಷವೆಂದು ನಿರ್ಣಯ.

ಈ ಸಿದ್ಧಾಂತದಲ್ಲಿ ಮುಖ್ಯವಾದ ಅಂಶವಿದು—ಸಕಲ ಜೀವಾತ್ಮ ವಸ್ತುಗಳಿಗೂ, ಆವರಣವಾಗಿರುವ ಶರೀರಭೇದವೇ ಹೊರತು ಸ್ವರೂಪದಲ್ಲಿ

ಪರಸ್ಪರ ಯಾವ ವಿಧವಾದ ಭೇದವೂ ಇಲ್ಲ. ಸಕಲಾಂಶಗಳಲ್ಲಿಯೂ ಸಕಲಾತ್ಮ ವಸ್ತುಗಳೂ ಅತ್ಯಂತಸಮಾನವಾಗಿರುವುವು. ಇಂತಹ ಆತ್ಮವಸ್ತುಗಳಿಗೂ ಪರಮಾತ್ಮನಿಗೂ ಕೆಲವು ವಿಷಯಗಳು ವಿನಾ ಉಳಿದ ವಿಷಯಗಳಲ್ಲೆಲ್ಲಾ ಅತ್ಯಂತ ಸಾಮ್ಯವಿರುವುದು. ಇದು ಸಾಮ್ಯದರ್ಶನದ ಪರಾಕಾಷ್ಠೆ. ಈ ಅಭಿಪ್ರಾಯದಿಂದ ಪ್ರತಿಜೀವಾತ್ಮನೂ ಪರಮಾತ್ಮಸಾಮ್ಯವೆಂಬ ಪರಮಪುರುಷಾರ್ಥವನ್ನು ಹೊಂದಬಹುದು. ಇಂತಹ ಪರಮಪುರುಷಾರ್ಥ ಪ್ರಾಪ್ತಿಗೆ ಪರಮಾತ್ಮನ ಪರಮಾನುಗ್ರಹವೇ ಮುಖ್ಯಕಾರಣವಾದುದರಿಂದ ಅದಕ್ಕೆ ಅನೇಕ ವಿಧವಾದ ಸಾಧನಗಳು ನಿರೂಪಿಸಲ್ಪಟ್ಟಿರುವುವು. ಇಂತಹ ಸಾಧನಗಳಿಂದ ಪ್ರತಿಜೀವಾತ್ಮನೂ ಯಾವ ವಿಧವಾದ ಜಾತಿ, ಕುಲ, ಗೋತ್ರ, ಪಶು, ಪಕ್ಷಿ, ಮೃಗ ಮೊದಲಾದ ಯಾವ ರೂಪದಲ್ಲಿದ್ದರೂ ಮೋಕ್ಷವನ್ನು ಹೊಂದಬಹುದು. ಪರಮಾತ್ಮನು ಅಪಾರ ಕರುಣಾನಿಧಿಯಾದುದರಿಂದ ಸರ್ವಜೀವಾತ್ಮರೂ ತನ್ನ ಪರಮ ಸಾಮ್ಯವನ್ನು ಹೊಂದಿ ಆನಂದದಲ್ಲಿರಬೇಕೆಂದು ಸರ್ವದಾ ಪ್ರತೀಕ್ಷಿಸುತ್ತಾ ಸೃಷ್ಟಿಸ್ಥಿತಿಸಂಹಾರ ಅವತಾರ ಉಪದೇಶ ಮೊದಲಾದ ವ್ಯಾಪಾರದಲ್ಲಿ ಸದಾ ನಿರತನಾಗಿರುವನು. ಈ ರೀತಿ ಈ ಸಿದ್ಧಾಂತ ಸರ್ವಪ್ರಕಾರದಿಂದಲೂ ಸರ್ವಾತ್ಮರೂ ಮೋಕ್ಷವನ್ನು ಹೊಂದಬಹುದೆಂದು ಪರಮೌದಾರ್ಯವನ್ನು ಪ್ರಕಾಶಪಡಿಸಿರುವುದರಿಂದ ರಾಮಾನುಜಾಚಾರ್ಯರು ಉದಾರಭಾವವುಳ್ಳವರು ಮತ್ತು ಪರಮಪದಕ್ಕೆ ಸೋಪಾನವನ್ನು ಕಟ್ಟಿರುವರೆಂದು ಪ್ರಸಿದ್ಧಿ ಉಂಟಾಗಿದೆ.

### ಸಿದ್ಧಾಂತಸ್ವರೂಪ

ಚೇತನಾಚೇತನೇಶ್ವರನೆಂದು ಸಂಕ್ಷೇಪವಾಗಿ ಮೂರುತತ್ತ್ವಗಳೆಂದು ಹೇಳಿ ಅವುಗಳನ್ನು ತ್ರಿಗುಣ, ಕಾಲ, ಶುದ್ಧಸತ್ತ್ವ, ಜ್ಞಾನ, ಜೀವ, ಈಶ್ವರ ಎಂದು ವಿಸ್ತರಿಸಿ ಆರು ದ್ರವ್ಯಗಳೆಂದೂ ಶಬ್ದಸ್ಪರ್ಶಾದಿ ಐದು ಗುಣಗಳು, ಸತ್ತ್ವಾದಿಗುಣಗಳು ಮೂರು, ಸಂಯೋಗಶಕ್ತಿಗಳೆರಡು ಅಂತೂ ಆ ದ್ರವ್ಯಗಳು ಹತ್ತುವಿಧಗಳೆಂದೂ ಪದಾರ್ಥವ್ಯವಸ್ಥೆಯಿದೆ. ಕೆಲವು ಶಾಸ್ತ್ರಗಳಲ್ಲಿ ಒಂದೇ ತತ್ತ್ವವೆಂದು ಉಪದೇಶವಿರುತ್ತದೆ. ಪ್ರತ್ಯಕ್ಷಾದಿ ಪ್ರಮಾಣಗಳಿಂದಲೂ ಇತರ ಶಾಸ್ತ್ರಗಳಿಂದಲೂ ಅನೇಕ ತತ್ತ್ವವು ಸ್ಪಷ್ಟ

ಪಡುವುದು. ಆದುದರಿಂದ ಒಂದೆಂದು ಹೇಳುವ ಶಾಸ್ತ್ರಕ್ಕೆ ಬೇರೆ ಅಭಿಪ್ರಾಯವನ್ನು ಹೇಳಿದರೆ ಸಕಲ ಪ್ರಮಾಣಗಳಿಗೂ ಸಾಮರಸ್ಯ ಬರುತ್ತದೆ. ಏಕತತ್ತ್ವವಾದಕ್ಕೆ ಪ್ರಾಮಾಣ್ಯವನ್ನು ಕೊಟ್ಟು ಉಳಿದ ಸಕಲಪ್ರಮಾಣಗಳಿಗೂ ಅಪ್ರಾಮಾಣ್ಯವನ್ನು ಹೇಳುವುದು ನ್ಯಾಯವಲ್ಲವೆಂದು ಇವರ ಅಭಿಪ್ರಾಯ.

ಏಕತತ್ತ್ವವಾದಕ್ಕೆ ತಾತ್ಪರ್ಯವೆಂತೆಂದರೆ — ಸಕಲತತ್ತ್ವಗಳೂ ವಸ್ತುಗಳೂ ಈಶ್ವರವಸ್ತುವಿನಲ್ಲಿ ಅಡಗಿದೆಯೆಂದರೆ ವಸ್ತುಗಳ ಸ್ವರೂಪವು ಪರಸ್ಪರವಿಲಕ್ಷಣವು, ಅತ್ಯಂತಭಿನ್ನವು. ಆದರೂ ಇರುವಿಕೆಯೆಂಬ ವಸ್ತುಗಳ ಸ್ಥಿತಿ ಬೇರೆಯಲ್ಲ. ಸ್ವರೂಪಗಳು ಬೇರೆ ಬೇರೆ, ಸ್ಥಿತಿ ಒಂದು. ಇದರಿಂದ ಸಕಲಪ್ರಮಾಣಸಾಮರಸ್ಯವೆಂದಭಿಪ್ರಾಯವು.

ಉದಾಹರಣೆ—"ಒಂದು ಮಾವಿನ ಹಣ್ಣಿನಲ್ಲಿ ಬಣ್ಣ ಬೇರೆ, ರಸ ಬೇರೆ, ಗಂಧ ಬೇರೆ, ಸ್ಪರ್ಶ ಬೇರೆ, ನಾರು ಬೇರೆ, ಬೀಜ ಬೇರೆ, ಖಂಡ ಬೇರೆ, ಹೊಟ್ಟು ಬೇರೆ ; ಹೀಗಿದ್ದರೂ ಒಂದರಲ್ಲಿ ಒಂದು ಸೇರುವುದಿಲ್ಲ. ಸ್ವಭಾವವು ಭಿನ್ನಭಿನ್ನವಾಗಿರುವುದು. ಆದರೂ ಒಟ್ಟು ಸೇರಿ ಒಂದು ಹಣ್ಣು ಎಂದು ಸರ್ವಜನ ವ್ಯವಹಾರವಿದೆ ; ಅಬಾಧಿತವಾಗಿರುವುದು. ಇವುಗಳ ಸ್ಥಿತಿ ಎಲ್ಲಕ್ಕೂ ಒಂದೇ ಆಗಿರುವುದು. ಒಂದನ್ನು ಬಿಟ್ಟು ಮತ್ತೊಂದು ಇರುವುದಿಲ್ಲ. ಸ್ಥಿತಿಯೆಂಬುದೊಂದು ವಿಧ ಸಂಬಂಧವೆಂದು ಹೇಳಬಹುದು. ಇಂತಹ ಸಂಬಂಧವೆಂಬ ಸ್ಥಿತಿ ಅಬಾಧಿತವಾಗಿ ಸರ್ವಜನಾನುಭವಸಿದ್ಧವಾಗಿರುವುದು. ಮೇಲ್ಕಂಡ ಬಣ್ಣ ಮೊದಲಾದುವುಗಳಲ್ಲಿ ಯಾವುದನ್ನು ಬೇಕಾದರೂ ಪ್ರಧಾನವಾಗಿಟ್ಟುಕೊಳ್ಳಬಹುದು. ಪ್ರಕೃತದಲ್ಲಿ ಈಶ್ವರನೆಂಬ ವಸ್ತುವನ್ನು ಪ್ರಧಾನವಾಗಿಟ್ಟುಕೊಂಡು ಅವನ ಸ್ಥಿತಿಯಲ್ಲೇ ಸಕಲ ವಸ್ತುಗಳ ಸ್ಥಿತಿಯನ್ನು ಸೇರಿಸಿ ಲೋಕಾನುಭವಕ್ಕೆ ಅನುಗುಣವಾಗಿ ತತ್ತ್ವ ಒಂದೆಂಬ ವಾದವನ್ನು ಸಮರ್ಥಿಸಿರುವರು. ಇದೇ ವಿಶಿಷ್ಟಾದ್ವೈತಂ, ಏಕಂ, ತತ್ತ್ವಂ ಎಂದರ್ಥವು. ಇದರಿಂದ ವಸ್ತುಗಳಿಗೆ ಐಕ್ಯವೂ ಭೇದವೂ ಸಂರಕ್ಷಿಸಲ್ಪಟ್ಟಿತು. ವಸ್ತುಸ್ವಭಾವಸಾಂಕರ್ಯವಿಲ್ಲ.

ಕಾರ್ಯಕಾರಣಭಾವ ವಿಷಯದಲ್ಲಿ ಪರಿಣಾಮವೆಂಬ ಸೂಕ್ಷ್ಮಸ್ಥೂಲ ದಶೆಯೆಂಬ ಅವಸ್ಥಾವಾದವು ಸಮ್ಮತವಾಗಿರುವುದು. ಅವಸ್ಥಾ, ದಶಾ,

ವಿಕಾರ, ಪರಿಣಾಮ, ಕಾರ್ಯ, ಉತ್ಪತ್ತಿ, ಮೊದಲಾದ ಶಬ್ದಗಳೆ ಏಕಾರ್ಥಕಗಳು. ಪ್ರಲಯಕಾಲದಲ್ಲಿ ನಾಮರೂಪವಿಭಾಗಕ್ಕೆ ಅನರ್ಹವಾದ ಸೂಕ್ಷ್ಮರೂಪದಲ್ಲಿ ಸಕಲವಸ್ತುಗಳೂ ಇರುವುವು. ಅವಾಗ ಅವಕ್ಕೆಲ್ಲಾ ಸೇರಿ ಸತ್ ಎಂದೇ ವ್ಯವಹಾರ. ಅನಂತರ ಸ್ವಲ್ಪ ಸ್ವಲ್ಪ ಸ್ಥೂಲಾವಸ್ಥೆ ಯಲ್ಲಿ ಬಂದರೆ ಈಶ್ವರ, ಪುರುಷ, ಪ್ರಕೃತಿಯೆಂಬ ವ್ಯವಹಾರ. ಅನಂತರ ಮಹದಹಂಕಾರ, ಇಂದ್ರಿಯ, ಪಂಚಭೂತ, ಬ್ರಹ್ಮಾಂಡ, ಲೋಕ, ಮನುಷ್ಯ, ಮೊದಲಾದ ಸಕಲ ವಸ್ತುಗಳು.

ಈ ಅಭಿಪ್ರಾಯವನ್ನು ಶಂಕರಾಚಾರ್ಯರು ಪೂರ್ವಪಕ್ಷದಲ್ಲಿ ಅನುವಾದ ಮಾಡಿರುತ್ತಾರೆ. (ಭಾ. ೫-೮-೧೨) "ಪರಬ್ರಹ್ಮನು ಸಮುದ್ರದಂತೆ ಅಪ್ರಚಲಿತ-ಸ್ವಭಾವದಲ್ಲಿ ಅಕ್ಷರನೆಂದು ಕಾರಣರೂಪದಲ್ಲಿರುವನು ಅಂತಹವನು ಸ್ವಲ್ಪ ಚಲನಾವಸ್ಥೆಗೆ ಬಂದರೆ ಅಂತರ್ಯಾಮಿ ಎನ್ನಲ್ಪಡುವನು. ಅತ್ಯಂತಚಲನಾವಸ್ಥೆಗೆ ಬಂದರೆ ಕ್ಷೇತ್ರಜ್ಞನೆನ್ನಲ್ಪಡುವನು. ಈ ಕ್ಷೇತ್ರಜ್ಞನಿಗೆ ಅಂತರ್ಯಾಮಿ ಗೋಚರನಲ್ಲ. ಹೀಗೆ ಬ್ರಹ್ಮನಿಗೇ ಐದು ಅವಸ್ಥೆಗಳು ಕ್ರಮವಾಗಿ ಬರುವುವು. ಈ ಅವಸ್ಥೆಗಳಲ್ಲಿರುವ ಬ್ರಹ್ಮನೇ ಪೃಥಿವ್ಯಪ್ತೇಜೋವಾಯ್ವಾಕಾಶವೆನ್ನಲ್ಪಡುವನು. ಹೀಗೆ ಎಂಟುವಿಧ ಅವಸ್ಥೆಗಳನ್ನು ಹೊಂದುವನು" ಎಂದು ಕೆಲವರು ಹೇಳುವರು.

ಕೆಲವರು "ಅಕ್ಷರವೆಂಬ ವಸ್ತುವಿನ ಶಕ್ತಿಗಳು ಇವುಗಳು. ಆ ಅಕ್ಷರವು ಅನಂತಶಕ್ತಿಯುಳ್ಳದ್ದು " ಎಂದು ಹೇಳುವರು. ಮತ್ತೆ ಕೆಲವರು "ಅಕ್ಷರನ ವಿಕಾರಗಳು ಇವುಗಳೆಂದು ಹೇಳುವರು. ಹೀಗೆ ಹೇಳುವುದೆಲ್ಲಾ ಬರಿಯ ಕಲ್ಪನೆಗಳು, ಅಸತ್ಯಗಳು. ಹಾಗಾದರೆ ಈ ಪ್ರಪಂಚವೆಂಬ ಭೇದವು ಹೇಗೆ ? ಭ್ರಾಂತಿ ಮೂಲಕವೆಂದು ಹೇಳುವೆವು" ಎಂದಿದ್ದಾರೆ. ಈ ವಾಕ್ಯಗಳಲ್ಲಿ ಅವಸ್ಥಾ, ಶಕ್ತಿ, ವಿಕಾರ ಎಂದು ಮೂರು ಮತಗಳು ಅನುವದಿಸಲ್ಪಟ್ಟಿರುವುವು. ಒಂದನೆಯ ಮತದ ಪರಿಷ್ಕಾರವೇ ಭಾಸ್ಕರ ಮತ. ಎರಡನೆಯ ಮತದ ಪರಿಷ್ಕಾರವೇ ರಾಮಾನುಜ ಮತ. ಮೂರನೆಯ ಮತದ ಪರಿಷ್ಕಾರವೇ ಯಾದವಪ್ರಕಾಶಮತ.

ಮತ್ತು " (ಬೃ. ೪-೩-೬) ಶ್ರುತ್ಯರ್ಥಕಲ್ಪನಾಕುಶಲರಾದ ಸಕಲ ವಿದ್ವಾಂಸರೂ ಉಪನಿಷತ್ತುಗಳಿಗೆ ಬೇರೆ ವಿಧವಾಗಿ ಅರ್ಥಗಳನ್ನು ಮಾಡು

ತ್ತಾರೆ. ಅದೇ ವೇದಾರ್ಥವಾಗುವ ಪಕ್ಷದಲ್ಲಿ ನನಗೆ ದ್ವೇಷವಿಲ್ಲ. ಆದರೂ ಅದು ಸಂಭವಿಸುವುದಿಲ್ಲ" ಎಂದು ಪ್ರಾಚೀನ ಸಕಲ ವೇದಾಂತಿಗಳನ್ನೂ ಪ್ರತಿಪಕ್ಷದಲ್ಲಿ ನಿಲ್ಲಿಸಿರುತ್ತಾರೆ. ಮತ್ತು (ಬೃ. ೪-೧-೨೦) "ಅನೇಕ ಶ್ರುತಿಸ್ಮೃತಿವಚನಗಳನ್ನು ಪರಿಶೀಲಿಸಿದರೆ ಜಗತ್ಕಾರಣಭೂತನಾದ ಪರಮಾತ್ಮನು ಬೇರೆ. ಸಂಸಾರಿಯಾದ ಜೀವಾತ್ಮನು ಬೇರೆ. ಇಂತಹ ಜೀವಾತ್ಮನು ಪರಮಾತ್ಮನನ್ನು ನಾನೇ ಬ್ರಹ್ಮನೆಂದು ತಿಳಿಯಬಾರದು. ಉತ್ಕೃಷ್ಟನಾದ ದೇವದೇವನಾದ ಪರಮೇಶ್ವರನೇ ನಾನೆಂದು ತಿಳಿದರೆ ಇದಕ್ಕಿಂತಲೂ ದೋಷವುಂಟೆ ? ಆದ್ದರಿಂದ ನಾನೇ ಬ್ರಹ್ಮನೆಂದು ತಿಳಿಯುವುದು ಯುಕ್ತಿ ವಿರುದ್ಧ. ಆದ್ದರಿಂದ ಪುಷ್ಪ, ಉದಕ, ಅಂಜಲಿ, ಸ್ತುತಿ, ನಮಸ್ಕಾರ, ಪೂಜೆ, ಉಪಹಾರ, ಪಾರಾಯಣ, ಧ್ಯಾನ, ಯೋಗ ಮೊದಲಾದುವುಗಳಿಂದ ಪ್ರೀತಿಪೂರ್ವಕವಾಗಿ ಆರಾಧಿಸಬೇಕು" ಎಂದು ಅನುವದಿಸಿರುವರು. ಇದರಿಂದ ರಾಮಾನುಜಸಿದ್ಧಾಂತಾಭಿಪ್ರಾಯವು ಅನಾದಿಕಾಲದಿಂದಿತ್ತೆಂದು ಸ್ಪಷ್ಟ.

ಪ್ರಾಯಶಃ ಈ ಸಿದ್ಧಾಂತ ವಿಶುದ್ಧಾದ್ವೈತಸಿದ್ಧಾಂತಕ್ಕೆ ಸಾಕ್ಷಾತ್ಪ್ರತಿ ಪಕ್ಷದಲ್ಲಿರುವುದು. ಹೇಗೆಂದರೆ—ವಿಶುದ್ಧಾದ್ವೈತಸಿದ್ಧಾಂತವು ಪರಬ್ರಹ್ಮನನ್ನು ಬಿಟ್ಟು ಉಳಿದ ಸರ್ವ ವಸ್ತುಗಳನ್ನು ನಿಷೇಧಮಾಡಿರುವುದರಲ್ಲಿ ಮುಖ್ಯ ದೃಷ್ಟಿಯನ್ನಿಟ್ಟಿರುವುದರಿಂದ ವ್ಯತಿರೇಕದೃಷ್ಟಿಯಲ್ಲಿರುವುದು. ಎಂದರೆ ಶ್ರುತಿಯಲ್ಲಿ ಅದೃಶ್ಯ, ಅಗೋತ್ರ, ಅವರ್ಣ, ಅಗಂಧ, ಅರಸ, ಅಕರ್ಮ ಎಂದು ಹೇಳಿರುವಹಾಗೆ ಸತ್ಯ, ಜ್ಞಾನ, ಆನಂದ, ಸತ್ಯಕಾಮ, ಸತ್ಯಸಂಕಲ್ಪ ಮೊದಲಾದ ಪದಗಳಿಗೂ ಅಸತ್ಯವಲ್ಲ, ಅಜ್ಞಾನವಲ್ಲ. ಅನಾನಂದವಲ್ಲ, ಅಸತ್ಯಕಾಮನಲ್ಲ, ಅಸತ್ಯಸಂಕಲ್ಪನಲ್ಲ ಎಂಬ ರೀತಿಯಲ್ಲಿ ಸಕಲ ಶ್ರುತಿಗಳಿಗೂ ವ್ಯಾಖ್ಯಾನವಿರುವುದು. ಈ ಸಿದ್ಧಾಂತವು ಪ್ರಾಯೇಣ ವಿಧಿದೃಷ್ಟಿಯಲ್ಲಿರುವುದು, ಎಂದರೆ ಅನ್ವಯಮಾರ್ಗದಲ್ಲಿರುವುದು. ಶ್ರುತಿಯಲ್ಲೂ ಸರ್ವಕರ್ಮ, ಸರ್ವಗಂಧ, ಸರ್ವರಸ, ಸರ್ವಜ್ಞ ಮೊದಲಾದ ವಿಧಿವಾಕ್ಯಗಳನ್ನು ಪ್ರಾಧಾನವಾಗಿಟ್ಟುಕೊಂಡು ನಿಷೇಧವಾಕ್ಯಗಳಿಗೆ ಕೆಟ್ಟ ಅಂಶಗಳಿಲ್ಲವೆಂದರ್ಥದಿಂದ ಅನ್ವಯದೃಷ್ಟಿಯಲ್ಲಿರುವುದು.

ಇದರಿಂದ ಈ ಪ್ರಕಾರ ನಿರ್ಣಯವಾಗುವುದು—

೧. ಬ್ರಹ್ಮನು ಹೊರತು ಬೇರೆ ಯಾವ ವಸ್ತುವೂ ಇಲ್ಲ. ವ್ಯತಿರೇಕೀಣಾಭಾವವೆನ್ನಬಹುದು. ಸಕಲ ವಸ್ತುಗಳೂ ಬ್ರಹ್ಮನಲ್ಲೇ ಅಡಗಿರುತ್ತವೆ, ಅಂತರ್ಭಾವವೆನ್ನಬಹುದು.

೨. ಪೃಥಕ್ ನಾಸ್ತಿ, ಬೇರೆ ಇಲ್ಲ, ಅಪೃಥಗಸ್ತಿ, ಸೇರಿರುತ್ತದೆ.

೩. ಬ್ರಹ್ಮಸತ್ತಯೈವ ಸತ್ತ್ವಂ. ಬ್ರಹ್ಮನ ಇರುವಿಕೆಯಿಂದಲೇ ಪ್ರಪಂಚಕ್ಕೆ ಇರುವಿಕೆಯಾದುದರಿಂದ ಪ್ರಪಂಚವಿಲ್ಲವೆಂದು ನಿಷೇಧಮಾರ್ಗವು. ಬ್ರಹ್ಮನ ಇರುವಿಕೆಯಿಂದಲೇ ಪ್ರಪಂಚದ ಇರುವಿಕೆಯಾದುದರಿಂದ ಪ್ರಪಂಚವೂ ಇರುತ್ತದೆ. ಬ್ರಹ್ಮನೂ ಇರುವನು ಎಂದು ವಿಧಿಮಾರ್ಗವು.

೪. ಬ್ರಹ್ಮನಲ್ಲಿ ಯಾವ ದೋಷವೂ ಇಲ್ಲವೆಂಬ ನಿಷೇಧದಲ್ಲಿ ಸಕಲ ಶಾಸ್ತ್ರಗಳ ತಾತ್ಪರ್ಯವು. ಬ್ರಹ್ಮನಲ್ಲಿ ಸಕಲ ಕಲ್ಯಾಣ ಗುಣಗಳು ಇವೆಯೆಂಬ ವಿಧಿಯಲ್ಲಿ ಸಕಲಶಾಸ್ತ್ರತಾತ್ಪರ್ಯವು.

೫. ಮೋಕ್ಷವೆಂಬುದು ಸರ್ವಾನಿಷ್ಟನಿವೃತ್ತಿಯೆಂದು ನಿಷೇಧದೃಷ್ಟಿ. ಮೋಕ್ಷವು ಸರ್ವೇಷ್ಟಪ್ರಾಪ್ತಿ ಎಂದು ವಿಧಿದೃಷ್ಟಿ.

೬. ಆತ್ಮರೆಲ್ಲರೂ ಒಂದು. ಆತ್ಮರೆಲ್ಲರೂ ಸಮರು.

ಹೀಗೆ ಪ್ರಾಯಃ ಸರ್ವಾಂಶದಲ್ಲೂ ವಿಧಿಪ್ರತಿಷೇಧದೃಷ್ಟಿಯಿರುವುದರಿಂದ ಅದ್ವೈತ ಪ್ರತಿಪಕ್ಷವು ವಿಶಿಷ್ಟಾದ್ವೈತವೆಂದು ತಿಳಿದುಬರುವುದು.

ಈ ಪ್ರಕಾರ ವಿಶುದ್ಧಾದ್ವೈತ ವಿಶಿಷ್ಟಾದ್ವೈತಸಿದ್ಧಾಂತಗಳ ವ್ಯತ್ಯಾಸವಾದರೆ, ವಿಶಿಷ್ಟಾದ್ವೈತವೆಂದರೆ ಎಲ್ಲವೂ ಒಟ್ಟಾಗಿ ಸೇರಿ ಒಂದಾಗಿರುವುದೆಂದರ್ಥವು. ವಿಶುದ್ಧಾದ್ವೈತವೆಂದರೆ ಯಾವ ವಸ್ತುವೂ ಇಲ್ಲದೆ ಬ್ರಹ್ಮನೊಬ್ಬನೇ ಇರುವನೆಂದರ್ಥವು. ಇದಕ್ಕೆ ಅನುಸಾರವಾಗಿ ಶ್ರುತಿಸ್ಮೃತೀತಿಹಾಸಪುರಾಣಗಳಿಗೆ ವ್ಯಾಖ್ಯಾನ ಮಾಡಿರುವರು. ವಿಶಿಷ್ಟಾದ್ವೈತ ಸಿದ್ಧಾಂತದಲ್ಲಿ ವ್ಯವಹಾರಮಾರ್ಗವನ್ನು ಪರಮಾರ್ಥ, ಅಪರಮಾರ್ಥವೆಂದು ವಿಭಾಗಮಾಡಿ ಪರಮಾರ್ಥವಾದ ವ್ಯವಹಾರ ಮಾರ್ಗವೇ ಅಂಗೀಕರಿಸಲ್ಪಟ್ಟಿರುವುದು.

ವಿಶಿಷ್ಟಾದ್ವೈತಸಿದ್ಧಾಂತದ ಪದಾರ್ಥವ್ಯವಸ್ಥೆ, ಪ್ರಮಾಣಪ್ರಮೇಯ

ಪ್ರಕ್ರಿಯೆ ಮೊದಲಾದುವೆಲ್ಲವೂ ಪ್ರಾಚೀನ ಮೀಮಾಂಸಕರ ಗ್ರಂಥಗಳಲ್ಲಿರುವುವು. ಅವುಗಳ ವ್ಯಾಸಂಗದಿಂದಲೇ ಈ ಸಿದ್ಧಾಂತವು ಪರಿಷ್ಕಾರವಾಗಿರುವುದೆಂದು ಸ್ಪಷ್ಟವಾಗಿ ಹೇಳಬಹುದು. ವಿಶುದ್ಧಾದ್ವೈತಸಿದ್ಧಾಂತ ಗ್ರಂಥಗಳಲ್ಲೂ ವಿಶಿಷ್ಟಾದ್ವೈತಸಂಪ್ರದಾಯಪ್ರಕ್ರಿಯೆ ಅನುವಾದಮಾಡಲ್ಪಟ್ಟು ಪರಮಾರ್ಥವಲ್ಲವೆಂದು ನಿರ್ಣಯಿಸಲ್ಪಟ್ಟಿರುವುದು. ಆದುದರಿಂದ ಪ್ರಾಯಶಃ ಸಕಲವಿಧವಾದ ಅಭಿಪ್ರಾಯಗಳೂ ಅನಾದಿಕಾಲದಿಂದ ಮನುಷ್ಯವ್ಯವಹಾರದಲ್ಲಿದ್ದುವೆಂದು ತಿಳಿಯಬಹುದು.

"ಸರ್ವಂ ಹಿ ವಸ್ತುಜಾತಂ ಪ್ರತೀತಿವ್ಯವಸ್ಥಾಪ್ಯಂ"

ಎಂಬ ನ್ಯಾಯವನ್ನು ಎಲ್ಲರೂ ಆಶ್ರಯಿಸಿರುವರು. ಪ್ರತೀತಿ ಸಂಪ್ರದಾಯಮೂಲಕವಾಗಿರುವುದು ವಾದಿಗಳು ಪರಸ್ಪರ ಎಷ್ಟು ದೂರ ವಿವಾದ ಮಾಡಿದರೂ ಕೊನೆಯಲ್ಲಿ ಉಪಲಂಭವೆಂಬ ಅವರವರ ಅನುಭವವನ್ನು ಮುಂದಿಡುತ್ತಾರೆ. ಆದುದರಿಂದ ಸಂಸ್ಕಾರ ವಾಸನೆಯೆಂಬ ಅಭ್ಯಾಸವೇ ಪರ್ಯವಸಾನದಲ್ಲಿ ನಿಲ್ಲುವ ತತ್ತ್ವ.

**ಲೀಲಾವಿಭೂತಿ**

ಈ ದರ್ಶನದಲ್ಲಿ ಸತ್ಯವಸ್ತುವೆಂದರೆ ಇರತಕ್ಕ ಸ್ಥಲದಲ್ಲಿ ತೋರಲ್ಪಡುವ ಘಟ ಪಟ ಮೊದಲಾದುವು. ಅಸತ್ಯವಸ್ತುವೆಂದರೆ ಇಲ್ಲದಿರುವ ಸ್ಥಲದಲ್ಲಿ ತೋರಲ್ಪಡುವ ರಜ್ಜುಸರ್ಪ, ಮೃಗಜಲ ಮೊದಲಾದುವು. ವ್ಯವಹಾರಸತ್ಯ, ಪರಮಾರ್ಥಸತ್ಯ ಮೊದಲಾದ ವಿಭಾಗಗಳಿಲ್ಲ. ಕುಮಾರಿಲಭಟ್ಟಾಚಾರ್ಯರು ಇಂತಹ ವಿಭಾಗಗಳನ್ನು ನಿರಾಕರಿಸುವರು. ಹೀಗೆ ಲೋಕಸಿದ್ಧವಾದ ಸತ್ಯಾಸತ್ಯವಿಭಾಗದ ಮೇಲೆ ವಿಚಾರ ನಡೆಯುವುದು.

ಹಿಂದೆ ಹೇಳಿದಂತೆ ಪದಾರ್ಥವು ದ್ರವ್ಯ ಅದ್ರವ್ಯವೆಂದು ಎರಡು ಪ್ರಕಾರ. ತ್ರಿಗುಣ, ಕಾಲ, ಶುದ್ಧಸತ್ತ್ವ, ಜ್ಞಾನ, ಜೀವ, ಈಶ್ವರ ಎಂದು ದ್ರವ್ಯಗಳು ಆರು. ಸತ್ತ್ವ, ರಜಸ್ಸು, ತಮಸ್ಸು, ಶಬ್ದ, ಸ್ಪರ್ಶ, ರೂಪ, ರಸ, ಗಂಧ, ಸಂಯೋಗ, ಶಕ್ತಿ ಎಂದು ಅ ದ್ರವ್ಯಗಳು ಹತ್ತು. ಇವುಗಳ ಸಮಷ್ಟಿಯೇ ಸಕಲಪ್ರಪಂಚವು. ಸ್ಥೂಲಾವಸ್ಥೆ, ಸೂಕ್ಷ್ಮಾವಸ್ಥೆ ಎಂಬ ಕಾರ್ಯಕಾರಣಪ್ರಕ್ರಿಯೆಯಿಂದ ಸಕಲಜಗದ್ವ್ಯವಹಾರವೂ ನಿರ್ವಹಿಸಲ್ಪಡುವುದು.

ಸತ್ತ್ವರಜಸ್ತಮಸ್ಸೆಂಬ ಮೂರು ಗುಣಗಳುಳ್ಳ ದ್ರವ್ಯವು ತ್ರಿಗುಣವು. ಇದು ಅನಂತಕೋಟಿಬ್ರಹ್ಮಾಂಡಮಯವಾದ ಸಕಲಪ್ರಪಂಚಕ್ಕೂ ಮೂಲ ಕಾರಣವಾದುದರಿಂದ ಮೂಲಪ್ರಕೃತಿಯೆಂದೂ ಶಾಶ್ವತವಾದುದರಿಂದ ಅಕ್ಷರವೆಂದೂ ಸೂಕ್ಷ್ಮವಾದುದರಿಂದ ಅವ್ಯಕ್ತವೆಂದೂ ಜಡವಾದುದರಿಂದ ತಮಸ್ಸೆಂದೂ ವಿಚಿತ್ರಕಾರ್ಯಗಳ ಕಾರಣವಾದುದರಿಂದ ಮಾಯೆಯೆಂದೂ ವಿಶುದ್ಧಜ್ಞಾನಕ್ಕೆ ವಿರೋಧಿಯಾದುದರಿಂದ ಅವಿದ್ಯೆಯೆಂದೂ ಈಶ್ವರನ ಜಗತ್ಸೃಷ್ಟಿಗೆ ಪ್ರಥಮ ಸಹಾಯವಾದುದರಿಂದ ಅಪರಶಕ್ತಿಯೆಂದೂ ಹೇಳಲ್ಪಟ್ಟಿರುವುದು.

ಇದು ಮಹಾಸಮುದ್ರದಂತೆ ದಶದಿಕ್ಕುಗಳಲ್ಲಿ ಮೇಲುಭಾಗ ಹೊರತು ಉಳಿದ ಒಂಬತ್ತು ಭಾಗಗಳಲ್ಲೂ ಅನಂತವಾಗಿ ವ್ಯಾಪಿಸಿರುವುದು. ಶುದ್ಧಸತ್ತ್ವವೆಂಬ ದ್ರವ್ಯ ಹೀಗೆಯೇ ಉಪರಿಭಾಗದಲ್ಲಿ ಅನಂತವಾಗಿ ವ್ಯಾಪಿಸಿರುವುದರಿಂದ ತ್ರಿಗುಣದ್ರವ್ಯಕ್ಕೆ ಶುದ್ಧಸತ್ತ್ವದ್ರವ್ಯ ಉಪರಿಭಾಗದಲ್ಲಿ ಅವಧಿಯಾಗಿರುವುದು. ಇದು ಸಾಂಶವಾದ ವಸ್ತುವಾದುದರಿಂದ ಮಹಾಸಮುದ್ರದ ಒಂದೊಂದು ಭಾಗದಲ್ಲಿ ಗುಳ್ಳೆಗಳೇಳುವ ಹಾಗೆ ಬ್ರಹ್ಮಾಂಡಗಳು ಉದಯಿಸುತ್ತಾ ವಿನಾಶವಾಗುತ್ತಾ ಇರುವುವು.

ಸತ್ತ್ವವೆಂದರೆ, ಜೀವನ ಜ್ಞಾನ ಸುಖ ಮೊದಲಾದುವುಗಳಿಗೆ ಹೇತುವಾಗಿರುವ ಗುಣ. ರಜಸ್ಸೆಂದರೆ ರಾಗ ದುಃಖ ಕ್ರಿಯೆ ಮೊದಲಾದುವುಗಳಿಗೆ ಹೇತುವಾಗಿರುವ ಗುಣ. ತಮಸ್ಸೆಂದರೆ ನಿದ್ರೆ, ಆಲಸ್ಯ, ಮೋಹ ಮೊದಲಾದುವುಗಳಿಗೆ ಹೇತುವಾಗಿರುವ ಗುಣ. ಈ ಗುಣಗಳು ಕಾಲದೇಶನಿಯಮದಿಂದ ಈಶ್ವರ ಸಂಕಲ್ಪಾಧೀನವಾಗಿ ಸಮಾವಸ್ಥೆಯಲ್ಲಿದ್ದರೆ ಪ್ರಲಯ; ವಿಷಮಾವಸ್ಥೆಯಲ್ಲಿದ್ದರೆ ಸೃಷ್ಟಿ. ಈ ಮೂಲಪ್ರಕೃತಿಯ ಮೊದಲನೆಯ ಪರಿಣಾಮವು ಮಹತ್ತೆಂಬ ದ್ರವ್ಯ. ಇದನ್ನು ಬುದ್ಧಿಯೆಂದೂ ಹೇಳುವರು. ಇದರ ವ್ಯಾಪಾರವು ಪ್ರಯತ್ನವೆಂಬ ಅಧ್ಯವಸಾಯ. ಅಧ್ಯವಸಾಯವೆಂಬ ಪದ ಜ್ಞಾನಪ್ರಭೇದ ನಿಶ್ಚಯದಲ್ಲೂ ಪ್ರಯೋಗಿಸಲ್ಪಡುವುದು.

ಮಹಾಸಮುದ್ರದಂತಿರುವ ಮಹತ್ತತ್ತ್ವದ ಏಕದೇಶದಲ್ಲಿ ಎರಡನೆಯ ಪರಿಣಾಮವೇ ಅಹಂಕಾರ. ಇದು ದೇಹಾತ್ಮಾಭಿಮಾನಗಳಿಗೆ ಕಾರಣವಾಗಿರುವುದು. ಸಾತ್ತ್ವಿಕಾಹಂಕಾರದಿಂದ ಪಂಚಕರ್ಮೇಂದ್ರಿಯಗಳು,

ಪಂಚಜ್ಞಾನೇಂದ್ರಿಯಗಳು, ಮನಸ್ಸು ಎಂದು ಹನ್ನೊಂದು ಇಂದ್ರಿಯಗಳು ಪರಿಣಮಿಸುವುವು. ತಾಮಸಾಹಂಕಾರದಿಂದ ಆಕಾಶಾದಿಪಂಚಭೂತಗಳು, ಶಬ್ದತನ್ಮಾತ್ರ ಮೊದಲಾದ ಪಂಚಸೂಕ್ಷ್ಮಭೂತಗಳನ್ನು ದ್ವಾರವಾಗಿಟ್ಟು ಕೊಂಡು ಹುಟ್ಟುವುವು. ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ—ಈ ಐದು ಜ್ಞಾನೇಂದ್ರಿಯಗಳು ವಾಕ್, ಪಾಣಿ, ಪಾದ, ಪಾಯು, ಉಪಸ್ಥ— ಈ ಐದು ಕರ್ಮೇಂದ್ರಿಯಗಳು. ಈ ಹತ್ತು ಇಂದ್ರಿಯಗಳೂ ಶರೀರದ ಆಯಾ ಅವಯವಗಳಲ್ಲಿರುವುದರಿಂದ ಅವಯವಗಳ ಹೆಸರುಗಳಿಂದಲೇ ಇವುಗಳ ವ್ಯವಹಾರವು. ಮನಸ್ಸೆಂಬುದು ಹೃದಯಕೋಶದಲ್ಲಿರುವುದು. ಈ ರೀತಿ ಮೂಲಪ್ರಕೃತಿ ಮೊದಲ್ಗೊಂಡು ಇಪ್ಪತ್ತುನಾಲ್ಕು ತತ್ತ್ವಗಳಲ್ಲಿ ಪಂಚಭೂತಗಳ ಹೊರತು ಉಳಿದ ಹತ್ತೊಂಬತ್ತು ತತ್ತ್ವಗಳು ಶಾಸ್ತ್ರದಿಂದ ಸಿದ್ಧವಾಗುವುವೇ ಹೊರತು ಯುಕ್ತಿಯಿಂದ ಸಿದ್ಧವಾಗುವಂತಹುವಲ್ಲ. ಇವು ಗಳ ಉತ್ಪತ್ತಿ ಸುವರ್ಣವು ಭೂಷಣಗಳಾಗುವ ಹಾಗೆ ಪರಿಣಾಮವೇ ವಿನಾ ಅಪೂರ್ವವಸ್ತ್ವಾರಂಭವಿಲ್ಲ. ಈ ರೀತಿಯಾದ ಬದಲಾವಣೆಯೇ ಸೃಷ್ಟಿ ಪ್ರಳಯಗಳು. ಕಾರ್ಯಕಾರಣಭಾವರೂಪದಲ್ಲಿರುವ ಪ್ರಕೃತಿಮಂಡಲವೇ ಪರಮೇಶ್ವರನ ಲೀಲಾವಿಭೂತಿ. ಸಂಕಲ್ಪಮಾತ್ರದಿಂದ ಸೃಷ್ಟಿಸ್ಥಿತಿ ಸಂಹಾರಾದಿಗಳಿಗೆ ಅರ್ಹವಾದ ಐಶ್ವರ್ಯವೆಂದರ್ಥವು. ಲೀಲೆಯೆಂದರೆ ಸಂತೋಷರೂಪವಾದ ಐಚ್ಛಿಕವ್ಯಾಪಾರ. ಅನುಕೂಲವೆಂದು ತೋರುವು ದೆಲ್ಲವೂ ಸಂತೋಷವು. ಇದೇ ಪ್ರಯೋಜನರೂಪವಾಗಿರುವುದರಿಂದ ಇದಕ್ಕೆ ಬೇರೆ ಪ್ರಯೋಜನ ಪ್ರಶ್ನೆ ಇಲ್ಲ. ಲೀಲಾವಿಚಾರವು ಪರಮಾತ್ಮನಿರೂಪಣ ದಲ್ಲಿ ವಿಸ್ತರಿಸಲ್ಪಟ್ಟಿರುವುದು.

**ನಿತ್ಯವಿಭೂತಿ**

ಶುದ್ಧಸತ್ತ್ವವೆಂಬುದು ತ್ರಿಗುಣದ ಸತ್ತ್ವಕ್ಕಿಂತಲೂ ವಿಲಕ್ಷಣವಾದ ಸತ್ತ್ವಗುಣವುಳ್ಳ ಶಾಸ್ತ್ರಸಿದ್ಧವಾದ ದ್ರವ್ಯ. ಇದು ಪ್ರಕೃತಿಮಂಡಲವನ್ನತಿ ಕ್ರಮಿಸಿ ಮೇಲುಭಾಗದಲ್ಲಿ ವ್ಯಾಪಕದ್ರವ್ಯವಾದುದರಿಂದ ಅಪ್ರಾಕೃತದೇಶವು; ನಿರತಿಶಯಾನುಕೂಲತೆಯಿಂದ ಪರಮಪದವು ; ಶಾಶ್ವತವಾದುದರಿಂದ ವೈಕುಂಠವು ; ಕೋಟಿಸೂರ್ಯಪ್ರಕಾಶಮಯವಾದುದರಿಂದ ಜ್ಞಾನ

ಮಯವು ; ಇಲ್ಲೂ ಪೃಥಿವ್ಯಾದಿ ಪಂಚಭೂತಗಳ ಸ್ವಭಾವವಿರುವುದರಿಂದ ಪಂಚಶಕ್ತಿಮಯವು ; ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸೆಂಬ ಭಗವಂತನ ಆರು ಗುಣಗಳಿಗೂ ಪ್ರಕಾಶಕವಾಗಿರುವುದರಿಂದ ಷಾಡ್ಗುಣ್ಯಮಯವು ; ಈಶ್ವರ ನಿತ್ಯಮುಕ್ತರುಗಳ ದೇಹಕ್ಕೆ ಕಾರಣವಾಗಿರುವುದರಿಂದ ದಿವ್ಯಮಂಗಳವೆಂದೂ ಭೋಗ್ಯಭೋಗೋಪಕರಣ ಭೋಗಸ್ಥಾನ ಮಂಟಪ ಪ್ರಾಕಾರ ಗೋಪುರ ಪುಷ್ಕರ ಭೂಷಣಾಯುಧ ಸಮಲಂಕೃತಾನಂತಾನೇಕ ಭಗವಲ್ಲೋಕರೂಪವಾಗಿರುವುದರಿಂದ ಅನಂತಮಯವು ಎಂದೂ ಹೇಳಲ್ಪಡುವುದು.

ಇದರಲ್ಲಿ ಅನೇಕ ಸನ್ನಿವೇಶಗಳು ಶಾಶ್ವತವಾಗಿ, ನಿತ್ಯವಾಗಿ ಏಕರೂಪದಲ್ಲಿರುವುವು. ಈಶ್ವರಸಂಕಲ್ಪಾನುಸಾರ ಪ್ರಾಕೃತಮಂಡಲದಂತೆ ಬಹುವಿಧಸನ್ನಿವೇಶಗಳು ಸೃಷ್ಟಿಸಲ್ಪಡುವುವು. ಆದರೂ ನಿತ್ಯವಾದ ಸನ್ನಿವೇಶಗಳೇ ಅಧಿಕವಾಗಿರುವುದರಿಂದ ನಿತ್ಯವಿಭೂತಿಯೆಂದು ಪ್ರಸಿದ್ಧಿ. ಪ್ರಾಕೃತಮಂಡಲಕ್ಕೂ ಅಪ್ರಾಕೃತಮಂಡಲಕ್ಕೂ ಮಧ್ಯೇ ವಿರಜಾನದಿ ಅನಾದ್ಯನಂತವಾಗಿ ಎಲ್ಲೆಯಾಗಿರುವುದು. ಆದರೂ ಅಪ್ರಾಕೃತವಸ್ತುಗಳು ಪ್ರಾಕೃತಮಂಡಲಕ್ಕೂ ಬರಬಹುದು : ಪ್ರಾಕೃತವಸ್ತುಗಳು ಅಪ್ರಾಕೃತಮಂಡಲಕ್ಕೂ ಹೋಗಬಹುದು. ಮಿಶ್ರವಾದರೂ ಸ್ವಭಾವವು ವ್ಯತ್ಯಾಸವಾಗುವುದಿಲ್ಲ. ಆದುದರಿಂದಲೇ ವಾಸುದೇವ ಮೊದಲಾದ ಅವತಾರ ವಿಗ್ರಹಗಳು ಶಿಲಾಲೋಹಾದಿಮಯವಾದ ಪ್ರಾಕೃತ ವಿಗ್ರಹಗಳಲ್ಲಿ ಕ್ಷೀರನೀರ ನ್ಯಾಯದಿಂದ ಅನುಪ್ರವೇಶಮಾಡಿ ಸಕಲಮನುಜನಯನ ವಿಷಯವಾಗಿ ಜಗದನುಗ್ರಾಹಕಗಳಾಗಿರುವುವು.

ಲೀಲಾವಿಭೂತಿ ಒಂದು ಪಾಲಾದರೆ ಇದು ಮೂರು ಪಾಲೆಂದು ಹೇಳುವುದು ಪ್ರಮಾಣನಿಷ್ಕರ್ಷವಲ್ಲ ; ಆಧಿಕ್ಯದಲ್ಲಿ ತಾತ್ಪರ್ಯವು.

## ಜ್ಞಾನಂ ಪ್ರಮಾಣಂ

ಸಕಲವ್ಯಾಪಾರಗಳಿಗೆ ಕಾರಣವಾಗಿಯೂ ತನಗೂ ಇತರ ವಸ್ತುಗಳಿಗೂ ಪ್ರಕಾಶಕವಾದುದರಿಂದ ಸ್ವಯಂಪ್ರಕಾಶವಾಗಿಯೂ ಪ್ರದೀಪಕ್ಕೆ ಪ್ರಭೆಯಂತೆ ಜೀವಾತ್ಮ ಪರಮಾತ್ಮರನ್ನು ಆಶ್ರಯಿಸಿಕೊಂಡಿರುವ ದ್ರವ್ಯವು

ಜ್ಞಾನ. ಇದು ಪ್ರತ್ಯಾತ್ಮನಿಗೂ ಬೇರೆಬೇರೆಯಾಗಿ ನಿತ್ಯವಾಗಿ ಸೇರಿದ್ದರೂ ಸಾಮಗ್ರೀವಿಶೇಷದಿಂದ ಸಂಕೋಚವಿಕಾಸಗಳನ್ನು ಹೊಂದಿ ವಿಷಯ ಸಂಬಂಧದಿಂದ ಸಂಶಯ ನಿಶ್ಚಯ ಪ್ರತ್ಯಕ್ಷ ಪರೋಕ್ಷ ಮೊದಲಾದ ವಿಭಾಗ ವನ್ನು ಹೊಂದುವುದರಿಂದ ದ್ರವ್ಯವೆಂದೂ ಕ್ಷಣಿಕವೆಂದೂ ಹೇಳಲ್ಪಡುವುದು.

ಆತ್ಮದ್ರವ್ಯಗಳೂ ಸ್ವಯಂಪ್ರಕಾಶವಾಗಿ ಜ್ಞಾನಶಬ್ದಕ್ಕೆ ಗೋಚರ ವಾದುದರಿಂದ ವ್ಯತ್ಯಾಸ ತೋರುವುದಕ್ಕಾಗಿ ಧರ್ಮಭೂತಜ್ಞಾನವೆಂದು ಇದು ವ್ಯವಹರಿಸಲ್ಪಡುವುದು.

ಇದರಿಂದ ಆತ್ಮವಸ್ತುಗಳಿಗೆ ಚೇತನತ್ವ, ಜ್ಞಾತೃತ್ವ, ಕರ್ತೃತ್ವ, ಭೋಕ್ತೃತ್ವ ಮೊದಲಾದ ವ್ಯವಹಾರಗಳಿರುವುವು. ಇದರಿಂದ ನಿತ್ಯ ವಿಭೂತಿ, ಲೀಲಾವಿಭೂತಿ, ಕಾಲ, ಜ್ಞಾನ—ಈ ನಾಲ್ಕು ದ್ರವ್ಯಗಳು ಅಚೇತನವಸ್ತುಗಳು, ಅನಾತ್ಮವಸ್ತುಗಳು, ಜೀವೇಶ್ವರವಸ್ತುಗಳು, ಚೇತನ ವಸ್ತುಗಳೆಂದು ವಿಭಾಗ. ಚೈತನ್ಯವೆಂಬ ಜ್ಞಾನಾಶ್ರಯತ್ವವೇ ಚೇತನತ್ವ.

ಇದು ಸಂಸಾರದಶೆಯಲ್ಲಿ ಕರ್ಮಶಕ್ತಿಯಿಂದ ಸಂಕೋಚಸ್ವಭಾವ ವಾಗಿ ಜೀವಾತ್ಮರಿಗೆ ಅಲ್ಪಜ್ಞತ್ವ ಮೊದಲಾದ ದೋಷಾಪಾದಕವಾಗಿದ್ದರೂ ಮೋಕ್ಷದಶೆಯಲ್ಲಿ ನಿರತಿಶಯವಿಕಾಸದಿಂದ ಸರ್ವಜ್ಞತ್ವಾಪಾದಕವಾಗಿ ನಿರತಿಶಯಾನಂದಾನುಭವರೂಪವಾಗಿರುವುದು. ಈ ಧರ್ಮಭೂತಜ್ಞಾನದ ಪರಿಣಾಮವೇ ಸುಖದುಃಖ, ಕಾಮಕ್ರೋಧ ಮೊದಲಾದ ಸಕಲ ಮನೋ ಭಾವಗಳು.

ಹೀಗೆ ಪುಣ್ಯಪಾಪವೆಂಬ ಅದೃಷ್ಟವೂ ಪರಮಾತ್ಮನ ಧರ್ಮಭೂತ ಜ್ಞಾನದ ಪರಿಣಾಮವಾದ ನಿಗ್ರಹಾನುಗ್ರಹ ಸಂಕಲ್ಪವೆಂದು ಸಿದ್ಧಾಂತ. ಇದರಿಂದ ಅಂತಃಕರಣವೃತ್ತಿಯನ್ನು ಜ್ಞಾನವೆಂದು ಹೇಳುವ ಸಿದ್ಧಾಂತ ಗಳಿಗೂ ಆತ್ಮ ಸ್ವರೂಪವನ್ನೇ ಜ್ಞಾನವೆಂದು ಹೇಳುವ ಸಿದ್ಧಾಂತಗಳಿಗೂ ಮಧ್ಯಸ್ಥವಾದವಾಗಿರುವುದೆಂದು ತಿಳಿಯಲ್ಪಡುವುದು.

ಇಲ್ಲಿ ಸಾಂಖ್ಯಪ್ರಾಭಾಕರಸಮ್ಮತವಾದ ಸಿದ್ಧಾಂತಪ್ರಕಾರ ಸರ್ವಂ ಜ್ಞಾನಂ, ಯಥಾರ್ಥಂ ಎಂದು ಅಭಿಪ್ರಾಯವು. ಪ್ರಾಯಶಃ ಸಕಲ ವಸ್ತು ಗಳಲ್ಲೂ ಸಮಾನವಾದ ಇತರ ವಸ್ತುಗಳ ಅಂಶಗಳು ಮಿಶ್ರವಾಗಿರುವುವು. ಕಪ್ಪೆಚಿಪ್ಪಿನಲ್ಲಿ ಬೆಳ್ಳಿಯಲ್ಲಿರುವ ಚಾಕಚಕ್ಯ, ಧಾವಳ್ಯ ಮೊದಲಾದ ಸಾಧಾ

ರಣ ಅಂಶಗಳಿರುವುವು. ಅವುಗಳನ್ನು ಮಾತ್ರ ನೋಡಿ ಬೆಳ್ಳಿಯಲ್ಲಿರುವ ಇತರ ಅಸಾಧಾರಣಾಂಶಗಳನ್ನು ನೋಡದಿರುವ ಜ್ಞಾನವೇ ಶುಕ್ತಿರಜತ ಭ್ರಮೆ. ಸೂರ್ಯಕಿರಣಗಳಿಗೂ ಜಲಕ್ಕೂ ಇರುವ ಸಾಧಾರಣಾಂಶವನ್ನು ಮಾತ್ರ ನೋಡುವ ಜ್ಞಾನವೇ ಮೃಗಜಲಭ್ರಮೆ. ಹೀಗೆ ಸರ್ವತ್ರ ಚೆನ್ನಾಗಿ ತಿಳಿಯದಿರುವಿಕೆಯೇ ಭ್ರಾಂತಿ. ಇದೇ ಅಖ್ಯಾತಿವಾದ. ಇದು ಸಾಂಖ್ಯಮತದಲ್ಲಿ ವಿಸ್ತರಿಸಲ್ಪಟ್ಟಿರುವುದು. ಲೋಕದಲ್ಲೂ ಚೆನ್ನಾಗಿ ನೋಡಲಿಲ್ಲವೆಂದೇ ವ್ಯವಹಾರವು ಸ್ವರಸವಾಗಿರುವುದು.

ಚಕ್ಷುರಾದೀಂದ್ರಿಯಗಳಿಗೂ ಶಬ್ದಸ್ಪರ್ಶ ಮೊದಲಾದ ವಿಷಯಗಳಿಗೂ ಸಂಬಂಧದಿಂದ ಬರುವ ಜ್ಞಾನಪರಿಣಾಮವೇ ಪ್ರತ್ಯಕ್ಷ. ರೂಪವನ್ನು ನೋಡುತ್ತೇನೆ, ಶಬ್ದವನ್ನು ಕೇಳುತ್ತೇನೆ ಎಂದು ಇದರ ಆಕಾರವು. ಇದರಲ್ಲಿ ನಾನೆಂಬ ವಸ್ತು ತೋರದೆ ಯಾವ ಜ್ಞಾನವೂ ಹುಟ್ಟುವುದಿಲ್ಲವಾದುದರಿಂದ ಆತ್ಮನು ' ಅಹಂ ' ಎಂದು ಸಕಲ ಜ್ಞಾನಗಳಲ್ಲೂ ಪ್ರದೀಪದಂತೆ ಸ್ವಶಕ್ತಿಯಿಂದ ತೋರುತ್ತಾನೆ. ಜ್ಞಾನವು ಪ್ರಭೆಯಂತೆ ವಸ್ತುವನ್ನೂ ತನ್ನನ್ನೂ ತೋರಿಸುವುದರಿಂದ ಈ ಮೂರಂಶಗಳಲ್ಲೂ ಪ್ರತ್ಯಕ್ಷ.

"ಧೂಮದಿಂದ ವಹ್ನಿಯನ್ನು ಊಹಿಸುತ್ತೇನೆ," "ವಾಕ್ಯದಿಂದ ಅರ್ಥವನ್ನು ತಿಳಿಯುತ್ತೇನೆ"—ಎಂಬ ಅನುಮಿತಿಶಾಬ್ದಬೋಧಗಳು ಇಂದ್ರಿಯ ಸಂಬಂಧವಿಲ್ಲದಿರುವುದರಿಂದ ಪರೋಕ್ಷಗಳು. ಸ್ವವಿಷಯದಲ್ಲೂ ಆತ್ಮ ವಿಷಯದಲ್ಲೂ ಪೂರ್ವೋಕ್ತಪ್ರಕಾರ ಪ್ರತ್ಯಕ್ಷವು.

ಪ್ರತ್ಯಕ್ಷವು ನಿರ್ವಿಕಲ್ಪಕ, ಸವಿಕಲ್ಪಕವೆಂದು ಎರಡು ಪ್ರಕಾರ. ಇದು ಗೋವು ಎಂಬ ಪ್ರತ್ಯಕ್ಷದಲ್ಲಿ ಗಳಕಂಬಳ, ನೆಲದೊಗಲು ಎಂಬ ಆಕಾರ ಸಹಿತ ವ್ಯಕ್ತಿ ತೋರುವುದು. ಮತ್ತೊಂದು ಗೋವ್ಯಕ್ತಿಯನ್ನು ನೋಡುವಾಗ ಹಿಂದಿನ ವ್ಯಕ್ತಿಯಲ್ಲಿ ತೋರಿದ ಆಕಾರವಾದ ಗಳಕಂಬಳವೆಂಬ ಜಾತಿ ಸ್ಮರಣೆಗೆ ಬಂದು ಇದೂ ಗೋವು ಎಂದು ಪ್ರತ್ಯಕ್ಷ ಬರುವುದು. ಮೊದಲು ಬಂದ ಜ್ಞಾನ ನಿರ್ವಿಕಲ್ಪಕ. ಅನಂತರ ಬರುವ ಜ್ಞಾನ ಸವಿಕಲ್ಪಕ.

ಹೀಗಾದರೆ ಹಿಂದಿನ ಸಂಸ್ಕಾರದಿಂದ ಕೂಡಿದ ಜ್ಞಾನ ಸವಿಕಲ್ಪಕ. ಅದಿಲ್ಲದೆ ಬರುವ ಜ್ಞಾನ ನಿರ್ವಿಕಲ್ಪಕ. ಮೊದಲು ನೋಡಿದುದು ಮರೆತಿದ್ದರೂ ನಿರ್ವಿಕಲ್ಪಕವು.

ಪ್ರತ್ಯಕ್ಷವು ಲೌಕಿಕ, ದಿವ್ಯವೆಂದು ಎರಡು ಪ್ರಕಾರ. ಲೌಕಿಕವು— ಚಕ್ಷುರಾದಿ ಇಂದ್ರಿಯಗಳಿಂದ ಬರತಕ್ಕುದು—ಐದು ವಿಧ. ದಿವ್ಯವು ಭಗವದನುಗ್ರಹದಿಂದ ಬರತಕ್ಕ ಯೋಗಿ ಪ್ರತ್ಯಕ್ಷ. ಆತ್ಮನೂ ಅವನ ಸುಖ ದುಃಖಾದಿಗಳೂ ಜ್ಞಾನರೂಪಕವಾಗಿ ಸ್ವಯಂಪ್ರಕಾಶವಾಗಿರುವುದರಿಂದ ಮಾನಸಪ್ರತ್ಯಕ್ಷವೆಂಬುದಿಲ್ಲ. ಸ್ಮೃತಿಚಿಂತಾ ಮೊದಲಾದ ಈ ಧರ್ಮಭೂತಜ್ಞಾನಾವಸ್ಥೆಗಳಿಗೆ ಮನಸ್ಸೆಂಬುದು ಅಸಾಧಾರಣ ಕಾರಣವಾಗಿರುವುದು.

ಹೀಗೆ ಪ್ರಮಾಣಗಳು ಪ್ರತ್ಯಕ್ಷ, ಅನುಮಾನ, ಶಬ್ದ ಎಂದು ಮೂರು ಪ್ರಕಾರ. ಇತರ ವಾದಿಗಳು ಹೇಳುವ ಉಪಮಾನ, ಅರ್ಥಾಪತ್ತಿ, ಅನುಪಲಬ್ಧಿ ಎಂಬ ಮೂರುಪ್ರಮಾಣಗಳು ಅನುಮಾನದಲ್ಲೇ ಅಂತರ್ಭಾವವಾಗುವುವು. ಗವಯದಲ್ಲಿ ಗೋಸಾದೃಶ್ಯವಿದ್ದರೆ ಗೋವಿನಲ್ಲಿ ಗವಯಸಾದೃಶ್ಯವು ವ್ಯಾಪ್ತಿಯಿಂದಲೇ ಸಿದ್ಧವಾಗುತ್ತದೆ. ನಿರುಪಾಧಿಕಸಂಬಂಧವೇ ವ್ಯಾಪ್ತಿ. ಉಪಮಾನವು ಅನುಮಾನವೆಂಬ ಯುಕ್ತಿಯೇ ಆಗುತ್ತದೆ. ಹಗಲು ಊಟಮಾಡದೆ ಪುಷ್ಟನಾಗಿದ್ದರೆ ರಾತ್ರಿಭೋಜನವು ಪುಷ್ಟಿಗೆ ಕಾರಣವಾದುದರಿಂದ ಸಿದ್ಧವಾಗುವುದು. ಆದ್ದರಿಂದ ಅರ್ಥಾಪತ್ತಿಯೂ ಅನುಮಾನವೇ ಆಗುವುದು. ಈ ದರ್ಶನದಲ್ಲಿ ಅಭಾವವೆಂಬ ವಸ್ತುವೇ ಅತಿರಿಕ್ತವಾಗಿಲ್ಲ. ಘಟದಲ್ಲಿರುವ ಪಟಭೇದವು ಘಟತ್ವವೆಂಬ ಧರ್ಮವು. ಹೀಗೆ ಆಯಾ ವಸ್ತುವಿನಲ್ಲಿರುವ ಅಸಾಧಾರಣ ಧರ್ಮಗಳೇ ಆಯಾ ವಸ್ತುಗಳಿಗೆ ಇತರ ವಸ್ತುಗಳ ಭೇದವು. ಪ್ರಾಗಭಾವವು ಆಯಾ ವಸ್ತುವಿನ ಪೂರ್ವಾವಸ್ಥೆ. ಧ್ವಂಸವು ಉತ್ತರಾವಸ್ಥೆ. ಘಟಕ್ಕೆ ಪ್ರಾಗಭಾವವು ಪಿಂಡಾಕಾರವು. ಧ್ವಂಸವು ಕಪಾಲಾಕಾರವು. ಅತ್ಯಂತಭಾವವು ಆಯಾ ವಸ್ತುವಿನ ಅವಸ್ಥಾವಿಶೇಷವು. ಕುದುರೆಗೆ ಕೊಂಬಿಲ್ಲವೆಂದರೆ ಬೋಳುತಲೆ. ಇವುಗಳು ಆಯಾ ವಸ್ತುಗಳಾದುದರಿಂದ ಅಭಾವವನ್ನು ಗ್ರಹಿಸುವ ಅನುಪಲಬ್ಧಿ ಪ್ರಮಾಣವು ಬೇಕಾಗಿಲ್ಲ.

**ಶಬ್ದಪ್ರಮಾಣ**

ಶಬ್ದಪ್ರಮಾಣದಲ್ಲಿರುವ ವಿಶೇಷಾಂಶವಿದು — ಭಾಷಾಜ್ಞಾನವುಳ್ಳ ಮನುಷ್ಯನಿಗೆ ಪದಗಳ ಶ್ರವಣವಾದರೆ ಪದಾರ್ಥಗಳ ಸ್ಮರಣೆ ಬರುವುದು.

ಅನಂತರ ಆಕಾಂಕ್ಷಾ, ಯೋಗ್ಯತಾ, ಸಂದರ್ಭ, ಪ್ರಕರಣ, ತಾತ್ಪರ್ಯ ಮೊದಲಾದುವುಗಳ ಪರಾಮರ್ಶದಿಂದ ಪದಗಳು ಬೋಧಿತಗಳಾಗಿ ವಾಕ್ಯಾರ್ಥ ವೆಂಬ ಪರಸ್ಪರಾನ್ವಿತ ಪದಾರ್ಥಗಳ ಜ್ಞಾನ ಉದಯಿಸುವುದು. ಇದೇ ಅನ್ವಿತಾಭಿಧಾನವಾದ, ಪ್ರಾಭಾಕರಸಮ್ಮತವು.

ಕುರ್ಯಾತ್, ಕರೋತು, ಕರ್ತವ್ಯಂ--ಎಂದು ಲಿಙ್ ಲೋಟ್ ತವ್ಯಪ್ರತ್ಯಯಗಳೆಂಬ ವಿಧಿರೂಪದಲ್ಲಿರುವ ಕ್ರಿಯಾಪದಗಳಿಂದ ಕೂಡಿದ ವೇದವಾಕ್ಯಗಳೇ ಶಾಸ್ತ್ರವೆಂಬ ಶಬ್ದಪ್ರಮಾಣ. ಬಾ, ಹೋಗು ಮೊದ ಲಾದ ಕ್ರಿಯಾಪದಗಳುಳ್ಳ ಲೌಕಿಕವಾಕ್ಯಗಳೂ, "ಕಾಶಿಯಲ್ಲೊಬ್ಬ ರಾಜನಿದ್ದನು" ಎಂಬ ಕಥಾರೂಪವಾದ ಭೂತಭವಿಷ್ಯದ್ವರ್ತಮಾನ ಸಂಭಾವನಾರೂಪದಲ್ಲಿರುವ ಕ್ರಿಯಾಪದಗಳಿಂದ ಕೂಡಿದ ವೈದಿಕಲೌಕಿಕ ವಾಕ್ಯಗಳೂ ಶಬ್ದಪ್ರಮಾಣವಲ್ಲ, ಶಾಸ್ತ್ರವಲ್ಲ. ಅಪೂರ್ವ, ನಿಯೋಗ, ಕಾರ್ಯ ಮೊದಲಾದ ಪದಗಳಿಂದ ಹೇಳಲ್ಪಡುವ ಧರ್ಮವೆಂಬ ಅರ್ಥವು ತೋರದೆ ಶಾಸ್ತ್ರವಾಗುವುದಿಲ್ಲ. ಕಥಾರೂಪವಾದ ವೇದವಾಕ್ಯಗಳೂ ಕ್ರಿಯಾ ಪರವಾದ ಲೌಕಿಕವಾಕ್ಯಗಳೂ ಶಬ್ದಪ್ರಮಾಣವಲ್ಲ. ಇಂತಹ ವಾಕ್ಯಗಳಿಂದ ಬರುವ ಜ್ಞಾನ ಲಕ್ಷ್ಯಾರ್ಥವಿಷಯಕವೇ ವಿನಾ ಮುಖ್ಯಾರ್ಥ ವಿಷಯಕವಲ್ಲ. ಯಾವ ವೇದವಾಕ್ಯಗಳಿಂದ ಪ್ರವೃತ್ತಿಯಾಗಲಿ ನಿವೃತ್ತಿಯಾಗಲಿ ಬರು ವುದೋ, ಅಂತಹ ವೇದವಾಕ್ಯಗಳೇ ಕಾರ್ಯಪರವಾಕ್ಯಗಳು. ಪ್ರವೃತ್ತಿ ನಿವೃತ್ತಿಗಳಿಲ್ಲದಿದ್ದರೆ ಪ್ರಯೋಜನವಿಲ್ಲ. ಪ್ರವೃತ್ತಿನಿವೃತ್ತಿ ಪರವಲ್ಲದ ವೇದಾಂತ ವಾಕ್ಯಗಳ ವಾಕ್ಯಾರ್ಥ ವಿಚಾರಶಾಸ್ತ್ರ ಉಪಯೋಗವಿಲ್ಲ.

ಕಾರ್ಯಪರವಾಕ್ಯಗಳೇ ಶಬ್ದಪ್ರಮಾಣ, ಶಾಸ್ತ್ರ : ಸಿದ್ಧಪರವಾಕ್ಯ ಗಳು ಶಾಸ್ತ್ರಗಳಲ್ಲ ಎಂದು ಪ್ರಾಚೀನಮೀಮಾಂಸಕರ ಅಭಿಪ್ರಾಯ. ಇತರರ ತಾತ್ಪರ್ಯವೆಂತೆಂದರೆ— "ಮಕ್ಕಳು ಬೇಕಾಗಿದ್ದರೆ ಪುತ್ರಕಾಮೇಷ್ಟಿ ಯನ್ನು ಮಾಡಬೇಕು" ಎಂಬ ವಾಕ್ಯಕ್ಕೂ "ನಿನ್ನ ಮನೆಯ ಪೂರ್ವೋತ್ತರ ಮೂಲೆಯಲ್ಲಿ ನಿಧಿಯಿದೆ" ಎಂಬ ಯೋಗೀಶ್ವರನ ವಾಕ್ಯಕ್ಕೂ ವಿಧಿಪ್ರತ್ಯಯ ಮಾತ್ರದಿಂದ ವ್ಯತ್ಯಾಸವಿಲ್ಲ. ತಿಳಿಯಲ್ಪಡುವ ವಿಷಯ ಬೇಕಾಗಿದ್ದರೆ ಪ್ರವೃತ್ತಿ ಬರುತ್ತದೆ. ಅದೇ ಶಾಸ್ತ್ರವಾಗುತ್ತವೆ. ವಿಧಿಪ್ರತ್ಯಯವಿರಲಿ ಇಲ್ಲದಿರಲಿ, ಲೋಕವಾಗಲಿ ವೇದವಾಗಲಿ ಶಾಸ್ತ್ರವಾಗುವುದಕ್ಕೆ ಬಾಧಕವಿಲ್ಲ.

ವೇದಾಂತಗಳಲ್ಲಿ ನಿರತಿಶಯಾನಂದವನ್ನು ಅನುಭವಿಸುತ್ತಾ ಪರಮೇಶ್ವರನೊಬ್ಬನಿರುವನು. ಅವನಂತೆ ನಾವೂ ಆಗಬಹುದೆಂದು ತಿಳಿದರೆ ಅದು ಶಾಸ್ತ್ರವಾಗುವುದಿಲ್ಲವೇ ? ಪ್ರವೃತ್ತಿ ನಿವೃತ್ತಿಗಳು ಪುರುಷೇಚ್ಛಾಧೀನಗಳು. ವಿಧಿಪ್ರತ್ಯಯದಿಂದ ಆಜ್ಞೆ ತೋರಿದರೂ ಪ್ರವರ್ತಿಸದೆ ಇದ್ದರೆ ಶಾಸ್ತ್ರ ಏನು ಮಾಡುತ್ತದೆ ? ವಿಧಿರೂಪದಲ್ಲಿರುವ ಕ್ರಿಯಾಪದದಿಂದ, ಆ ಕ್ರಿಯೆಯಿಂದ ಇಂತಹ ಫಲ ಬರುವುದೆಂಬ ಇಷ್ಟಸಾಧನತ್ವವೇ ತಿಳಿದುಬರುವುದು. ಆದುದರಿಂದ ವೇದಾಂತವಾಕ್ಯಗಳು ಸಿದ್ಧಪರವಾದರೂ ಶಾಸ್ತ್ರಗಳಾಗಬಹುದು. ಅವುಗಳ ವಿಚಾರ ಅಯುಕ್ತವಲ್ಲ. ಶಾಸ್ತ್ರವೆಲ್ಲವೂ ಕಾರ್ಯಪರವೆಂಬುದು ಸರ್ವತವಲ್ಲ, ಬರೀ ವೇದಜಡವಾದವೆಂದು ನಿರ್ಣಯ. ಶಾಸ್ತ್ರವೆಂದರೆ ತಿಳಿಯದೇ ಇರುವ ವಿಷಯವನ್ನು ತಿಳಿಯಪಡಿಸುವುದೆಂದರ್ಥ. 'ಪ್ರವೃತ್ತಿನಿವೃತ್ತಿಗಳನ್ನುಂಟುಮಾಡುವುದು ಶಾಸ್ತ್ರ'ವೆಂಬ ವಾದ ಪರಂಪರೆಯಿಂದ ನಿರ್ವಹಿಸಲ್ಪಡಬೇಕು. ವಾಕ್ಯವೆಂಬ ಶಬ್ದಪ್ರಮಾಣದಲ್ಲಿ ಸ್ವತಂತ್ರೋಚ್ಚಾರಣೆ, ಪರತಂತ್ರೋಚ್ಚಾರಣೆ ಎಂಬ ಭೇದದಿಂದ ಲೌಕಿಕ, ವೈದಿಕ ಎಂದು ವಿಭಾಗವು. ವೇದವೆಂದರೆ ಪರಮೇಶ್ವರನ ವ್ಯವಸ್ಥಿತವಾದ ಅಭಿಪ್ರಾಯ. ಇದನ್ನು ತಿಳಿಯಪಡಿಸುವ ಶಬ್ದಕ್ಕೂ ವೇದವೆಂದು ಹೆಸರು. ಇಂತಹ ಅಭಿಪ್ರಾಯ ಕೆಲವು ಕಾಲದಲ್ಲಿ ರಜಸ್ತಮೋಗುಣಗಳ ಪ್ರಾಚುರ್ಯದಿಂದ ತಿರೋಹಿತವಾಗುವುದು.

ಮಹರ್ಷಿಗಳು ಅವತರಿಸಿ ಜಗದನುಗ್ರಹಕ್ಕಾಗಿ ಅದನ್ನು ಪ್ರಕಾಶಪಡಿಸುವರು. ಮಹರ್ಷಿಗಳು ಯುಗಾಂತದಲ್ಲಿ ವಿಚ್ಛಿನ್ನವಾದ ವೇದಗಳನ್ನು ತಪೋವಿಶೇಷದಿಂದ ಸಾಕ್ಷಾತ್ಕಾರಮಾಡಿ ಪುನಃ ಉಪದೇಶಿಸುವರು—

ಯುಗಾನ್ತೇಽನ್ತರ್ಹಿತಾನ್ ವೇದಾನ್ ಸೇತಿಹಾಸಾನ್ ಮಹರ್ಷಯಃ
ಲೇಭಿರೇ ತಪಸಾ ಪೂರ್ವಮನುಜ್ಞಾತಾಸ್ಸ್ವಯಂಭುವಾ ॥

ಎಂದು ಮಹಾಭಾರತವಚನತಾತ್ಪರ್ಯ. ಇದರಿಂದ ಮಂತ್ರಕರ್ತಾರ, ಸೂಕ್ತಕರ್ತಾರ ಎಂದು ಮಹರ್ಷಿಗಳನ್ನು ಹೇಳುವುದೂ ವೇದವು ಅನಾದಿ ಅನಂತವೆಂದು ಹೇಳುವುದೂ ಉಪಪನ್ನವಾಗುವುದು. ವೇದದಲ್ಲಿ ಪೂರ್ವಭಾಗ, ಉತ್ತರ ಭಾಗವೆಂದು ಎರಡು ವಿಭಾಗ. ಪೂರ್ವಭಾಗದಲ್ಲಿ ಸರ್ವಕರ್ಮಸಮಾರಾಧ್ಯನಾದ ಪರಮೇಶ್ವರನ ಆರಾಧನೆ ಎಂಬ ಯಜ್ಞಯಾಗಾದಿ

ಕರ್ಮಗಳು ಹೇಳಲ್ಪಡುವುವು. ಉತ್ತರಭಾಗದಲ್ಲಿ ಪರಮೇಶ್ವರನ ಸ್ವರೂಪ ಸ್ವಭಾವ ಮೊದಲಾದುವು ಹೇಳಲ್ಪಡುವುವು. ಧರ್ಮಶಾಸ್ತ್ರಗಳು ಪೂರ್ವಭಾಗವನ್ನೂ ಇತಿಹಾಸಾದಿಗಳು ಉತ್ತರ ಭಾಗವನ್ನೂ ವಿಶದೀಕರಿಸುವುವು. ರಹಸ್ಯಾಮ್ನಾಯವೆಂಬ ಏಕಾಯನಶಾಖಾ ಮೂಲಕವಾಗಿ ಪಂಚರಾತ್ರ ಶಾಸ್ತ್ರವನ್ನು ಭಗವಂತನು ವ್ಯೂಹವಾಸುದೇವಾವತಾರದಲ್ಲಿ ಉಪದೇಶಿಸಿರುವನು. ಅದರಲ್ಲಿ ಹೇಳಲ್ಪಡುವ ವಿಷಯವೇನೆಂದರೆ—''ಸಾಂಖ್ಯಶಾಸ್ತ್ರದಲ್ಲಿ ಹೇಳಲ್ಪಟ್ಟ ಇಪ್ಪತ್ತುನಾಲ್ಕು ತತ್ತ್ವಗಳು ಪರಮಾತ್ಮನ ಅಧೀನಗಳು, ಸ್ವತಂತ್ರಗಳಲ್ಲ. ಯೋಗಶಾಸ್ತ್ರದಲ್ಲಿ ಹೇಳಲ್ಪಟ್ಟ ಅಷ್ಟಾಂಗಯೋಗ ಅವನ ಉಪಾಸನೆ. ವೇದದ ಪೂರ್ವಭಾಗದಲ್ಲಿ ಹೇಳಲ್ಪಟ್ಟ ಸಕಲ ಕರ್ಮಗಳೂ ಅವನ ಆರಾಧನೆ. ಆರಣ್ಯಕವೆಂಬ ಉಪನಿಷತ್ತಿನಲ್ಲಿ ಹೇಳಲ್ಪಡುವ ವಸ್ತುವೇ ಪರಮಾತ್ಮ, ಪರಮೇಶ್ವರ, ಪರವಾಸುದೇವ. ಈ ನಾಲ್ಕು ಅಂಶಗಳನ್ನೂ ಪರಸ್ಪರ ಅನುಕೂಲವಾಗಿ ಸೇರಿಸಿ ಒಂದು ತತ್ತ್ವವನ್ನಾಗಿ ಮಾಡಿ ಉಪದೇಶಿಸುವುದಕ್ಕಾಗಿಯೇ ಹೊರಟಿರುವುದು ಪಂಚರಾತ್ರಶಾಸ್ತ್ರ ಎಂದು—

ಏವಮೇಕಂ ಸಾಂಖ್ಯಯೋಗಂ ವೇದಾರಣ್ಯಕಮೇವ ಚ
ಪರಸ್ಪರಾಙ್ಗಾನ್ಯೇತಾನಿ ಪಞ್ಚರಾತ್ರಂ ತು ಕಥ್ಯತೇ ॥

ಎಂಬ ಮೋಕ್ಷಧರ್ಮವಚನದ ತಾತ್ಪರ್ಯ.

## ಅಪರ್ಯವಸಾನವೃತ್ತಿ

ಈ ಸಿದ್ಧಾಂತದಲ್ಲಿ ಪದಪದಾರ್ಥಗಳ ಸಂಬಂಧ ಶಕ್ತಿ, ಭಕ್ತಿಯೆಂದು ಎರಡು ಪ್ರಕಾರ. ಶಕ್ತಿ ಸಾಕ್ಷಾತ್ಸಂಬಂಧ. ಭಕ್ತಿ ಪರಂಪರಾಸಂಬಂಧ. ಭಕ್ತಿಯೆಂದರೆ ಭಾಗವೆಂದು ಏಕದೇಶದಲ್ಲಿರುವುದೆಂದರ್ಥ. ಇದೇ ಉಪಚಾರ. ಉಪ–ಸಮೀಪೇ, ಚರತಿ—ಇರುವುದೆಂದು ಅದರ ವಿವರಣೆ. ಅದು ಲಕ್ಷಣಾ, ಗೌಣೀ ಎಂದು ಎರಡು ಪ್ರಕಾರ. ಒಂದು ಸಂಘದಲ್ಲಿ ಒಬ್ಬನು ಛತ್ರವನ್ನು ಹಿಡಿದುಕೊಂಡಿದ್ದರೂ ಛತ್ರವನ್ನು ಹಿಡಿದುಕೊಂಡಿರುವವರು ಹೋಗುತ್ತಾರೆಂದು ಹೇಳುತ್ತಾರೆ. ಏಕದೇಶದಲ್ಲಿರುವ ಪದವನ್ನು ಸಮುದಾಯದಲ್ಲಿ ಪ್ರಯೋಗಿಸುತ್ತಾರೆ. ಪರಾಕ್ರಮದಲ್ಲಿ ಹುಲಿಗೆ ಸಮಾನನೆಂಬ ಅರ್ಥದಲ್ಲಿ ಹುಡುಗನು ಹುಲಿಯೆಂಬ ಪ್ರಯೋಗ ಗುಣಮೂಲಕ. ಇಷ್ಟು ಸರ್ವಸಮ್ಮತ.

ವಿಶೇಷಾಂಶವೇತೆಂದರೆ—ದೇವ, ಮನುಷ್ಯ, ಪಶು, ಪಕ್ಷಿ, ಸರ್ಪ, ಯಕ್ಷ, ರಾಕ್ಷಸ ಮೊದಲಾದ ಶರೀರವಾಚಕಪದಗಳನ್ನು ಅವರೊಳಗಿರುವ ಜೀವಾತ್ಮನ ವಿಷಯದಲ್ಲಿ ಪ್ರಯೋಗಿಸುತ್ತಾರೆ. ಶುಕ್ಲ, ನೀಲ, ಪೀತ ಮೊದಲಾದ ಬಣ್ಣಗಳನ್ನು ಬೋಧಿಸುವ ಪದಗಳನ್ನು ಆಯಾ ಬಣ್ಣವುಳ್ಳ ವಸ್ತುಗಳಲ್ಲಿ ಪ್ರಯೋಗಿಸುತ್ತಾರೆ. ಆಳು, ಕುದುರೆ, ಆನೆ, ಒಂಟೆ ಮೊದಲಾದ ಜಾತಿವಾಚಕಪದಗಳನ್ನು ವ್ಯಕ್ತಿಯಲ್ಲಿ ಪ್ರಯೋಗಿಸುತ್ತಾರೆ. ಇವುಗಳನ್ನು ಮುಖ್ಯಪ್ರಯೋಗಗಳೆಂದು ನಿರ್ವಹಿಸುವುದಕ್ಕೆ ಸುಲಭವಾದ ನಿಮಿತ್ತವಿರುವಲ್ಲಿ ಲಾಕ್ಷಣಿಕವೆಂದು ಹೇಳುವುದು ನ್ಯಾಯವಲ್ಲ. ಮುಖ್ಯವಾಗದಿದ್ದಲ್ಲಿ ಲಕ್ಷಣೆಯು ಆಗತಿಕಗತಿಯು.

ಸುಲಭವಾದ ನಿಮಿತ್ತವು ಯಾವುದೆಂದರೆ, ವಿಶೇಷಣವಿಶೇಷ್ಯಭಾವದಲ್ಲಿ ಕೆಲವು ವಿಶೇಷಣಗಳನ್ನು ವಿಶೇಷ್ಯಕ್ಕಿಂತಲೂ ಬೇರೆ ಬಿಡಿಸಿಡಬಹುದು. ಕೆಲವನ್ನು ಬಿಡಿಸಿಡಲಾಗುವುದಿಲ್ಲ. ಮನುಷ್ಯನಿಗೆ ವಿಶೇಷಣವಾಗಿ ತೋರುವ ದಂಡ, ಕುಂಡಲ ಮೊದಲಾದುವುಗಳನ್ನು ಬಿಡಿಸಿಡಬಹುದು. ಹಾಗೆ ವಿಶೇಷಣವಾದ ನೀಲ, ಪೀತ ಮೊದಲಾದ ಬಣ್ಣಗಳನ್ನೂ ಗೋತ್ವ, ಅಶ್ವತ್ವ ಮೊದಲಾದ ಜಾತಿಗಳನ್ನೂ ವಿಶೇಷ್ಯವಾಗಿ ತೋರುವ ವಸ್ತುಗಳಿಂದಲೂ ಬಿಡಿಸಿಡಲು ಸಾಧ್ಯವಿಲ್ಲ. ವಸ್ತುಗಳಿರುವವರೆಗೂ ಅವುಗಳನ್ನಾಶ್ರಯಿಸಿಕೊಂಡಿರುವುವು. ಹೀಗೆ ಮೃಗ, ಮನುಷ್ಯ ಮೊದಲಾದ ವಿಶೇಷಣವಾಗಿ ತೋರುವ ಶರೀರಗಳನ್ನು ವಿಶೇಷ್ಯವಾದ ಜೀವಾತ್ಮ ವಸ್ತುಗಳಿಂದ ವಿಂಗಡಿಸಿಡಲು ಸಾಧ್ಯವಿಲ್ಲ. ಆದುದರಿಂದ ವಿಶೇಷಣಗಳಲ್ಲಿ ಇವುಗಳು ಅಯುತಸಿದ್ಧ ವಿಶೇಷಣಗಳು. ದಂಡ, ಕುಂಡಲ ಮೊದಲಾದುವು ಯುತಸಿದ್ಧವಿಶೇಷಣಗಳು. ಈ ವ್ಯತ್ಯಾಸವನ್ನು ತೋರಿಸುವುದಕ್ಕಾಗಿಯೇ ದಂಡೀ, ಕುಂಡಲೀ ಎಂದು ದಂಡಕುಂಡಲ ಪದಗಳ ಮೇಲೆ ಇನ್‌ಪ್ರತ್ಯಯವನ್ನು ಸೇರಿಸಿ ಪ್ರಯೋಗಿಸುವರು. ಅಯುತಸಿದ್ಧವಿಶೇಷಣವಾಚಕಪದಗಳ ಮೇಲೆ ಇಂತಹ ಪ್ರತ್ಯಯವನ್ನು ಸೇರಿಸಿ ಪ್ರಯೋಗಿಸುವುದಿಲ್ಲ. ಹೀಗಾದರೆ ಅಯುತಸಿದ್ಧ ವಿಶೇಷಣವಾಚಕಪದಗಳು ವಿಶೇಷ್ಯಪರ್ಯಂತಾರ್ಥವನ್ನು ಬೋಧಿಸುವುವೆಂದು ಒಂದು ನ್ಯಾಯವನ್ನು ನಿಷ್ಕರ್ಷೆಮಾಡಿದರೆ ಹಿಂದಿನ ಪ್ರಯೋಗಗಳೆಲ್ಲವೂ ಮುಖ್ಯಗಳಾಗುವುವು. ಈ ನ್ಯಾಯದಲ್ಲಿ ಶೌಕ್ಲ್ಯ, ನೈಲ್ಯ,

ಶರೀರ, ಜಾತಿ, ವ್ಯಕ್ತಿ, ಗೋತ್ವ, ಅಶ್ವತ್ವ ಮೊದಲಾದ ಶಬ್ದಗಳು ನಿಷ್ಕರ್ಷಕಶಬ್ದಗಳಾದುದರಿಂದ ನಿಷ್ಕರ್ಷಕ ಶಬ್ದಗಳನ್ನು ವಿನಾಯಿಸಿ ಅಯುತಸಿದ್ಧ ವಿಶೇಷಣವಾಚಕಪದಗಳು ವಿಶೇಷ್ಯಪರ್ಯಂತಾರ್ಥವನ್ನು ಬೋಧಿಸುವುವು ಎಂಬ ನ್ಯಾಯ ನಿಷ್ಕರ್ಷಿಸಲ್ಪಡುವುದು. ಮತ್ತು ಶರೀರವಾಚಕಪದಗಳು ಶರೀರಪರ್ಯಂತಾರ್ಥವನ್ನು ಬೋಧಿಸುವುವು ಎಂದು ಒಂದು ನ್ಯಾಯ ಸಿದ್ಧವಾಗುವುದು. ಇದರಿಂದ ಮೃಗ, ಮನುಷ್ಯ ಮೊದಲಾದ ಶರೀರವಾಚಕಪದಗಳಿಂದ ಆಯಾ ಶರೀರದೊಳಗಿರುವ ಜೀವಾತ್ಮಪರ್ಯಂತಾರ್ಥ ತಿಳಿದುಬರುವುದು.

ಆತ್ಮನೆಂದರೆ ಒಳಗಿದ್ದು ಪ್ರೇರಣೆ ಮಾಡುವವನೆಂದು ಅರ್ಥ. ಹೀಗಾದರೆ ಪರಮಾತ್ಮನಿಗೆ ಸಕಲವಸ್ತುಗಳು ಶರೀರವಾಗಿರುವುದರಿಂದ ಮೃಗ, ಮನುಷ್ಯ, ಘಟ, ಪಟ, ಸೂರ್ಯ, ಚಂದ್ರ ಮೊದಲಾದ ಸಕಲವಸ್ತುಗಳೂ ಕರ್ಮಾಧೀನವಾಗಿ ಒಬ್ಬೊಬ್ಬ ಜೀವಾತ್ಮನಿಗೆ ಶರೀರವಾಗಿರುವುದರಿಂದ ಸಕಲ ಶಬ್ದಗಳೂ ಜೀವಾತ್ಮಪರ್ಯಂತವಾಗಿ ಪರಮಾತ್ಮಪರ್ಯಂತವಾಗುವುವು. ಹಾಗಾದರೆ ದೇವದತ್ತ ಶಬ್ದವು ದೇವದತ್ತನೊಳಗಿರುವ ಜೀವಾತ್ಮನೊಳಗಿರುವ ಪರಮಾತ್ಮನೆಂಬ ಅರ್ಥವನ್ನು ಬೋಧಿಸುವುದು. ಹೀಗೆ ಸಕಲಶಬ್ದಗಳೂ ಇರುವುವು. ಇದೇ ವೇದಾಂತಶಾಸ್ತ್ರದ ಪಾಂಡಿತ್ಯ. ಇದೇ ಅಪರ್ಯವಸಾನವೃತ್ತಿ. ಶಬ್ದಗಳು ವಸ್ತುಗಳಲ್ಲಿ ಪರ್ಯವಸಾನವಾಗದೆ ಜೀವಾತ್ಮಪರ್ಯಂತ ಹೋಗಿ ಅಲ್ಲೂ ಪರ್ಯವಸಾನವಾಗದೆ ಪರಮಾತ್ಮಪರ್ಯಂತ ಹೋಗಿ ನಿಲ್ಲುವುವು ಎಂದರ್ಥ.

ಹೀಗಾದರೆ ಅಭೇದವನ್ನು ಬೋಧಿಸುವ "ತತ್ತ್ವಮಸಿ ಶ್ವೇತಕೇತೋ" ಎಂಬ ವಾಕ್ಯದಲ್ಲಿ ತ್ವಂ ಶಬ್ದಕ್ಕೆ ಶ್ವೇತಕೇತು ಶರೀರದೊಳಗಿರುವ ಜೀವಾತ್ಮನೊಳಗಿರುವ ಪರಮಾತ್ಮನೆಂದರ್ಥವಾದರೆ ತತ್ ಶಬ್ದಕ್ಕೆ ಜಗತ್ಕರ್ತನಾದ ಪರಮಾತ್ಮನೆಂದರ್ಥವಾಗಿ ಜಗತ್ಕರ್ತನಾದ ಪರಮಾತ್ಮನೇ ಶ್ವೇತಕೇತುವಿಗೆ ಅಂತರ್ಯಾಮಿಯಾಗಿರುವನೆಂದರ್ಥವಾಗುವುದು. "ಐತದಾತ್ಮ್ಯಮಿದಂ ಸರ್ವಂ" ಎಂಬ ವಾಕ್ಯದಿಂದ ಸರ್ವಕ್ಕೂ ಪರಮಾತ್ಮನು ನಿಯಾಮಕನಾಗಿರುವನು ಎಂದು ಹಿಂದೆ ಹೇಳಿ "ತತ್ತ್ವಮಸಿ" ಎಂಬ ವಾಕ್ಯದಿಂದ ನಿನಗೂ ಅವನೇ ನಿಯಾಮಕನಾಗಿರುವನು ಎಂದು ಉಪದೇಶಿಸಿರುವರು.

ಇದರಿಂದ ದೇಹವೇ ಜೀವಾತ್ಮನೆಂದು ಭ್ರಮಿಸಬೇಡ. ಜೀವಾತ್ಮನೇ ಸ್ವತಂತ್ರನೆಂದೂ ಭ್ರಮಿಸಬೇಡ. ಅವನು ಪರಮಾತ್ಮ ಪರತಂತ್ರನೆಂದು ಭಾವಿಸಬೇಕೆಂದು ತತ್ತ್ವಮಸಿವಾಕ್ಯೋಪದೇಶಸಾರಾರ್ಥ ಸಿದ್ಧಿಸುವುದು. ಇದರಿಂದ ದೇಹಾತ್ಮಭ್ರಮವನ್ನೂ ಸ್ವತಂತ್ರಾತ್ಮಭ್ರಮವನ್ನೂ ಬಿಟ್ಟು ಪರಮಾತ್ಮಪಾರತಂತ್ರನಿಶ್ಚಯದಿಂದ ಅವನ ಪ್ರಸಾದವನ್ನೇ ಪರೀಕ್ಷಿಸಿ ಕೃತಾರ್ಥನಾಗಬೇಕೆಂದು ನಿರ್ಣಯವಾಗುವುದು.

ಹೀಗೆ, "ಸರ್ವಂಬ್ರಹ್ಮ", "ಖಂ ಬ್ರಹ್ಮ", "ಪ್ರಾಣೋ ಬ್ರಹ್ಮ", "ಅಹಂ ಬ್ರಹ್ಮ"—ಮೊದಲಾದ ಅಭೇದಬೋಧಕಸಕಲಶ್ರುತಿಸ್ಮೃತಿ ಪುರಾಣಗಳ ಸಮನ್ವಯವು ತಿಳಿಯಲ್ಪಡುವುದು. ತತ್ತ್ವತ್ರಯವನ್ನು ಒಪ್ಪಿಕೊಂಡಿರುವುದರಿಂದ ಭೇದಬೋಧಕ ಸಕಲ ಶಾಸ್ತ್ರಗಳು ಯಥಾಶ್ರು ತಾರ್ಥದಲ್ಲಿರುವುವು. ಹೀಗೆ ಭೇದಾಭೇದಶ್ರುತಿಗಳ ಸಾಮರಸ್ಯವು ಅಪರ್ಯ ವಸಾನವೃತ್ತಿಯಿಂದ ಸಿದ್ಧಿಸುವುದೆಂದು ವಿಶಿಷ್ಟಾದ್ವೈತಸಿದ್ಧಾಂತಸಾರಾಂಶ. ಈ ಅಪರ್ಯವಸಾನವೃತ್ತಿ ಜೈಮಿನಿ, ಬಾದರಾಯಣ—ಇವರುಗಳ ಸೂತ್ರ ಗಳಿಂದ ಸೂಚಿಸಲ್ಪಡುವುದರಿಂದ ಪ್ರಾಚೀನ ಸಂಪ್ರದಾಯಸಮ್ಮತವು ; ನವೀನವಾಗಿ ಕಲ್ಪಿಸಲ್ಪಟ್ಟುದಲ್ಲವೆಂದು ನಿರ್ಣಯಿಸಲ್ಪಟ್ಟಿರುವುದು.

## ಜೀವ

ಜೀವಾತ್ಮನೆಂಬ ವಸ್ತು "ಅಹಂ" ನಾನು ಎಂಬ ಅನುಭವದಿಂದ ಸರ್ವಸಮ್ಮತವಾಗಿರುವುದು. ಆದರೆ ಆ ಅನುಭವದಲ್ಲಿ ಶರೀರ, ಇಂದ್ರಿಯ, ಮನಸ್ಸು, ಪ್ರಾಣ, ಬುದ್ಧಿ—ಇವುಗಳ ಸಮೂಹವೋ ಪ್ರತ್ಯೇಕವೋ ಗೋಚರವೆಂದು ಹೇಳಬಹುದು. ಆದರೂ ಆ ಸಮೂಹದಲ್ಲಿ ಆತ್ಮನೂ ಸೇರಿರುವನು. ಶಾಸ್ತ್ರದಿಂದ ವಿವೇಕಮಾಡಿದರೆ ಶರೀರಾದಿವಿಲಕ್ಷನಾದ ಜೀವಾತ್ಮನೇ ಗೋಚರನೆಂದು ತಿಳಿಯಲ್ಪಡುವನು. ಆದುದರಿಂದ ಜೀವಾ ತ್ಮನು ಸರ್ವಾನುಭವಗೋಚರನು. ಶಾಸ್ತ್ರವಿವೇಕವನ್ನು ತಿಳಿಯಿಸುವುದು. ವಿವೇಕವೆಂದರೆ ಪರಸ್ಪರ ವ್ಯತ್ಯಾಸ. ಹೀಗೆ ನಿಷ್ಕರ್ಷಿಸಲ್ಪಟ್ಟ ಜೀವಾತ್ಮನ ಸ್ವರೂಪವೇತೆಂದರೆ — ಉತ್ಪತ್ತಿಯಿಲ್ಲದಿರುವುದರಿಂದ ಅಜನು. ವಿನಾಶ ವಿಲ್ಲದಿರುವುದರಿಂದ ನಿತ್ಯನು. ಸದಾ ಏಕರೂಪದಲ್ಲಿರುವುದರಿಂದ ಶಾಶ್ವತನು.

ಸದಾ ಹೊಸಬನಾಗಿ ತೋರುವುದರಿಂದ ಪುರಾಣನು. ಶಸ್ತ್ರ, ಅಗ್ನಿ, ಜಲ, ವಾಯು—ಇವುಗಳಿಂದ ವಿನಾಶಪಡಿಸಲಶಕ್ಯನಾದುದರಿಂದ ಅಚ್ಛೇದ್ಯನು, ಅದಾಹ್ಯನು, ಅಕ್ಲೇದ್ಯನು, ಅಶೋಷ್ಯನು, ಅಣುಪರಿಮಾಣವುಳ್ಳವನು. ಪ್ರತಿಶರೀರದಲ್ಲೂ ಬೇರೆಬೇರೆಯಾಗಿರುವನು. ಅಸಂಖ್ಯಾತನು. ತನಗೆ ತಾನೇ ತೋರುತ್ತಿರುವನಾದುದರಿಂದ ಜ್ಞಾನಸ್ವರೂಪನು. ತನಗೆ ತಾನು ಅನುಕೂಲನಾಗಿಯೇ ಇರುವುದರಿಂದ ಸುಖಸ್ವರೂಪನು ಎಂದು ಶಾಸ್ತ್ರದಿಂದಲೂ ಅನುಭವದಿಂದಲೂ ತಿಳಿಯಲ್ಪಡುವನು.

ದೇಹವನ್ನೇ ಅನುಕೂಲವಾದ ಆತ್ಮನೆಂದು ಭ್ರಮಿಸಿರುವುದರಿಂದ ಎಂತಹ ದುರವಸ್ಥೆಯಲ್ಲಿದ್ದರೂ ದೇಹದಲ್ಲಿ ಪ್ರಾಣಿಗಳಿಗೆ ನಿರತಿಶಯ ಪ್ರೀತಿ ಇರುವುದು. ಲೋಕದಲ್ಲಿ ಸಕಲ ಪ್ರಿಯವಸ್ತುಗಳು ತನಗೆ ಬೇಕೆಂದು ಅಪೇಕ್ಷಿಸುವವನಿಗೆ ತನಗೆ ತಾನು ಬೇಕೆಂಬುದನ್ನು ಹೇಳಬೇಕಾಗಿಲ್ಲ. ಗಾಢ ನಿದ್ರಾವಸ್ಥೆಯಲ್ಲಿಯೂ ತನಗೆ ತಾನು ಅನುಕೂಲವೆಂಬ ಸುಖರೂಪನಾಗಿ ತೋರುವುದರಿಂದ ಎದ್ದ ಕೂಡಲೇ ಇಷ್ಟುಕಾಲ ಸುಖವಾಗಿ ನಿದ್ರೆಮಾಡಿದೆನು ಎಂಬ ಸ್ಮರಣೆ ಬರುವುದು.

ಇವನೇ ಜ್ಞಾತಾ, ಕರ್ತಾ, ಭೋಕ್ತಾ. ಆದುದರಿಂದ ಹಿಂದೆ ಹೇಳಿದ ತ್ರಿಗುಣ ಮೊದಲಾದ ನಾಲ್ಕು ಅಚೇತನವಸ್ತುವಿಗಿಂತಲೂ ಬೇರೆಯಾದವನು. ಚೈತನ್ಯವೆಂಬ ಧರ್ಮಭೂತಜ್ಞಾನವಿರುವುದರಿಂದ ಜ್ಞಾತನು, ಜ್ಞಾನೇಚ್ಛಾಪ್ರಯತ್ನಗಳಿರುವುದರಿಂದ ಕರ್ತನು, ಸುಖದುಃಖಾನುಭವವಿರುವುದರಿಂದ ಭೋಕ್ತನು. ಭೋಗಕ್ಕೆ ಆಧಾರ ಶರೀರ ; ಸಾಧನಗಳು ಇಂದ್ರಿಯಗಳು ; ವಿಷಯಗಳು ಶಬ್ದಸ್ಪರ್ಶಾದಿಗಳು.

ಪುಣ್ಯಪಾಪವ್ಯವಸ್ಥೆ ಇರಬೇಕಾದರೆ ಆತ್ಮನಿಗೆ ಜನ್ಮಾಂತರವೂ, ನಿತ್ಯತ್ವವೂ ಇರಬೇಕು. ಒಂದೇ ಜನ್ಮ ಅಥವಾ ಉತ್ಪತ್ತಿವಿನಾಶ ಇರುವ ಪಕ್ಷದಲ್ಲಿ ಹಿಂದೆ ಕರ್ಮಗಳಿಲ್ಲ. ಈಗಿನ ಕರ್ಮಗಳಿಗೆ ಮುಂದೆ ಫಲವಿಲ್ಲ. ಇದೇ ಪುಣ್ಯಪಾಪಗಳ ಅವ್ಯವಸ್ಥೆ.

ಹಾಗೆಯೇ ಆಧೇಯತ್ವ, ವಿಧೇಯತ್ವ, ಶೇಷತ್ವ, ಪರತಂತ್ರತ್ವ ಮೊದಲಾದ ಧರ್ಮಗಳಿಂದ ಸರ್ವಾಧಾರನಾಗಿಯೂ, ಸರ್ವನಿಯಾಮಕನಾಗಿಯೂ, ಸರ್ವೇಶ್ವರನಾಗಿಯೂ, ಸರ್ವಸ್ವತಂತ್ರನಾಗಿಯೂ ಇರುವ ಪರಮಾತ್ಮನಿಗಿಂತಲೂ ಇವನು ಬೇರೆಯಾದವನು.

ಈ ಜೀವಾತ್ಮತತ್ತ್ವವು ನಿತ್ಯ, ಮುಕ್ತ, ಬದ್ಧ, ಎಂದು ಮೂರು ವಿಧ. ಯಾವಾಗಲೂ ಸಂಸಾರವೆಂಬ ಪ್ರಕೃತಿಸಂಬಂಧವಿಲ್ಲದ ಅನಂತ, ಗರುಡ, ವಿಷ್ವಕ್ಸೇನ ಮೊದಲಾದ ಭಗವಂತನ ಪರಿಜನರು ನಿತ್ಯರು. ಇವರೇ ನಿತ್ಯ ಸೂರಿಗಳು. ಶುಕ, ವಾಮದೇವ, ವ್ಯಾಸ, ಪರಾಶರ, ಆಳ್ವಾರುಗಳು, ಆಚಾರ್ಯರುಗಳು ಮೊದಲಾದವರು ಮುಕ್ತರು, ಪ್ರಕೃತಿ ಸಂಬಂಧವನ್ನು ಬಿಡಿಸಿಕೊಂಡವರು. ಈಗ ಪ್ರಕೃತಿ ಸಂಬಂಧದಲ್ಲಿರುವವರು ಬದ್ಧರು. ಇಂತಹ ಜೀವಾತ್ಮರು ಅಸಂಖ್ಯಾತರಾದುದರಿಂದ ಸೃಷ್ಟಿಪ್ರಲಯಪ್ರವಾಹ ಅನಾದ್ಯನಂತವಾಗಿರುವುದು. ಆದುದರಿಂದ ಈಶ್ವರನಿಗೆ ನಿತ್ಯವಿಭೂತಿಯಂತೆ ಲೀಲಾವಿಭೂತಿ ಪ್ರವಾಹರೂಪದಲ್ಲಿ ನಿತ್ಯವಾಗಿರುವುದು.

ಜೀವಾತ್ಮರಲ್ಲಿ ನಿತ್ಯನಾರಕಿಗಳಿಲ್ಲ, ನಿತ್ಯಸಂಸಾರಿಗಳೂ ಇಲ್ಲ. ಸರ್ವರೂ ಮುಕ್ತಿಯೋಗ್ಯರು. ದ್ವೈತಸಿದ್ಧಾಂತದಲ್ಲಿ ನಿತ್ಯನಾರಕಿಗಳು, ನಿತ್ಯಸಂಸಾರಿಗಳೆಂದು ವಿಭಾಗವಿರುವುದು. ನಿತ್ಯಸೂರಿಗಳೆಂದು ವಿಭಾಗವಿಲ್ಲ. ಅನಂತ ಗರುಡಾದಿಗಳು ಉಪಾಸನಾವಿಶೇಷದಿಂದ ಆಯಾ ಪದವನ್ನು ಹೊಂದಿದವರೆಂದು ಅಭಿಪ್ರಾಯ. ನಿತ್ಯನಾರಕಿಗಳೆಂದರೆ, ಮುಕ್ತಿಯೋಗ್ಯರಾದ ಜೀವರು ಭಗವತ್ಪ್ರಸಾದದಿಂದ ವೈಕುಂಠಲೋಕಕ್ಕೆ ಹೋಗಿ ನಿತ್ಯಾನಂದವನ್ನು ಅನುಭವಿಸುವ ಹಾಗೆ, ಭಗವದ್ದ್ವೇಷ ಪರಿಪಾಕದಿಂದ ನಿತ್ಯನರಕಲೋಕಪ್ರಾಪ್ತಿಯಾಗಿ ನಿತ್ಯದುಃಖಾನುಭವದಲ್ಲಿರುವವರು. ನಿತ್ಯಸಂಸಾರಿಗಳು ಮಿಶ್ರದ್ವೇಷಪರಿಪಾಕದಿಂದ ಶಾಶ್ವತಸುಖ ದುಃಖಮಿಶ್ರಲೋಕಪ್ರಾಪ್ತಿಯಿಂದ ಮಿಶ್ರಸ್ಥಿತಿಯಲ್ಲಿರುವವರು ಎಂದು ನಿರ್ಣಯ ಇರುವುದು.

ವಿಶಿಷ್ಟಾದ್ವೈತಸಿದ್ಧಾಂತದಲ್ಲಿ ಬದ್ಧರಾದ ಜೀವಾತ್ಮರೇ ಮುಕ್ತರಾಗುವುದರಿಂದ ನಿತ್ಯ, ಬದ್ಧ ಎಂದು ಎರಡೇ ವಿಧವಲ್ಲದೆ ಎಂದರೆ ನಿತ್ಯರಿಗೂ, ಮುಕ್ತರಿಗೂ ಯಾವವಿಧ ವ್ಯತ್ಯಾಸವೂ ಇಲ್ಲ. ಅವರು ಅನಾದಿಕಾಲದಿಂದ ಇರುವವರು. ಇವರು ಈಗೀಗ ಹೋದವರು. ಇಂತಹ ಕಾಲವ್ಯತ್ಯಾಸವನ್ನು ತೋರಿಸುವುದಕ್ಕಾಗಿ ಮೂರು ರಾಶಿ ಮಾಡಿರುವುದೆಂದು ತಾತ್ಪರ್ಯ.

ಇಂತಹ ಅಸಂಖ್ಯಾತ ನಿತ್ಯರು, ಮುಕ್ತರು ಮತ್ತು ಪರಮಾತ್ಮನು ಸೇರಿದ್ದರೂ ಒಂದೇ ಆತ್ಮವಸ್ತುವಿದ್ದರೆ ಹೇಗೋ ಹಾಗೆಯೇ ಸ್ವಲ್ಪವೂ ಪರಸ್ಪರ ಅಭಿಪ್ರಾಯಭೇದ ಬರುವುದಿಲ್ಲ. ಒಬ್ಬರು ಮಾಡಿದ ಕೈಂಕರ್ಯ

ವನ್ನೇ ಎಲ್ಲರೂ ಮಾಡಿದಂತೆ ಭಾವಿಸಿ ಸಮಾನಾದ ಆನಂದವನ್ನು ಅನುಭವಿಸುವರು.

**ಪರಮಾತ್ಮ**

ಪರಮಾತ್ಮನೆಂಬ ತತ್ತ್ವವು ಲಕ್ಷ್ಮೀನಾರಾಯಣನೆಂದು ಎರಡು ವಸ್ತುಗಳಾಗಿದ್ದರೂ ಎರಡು ಎಂಬ ಸಂಖ್ಯೆ ಪ್ರತ್ಯೇಕವಸ್ತುಗಳಲ್ಲಿ ಪರಿಸಮಾಪ್ತವಾಗದೆ ಎರಡು ವಸ್ತುಗಳಲ್ಲೂ ಪರಿಸಮಾಪ್ತವಾಗಿರುವ ಹಾಗೆ ಈಶ್ವರತ್ತ್ವವೆಂಬ ಅಧಿಕಾರವು ಎರಡು ವಸ್ತುಗಳಲ್ಲಿಯೂ ಪರಿಸಮಾಪ್ತವಾಗಿರುವುದರಿಂದ ಪರಮಾತ್ಮನು, ಪರಮೇಶ್ವರನು, ಪರಬ್ರಹ್ಮನು ಮೊದಲಾದ ಪದಗಳು ಎರಡು ವಸ್ತುಗಳನ್ನೂ ಬೋಧಿಸುವುವು. ಈ ಪರಮಾತ್ಮನು ಸಕಲತತ್ತ್ವಗಳಿಗೂ ಧಾರಕನು, ನಿಯಾಮಕನು, ಸ್ವಾಮಿ, ಶರೀರಿ, ಕಾರಣನು, ದೋಷರಹಿತನು. ಸರ್ವಜ್ಞನು, ಸರ್ವಶಕ್ತನು, ಪರಮಕಾರುಣಿಕನು, ಸಕಲಕಲ್ಯಾಣಗುಣಪರಿಪೂರ್ಣನು, ಸರ್ವವಸ್ತುವಿಲಕ್ಷಣನು, ಸರ್ವವಿಧಲೌಕಿಕಯುಕ್ತಿವಿದೂರನು, ಸರ್ವಶಬ್ದವಾಚ್ಯನು, ಅಪ್ರಾಕೃತದಿವ್ಯಮಂಗಳವಿಗ್ರಹಸಹಿತನು, ಶಾಸ್ತ್ರವಿಹಿತ ಸರ್ವಕರ್ಮಸಮಾರಾಧ್ಯನು, ನಿಷಿದ್ಧಸರ್ವಕರ್ಮಾಪರಾಧ್ಯನು, ಸಕಲಫಲಪ್ರದನು, ಸರ್ವಸಮಾಶ್ರಯಣೀಯನು, ಪಿತೃಮಾತೃಸ್ಥಾನೀಯನು, ಪರಮಾನಂದ ಸ್ವರೂಪನು, ಪರಮಪ್ರಾಪ್ಯನು, ಪರಮಪ್ರಾಪಕನು,—ಇತ್ಯಾದಿ ಸ್ವಭಾವವುಳ್ಳವನೆಂದು ಶಾಸ್ತ್ರದಿಂದಲೇ ತಿಳಿಯಲ್ಪಡತಕ್ಕವನು.

ಇವನು ಸೂಕ್ಷ್ಮರೂಪದಲ್ಲಿರುವ ಚೇತನಾಚೇತನಶಕ್ತಿವಿಶಿಷ್ಟನಾಗಿ ಸ್ಥೂಲ ರೂಪವನ್ನು ಹೊಂದಿದ ಚೇತನಾಚೇತನಶಕ್ತಿವಿಶಿಷ್ಟನಾಗುವುದರಿಂದ ಪ್ರಪಂಚಕ್ಕೆ, ಭೂಷಣಗಳಿಗೆ ಭಂಗಾರದಂತೆ ಉಪಾದಾನಕಾರಣನಾಗಿಯೂ ಇದಕ್ಕೆ ಅನುಕೂಲವಾದ ಇಚ್ಛೆಯೆಂಬ ಸಂಕಲ್ಪವಿರುವುದರಿಂದ ನಿಮಿತ್ತಕಾರಣನಾಗಿಯೂ ಕಾಲದೇಶ ಮೊದಲಾದ ಉಪಕರಣಗಳೆಲ್ಲವೂ ಇವನ ಅಧೀನವಾಗಿರುವುದರಿಂದ ಸಹಕಾರಿಕಾರಣನಾಗಿಯೂ ಶಾಸ್ತ್ರಗಳಿಂದ ಹೇಳಲ್ಪಡುವನು.

ಇವನಿಗೆ ಸತ್ಯಸಂಕಲ್ಪವು ಸಕಲದೋಷರಾಹಿತ್ಯಕ್ಕೂ, ಸತ್ಯಕಾಮತ್ವವು ಸಕಲಕಲ್ಯಾಣಗುಣಸಾಹಿತ್ಯಕ್ಕೂ, ಪುರುಷೋತ್ತಮತ್ವವು ಸರ್ವವಸ್ತು

ವಿಲಕ್ಷಣತ್ವಕ್ಕೂ ನಿಯಾಮಕವಾಗಿರುವುವು. ನಿತ್ಯವಿಭೂತಿ, ಲೀಲಾವಿಭೂತಿ ಯೆಂಬ ಉಭಯವಿಧೈಶ್ವರ್ಯವಿರುವುದರಿಂದ ಉಭಯವಿಭೂತಿಯೆಂದೂ ದೋಷರಾಹಿತ್ಯ ಗುಣಸಾಹಿತ್ಯದಿಂದ ಉಭಯಲಿಂಗನೆಂದೂ ವ್ಯವಹಾರ.

ಅಪ್ರಾಕೃತದಿವ್ಯದೇಶವಾದ ವೈಕುಂಠದಲ್ಲಿ ಸಕಲವಿಧಪರಿಜನಪರಿಚ್ಛೇದ ಸಹಿತನಾಗಿ ಲಕ್ಷ್ಮೀದೇವಿಯೊಡನೆ ನಿತ್ಯಾನಂದಾನುಭವದಲ್ಲಿರುವನು.

ಆದುದರಿಂದ ರಾಜಶರೀರದೊಳಗಿರುವ ಜೀವಾತ್ಮನಂತೆ ಇರುವ ಪರಮಾತ್ಮನು ಒಬ್ಬ ಮಹಾರಾಜನ ದೃಷ್ಟಾಂತದಲ್ಲಿ ಸ್ವರೂಪರೂಪಗುಣವಿಭೂತಿಯುಳ್ಳವನು. ಸ್ವರೂಪವೆಂದರೆ ಪರಮಾತ್ಮನು ಸರ್ವವ್ಯಾಪಕವಾದ ವಸ್ತು ; ಇದಕ್ಕೆ ದಿವ್ಯಾತ್ಮಸ್ವರೂಪವೆಂದು ಹೆಸರು. ರೂಪವೆಂದರೆ ರಾಜನ ದೇಹದಂತೆ, ಪರಮಾತ್ಮನ ಶುದ್ಧಸತ್ತ್ವದ್ರವ್ಯಮಯವಾದ ದೇಹ ; ಅದಕ್ಕೆ ದಿವ್ಯಮಂಗಳ ವಿಗ್ರಹವೆಂದು ಹೆಸರು. ಗುಣವೆಂದರೆ ಸ್ವರೂಪದಲ್ಲಿರುವ ಜ್ಞಾನ ಶಕ್ತಿ ಬಲೈಶ್ವರ್ಯ ವೀರ್ಯ ತೇಜಸ್ಸು ಮೊದಲಾದ ಅಸಂಖ್ಯಾತ ಗುಣಗಳು, ಮತ್ತು ರೂಪದಲ್ಲಿರುವ ಸೌಗಂಧ್ಯ, ಸೌಕುಮಾರ್ಯ, ಲಾವಣ್ಯ, ಯೌವನ ಮೊದಲಾದ ಗುಣಗಳು. ವಿಭೂತಿಯೆಂದರೆ ರಾಜ್ಯ ಕೋಶ ಮೊದಲಾದ ಸ್ಥಿರವಾದ ಐಶ್ವರ್ಯ ಮತ್ತು ಉದ್ಯಾನವನ ಮೊದಲಾದ ಲೀಲಾರ್ಥವಾದ ಐಶ್ವರ್ಯ. ಇವುಗಳಂತೆ ನಿತ್ಯವಿಭೂತಿಯೂ ಲೀಲಾವಿಭೂತಿಯೂ ಎಂದರಿಯಬೇಕು.

ಇಲ್ಲಿ ಲಕ್ಷ್ಮೀದೇವಿಗೂ ಇಂತಹ ಸ್ವರೂಪರೂಪಗಳಿರುವುವು. ಸ್ವರೂಪದಲ್ಲಿ ಪರಮಾತ್ಮನಿಗೆ ಸರ್ವಸ್ವಾತಂತ್ರ್ಯವು ; ಲಕ್ಷ್ಮಿಗೆ ಅವನ ಅಧೀನವಾದ ಸ್ವಾತಂತ್ರ್ಯವು. ಉಳಿದ ವಿಷಯಗಳಲ್ಲಿ ಸರ್ವಸಾಮ್ಯವು. ರೂಪದಲ್ಲಿ ಪುರುಷತ್ವಾಕಾರ ಸ್ತ್ರೀತ್ವಾಕಾರವೆಂಬ ವ್ಯತ್ಯಾಸ. ಗುಣವಿಭೂತಿಗಳು ಇಬ್ಬರಿಗೂ ಸಮ. ಆನಂದವಿಷಯದಲ್ಲಿ ಇವರುಗಳಿಗೂ ನಿತ್ಯಸೂರಿಗಳಿಗೂ ಮುಕ್ತರಿಗೂ ಸ್ವಲ್ಪವೂ ವ್ಯತ್ಯಾಸವಿಲ್ಲದ ಸಾಮ್ಯ. ಇದಕ್ಕೆ ಲೋಕದಲ್ಲಿ ನಟಸಾಮಾಜಿಕರ ರಸಾನುಭವವೇ ಉದಾಹರಣೆ.

ಪರಮಾತ್ಮಸ್ವರೂಪಕ್ಕೆ ಇತರ ಸಮಸ್ತವಸ್ತುಗಳೂ ಲಕ್ಷ್ಮೀಸಹಿತ ಶರೀರವಾದುದರಿಂದ ದಿವ್ಯಮಂಗಳವಿಗ್ರಹಕ್ಕೂ ಇವುಗಳಿಗೂ ವ್ಯತ್ಯಾಸವೇನೆಂದರೆ, ದಿವ್ಯಮಂಗಳವಿಗ್ರಹವು ಶುದ್ಧಸತ್ತ್ವದ್ರವ್ಯಮಯವಾಗಿ ದಿವ್ಯ

ಭೂಷಣಾಯುಧಾಲಂಕೃತವಾಗಿ ನಿತ್ಯವಾಗಿ ಪ್ರೀತ್ಯತಿಶಯದಿಂದ ಆಶ್ರಿತಾನುಗ್ರಹಕ್ಕಾಗಿ ಸ್ವೀಕರಿಸಲ್ಪಟ್ಟ ಪರವಾಸುದೇವರೂಪ. ಈ ರೂಪಕ್ಕೆ ಸರ್ವವಿಧ ಶಕ್ತಿಗಳಿರುವುವು. ಇದರ ಅಂಶಗಳಿಂದಲೇ ವಾಸುದೇವ, ಸಂಕರ್ಷಣ, ಪ್ರದ್ಯುಮ್ನಾನಿರುದ್ಧ, ರಾಮ. ಕೃಷ್ಣ ಮೊದಲಾದ ರೂಪಗಳನ್ನು ಸ್ವೀಕರಿಸಿ ಪರಮಾತ್ಮನು ಆಶ್ರಿತವಾತ್ಸಲ್ಯದಿಂದ ಅವತರಿಸುವನು. ಹಾಗೆಯೇ ಲಕ್ಷ್ಮೀದೇವಿ ಪರವಾಸುದೇವ ರೂಪದಲ್ಲಿ ಸೇರಿರುವ ತನ್ನ ರೂಪದ ಅಂಶಗಳಿಂದ ಸೀತೆ, ರುಕ್ಮಿಣಿ ಮೊದಲಾದ ಅವತಾರರೂಪಗಳನ್ನು ಸ್ವೀಕರಿಸಿ ಪರಮಾತ್ಮ ಸಹಾಯವಾಗಿ ಜನದುದ್ಧಾರಕ್ಕೆ ಅವತರಿಸುವಳು.

ಇತರ ಸಮಸ್ತವಸ್ತುಗಳೂ ಪರಮಾತ್ಮನಿಗೆ ಶರೀರವಾದುದರಿಂದ ರೂಪಗಳೇ ಹೌದು. ಆದುದರಿಂದಲೇ ಶ್ರುತಿಸ್ಮೃತಿಪುರಾಣಗಳಲ್ಲಿ ಪ್ರತಿ ವಸ್ತುವನ್ನೂ ಬೇರೆ ಬೇರೆ ಹೇಳಿ ಪರಮಾತ್ಮನ ಶರೀರವೆಂದು ಅತ್ಯಾದರದಿಂದ ಉಪದೇಶವಿರುವುದು. ಇದರಿಂದ ಪರಮಾತ್ಮನಿಗೂ ಪ್ರಪಂಚಕ್ಕೂ ಶರೀರಾತ್ಮಭಾವಸಂಬಂಧವೆಂದು ಸ್ಪಷ್ಟವಾಗುತ್ತದೆ. ಶರೀರವೆಂದರೆ ಶರೀರಿಯಾದ ಆತ್ಮನಿಗೆ ಆಧೇಯವಾಗಿಯೂ ವಿಧೇಯವಾಗಿ ಶೇಷವಾಗಿಯೂ ಇರುವುದು ನಮ್ಮ ಅನುಭವಸಿದ್ಧವು. ಆಧೇಯವೆಂದರೆ ಆತ್ಮನನ್ನು ಬಿಟ್ಟು ಕ್ಷಣ ಮಾತ್ರವೂ ನಿಲ್ಲುವಂತಹುದಲ್ಲ. ವಿಧೇಯವೆಂದರೆ ಅವನ ಇಚ್ಛಾನುಸಾರ ವಿರುವುದು. ಕೂಡಬೇಕೆಂದರೆ ಕೂಡುವುದು, ಹೀಗೆ ನಿಲ್ಲುವುದು, ಮಲಗುವುದು, ಓಡುವುದು, ತಿರುಗುವುದು, ಕೈಕಾಲುಗಳನ್ನು ಅಲ್ಲಾಡಿಸುವುದೂ, ಇತ್ಯಾದಿ ಶರೀರವ್ಯಾಪಾರಗಳೆಲ್ಲವೂ ಜೀವಾತ್ಮನ ಇಚ್ಛಾಧೀನವಾಗಿರುವುವು. ಶೇಷತ್ವವೆಂದರೆ ಐಶ್ವರ್ಯವು ಪರಮಾತ್ಮನಿಗೋಸ್ಕರವೇ ಇರುವುದು. ಇದರಿಂದ ಅವನಿಗೆ ಸರ್ವಭೋಗಾನುಭವವು. ಈ ರೀತಿ ನಿರೂಪಣೆಯಿಂದ ಸ್ವಾತಂತ್ರ್ಯಪಾರತಂತ್ರ್ಯಪರಾಕಾಷ್ಠೆ ತಿಳಿದುಬರುವುದು. ಲೋಕದಲ್ಲಿ ಶರೀರಾತ್ಮ ಭಾವಕ್ಕಿಂತಲೂ ಸ್ವಾತಂತ್ರ್ಯಪಾರತಂತ್ರ್ಯಕ್ಕೆ ಬೇರೆ ಉದಾಹರಣೆಯಿಲ್ಲವೆಂದು ಶಾಸ್ತ್ರಗಳ ತಾತ್ಪರ್ಯ.

ಹೀಗೆ ಶರೀರಾತ್ಮ ಭಾವೋಪದೇಶಕ್ಕೆ ಅನೇಕ ತಾತ್ಪರ್ಯವಿರುವುದು. ಹೇಗೆಂದರೆ, ಸಕಲಪ್ರಪಂಚವೂ ಪರಮಾತ್ಮನ ಶರೀರವಾದರೆ ಏಕದೇಹಾವಯವನ್ಯಾಯದಿಂದ ಸಕಲಪ್ರಾಣಗಳೂ ಪರಸ್ಪರಾನುಕೂಲ್ಯದಲ್ಲಿರಬೇಕು.

ಕೈಕಾಲು ಮೊದಲಾದ ಏಕದೇಹಾವಯವಗಳಲ್ಲಿ ಪರಸ್ಪರ ವಿರೋಧ ರಾಗ ದ್ವೇಷ ಮೊದಲಾದುವು ಇವೇ ? ಅದರಂತೆ ನಿರತಿಶಯನಿರುಪಾಧಿಕ ಐಕ ಮತ್ಯದಿಂದ ಪರಮಾತ್ಮ ಮುಖೋಲ್ಲಾಸದಲ್ಲೇ ಇರಬೇಕೆಂದು ಎರಡನೆಯ ರಹಸ್ಯಾರ್ಥ.

ಹೀಗೆ ಪ್ರಪಂಚವೇ ಪರಮಾತ್ಮನಿಗೆ ರೂಪವಾದರೆ ಆ ರೂಪ ಮೂಲಕವೇ ಅವನ ಸೇವೆಯನ್ನು ಮಾಡಬೇಕು. ಲೋಕದಲ್ಲೂ ಪರಸ್ಪರೋ ಪಚಾರವನ್ನು ದೇಹಮೂಲಕವಾಗಿ ಆತ್ಮನನ್ನು ಉದ್ದೇಶಿಸಿ ಮಾಡುತ್ತಾರೆ. ಪುಷ್ಪಮಾಲಿಕೆಯನ್ನು ರಾಜನ ಕಂಠದಲ್ಲಿ ಸಮರ್ಪಿಸುತ್ತಾರೆ. ಅದಕ್ಕೂ ಆವರಣವಾಗಿರುವ ಕವಚದ ಮೇಲೆ ಸಮರ್ಪಿಸುತ್ತಾರೆ. ಹಾಗೆಯೇ ಪರಮಾತ್ಮ ಸೇವೆಯನ್ನು ಪ್ರತ್ಯಕ್ಷರೂಪವಾದ ಲೋಕಮೂಲಕ ಮಾಡ ಬೇಕೆಂದು ಉಪದೇಶಿಸುವುದಕ್ಕಾಗಿ ಶರೀರಾತ್ಮಭಾವೋಪದೇಶವು. ಈ ಅರ್ಥವು—

ಚರಾಚರಾಣಿ ಭೂತಾನಿ ಸರ್ವಾಣಿ ಭಗವದ್ವಪುಃ
ಅತಸ್ತದಾನುಕೂಲ್ಯಂ ಮೇ ಕಾರ್ಯಮಿತ್ಯೇಷ ನಿಶ್ಚಯಃ ॥

ಎಂದು ಭಗವಚ್ಛಾಸ್ತ್ರವಾದ 'ಅಹಿರ್ಬುಧ್ನ್ಯಸಂಹಿತೆ'ಯಲ್ಲಿ ಉಪದೇಶಿಸಿರು ವುದು. ಇದು ಮೂರನೆಯ ರಹಸ್ಯಾರ್ಥ.

ಮತ್ತು ಇಲ್ಲಿ ಸಕಲ ಪ್ರಾಣಿಗಳಿಗೂ ಆಯಾ ದೇಹದಲ್ಲಿ ನಿರತಿಶಯ ಪ್ರೀತಿ ಇರುವುದು. ಆ ದೇಹವು ಎಂತೆಂತಹ ದುರವಸ್ಥೆಯಲ್ಲಿದ್ದರೂ ಬಿಡ ಲಿಷ್ಟಪಡುವುದಿಲ್ಲ. ಆದುದರಿಂದ ದೇಹಕ್ಕಿಂತಲೂ ಪ್ರಪಂಚದಲ್ಲಿ ಪ್ರಿಯವಾದ ವಸ್ತು ಯಾವುದೂ ಇಲ್ಲವೆಂದು ಸರ್ವಾನುಭವಸಿದ್ಧ. ಹೀಗಾದರೆ ಪ್ರಪಂಚವು ಭಗವಂತನಿಗೆ ದೇಹವೆಂದು ಹೇಳುವ ಶಾಸ್ತ್ರವು ಪ್ರಪಂಚದಲ್ಲಿ ಭಗವಂತನಿಗೆ ಎಂತಹ ಪ್ರೀತಿಯನ್ನು ಸೂಚಿಸುತ್ತದೆ ? ಇದರಿಂದ ಭಗವಂತನಿಗೆ ನಿರತಿಶಯ ಪ್ರಿಯವಾದ ಪ್ರಪಂಚವಿಷಯದಲ್ಲಿ ಭಗವದ್ಭಕ್ತರಾದ ಭಾಗವತರು ಹೇಗಿರ ಬೇಕಾಗಿರುವುದೆಂಬುದನ್ನು ವಿಸ್ತರಿಸಬೇಕಾಗಿಲ್ಲ. ಇದು ನಾಲ್ಕನೆಯ ರಹ ಸ್ಯಾರ್ಥ. ಹೀಗೆ ಶರೀರಾತ್ಮಭಾವದ ಉಪದೇಶಶಾಸ್ತ್ರಗಳಿಗೆ ಬಹುವಿಧ ತಾತ್ಪರ್ಯಗಳಿರುವುವು.

ಇಂತಹ ಶರೀರಾತ್ಮಭಾವವೆಂಬ ಅಪೃಥಕ್ಸಿದ್ಧಸಂಬಂಧ ಸಕಲವಸ್ತು

ಗಳ ಸೂಕ್ಷ್ಮಾವಸ್ಥೆಯಲ್ಲೂ ಸ್ಥೂಲಾವಸ್ಥೆಯಲ್ಲೂ ಸರ್ವದಾ ಇರತಕ್ಕ ಸಂಬಂಧ. ಸರ್ವವ್ಯಾಪಕತ್ವ ಸರ್ವಾಧಾರತ್ವ ಮೂಲಕವು, ಸರ್ವಾಂತರ್ಯಾಮಿತ್ವರೂಪವು.

ಇದಲ್ಲದೆ ಸೃಷ್ಟಿಕಾಲದಲ್ಲಿ ಪ್ರತಿವಸ್ತುವಿನಲ್ಲೂ ಅನುಪ್ರವೇಶವೆಂಬ ಪರಮಾತ್ಮನ ಸಾನ್ನಿಧ್ಯವು ಬೇರೆ ಇರುವುದು. ಇದು ಗೋವಿನ ಹೊಟ್ಟೆಯಲ್ಲಿ ಕರುವು ಸಂಪೂರ್ಣವಿರುವ ಹಾಗೆ ಪರಮಾತ್ಮನು ಪ್ರತಿ ವಸ್ತುವಿನಲ್ಲೂ ಪರಿಪೂರ್ಣನಾಗಿರುವನು. ಒಂದು ವಸ್ತುವಿನಲ್ಲಿ ಪೂರ್ತಿಯಾದವನು ಮತ್ತೊಂದು ವಸ್ತುವಿನಲ್ಲಿ ಪೂರ್ತಿಯಾಗಿರುವುದು ಹೇಗೆಂದರೆ, ಪ್ರತಿವಸ್ತುವಿನಲ್ಲೂ ಪೂರ್ತಿಯೆಂಬುದು ಆಯಾ ವಸ್ತುಮೂಲಕ ಸಂಪೂರ್ಣ ಶಕ್ತಿಯನ್ನು ಪ್ರಕಾಶಪಡಿಸುವ ಸಾನ್ನಿಧ್ಯವೆಂದರ್ಥವು.

ಇದಲ್ಲದೆ ಮಹಾತ್ಮರಾದ ಯೋಗೀಶ್ವರರ ಹೃದಯದಲ್ಲಿ ಅನುಗ್ರಹಕ್ಕಾಗಿ ಸೂಕ್ಷ್ಮರೂಪವನ್ನು ಸ್ವೀಕರಿಸಿ ಸಾನ್ನಿಧ್ಯಮಾಡಿರುವ ಸಂಬಂಧ ಬೇರೆ ಇರುವುದು. ಇದೇ ಅಂತರ್ಯಾಮ್ಯವತಾರವೆಂದು ಪ್ರಸಿದ್ಧಿ. ಹೀಗೆ ಒಂದೊಂದು ಪ್ರಯೋಜನದಿಂದ ಒಂದೊಂದು ಸಂಬಂಧವೆಂದು ಸಂಬಂಧವು ಬಹುವಿಧವಾಗಿರುವುದು. ಇದರಿಂದ "ತ್ವಮೇವ ಮಾತಾ ಚ ಪಿತಾ ತ್ವಮೇವ," 'ವಾಸುದೇವಸ್ಸರ್ವಮ್'' ಎಂಬ ಅನುಸಂಧಾನಗಳು ಬಹು ಪ್ರಕಾರವಾಗಿ ನಡೆಯುವುವು.

ಇಂತಹ ಪರಮಾತ್ಮನಿಗೆ ಅಚಿಂತ್ಯಶಕ್ತಿ ಮತ್ತು ಅಘಟಿತಘಟನಾ ಸಾಮರ್ಥ್ಯವು ಈಶ್ವರವಾದಿಗಳೆಲ್ಲರಿಂದಲೂ ಅಂಗೀಕರಿಸಲ್ಪಟ್ಟಿರುವುದು. ಇದರಿಂದ ಯಾವ ವಸ್ತುವು ಯಾವ ವಸ್ತುವಾಗಿಯಾದರೂ ಆಗಬಹುದು. ನೀಲವು ಪೀತವಾಗಬಹುದು. ಪೀತವು ನೀಲವಾಗಬಹುದು. ಅಚೇತನವು ಚೇತನವಾಗಬಹುದು. ಚೇತನವು ಅಚೇತನವಾಗಬಹುದೆಂದರೆ ಅನೇಕಾಂತವೆಂಬ ಜೈನ ಸಿದ್ಧಾಂತಕ್ಕೂ ಇಂತಹ ಸೇಶ್ವರಸಿದ್ಧಾಂತಕ್ಕೂ ವ್ಯತ್ಯಾಸವೇನೆಂದರೆ—

ಅಂತಹ ಸಾಮರ್ಥ್ಯವಿದ್ದರೂ ಅವನು ಹಾಗೆ ಮಾಡುವುದಿಲ್ಲವೆಂದು ಕೆಲವರು ಹೇಳುವರು. ಯಾವ ವಸ್ತುವು ವಸ್ತುಸ್ವಭಾವದಿಂದ ಯಾವ ವಿಧವಾಗಿ ಆಗಬಹುದೋ ಹಾಗೆ ಪರಮಾತ್ಮನು ಇಚ್ಛಾಮಾತ್ರದಿಂದ

ಮಾಡುತ್ತಾನೆ. ಇತರರಿಗೆ ಇದು ಸಾಧ್ಯವಿಲ್ಲ. ಇದೇ ಅಘಟಿತಘಟನಾ ಸಾಮರ್ಥ್ಯವೆಂದು ಕೆಲವರು ಹೇಳುವರು. ಕೆಲವು ಸಂದರ್ಭಗಳಲ್ಲಿ ಪರಮಾತ್ಮನು ವ್ಯವಸ್ಥಿತನಾಗಿಯೇ ಇರುವನು. ಇಲ್ಲದಿದ್ದರೆ ಮುಕ್ತರು ಪುನಃ ಬದ್ಧರಾಗಬೇಕಾಗುವುದು.

## ಪರಮಾತ್ಮವ್ಯಾಪಾರ

ಇಂತಹ ಪರಮಾತ್ಮನು, ಸರ್ವವಿಧದಲ್ಲೂ ತನಗೆ ಸಮಾನವಾದ ಆನಂದವನ್ನು ಅನುಭವಿಸುವ ಸಂಪೂರ್ಣ ಯೋಗ್ಯತೆಯುಳ್ಳ ಅನಂತಕೋಟಿ ಜೀವಾತ್ಮರು ಪ್ರಕೃತಿ ಮಂಡಲದಲ್ಲಿ ಅನಾದಿಕಾಲದಿಂದಲೂ ಸಂಕಟಪಡುತ್ತಿರುವುದನ್ನು ನೋಡಿ, ಸರ್ವದಾ, ಸರ್ವಪ್ರಕಾರದಿಂದಲೂ, ಸಕಲಜೀವಾತ್ಮೋದ್ಧಾರಕ್ಕಾಗಿ ಕೃಷಿ ಮಾಡುತ್ತಿರುವನು. ಇವನ ವ್ಯಾಪಾರಗಳನ್ನೆಲ್ಲಾ ಸೃಷ್ಟಿ, ಸ್ಥಿತಿ, ಸಂಹಾರ, ಅಂತಃಪ್ರವೇಶ, ನಿಯಮನವೆಂದು ಐದು ರಾಶಿ ಮಾಡಿರುವರು. ಪ್ರಕೃತಿಪ್ರಾಕೃತ ಜಡವಸ್ತುಗಳಿಗೆ ಸಂಕೋಚವಿಕಾಸವೆಂಬ ಸ್ವರೂಪಪರಿಣಾಮವಿರುವುದರಿಂದ ಸೃಷ್ಟಿ ಮೊದಲಾದುವು ಕೂಡುವುವು. ಜೀವಾತ್ಮತತ್ತ್ವಕ್ಕೆ ಸ್ವರೂಪದಲ್ಲಿ ಪರಿಣಾಮವಿಲ್ಲದಿದ್ದರೂ ಸ್ವಭಾವವಾದ ಧರ್ಮಭೂತಜ್ಞಾನಕ್ಕೆ ಪರಿಣಾಮವಿರುವುದರಿಂದ ಅದರ ಮೂಲಕ ಶರೀರೇಂದ್ರಿಯಸಂಬಂಧವೆಂಬ ಸೃಷ್ಟಿ ಮೊದಲಾದುವು ಇರುವುವು. ಸ್ಥಿತಿ ಸಂಹಾರಗಳು ಪ್ರಸಿದ್ಧಗಳು. ಅಂತಃಪ್ರವೇಶವೆಂದರೆ, ಸೃಷ್ಟಿಸಲ್ಪಟ್ಟ ವಸ್ತುಗಳಲ್ಲಿ ಅನುಪ್ರವೇಶವೆಂಬ ಸಾನ್ನಿಧ್ಯ. ಇದೇ ಸರ್ವವಸ್ತು ಪರಿಪೂರ್ತಿಯೆಂಬ ಸರ್ವಶಕ್ತಿ ಪ್ರಕಾಶನಸಾಮರ್ಥ್ಯ. ನಿಯಮನವೆಂದರೆ ಸರ್ವವಸ್ತುಗಳನ್ನು ಆಯಾ ಸ್ವಭಾವದಲ್ಲಿರಿಸುವ ಅಧಿಕಾರ. ಇವೆಲ್ಲವನ್ನೂ ಸೇರಿಸಿದರೆ ಮೋಕ್ಷಪ್ರದಾನವೆಂಬ ಪರಮಾತ್ಮನ ಕೃಷಿಯಾಗುವುದು. ಒಂದು ಕಲ್ಪದಲ್ಲಿ ಒಬ್ಬ ಜೀವಾತ್ಮನು ಸಾಧನಾನುಷ್ಠಾನದಿಂದ ಮುಕ್ತನಾದರೆ ಅನಾದಿಕಾಲದಿಂದ ಮಾಡಿದ ಕೃಷಿ ಫಲಿಸಿತೆಂದು ಸಂತೋಷಪಡುವನು.

ಇಂತಹ ಸೃಷ್ಟ್ಯಾದಿವ್ಯಾಪಾರಗಳನ್ನು, ಅವಾಪ್ತಸಮಸ್ತ ಕಾಮನಾದ ಸರ್ವಸಂಪತ್ಸಮೃದ್ಧನಾದ ಅಖಂಡಭೂಮಂಡಲಾಧಿಪತಿಯಾದ ರಾಜಾಧಿರಾಜನು ಬೇರೆ ಪ್ರಯೋಜನದೃಷ್ಟಿಯಿಲ್ಲದೆ ಕೇವಲ ಮನೋವಿನೋದಕ್ಕಾಗಿ

ಮಾಡುವ ಕಂದುಕಚತುರಂಗಾದಿಲೀಲೆಯಂತೆ, ಲೀಲಾರೂಪವೆಂದು ನಿರೂಪಿಸಿರುವರು.

ಇದರ ರಹಸ್ಯವಿದು—ಸಾಂಖ್ಯಮತದಲ್ಲಿ ಪ್ರಪಂಚವು ಅಚೇತನವಾದ ಮೂಲಪ್ರಕೃತಿಯ ಸ್ವಾಭಾವಿಕಪರಿಣಾಮವಾದುದರಿಂದಮೂಲಪ್ರಕೃತಿಯೇ ಜಗತ್ಕಾರಣವು. ಅದಕ್ಕೆ ಚೈತನ್ಯವೆಂಬ ಜ್ಞಾನವಿಲ್ಲದಿರುವುದರಿಂದ ಪ್ರಪಂಚ ಸೃಷ್ಟಿಗೆ ಪ್ರಯೋಜನೋದ್ದೇಶವಿಲ್ಲ, ಪ್ರಯೋಜನಪ್ರಶ್ನೆಯೂ ಬರುವುದಿಲ್ಲ, ಚೇತನನಾದ ಪರಮಾತ್ಮನು ಕಾರಣವಾದರೆ ಚೇತನನ ಪ್ರವೃತ್ತಿಯೆಲ್ಲಾ ಪ್ರಯೋಜನೋದ್ದೇಶ ಮೂಲಕ ನಡೆಯುವುದರಿಂದ ಸೃಷ್ಟಿಗೆ ಪ್ರಯೋಜನವೇನು ? ಸ್ವಾರ್ಥವೇ ? ಪರಾರ್ಥವೇ ? ಎಂದು ಸಾಂಖ್ಯರ ಪ್ರಶ್ನೆ. ಸ್ವಾರ್ಥಪ್ರಯೋಜನವಿದ್ದರೆ ಪರಮಾತ್ಮನು ಅವಾಪ್ತಸಮಸ್ತ ಕಾಮನಾಗಲಾರನು. ಪರಾರ್ಥವಾಗಿ ದಯೆಯಿಂದ ಸೃಷ್ಟಿಯೆಂದರೆ ಪ್ರಪಂಚವು ಸುಖಮಯವಾಗಿರಬೇಕು, ದುಃಖ ಬಹುಲವಾಗಿರಕೂಡದಾದುದರಿಂದ ಪರಮಾತ್ಮಕಾರಣತ್ವವು ಯುಕ್ತವಲ್ಲವೆಂದು ಆಕ್ಷೇಪಕ್ಕೆ ಸಮಾಧಾನವಾಗಿ ಸೃಷ್ಟ್ಯಾದಿವ್ಯಾಪಾರವು ಪರಮಾತ್ಮನ ಲೀಲೆಯೆಂದು ಪ್ರಸಕ್ತವಾಗಿರುವುದು. ಯಾವ ವ್ಯಾಪಾರವು ಬೇರೆ ಪ್ರಯೋಜನೋದ್ದೇಶವಿಲ್ಲದೆ ತಾನೇ ಸುಖರೂಪವಾಗಿ ಸಂತೋಷಾನುಭವವೆಂದು ಹೇಳಲ್ಪಡುವುದೋ ಅದೇಲೀಲೆ.ಚೇತನವ್ಯಾಪಾರವೆಲ್ಲವೂ ಪ್ರಯೋಜನೋದ್ದೇಶದಲ್ಲಿರುವುವೆಂಬ ನಿಯಮದಲ್ಲಿ ಲೀಲಾರೂಪವ್ಯಾಪಾರಗಳನ್ನು ವಿನಾಯಿಸಬೇಕು. ಇದರಿಂದ ಸೃಷ್ಟ್ಯಾದಿ ವ್ಯಾಪಾರಗಳಿಗೆ ಪ್ರಕೃತಿಯ ವ್ಯಾಪಾರದಂತೆ ಪ್ರಯೋಜನವೇನೆಂಬ ಪ್ರಶ್ನೆಗೆ ಅವಕಾಶವಿಲ್ಲ. ಪರಮಾತ್ಮಕಾರಣತ್ವಕ್ಕೆ ಬಾಧಕವಿಲ್ಲ. ಆದರೂ ಅವಾಪ್ತ ಸಮಸ್ತಕಾಮನಿಗೆ ಲೀಲೆಯಲ್ಲಿ ಪ್ರವೃತ್ತಿ ಹೇಗೆಂದರೆ ಅವಾಪ್ತಪದಕ್ಕೆ ಅವಾಸ್ತವ್ಯವೆಂದರ್ಥ. ಸಕಲಕಾಮವೂ ಅವನಿಗೆ ತಡೆಯಿಲ್ಲದೆ ಪ್ರಾಪ್ತಿಯಾಗುವುದೆಂದು ಸಿದ್ಧಾಂತ.

ಅಲ್ಲದೆ ಜಗದುದ್ಧಾರದಿಂದ ಅವನಿಗೆ ಸಂತೋಷವೇ ಇಲ್ಲವೆಂದರೆ ಅಂತಹ ಪರಮಾತ್ಮನು ಬೇಕಾಗಿಯೇ ಇಲ್ಲ. ಮುಕ್ತಿಯಿಂದ ಜೀವಾತ್ಮನಿಗೆ ಹೇಗೆ ಆನಂದವೋ, ಯುವರಾಜ್ಯಾಭಿಷೇಕದಿಂದ ರಾಜಕುಮಾರನಿಗೆ ಹೇಗೆ ಆನಂದವೋ, ಅದಕ್ಕಿಂತಲೂ ಶತಗುಣಿತವಾದ ಆನಂದವು ಪರಮಾತ್ಮನಿಗೂ

ಮಹಾರಾಜನಿಗೂ ಎಂದು ನಿರ್ಣಯವು. ಇಂತಹ ಸೃಷ್ಟ್ಯಾದಿವ್ಯಾಪಾರ ದಲ್ಲಿ ಲೀಲಾರಸನಿರೂಪಣ ಮಾಡಿದರೂ ದಯಾರಸಮಯವಾಗಿಯೇ ಲೀಲಾರಸವಿರುವುದೆಂದು ರಹಸ್ಯಾರ್ಥ.

## ಸ್ವಾತಂತ್ರ್ಯ

ಈ ಪ್ರಕಾರ ಪರಮಾತ್ಮನಿಗೆ ನಿರಂಕುಶಸ್ವಾತಂತ್ರ್ಯವನ್ನು ಹೇಳಿದರೂ ರಕ್ಷಣಶಿಕ್ಷಣಗಳಿಗೆ ಕಾರಣವಾದ ಜೀವಾತ್ಮಸ್ವಾತಂತ್ರ್ಯಕ್ಕೂ ಪುಣ್ಯಪಾಪ ಗಳೆಂಬ ಕರ್ಮಸ್ವಾತಂತ್ರ್ಯಕ್ಕೂ ವಿರೋಧವಿಲ್ಲ. ಪುಣ್ಯಪಾಪವೆಂಬುದು ಪರ ಮಾತ್ಮನ ನಿಗ್ರಹಾನುಗ್ರಹಸಂಕಲ್ಪವೆಂದು ಸಿದ್ಧಾಂತವಾದುದರಿಂದ ಪರ ಮಾತ್ಮ ಸ್ವಾತಂತ್ರ್ಯವೆಂದರೂ ಕರ್ಮಸ್ವಾತಂತ್ರ್ಯವೆಂದರೂ ಶಬ್ದಭೇದವೇ ಹೊರತು ಅರ್ಥಭೇದವಿಲ್ಲ. ಜೀವಾತ್ಮನಲ್ಲಿರುವ ಸ್ವಾತಂತ್ರ್ಯವೆಂದರೆ ಕರ್ತೃತ್ವ ರೂಪವು. ಅದು ಜ್ಞಾನ, ಇಚ್ಛಾಪ್ರಯತ್ನರೂಪವಾಗಿರುವುದು. ಇದರಲ್ಲಿ ಜ್ಞಾನೇಚ್ಛೆಗಳು ಪ್ರಾಚೀನಕರ್ಮವಾಸನಾಗುಣವಾಗಿ ಸಾಧ್ವಸಾಧು ವಿಷಯಗಳಲ್ಲಿ ಉದಯಿಸುವುವು. ಅನಂತರ ಪ್ರಯತ್ನವೆಂಬ ಪ್ರವೃತ್ತಿ ಜ್ಞಾನೇಚ್ಛಾಧೀನವಾಗಿಯೇ ನಡೆಯಬೇಕೆಂದು ನಿರ್ಬಂಧವಿಲ್ಲ. ಜೀವಾ ತ್ಮನು ಸಾಧ್ವಸಾಧುವಿವೇಕದಿಂದ ಪ್ರವರ್ತಿಸಬಹುದು, ನಿವೃತ್ತಿಸಲೂ ಬಹುದು. ಇಂತಹ ಸ್ವಾತಂತ್ರ್ಯವಿದ್ದರೂ ವ್ಯತ್ಯಾಸವಾಗಿ ನಡೆಯುವುದು ಶಿಕ್ಷೆರಕ್ಷಣೆಗಳಿಗೆ ನಿಮಿತ್ತವು.

ಇದರಿಂದ ಸಕಲಧರ್ಮಶಾಸ್ತ್ರಗಳೂ ನೀತಿಶಾಸ್ತ್ರಗಳೂ ವೈದ್ಯಶಾಸ್ತ್ರ ಗಳೂ ಶಾಂತಿಕಪೌಷ್ಟಿಕ ವೈದಿಕವಿಧಿಗಳೂ ಸಕಲಲೌಕಿಕವ್ಯಾಪಾರಗಳೂ ಅವಕಾಶವನ್ನು ಹೊಂದುವುವು.

ಸಕಲಕಾರ್ಯಗಳಿಗೂ ಪರಮಾತ್ಮನು ಪ್ರಧಾನಕಾರಣನಾಗಿರುವನು ಎಂಬುದರ ಅರ್ಥವೇನೆಂದರೆ—ಸಕಲಸಸ್ಯಗಳಿಗೂ ಜಲವು ಸಾಧಾರಣ ಕಾರಣವಾಗಿರುವುದು, ಜಲವಿಲ್ಲದೆ ಯಾವ ಸಸ್ಯವೂ ಬೆಳೆಯುವುದಿಲ್ಲ. ಸಸ್ಯಗಳಲ್ಲಿ ಬರುವ ರಸವೈಚಿತ್ರ್ಯಕ್ಕೆ ಬೀಜಶಕ್ತಿವೈಚಿತ್ರ್ಯವೇ ಅಸಾಧಾರಣ ಕಾರಣ. ಜಲದಂತೆ ಪರಮಾತ್ಮನು ಕಾರ್ಯಸಾಮಾನ್ಯಕ್ಕೂ ಸಾಮಾನ್ಯ ಕಾರಣನಾಗಿರುವನು. ಇದರಲ್ಲಿ ಪ್ರಾಧಾನ್ಯವೆಂತೆಂದರೆ, ಲೋಕದಲ್ಲಿ ಮನು

ಷ್ಯನು ಪಾಕ ಮೊದಲಾದ ಕ್ರಿಯೆಗೆ ಕರ್ತನಾಗಿರುವನು. ಇತರ ಸಾಧನಗಳು ಕಾರಕಗಳಾಗಿರುವುವು. ಈ ಕರ್ತೃವಿಗೆ ಇರುವ ಸ್ವಾತಂತ್ರ್ಯವು ಇತರ ಸಕಲಕಾರಕಗಳನ್ನೂ ಸೇರಿಸಿ ನಡೆಯಿಸುವ ಶಕ್ತಿ. ಆದುದರಿಂದ ಕರ್ತನನ್ನು ಸ್ವತಂತ್ರನೆಂದು ಹೇಳುವರು. ಇವನ ಸ್ವಾತಂತ್ರ್ಯವು ಸಾಧನಗಳಲ್ಲಿ ಅಣು ಮಾತ್ರ ವೈಕಲ್ಯವಿದ್ದರೂ ಕ್ರಿಯೆಗೆ ಉಪಯೋಗಿಸಲಾರದು. ಆದರೂ ಇವನ ಜ್ಞಾನೇಚ್ಛಾಪ್ರಯತ್ನವೆಂಬ ಕರ್ತೃತ್ವವು ಕಾರ್ಯಸಾಮಾನ್ಯಕ್ಕೂ ಸಾಧಾರಣಕಾರಣವಾದ ಪರಮಾತ್ಮನ ಸಂಕಲ್ಪವು ಮತ್ತೊಬ್ಬನ ಸಂಕಲ್ಪಾಧೀನವಾಗಿ ಇರುವಂತಹುದಲ್ಲ. ಇದೇ ಪರಮಾತ್ಮನಲ್ಲಿರುವ ನಿರುಪಾಧಿಕ ಸ್ವತಂತ್ರಕರ್ತೃತ್ವ. ಇಂತಹ ಪ್ರಧಾನಕರ್ತೃತ್ವಾನುಸಂಧಾನವು ಪರಮಾತ್ಮನನ್ನಾಶ್ರಯಿಸುವುದಕ್ಕೆ ಮೂಲಬೀಜವಾಗಿರುವುದು.

ಹೀಗೆ ಈ ಸಿದ್ಧಾಂತದಲ್ಲಿ ಸಂಕ್ಷೇಪವಾಗಿ ತತ್ತ್ವಗಳು ಮೂರಾದರೂ, ದ್ರವ್ಯಗಳು ಆರಾದರೂ ವಿಸ್ತರದಲ್ಲಿ ತತ್ತ್ವಗಳು ಮೂವತ್ತು ಆಗುತ್ತವೆ. ತ್ರಿಗುಣ, ಅದರ ಪರಿಣಾಮಗಳು ಸೇರಿ ಇಪ್ಪತ್ತನಾಲ್ಕು, ಕಾಲ, ನಿತ್ಯ ವಿಭೂತಿ, ಧರ್ಮಭೂತಜ್ಞಾನ, ಜೀವಾತ್ಮ. ಲಕ್ಷ್ಮೀನಾರಾಯಣ ಎಂದು ಮೂವತ್ತು ವಿಧವಾಗಿರುವುದು. ತತ್ತ್ವತ್ರಯವಾದದಲ್ಲಿ ಕಾಲ, ಧರ್ಮಭೂತ ಜ್ಞಾನ, ನಿತ್ಯವಿಭೂತಿ ಇವುಗಳಲ್ಲಿ ಧರ್ಮಭೂತಜ್ಞಾನವು ಚೇತನತ್ವಕ್ಕೆ ಗುಣಭೂತವಾಗಿರುವುದರಿಂದಲೂ ಕಾಲನಿತ್ಯವಿಭೂತಿಗಳ ಈಶ್ವರತತ್ತ್ವಕ್ಕೆ ಗುಣಭೂತವಾಗಿರುವುದರಿಂದಲೂ ಇವುಗಳನ್ನು ಪರಿಗಣಿಸದೆ ಮೂರು ತತ್ತ್ವಗಳೆಂದು ವ್ಯವಹಾರವು. ಈ ಚೇತನಾಚೇತನತತ್ತ್ವಗಳು ಈಶ್ವರತತ್ತ್ವಕ್ಕೆ ಗುಣಭೂತಗಳು ಎಂಬ ಅಭಿಪ್ರಾಯದಿಂದ ಒಂದೇ ತತ್ತ್ವವೆಂದು ಉಪದೇಶವಿರುವುದು. ಇದೇ ವಿಶಿಷ್ಟಾದ್ವೈತ.

**ಅದ್ರವ್ಯಗಳು**

ಸತ್ತ್ವ, ರಜಸ್ಸು, ತಮಸ್ಸು ಮೊದಲಾದ ಅದ್ರವ್ಯಗಳು ಷಡ್ವಿಧದ್ರವ್ಯಗಳನ್ನು ನಿಯಮೇನ ಆಶ್ರಯಿಸಿಕೊಂಡಿರುವುದರಿಂದ ಬೇರೆ ತತ್ತ್ವಗಳೆಂದು ವ್ಯವಹರಿಸಲ್ಪಡುವುದಿಲ್ಲ. ಈ ರೀತಿಯಾದ ತತ್ತ್ವವಿಭಾಗದಲ್ಲಿ ತಾರ್ಕಿಕ ಮೊದಲಾದ ಸಿದ್ಧಾಂತಗಳಲ್ಲಿ ನಿರೂಪಿಸಲ್ಪಟ್ಟಿರುವ ತತ್ತ್ವವಿಭಾಗವು ಅಂತರ್ಭೂತವಾಗುವುದೆಂದು ಸಿದ್ಧಾಂತ.

## ಭಕ್ತಿ

ಈ ಸಿದ್ಧಾಂತಪ್ರಕಾರ ಪ್ರತಿಶಾಸ್ತ್ರದಲ್ಲೂ ಇರುವ ವಿಷಯವು ತತ್ತ್ವ, ಹಿತ, ಪುರುಷಾರ್ಥ ಎಂದು ಮೂರು ಪ್ರಕಾರವಿರುವುದರಿಂದ ಪ್ರಕೃತದಲ್ಲಿ ತತ್ತ್ವನಿರೂಪಣಾನಂತರ ಹಿತನಿರೂಪಣವು ಪ್ರಸಕ್ತವಾಗುತ್ತದೆ. ಇದು ವರೆಗೂ ನಿರೂಪಿಸಲ್ಪಟ್ಟ ಅಂಶವು ತತ್ತ್ವ. ಹಿತವೆಂದರೆ ಕರ್ತವ್ಯವಾದ ಅಂಶ. ಪುರುಷಾರ್ಥವೆಂದರೆ ಇದರಿಂದ ಬರುವ ಪ್ರಯೋಜನ.

ಹಿತವು ಭಕ್ತಿಪ್ರಪತ್ತಿಗಳೆಂಬ ಮನುಷ್ಯ ಕರ್ತವ್ಯದಿಂದುಂಟಾಗುವ ಪರಮಾತ್ಮನ ಅನುಗ್ರಹ. ಭಕ್ತಿಯೆಂದರೆ ಜೀವಾತ್ಮಪರಮಾತ್ಮಯಾಥಾತ್ಮ್ಯ ಜ್ಞಾನಪೂರ್ವಕವಾಗಿಯೂ ವರ್ಣಾಶ್ರಮ ಧರ್ಮಾಂಗಕವಾಗಿಯೂ ಮಾಡಲ್ಪಡುವ ಪರಮಪುರುಷನ ಪಾದಾರವಿಂದಗಳ ಧ್ಯಾನ, ಅರ್ಚನೆ, ಪ್ರಣಾಮ ಮೊದಲಾದುವು. ಇವೇ ಉಪನಿಷತ್ತುಗಳಲ್ಲಿ ವೇದನ, ಉಪಾಸನ, ಬ್ರಹ್ಮ ವಿದ್ಯಾ ಮೊದಲಾದ ಶಬ್ದಗಳಿಂದ ಹೇಳಲ್ಪಡುವುವು.

ಈ ಭಕ್ತಿ ನಾಮಸಂಕೀರ್ತನ, ಮಂತ್ರ, ಜಪರೂಪದಿಂದ ವಾಚಿಕ ವಾಗಿಯೂ, ಅರ್ಚನ ಪ್ರಣಾಮ ಪ್ರದಕ್ಷಿಣರೂಪದಿಂದ ಕಾಯಿಕವಾಗಿಯೂ, ಧ್ಯಾನಧಾರಣ ಸಮಾಧಿರೂಪದಿಂದ ಮಾನಸಿಕವಾಗಿಯೂ ಪರಸ್ಪರಾನು ಕೂಲ್ಯದಿಂದಿರುವುದು. ಇದೇ ವಿಶದತಮಪ್ರತ್ಯಕ್ಷ ಸಮಾನಾಕಾರವಾದ ಸ್ಮೃತಿಧಾರೆ. ಇದೇ ಶಾಸ್ತ್ರಗಳಲ್ಲಿ ಮೋಕ್ಷಕ್ಕೆ ಸಾಧನವಾಗಿ ಉಪದೇಶಿಸಲ್ಪಟ್ಟ ಪರಭಕ್ತಿ. ಇದಕ್ಕೆ ಹೇತುವಾಗಿ ಸಾತ್ತ್ವಿಕಸಹವಾಸದಿಂದಲೂ ಶಾಸ್ತ್ರಾಭ್ಯಾ ಸದಿಂದಲೂ ಉಂಟಾದ ಪರಿಪೂರ್ಣ ಪರಮಾತ್ಮ ವಿಷಯಕ ಪ್ರೀತ್ಯತಿಶಯವು ಭಕ್ತಿ ಎನ್ನಲ್ಪಡುವುದು. ಇದೇ ಭಕ್ತಿ ಪರಭಕ್ತಿಗಳಿಗೆ ಇರುವ ವ್ಯತ್ಯಾಸ. ಈ ಪರಭಕ್ತಿ ಭಗವತ್ಸಾಕ್ಷಾತ್ಕಾರವಾಗಬೇಕೆಂಬ ಉತ್ಕಟೇಚ್ಛಾರೂಪವಾದ ಅಭಿನಿವೇಶವನ್ನು ಉಂಟುಮಾಡಿ ಅದರ ಮೂಲಕ ಭಗವದನುಗ್ರಹದಿಂದ ತಾತ್ಕಾಲಿಕವಾದ ಪರಿಪೂರ್ಣಪರಬ್ರಹ್ಮ ಸಾಕ್ಷಾತ್ಕಾರವನ್ನು ಉಂಟು ಮಾಡುವುದು. ಈ ಸಾಕ್ಷಾತ್ಕಾರವೇ ಪರಜ್ಞಾನ. ಈ ಪರಜ್ಞಾನ ಸರ್ವದಾ ಸಾಕ್ಷಾತ್ಕಾರವಿರಬೇಕೆಂಬ ತೀವ್ರಾಭಿನಿವೇಶನವನ್ನುಂಟುಮಾಡುವುದು. ಇದೇ ಪರಮಭಕ್ತಿ. ಇದು ಭಗವದನುಗ್ರಹವನ್ನುಂಟುಮಾಡಿ ಸರ್ವದೇಶ ಸರ್ವ ಕಾಲ ಸರ್ವಾವಸ್ಥೋಚಿತಪರಿಪೂರ್ಣ ಪರಬ್ರಹ್ಮಾನುಭವವೆಂಬ ಮೋಕ್ಷ

ಪ್ರಾಪ್ತಿಗೆ ಪೂರ್ವಕ್ಷಣದಲ್ಲಿದ್ದು ಸಾಧನವಾಗುವುದು. ಹೀಗೆ ಪರಭಕ್ತಿ ಪರ ಜ್ಞಾನ ಪರಮಭಕ್ತಿಗಳ ವ್ಯತ್ಯಾಸವಿರುವುದು.

ಅನುಭವವೆಂದರೆ ಸಕಲವಸ್ತುಗಳನ್ನು ನಿರತಿಶಯ ಅನುಕೂಲವೆಂದು ತಿಳಿಯುವ ಆನಂದ, ಸುಖ, ರಸ, ಸಂತೋಷ ಮೊದಲಾದ ಪದಗಳಿಂದ ಹೇಳಲ್ಪಡುವುದು. ಕೈಂಕರ್ಯವೆಂಬುದು ಭಗವದಭಿಮತಕ್ಕೆ ವಿರೋಧ ವಿಲ್ಲದ ಮುಕ್ತನ ಸಕಲ ವ್ಯಾಪಾರಗಳು.

ಇಂತಹ ಭಕ್ತಿಯೋಗಕ್ಕೆ ಯೋಗ್ಯತೆ ಉಂಟಾಗಬೇಕಾದರೆ ಕರ್ಮ ಯೋಗ ಜ್ಞಾನಯೋಗಗಳೇ ಮಾರ್ಗ. ಯೋಗವೆಂದರೆ ಉಪಾಯ ಮಾರ್ಗ ವೆಂದರ್ಥ. ಕರ್ಮಯೋಗವೆಂದರೆ ಯಾಗ, ದಾನ, ಹೋಮ, ದೇವತಾ ರ್ಚನೆ. ತೀರ್ಥಯಾತ್ರೆ, ವೇದಾಧ್ಯಯನ, ವೇದಾಂತಪಾಠಪ್ರವಚನ, ತತ್ತ್ವ ವಿಚಾರ, ಪ್ರಾಣಾಯಾಮ, ವ್ರತೋಪವಾಸ ಮೊದಲಾದುವುಗಳಲ್ಲಿ ಇಷ್ಟ ವಾದುದೊಂದನ್ನು ಮುಖ್ಯವಾಗಿಟ್ಟುಕೊಂಡು ಅದಕ್ಕೆ ಅನುಕೂಲವಾಗಿ ಯಥಾಶಕ್ತಿ ನಿತ್ಯನೈಮಿತ್ತಿಕ ಕರ್ಮಗಳನ್ನು ಫಲಸಂಗತ್ಯಾಗಪೂರ್ವಕವಾಗಿ, ಭಗವತ್ಪ್ರೀತಿಗೋಸ್ಕರವೇ ಕರ್ತವ್ಯವೆಂಬ ಭಾವನೆಯಿಂದ ಅಲಸ್ಯವಿಲ್ಲದೆ ಪ್ರೀತಿಪೂರ್ವಕ ಮಾಡುತ್ತಿರುವುದು. ಇದರಿಂದ ಭಗವದನುಗ್ರಹಮೂಲಕ ಚಿತ್ತಶುದ್ಧಿಯಾಗಿ ಜೀವಾತ್ಮಚಿಂತನವೆಂಬ ಜ್ಞಾನಯೋಗಕ್ಕೆ ಯೋಗ್ಯನಾಗಿ ಬಹುಕಾಲ ಜ್ಞಾನಯೋಗಾನುಷ್ಠಾನದಿಂದ ಜೀವಾತ್ಮಧ್ಯಾನಯೋಗಕ್ಕೆ ಯೋಗ್ಯನಾಗುವನು. ಅಥವಾ ಜೀವಾತ್ಮ ಯಾಥಾತ್ಮ್ಯಜ್ಞಾನಪೂರ್ವಕ ವಾಗಿ ಹಿಂದೆ ಹೇಳಿದ ಕರ್ಮಯೋಗವನ್ನು ಫಲಸಂಗ ಕರ್ತೃತ್ವತ್ಯಾಗ ಪೂರ್ವಕವಾಗಿ ಅನುಷ್ಠಾನಮಾಡುವುದು. ಇದರಿಂದ ಮಧ್ಯೇ ಜ್ಞಾನಯೋಗ ವಿಲ್ಲದೆ, ಪ್ರಮಾದವಿಲ್ಲದೆ ಶೀಘ್ರವಾಗಿ ಜೀವಾತ್ಮಧ್ಯಾನಯೋಗಕ್ಕೆ ಯೋಗ್ಯ ನಾಗುವನು.

ವೇದೋಕ್ತವಾದ ಯಾಗ ಮೊದಲಾದ ಕರ್ಮಗಳಿಗೂ ಮಾಡತಕ್ಕ ಮನುಷ್ಯನಿಗೂ ಸಂಬಂಧವು ಮೂರು ಪ್ರಕಾರವಿರುವುದೆಂದು ಕರ್ಮನಿಷ್ಠ ರಾದ ಮೀಮಾಂಸಕರ ಸಿದ್ಧಾಂತ. ವೇದವೇದಾರ್ಥಗಳನ್ನು ತಿಳಿಯುವ ಕಾಲದಲ್ಲಿ ಇಂತಹ ಕರ್ಮಗಳು ನನಗೆ ಸೇರಿದುವು, ನನಗೆ ಕರ್ತವ್ಯವು ಎಂಬುದೊಂದು ಸಂಬಂಧವೇ ಸಂಗ. ಇದರಿಂದ ಮನುಷ್ಯನು ನಿಯೋಜ್ಯ

ವೆನ್ನಲ್ಪಡುವನು. ಆ ಕರ್ಮಗಳಿಂದ ಉಂಟಾಗುವ ಪ್ರಯೋಜನದಲ್ಲಿ ಅಪೇಕ್ಷೆಯುಳ್ಳವನಾದರೆ ಅಧಿಕಾರಿಯೆನ್ನಲ್ಪಡುವನು. ಇದೇ ಫಲಸಂಬಂಧ. ಅನಂತರ ಕರ್ಮಗಳನ್ನು ಮಾಡುವನು. ಇದೇ ಕರ್ತೃತ್ವಸಂಬಂಧ. ಇಂತಹ ಸಂಗಫಲಕರ್ತೃತ್ವವೆಂಬ ಮೂರು ಅಂಶಗಳನ್ನು ಭಗವಂತನಲ್ಲಿ ಸಮರ್ಪಿಸಿ ತನಗೆ ಸೇರಿದುದಲ್ಲವೆಂದು ಭಾವಿಸಿ ಕರ್ಮಗಳನ್ನು ಮಾಡುವುದೇ ಫಲಸಂಗ ಕರ್ತೃತ್ವತ್ಯಾಗಪೂರ್ವಕ ಕರ್ಮಾನುಷ್ಠಾನ. ಇದು ಕರ್ಮಜ್ಞಾನನಿಷ್ಠರಾದ ಭಾಗವತರ ಸಿದ್ಧಾಂತ.

ಸಾಮಾನ್ಯವಾಗಿ ಭಗವಂತನ ಸಕಲ ವ್ಯಾಪಾರವೂ ಸಕಲ ಜಗದುದ್ಧಾರಕ್ಕಾಗಿಯೇ ಇರುವುದೆಂದು ಸಿದ್ಧಾಂತ. ಭಾಗವತನು ಮಾಡುವ ಕರ್ಮಗಳ ಕರ್ತೃತ್ವ ಮೊದಲಾದುವು ಭಗವಂತನಲ್ಲಿ ಸಮರ್ಪಿಸಲ್ಪಟ್ಟರೆ ಈ ಕರ್ಮಗಳು ಭಗವಂತನ ವ್ಯಾಪಾರಗಳಾಗಿಯೇ ಆಗುವುದಾದರೆ ಯಾವ ರೀತಿಯಲ್ಲಿ ಪರ್ಯವಸಾನವಾಗಬೇಕೆಂಬುದನ್ನು ಹೆಚ್ಚಾಗಿ ವಿವರಿಸಬೇಕಾಗಿಲ್ಲ. ಕೇವಲ ಪ್ರಪಂಚೋದ್ಧಾರರೂಪದಿಂದ ಭಗವನ್ಮುಖೋಲ್ಲಾಸದಲ್ಲಿ ಪರ್ಯವಸಾನವಾಗಬೇಕೆಂದು ರಹಸ್ಯ.

ಹೀಗೆ ಫಲತ್ಯಾಗವೆಂಬ ಫಲಸಮರ್ಪಣೆ ಲೋಕಕ್ಕೆ ಸಂಬಂಧಪಡುವುದೆಂದು ಸಿದ್ಧ. ಇದೇ ಪ್ರಾಚೀನಕಾಲದ ಸೇಶ್ವರಮೀಮಾಂಸಾಪಕ್ಷ. ಮೀಮಾಂಸಾಶಾಸ್ತ್ರದಲ್ಲಿ ಫಲಸಂಯೋಗವಾದ, ನಿಮಿತ್ತವಾದ ಎಂದು ಎರಡು ಪಕ್ಷಗಳಿರುವುವು. ಮೊದಲನೆಯದು, ತನ್ನ ಸುಖಕ್ಕಾಗಿ ಯಾಗವನ್ನು ಮಾಡಬೇಕೆಂಬುದು. ಎರಡನೆಯದು, ಸುಖದಲ್ಲಿ ಅಪೇಕ್ಷೆ ಬಂದರೆ ಅದನ್ನು ಧ್ವಂಸ ಮಾಡುವುದಕ್ಕಾಗಿ ಯಾಗವನ್ನು ಮಾಡಬೇಕೆಂಬುದು. ಇದೇ ಕಾಮಪ್ರಧ್ವಂಸವಾದವೆಂದೂ ಹೇಳಲ್ಪಡುವುದು. ಯಾಗವೆಂದರೆ ದೇವತೆಗಳನ್ನುದ್ದೇಶಿಸಿ ತನ್ನ ಸ್ವತ್ತುಗಳನ್ನು ವಿನಿಯೋಗಿಸುವುದು. ಮೂರು ವರ್ಷಗಳಿಗೆ ಬೇಕಾದಷ್ಟು ಜೀವನದ್ರವ್ಯವಿದ್ದರೆ ಸೋಮಯಾಗಮಾಡಬೇಕೆಂದೂ, ಅದಕ್ಕಿಂತ ಎಷ್ಟೆಷ್ಟು ಕಡಮೆಯಾದ ಐಶ್ವರ್ಯವಿದ್ದರೆ ಅಷ್ಟಷ್ಟು ಚಿಕ್ಕ ಚಿಕ್ಕ ಯಾಗಗಳನ್ನು ಮಾಡಬೇಕೆಂದೂ ಶಾಸ್ತ್ರವಿರುವುದು. ಇದರಿಂದ ಹೇಗಾದರೂ ಐಶ್ವರ್ಯವನ್ನು ವಿನಿಯೋಗಿಸುವುದೇ ಯಾಗವೆಂದು ಸಿದ್ಧವಾಗುವುದು. ಇಂತಹ ಯಾಗವನ್ನು ಸ್ವಾರ್ಥಕ್ಕಾಗಿ ಮಾಡುವುದು

ಫಲಸಂಯೋಗವಾದವು. ಪರಾರ್ಥಕ್ಕಾಗಿ ಮಾಡುವುದೇ ನಿಮಿತ್ತವಾದವು. ಇದೇ ಪ್ರಾಚೀನಕಾಲದ ವೇದಾರ್ಥ. ಇಂತಹ ನಿಮಿತ್ತವಾದವನ್ನು ಖಂಡಿಸಿ ಫಲಸಂಯೋಗವಾದವನ್ನು ಜೈಮಿನಿ ಸಮರ್ಥಿಸಿರುವರು. ಇದೇ ಈಗಿನ ವೇದಾರ್ಥವಾಗಿರುವುದು. ನಿಮಿತ್ತವಾದವೇ ಪ್ರಾಚೀನಕಾಲದ ವೇದಾರ್ಥ. ಇದೇ ಭಗವದ್ಗೀತೆ ಮೊದಲಾದ ಶಾಸ್ತ್ರಗಳಲ್ಲಿರುವ ಭಾಗವತಧರ್ಮ, ವಿಶಿಷ್ಟಾದ್ವೈತಸಿದ್ಧಾಂತ.

ಈ ಪ್ರಕಾರ ಕರ್ಮಯೋಗ ಜ್ಞಾನಯೋಗಗಳಿಂದ ಬಂದ ಜೀವಾತ್ಮ ಧ್ಯಾನಯೋಗ್ಯತೆಯಿಂದ ಕಾಲವಿಶೇಷದಲ್ಲಿ ಧ್ಯಾನದಿಂದ ಜೀವಾತ್ಮಸಾಕ್ಷಾತ್ಕಾರವೆಂಬ ಆತ್ಮಾವಲೋಕನವು ಸಿದ್ಧಿಸುವುದು. ಇದೇ ಸರ್ವಾತ್ಮಸಾಮ್ಯದರ್ಶನ. ಪರಮಾತ್ಮ ಸಾಮ್ಯದರ್ಶನ, ಜೀವನ್ಮುಕ್ತಾವಸ್ಥೆ. ಈ ದಶೆಯಲ್ಲಿ ಪ್ರಪಂಚದ ಸುಖದುಃಖವೇ ತನ್ನ ಸುಖದುಃಖಗಳಾಗುವುವು. ಇವನ ವ್ಯಾಪಾರವೆಲ್ಲವೂ ಪರಮಾತ್ಮನ ವ್ಯಾಪಾರಗಳಂತೆ ಪ್ರಪಂಚಹಿತಕರವಾಗಿರುವುವು. ಕೇವಲ ದಯಾಮಯನಾಗಿ ಸರ್ವಭೂತಸುಹೃತ್ತಾಗಿ ವಿಶಾಲವಾದ ಹೃದಯದಿಂದ ಜಗದುದ್ಧಾರವೇ ಆತ್ಮೋದ್ಧಾರವೆಂಬ ಭಾವನೆಯಿಂದ ಇಲ್ಲೇ ಪರಮಾತ್ಮಸಾಮ್ಯವನ್ನು ಅನುಭವಿಸುವನು. ಇಂತಹ ಸ್ಥಿತಿಯೇ ಭಗವದ್ರಾಮಾನುಜಾಚಾರ್ಯರ ಉದಾರವಾದ ಚಿತ್ತವೃತ್ತಿ.

ಇದರಿಂದ ಪರಮಾತ್ಮ ಪ್ರೀತಿಯೆಂಬ ಭಕ್ತಿ ಸಹಜವಾಗಿಯೇ ಉದಯಿಸುವುದೆಂದು ಸಂಪ್ರದಾಯ. ಇದಕ್ಕೆ ಲೌಕಿಕದೃಷ್ಟಾಂತವೊಂದಿರುವುದು. ನಾಲ್ಕೈದುವರ್ಷಗಳ ಕುಮಾರಸಹಿತನಾಗಿ ಒಬ್ಬ ಮಹಾರಾಜನು ಬೇಟೆಗೆ ಹೋಗಿರುವಾಗ ಮಹಾರಣ್ಯದಲ್ಲಿ ಪ್ರಮಾದವಶದಿಂದ ಬಾಲಕನು ತಪ್ಪಿಸಿಕೊಂಡು ಶಬರಚೋರರಿಂದ ಅಪಹರಿಸಲ್ಪಟ್ಟು ಶಬರಕುಪ್ರವಿಷ್ಟನಾಗಿ ಶಬರ ಜಾತಿಯವನೇ ತಾನೆಂದು ಭ್ರಮಿಸಿ ಇಪ್ಪತ್ತೈದು ವರ್ಷಪರ್ಯಂತ ಬೆಳೆಯುತ್ತಿದ್ದನು. ಒಂದಾನೊಂದು ಸಂದರ್ಭದಲ್ಲಿ ಮಹಾತ್ಮರಾದ ಮಹರ್ಷಿಗಳು ಇವನ ಲಕ್ಷಣಗಳನ್ನು ನೋಡಿ ಕ್ಷತ್ರಿಯಕುಮಾರನೆಂದು ನಿಶ್ಚಯಿಸಿ ಸಮೀಪದೇಶದ ಮಹಾರಾಜನು ತಪ್ಪಿಸಿಕೊಂಡಿದ್ದ ಕುಮಾರನೆಂದು ತಿಳಿದು ಉಪಾಯದಿಂದ ಅವನಿಗೆ ಉಪದೇಶ ಮಾಡಿ ರಾಜನ ಸಮೀಪಕ್ಕೆ ಕರತಂದರೆ, ರಾಜಕುಮಾರನು ಮಹಾರಾಜನನ್ನು

ಸಾವಧಾನವಾಗಿ ನೋಡಿ ಅಂಗಪ್ರತ್ಯಂಗಸೌಷ್ಠವ ಮೊದಲಾದ ಸರ್ವಾಂಶದಲ್ಲೂ ರಾಜನ ಸಾಮ್ಯವನ್ನು ಕಂಡು ತಾನು ಮಹಾರಾಜಕುಮಾರನು, ಜೀವತ್ಪಿತೃಮಾತೃಕನು, ಸರ್ವಸಂಪತ್ಸಮೃದ್ಧವಾದ ಅಖಂಡಭೂಮಂಡಲ ಯೌವರಾಜ್ಯಕ್ಕೆ ಅರ್ಹನಾಗಿರುವೆನೆಂದು ನಿಶ್ಚಯಿಸಿ ಮಹಾರಾಜನಲ್ಲಿ ಪ್ರೀತಿವಿಶೇಷದಿಂದ ಅವನ ಪಾದಾರವಿಂದಗಳನ್ನು ಹೇಗೆ ಹಿಡಿಯುವನೋ ಹಾಗೆ ಜೀವಾತ್ಮನು ಸಂಸಾರಮಂಡಲದಲ್ಲಿ ಭ್ರಮಿಸುತ್ತಿರುವ ಕಾಲದಲ್ಲಿ ಆಚಾರ್ಯಾನುಗ್ರಹದಿಂದ ಪ್ರೀತಿಪೂರ್ವಕವಾಗಿ ಭಗವಂತನನ್ನು ಆಶ್ರಯಿಸುವನು. ಭಗವಂತನು ಸಹ, ತಪ್ಪಿಸಿಕೊಂಡು ಹೋದ ಮಗನ ಚಿಂತೆಯಲ್ಲೇ ಸರ್ವದಾ ದುಃಖ ಪಡುತ್ತಿರುವ ಮಹಾರಾಜನಂತೆ, ಜೀವಾತ್ಮೋದ್ಧಾರದಲ್ಲಿ ಸದಾ ಚಿಂತಿಸುತ್ತಿರುವವನು. ನಿರತಿಶಯಾನಂದವನ್ನು ಹೊಂದುವನು. ಇದೇ ಭಕ್ತಿಸಾಮ್ರಾಜ್ಯ.

### ಪ್ರಪತ್ತಿ

ಇಂತಹ ಭಕ್ತಿಯೋಗಕ್ಕೆ ಯೋಗ್ಯತೆಯುಳ್ಳವರು ವ್ಯಾಸ, ಪರಾಶರ, ವಾಲ್ಮೀಕಿ ಮೊದಲಾದ ಮಹರ್ಷಿಗಳೇ ಹೊರತು ಇತರ ಜನರು ಅರ್ಹರಾಗದಿರುವುದನ್ನು ನೋಡಿ ವೇದಾಂತದಲ್ಲಿ ಅಲ್ಲಲ್ಲಿ ಸಂಕ್ಷೇಪವಾಗಿ ಉಪದೇಶಿಸಲ್ಪಟ್ಟಿರುವ ನ್ಯಾಸವಿದ್ಯಾ, ಶರಣಾಗತಿ, ಪ್ರಪತ್ತಿ ಮೊದಲಾದ ಪದಗಳಿಂದ ವ್ಯವಹರಿಸಲ್ಪಡುವ ಸುಲಭವಾದ ಮೋಕ್ಷಸಾಧನವನ್ನು ವಿಸ್ತರಿಸಿ ಪಾಂಚರಾತ್ರಶಾಸ್ತ್ರವೆಂಬ ಭಗವಚ್ಛಾಸ್ತ್ರದಲ್ಲಿ ಭಗವಂತನು ಉಪದೇಶಿಸಿರುವನು, ಈ ಪ್ರಪತ್ತಿ ಬ್ರಹ್ಮವಿದ್ಯೆಯಾದರೂ ಇದರಲ್ಲಿ ಮನುಷ್ಯಸಾಮಾನ್ಯಕ್ಕೂ ಪ್ರಾಣಿಸಾಮಾನ್ಯಕ್ಕೂ ಯೋಗ್ಯತೆಯೆಂಬ ಅಧಿಕಾರವುಂಟು. ಆ ಯೋಗ್ಯತೆ ಭಕ್ತಿಯಲ್ಲಿ ಶಕ್ತಿಯಿಲ್ಲದಿರುವುದೊಂದು, ತಕ್ಕ ಜ್ಞಾನವಿಲ್ಲದಿರುವುದೆರಡನೆಯದು, ವೇದಾಧಿಕಾರವಿಲ್ಲದವರಿಗೆ ಇತರ ವೇದಾಂತವಿದ್ಯೆಗಳಲ್ಲಿ ಅಧಿಕಾರವಿಲ್ಲದಿರುವುದು ಮೂರನೆಯದು. ಭಕ್ತಿ ಬಹುಕಾಲ ಮಾಡಲ್ಪಡಬೇಕು. ಬಹು ಪ್ರಮಾದವುಳ್ಳದ್ದು, ಬಹುದುಷ್ಕರವು, ಬಹುನಿಯಮವುಳ್ಳದ್ದು ಎಂಬ ಭಾವನೆ ನಾಲ್ಕನೆಯದು. ಭಕ್ತಿಗೆ ಪ್ರತಿಬಂಧಕವಾಗಿರುವ ಅನೇಕಜನ್ಮಾರ್ಜಿತ ಪಾಪಗಳನ್ನೆಲ್ಲ ಪರಿಹಾರಮಾಡುವುದಕ್ಕಾಗಿ ಪ್ರಪತ್ತಿ ಬೇಕಾಗಿರು

ವುದು. ಪ್ರಪತ್ತಿಯ ಸಹಾಯವಿಲ್ಲದೆ ಭಕ್ತಿಯಿಲ್ಲ. ಪ್ರಪತ್ತಿ ಭಕ್ತಿಗೆ ವಿರೋಧಿಗಳಾದ ಪಾಪಗಳನ್ನೆಲ್ಲಾ ವಿನಾಶಪಡುವ ಪಕ್ಷದಲ್ಲಿ ಮೋಕ್ಷಕ್ಕೆ ವಿರೋಧಿಗಳಾದ ಪಾಪಗಳನ್ನೆಲ್ಲ ವಿನಾಶಪಡಿಸುವುದಕ್ಕೋಸ್ಕರ ಬೇರೆ ಏತಕ್ಕೆ ಆಶ್ರಯಿಸಲ್ಪಡಬಾರದೆಂಬ ನಿರಪೇಕ್ಷತ್ವನಿಶ್ಚಯವು ಐದನೆಯದು. ಹೀಗೆ ಭಕ್ತಿ ಕಷ್ಟವೆಂದೂ ಪ್ರಪತ್ತಿ ಸುಲಭವೆಂದೂ ತಿಳಿಯುವವರೆಲ್ಲರೂ ಪ್ರಪತ್ತಿಗೆ ಅರ್ಹರು.

ಅಧಿಕಾರಪ್ರಸಕ್ತಿಯಲ್ಲಿ ಮತ್ತೊಂದು ರಹಸ್ಯವಿರುವುದು. ಆದಿಕಾಲ ದಲ್ಲಿ ಜನಸಾಮಾನ್ಯಕ್ಕೆಲ್ಲ ಜ್ಞಾನದಲ್ಲೂ ಅದಕ್ಕಾಗಿ ವೇದವಿದ್ಯೆ ಮೊದಲಾದ ವಿದ್ಯಾಭ್ಯಾಸದಲ್ಲೂ ಅಧಿಕಾರವೂ ಆಚರಣೆಯೂ ಇದ್ದುವು. ಅದಕ್ಕೆ ಅನು ಕೂಲವಾಗಿ ಪ್ರವಚನ, ಪರಿಪಾಲನ, ಸಂವರ್ಧನ, ಶುಶ್ರೂಷಣವೆಂಬ ವರ್ಣ ಧರ್ಮಗಳೂ ಇದ್ದುವು. ಕಾಲಕ್ರಮದಲ್ಲಿ ಅಸೂಯಾಪ್ರಾದುರ್ಭಾವದಿಂದ ವರ್ಣಧರ್ಮಗಳ ವ್ಯತ್ಯಾಸದಲ್ಲಿ ಶೂದ್ರರು ಶುಶ್ರೂಷಣವನ್ನು ಬಿಟ್ಟರು. ಬ್ರಾಹ್ಮಣರು ಪ್ರವಚನವನ್ನು ಬಿಟ್ಟರೆಂದು ಶೂದ್ರರಿಗೆ ವೇದಾಧಿಕಾರವಿಲ್ಲ ದಿರುವ ಅಂಶವನ್ನು ರಹಸ್ಯಾಮ್ನಾಯವೆಂಬ ಏಕಾಯನವೇದವು ಹೇಳು ತ್ತದೆ ಎಂದು ಪೂರ್ವಾಚಾರ್ಯರು ಉದಹರಿಸಿರುವರು. ಇದರಿಂದ ಆಚಾರ್ಯಾನನುಗ್ರಹಮೂಲಕ ನ್ಯಾಯವು ಏರ್ಪಟ್ಟು ಉಪನಯನ ವೇದಾಧ್ಯಯನಸಂಪ್ರದಾಯವು ನಿಂತುಹೋಯಿತೆಂದು ಪೂರ್ವಾಚಾರ್ಯ ನಿರ್ಣಯವು.

ಹಾಗಾದರೆ ಧರ್ಮವ್ಯಾಧ, ವಿದುರ ಮೊದಲಾದ ಶೂದ್ರರು ಹೇಗೆ ಬ್ರಹ್ಮವಿದ್ಯಾನಿಷ್ಠರಾದರೆಂದರೆ ಅವರು ಜನ್ಮಾಂತರದಲ್ಲಿ ಬ್ರಹ್ಮವಿದ್ಯೆಯ ನ್ನಾರಂಭಿಸಿ ಪ್ರಾರಬ್ಧ ವಿಶೇಷದಿಂದ ಬಂದ ಶೂದ್ರ ಶರೀರದಲ್ಲೇ ಸಿದ್ಧಿ ಯನ್ನು ಹೊಂದಿದವರು. ಪ್ರಾರಂಭಕ್ಕೆ ಉತ್ತಮಶರೀರವು ಬೇಕೇ ಹೊರತು ಪರ್ಯವಸಾನಕ್ಕೆ ನಿಯಮವಿಲ್ಲವೆಂದು ಈ ಸಿದ್ಧಾಂತದ ನಿರ್ಣಯ. ಕೆಲ ವರು ಹೇಳುವುದೆಂತೆಂದರೆ—ಪ್ರಾರಂಭಕ್ಕೆ ನಿಯಮವಿಲ್ಲ. ಪರ್ಯವಸಾನಕ್ಕೆ ಬ್ರಾಹ್ಮಣಶರೀರವು ಅದರಲ್ಲೂ ಸಂನ್ಯಾಸಾಶ್ರಮವು ಬೇಕೆಂದು ನಿರ್ಣಯಿ ಸುವರು. ಈ ನಿರ್ಣಯಗಳು ಲೋಕಾನುಗ್ರಹಗಳಾಗಿಯೇ ಇರುವುದಾದರೂ ಮೊದಲನೆಯ ನಿರ್ಣಯದಲ್ಲಿ ಸಂಗ್ರಹಾತಿಶಯವಿರುವುದರಿಂದ ಔದಾರ್ಯಾತಿ ಶಯ ತೋರುವುದು.

ಹೀಗೆ ಈ ವಿಚಾರವಿರುವುದರಿಂದಲೇ ಸುಲಭವಾದ ಸರ್ವಾಧಿಕಾರಕವಾದ ಪ್ರಪತ್ತಿ ವಿದ್ಯಾಸಂಪ್ರದಾಯವು ಪರಾಂಕುಶ, ಪರಕಾಲ, ನಾಥಮುನಿ, ಯಾಮುನ ಮುನಿ, ರಾಮಾನುಜಮುನಿ ಮೊದಲಾದವರಿಂದ ಪ್ರಚಾರಪಡಿಸಲ್ಪಟ್ಟು ಲೋಕಸಂಗ್ರಹವು ವಿಸ್ತರಿಸಲ್ಪಡುವುದಕ್ಕೆ ಅವಕಾಶವಾಯಿತು. ಇದಕ್ಕೆ ಜಾತಿ ಕುಲ ಗೋತ್ರ ವಿದ್ಯಾ ವೃತ್ತ ಕಾಲ ದೇಶ ವಿಶೇಷ ಮೊದಲಾದ ಯಾವ ನಿಯಮಗಳೂ ಬೇಕಾಗಿಲ್ಲ. ಮನುಷ್ಯ ಪಶು ಪಕ್ಷಿ ಮೃಗ ಮೊದಲಾದ ಜಂತುನಿಯಮವೂ ಇಲ್ಲ. ಜೀವಸಾಮಾನ್ಯವೂ ಪ್ರಪತ್ತಿ ಎಂಬ ಮಾರ್ಗದಿಂದ ಆಯಾ ಜನ್ಮದಲ್ಲೇ ಮೋಕ್ಷವನ್ನು ಹೊಂದಬಹುದು. ಇದಕ್ಕೆ ಅನುಕೂಲ್ಯ ಸಂಕಲ್ಪ ಮೊದಲಾದ ಐದೇ ಅಂಶಗಳು ಪರಿಕರವಾಗಿ ಬೇಕಾಗಿರುವುವು. ಪ್ರಪತ್ತಿಸ್ವರೂಪವನ್ನು ನಿರೂಪಿಸಿ ಪರಿಕರಸ್ವರೂಪವು ನಿರೂಪಿಸಲ್ಪಡುವುದು.

ಲೋಕದಲ್ಲಿ ಯಜಮಾನನು ತನ್ನಿಷ್ಟಾನುಸಾರ ವಿನಿಯೋಗಿಸುವುದಕ್ಕೆ ಅರ್ಹವಾದ ವಸ್ತು ಶೇಷವೆನ್ನಲ್ಪಡುವುದು. ಪರಮಾತ್ಮನಿಗೆ ಜೀವಾತ್ಮನು ಸ್ವಾಭಾವಿಕವಾಗಿ ಶೇಷಭೂತನಾಗಿರುವನು. ಇಂತಹ ಶೇಷತ್ವಾನುಸಂಧಾನವೇ ಪ್ರಪತ್ತಿ. ಇದೇ ಆತ್ಮರಕ್ಷಾಭಾರವನ್ನು ಒಪ್ಪಿಸುವ ಉದ್ದೇಶ್ಯದಿಂದ ಪರಮಾತ್ಮನಲ್ಲಿ ಜೀವಾತ್ಮವಸ್ತುವಿನ ಸಮರ್ಪಣೆ. ಇಂತಹ ಆತ್ಮಸಮರ್ಪಣೆಯಲ್ಲಿ ಆತ್ಮೀಯಗಳಾದ ಪಶುಪುತ್ರಾದಿಗಳನ್ನೂ ಸೇರಿಸಿ ಸಮರ್ಪಿಸಿದರೆ ಅವುಗಳಿಗೂ ಪ್ರಪತ್ತಿಯಾಯಿತು. ಇಂತಹ ಸಮರ್ಪಣೆ ಪರಿಕರಪಂಚಕ ಸಹಿತವಾಗಿ ಒಂದೇ ಜ್ಞಾನಕ್ಕೆ ಗೋಚರವಾಗಿ, ಬಿಲ್ಲುಗಾರನ ಲಕ್ಷ್ಯವೇಧನದಂತೆ ಕ್ಷಣಕಾಲಮಾತ್ರ ಕರ್ತವ್ಯವಾಗಿರುವುದು. ಅನಂತರ ಕಾಲದಲ್ಲಿ ಆನುಕೂಲ್ಯಸಂಕಲ್ಪ ಮೊದಲಾದುವು ಯಾವತ್ಕಾಲವೂ ಯಾವಜ್ಜೀವವೂ ಇರಬೇಕಾಗಿರುವುದರಿಂದ ಇದರ ಭಾರವನ್ನೂ ಸೇರಿಸಿ ಸಮರ್ಪಣೆಮಾಡತಕ್ಕವರು ಪ್ರಸನ್ನ ಶಿರೋಮಣಿಗಳು. ಇದನ್ನು ಅನುಷ್ಠಾನಮಾಡುವಾಗ ಫಲಸಂಗ ಕರ್ತೃತ್ವ ಉಪಾಯತ್ವಬುದ್ಧಿಯನ್ನು ಬಿಟ್ಟು ಅವನ ಪ್ರಸಾದಕ್ಕೆ ಇದು ವ್ಯಾಜಮಾತ್ರವೆಂಬ ಭಾವನೆ ಇರಬೇಕು.

ಈ ಪ್ರಪತ್ತಿ ಸ್ವನಿಷ್ಠಾ, ಉಕ್ತಿನಿಷ್ಠಾ, ಆಚಾರ್ಯನಿಷ್ಠಾ ಎಂದು ಮೂರು ಪ್ರಕಾರ. ಹಿಂದೆ ಹೇಳಿದ ಅನುಸಂಧಾನದಲ್ಲಿ ಪಶುಪುತ್ರಾದಿಗಳಂತೆ

ಶಿಷ್ಯನು ಆತ್ಮೀಯನಾಗಿ ಸೇರಿರುವುದೇ ಆಚಾರ್ಯನಿಷ್ಠೆ. ಸಂಪೂರ್ಣ ಪ್ರಪತ್ತಿಶಾಸ್ತ್ರಾರ್ಥವನ್ನು ವಿಶದವಾಗಿ ತಿಳಿದು ತಾನೇ ಅನುಷ್ಠಾನಮಾಡುವುದು ಸ್ವನಿಷ್ಠೆ. ಇಷ್ಟು ಶಾಸ್ತ್ರಾರ್ಥಜ್ಞಾನವಿಲ್ಲದೆ ಆಚಾರ್ಯನಿಂದ ಉಪದೇಶಿಸಲ್ಪಟ್ಟ ವಾಕ್ಯಗಳನ್ನು, ಸಾಮಂತರಾಜನ ಬಾಲಕುಮಾರನು ತಾಯಿ ಮೊದಲಾದವರಿಂದ ಕಲಿಸಲ್ಪಟ್ಟ ಪ್ರಾರ್ಥನಾವಾಕ್ಯಗಳನ್ನು ಸಾರ್ವಭೌಮರ ಸಮೀಪದಲ್ಲಿ ಹೇಳುವಂತೆ ಹೇಳಿ ಪರಮಾತ್ಮನ ಪ್ರಸಾದವನ್ನು ಹೊಂದುವುದು ಉಕ್ತಿನಿಷ್ಠೆ. ದಿವ್ಯದೇಶಗಳಲ್ಲಿರುವ ಸ್ವಯಂವ್ಯಕ್ತಮೂರ್ತಿಗಳಲ್ಲಿ ಸಂಪೂರ್ಣಸಾಮರ್ಥ್ಯ ಅಭಿವ್ಯಂಜನವೆಂಬ ಪರಮಾತ್ಮನ ಸಾನಿಧ್ಯವಿರುವುದರಿಂದ ಆ ಮೂರ್ತಿಗಳ ಸಾನ್ನಿಧ್ಯದಲ್ಲಿ ಶಿಷ್ಯರಿಂದ ಪ್ರಪತ್ತ್ಯನುಷ್ಠಾನವು ಆಚರಣೆಯಲ್ಲಿರುವುದು.

**ಪರಿಕರ**

ಆನುಕೂಲ್ಯಸಂಕಲ್ಪ, ಪ್ರಾತಿಕೂಲ್ಯವರ್ಜನೆ, ಕಾರ್ಪಣ್ಯ, ಮಹಾವಿಶ್ವಾಸ, ರಕ್ಷಕತ್ವಪ್ರಾರ್ಥನೆ ಎಂದು ಪರಿಕರಗಳು ಐದು ಪ್ರಕಾರ. ಆನುಕೂಲ್ಯ ಸಂಕಲ್ಪವೆಂದರೆ ಪ್ರಪಂಚದಲ್ಲಿರುವ ಚರಾಚರ ಸಮಸ್ತವಸ್ತುಗಳೂ ಪರಮಾತ್ಮನಿಗೆ ಶರೀರವಾಗಿರುವುದರಿಂದ ಯಥಾಶಕ್ತಿ ವಿಹಿತಾನುಷ್ಠಾನದಿಂದ ಉಪಕಾರ ಮಾಡುವನೆಂಬ ನಿಶ್ಚಯ. ಪ್ರಾತಿಕೂಲ್ಯವರ್ಜನವೆಂದರೆ ಸಕಲ ವಸ್ತುಗಳಲ್ಲಿಯೂ ಪರಮಾತ್ಮನು ಅಂತರ್ಯಾಮಿಯಾಗಿರುವುದರಿಂದ ನಿಷಿದ್ಧ ನಿವೃತ್ತಿಮೂಲಕ ಅಪಕಾರವನ್ನು ಮಾಡುವುದಿಲ್ಲವೆಂಬ ನಿಶ್ಚಯ. ಕಾರ್ಪಣವೆಂದರೆ ಭಕ್ತ್ಯಾದಿಗಳಲ್ಲಿ ಸಾಮರ್ಥ್ಯವಿಲ್ಲದೇ ಇರುವುದು. ಮೋಕ್ಷಕ್ಕಿಂತಲೂ ಬೇರೆ ಪ್ರಯೋಜನವನ್ನೂ, ಭಗವಂತನಿಗಿಂತಲೂ ಬೇರೆ ರಕ್ಷಕನನ್ನೂ ಅಪೇಕ್ಷಿಸದಿರುವುದು. ಮಹಾವಿಶ್ವಾಸವೆಂದರೆ ಆಶ್ರಿತರಾದ ನಮ್ಮನ್ನು ಪರಮೇಶ್ವರನು ರಕ್ಷಿಸುವನೆಂಬ ದೃಢವಾದ ನಂಬಿಕೆ. ಗೋಪ್ತೃತ್ವವರಣವೆಂದರೆ ತನ್ನ ಮನೋರಥವನ್ನು ತಿಳಿಯಪಡಿಸುವುದು. ಮೊದಲೆರಡು ಪರಿಕರಗಳಿಂದ ಅಪಾಯಪರಿಹಾರವು. ಮೂರನೆಯ ಪರಿಕರದಿಂದ ರಕ್ಷಕನ ಕಾರುಣ್ಯೋತ್ತೇಜನವು. ನಾಲ್ಕನೆಯ ಪರಿಕರದಿಂದ ಯಾವ ವಿಧವಾದ ಸಂದೇಹವೂ ಇಲ್ಲದೆ ಪ್ರಪತ್ತಿಯ ಆವಶ್ಯಕರ್ತವ್ಯತೆಯೂ ನಿರ್ಭರತ್ವವೂ

ಐದನೆಯ ಪರಿಕರದಿಂದ ಭಗವಂತನ ಫಲಪ್ರದಾನ ಸಂಕಲ್ಪವೂ ಪ್ರಯೋಜನಗಳೂ, ಇವುಗಳು ಪ್ರಪತ್ತ್ಯನುಷ್ಠಾನಕಾಲದಲ್ಲಿ ಅವಶ್ಯ ಬೇಕಾಗಿರುವುದರಿಂದ ಅಂಗಗಳೆಂದು ಹೇಳಲ್ಪಡುವುವು. ಇವುಗಳು ವಿನಾ ಯಾವ ಅಂಗವೂ ಬೇಕಾಗಿಲ್ಲ. ಲೌಕಿಕಶರಣಾಗತಿಯಲ್ಲೂ ಇಷ್ಟೇ ಬೇಕಾಗಿರುವುದು.

## ಅನುಸಂಧಾನ

ಇಂತಹ ಪರಿಕರಗಳೊಡನೆ ಸಂಕ್ಷೇಪವಾಗಿ ಪ್ರಪತ್ತಿಯನ್ನು ಅನುಷ್ಠಾನ ಮಾಡುವ ಕ್ರಮವಿದು—ಸ್ವಾಮಿನ್, ವತ್ಸಲ ಸುಶೀಲ ಸುಲಭ ಸರ್ವಜ್ಞ ಸರ್ವಶಕ್ತ ಪರಮಕಾರುಣಿಕ ಕೃತಜ್ಞ ಸ್ಥಿರ ಪರಿಪೂರ್ಣ ಪರಮೋದಾರ ಶ್ರಿಯಃಪತೇ, ಅತ್ಯಂತ ಕೃಪಣವಾದ ನಾನು ಇನ್ನುಮುಂದೆ ತಮಗೆ ಅನುಕೂಲ್ಯವನ್ನೇ ಮಾಡುತ್ತೇನೆ. ಪ್ರಾತಿಕೂಲ್ಯವನ್ನು ಮಾಡುವುದಿಲ್ಲ. ತಾವೇ ಭಕ್ತಿಸ್ಥಾನದಲ್ಲಿ ನಿಂತು ಈ ಶರೀರಾವಸಾನಸಮಯದಲ್ಲಿ ತಮ್ಮ ಪಾದಾರವಿಂದಗಳನ್ನು ಸೇರಿಸುವರೆಂದು ಸುದೃಢವಾಗಿ ನಂಬಿರುತ್ತೇನೆ. ತಾವೇ ತಮ್ಮ ಪಾದಾರವಿಂದಗಳ ಪ್ರಾಪ್ತಿಯನ್ನು ದಯಪಾಲಿಸಬೇಕು. ದೇಹ, ಇಂದ್ರಿಯ, ಪ್ರಾಣ ಮೊದಲಾದ ಸಕಲವಸ್ತುಗಳಿಗಿಂತಲೂ ಅತ್ಯಂತ ಬೇರೆಯವನಾದ ನಾನೂ ನನ್ನದೆಂದು ಅಭಿಮಾನಕ್ಕೆ ವಿಷಯವಾದ ಸಕಲ ಚೇತನಾ ಚೇತನವಸ್ತುಗಳೂ ಸರ್ವಸ್ವಾಮಿಯಾದ ತಮಗೇ ಶೇಷಭೂತರಾಗಿರುವೆವು. ಕಾಪಾಡುವ ಭಾರವೂ ಇದರಿಂದುಂಟಾಗುವ ಲಾಭವೂ ತಮಗೇ ಸೇರಿದುದು ಎಂದು ಪ್ರಾರ್ಥಿಸುವುದು.

ಶಙ್ಖಚಕ್ರಗದಾಪಾಣೇ ದ್ವಾರಕಾನಿಲಯಾಚ್ಯುತ
ಗೋವಿನ್ದ ಪುಣ್ಡರೀಕಾಕ್ಷ ರಕ್ಷ ಮಾಂ ಶರಣಾಗತಮ್ ॥

## ಮುಕ್ತಿ

ಈ ಪ್ರಕಾರ ಮೋಕ್ಷಾಧಿಕಾರಿಯಾದ ಜೀವಾತ್ಮನು ಭಕ್ತಿಯಿಂದಲೋ ಪ್ರಪತ್ತಿಯಿಂದಲೋ ಪ್ರಸನ್ನನಾದ ಪರಮಾತ್ಮನ ಅನುಗ್ರಹದಿಂದ ದೇಹಾವಸಾನ ಸಮಯದಲ್ಲಿ ಸಕಲವಿಧವಾದ ಶ್ರಮಗಳನ್ನು ಪರಿಹರಿಸಿಕೊಂಡು, ಸುಷುಮ್ನಾನಾಡೀಮಾರ್ಗವಾಗಿ ಸುಖದಿಂದ ಪ್ರಯಾಣಮಾಡಿ, ಅರ್ಚಿರಾದಿ

ಮಾರ್ಗದಲ್ಲಿ ಅಗ್ನಿಲೋಕ ಕಾಲಲೋಕ ವಾಯುಲೋಕ ಸೂರ್ಯಲೋಕ ಚಂದ್ರಲೋಕ ವಿದ್ಯುಲ್ಲೋಕ ವರುಣಲೋಕ ಇಂದ್ರಲೋಕ ಬ್ರಹ್ಮಲೋಕ ಗಳಲ್ಲಿ ಮುಕ್ತರ ಉಪಚಾರಕ್ಕಾಗಿ ಭಗವಂತನಿಂದ ನಿಯಮಿಸಲ್ಪಟ್ಟಿರುವ ನಿತ್ಯಸೂರಿಗಳಿಂದ ಅಪಾರಗೌರವಪೂರ್ವಕ ಸತ್ಕರಿಸಲ್ಪಟ್ಟು, ಅಮಾನವ ನೆಂಬ ನಿತ್ಯಸೂರಿಯು ಹಸ್ತಲಾಘವದಿಂದ ವಿರಜಾನದಿಯ ಉತ್ತರದಡಕ್ಕೆ ಹೋಗಿ, ಗಮನಕ್ಕೆ ಸಾಧನವಾಗಿ ಜೊತೆಯಲ್ಲಿ ಬಂದಿರುವ ಪ್ರಾಕೃತಸೂಕ್ಷ್ಮ ಭೂತಗಳ ಸಂಬಂಧವನ್ನು ಪರಿತ್ಯಾಗ ಮಾಡುವನು ; ಅಪ್ರಾಕೃತದಿವ್ಯದೇಹ ವನ್ನು ಪರಿಗ್ರಹಿಸುವನು. ಯೌವರಾಜ್ಯಾಭಿಷೇಕಕ್ಕಾಗಿ ತೆರಳಿರುವ ಮಹಾ ರಾಜಕುಮಾರನಿಗೆ ನಡೆಯುವ ಉಪಚಾರಗಳಂತೆ ಇವನಿಗೆ ಉಪಚಾರ ಗಳನ್ನು ಮಾಡುವುದಕ್ಕಾಗಿ ಅನೇಕ ನಿತ್ಯಸೂರಿಗಳು ಎದುರುಗೊಳ್ಳುವರು. ಅವರುಗಳಿಂದ ಮಾಡಲ್ಪಟ್ಟ ಅಲಂಕಾರಗಳನ್ನು ಸ್ವೀಕರಿಸಿ ಅನಂತಸಹಸ್ರ ರತ್ನ ಸ್ತಂಭಸಮಲಂಕೃತವಾದ ಆನಂದಮಯವಾದ ದಿವ್ಯಮಂಟಪದಲ್ಲಿ ಭೂಷಣ ಆಯುಧ ಪರಿಜನ ಪರಿಕರ ವೈಭವದೊಡನೆ ಒಡ್ಡೋಲಗದಲ್ಲಿ ಬಿಜಯ ಮಾಡಿಸುತ್ತಿರುವ, ಕೋಟಿಸೂರ್ಯಸಮಾನವಾಗಿ ಪ್ರಕಾಶಿಸು ತ್ತಿರುವ, ಗಾಂಭೀರ್ಯ ಔದಾರ್ಯ ಸೌಂದರ್ಯ ಸೌಲಭ್ಯಕರುಣಾರಸ ಪರಿಪೂರ್ಣನಾದ ಪರವಾಸುದೇವನ ಸಮೀಪಕ್ಕೆ ಹೋಗಿ, ಬಹುಕಾಲ ತಪ್ಪಿಸಿ ಕೊಂಡು ಹೋಗಿ ಬಂದ ಕುಮಾರನನ್ನು ಕಂಡು ಮಹಾರಾಜನು ಸಂತೋಷ ಪಡುವಂತೆ ಸಂತೋಷಪಡುತ್ತಿರುವ ಪರಮಾತ್ಮನಿಂದ ತೊಡೆಯ ಮೇಲೆ ಕೂಡಿಸಲ್ಪಟ್ಟು ಆಲಿಂಗಿಸಲ್ಪಡುವನು. ಆ ಕ್ಷಣದಲ್ಲಿ "ಅಪಹತಪಾಪ್ಮಾ ವಿರಜಃ ವಿಮೃತ್ಯುಃ ವಿಶೋಕಃ ವಿಜಘತ್ಸಃ ಅಪಿಪಾಸಃ ಸತ್ಯಕಾಮಃ ಸತ್ಯ ಸಂಕಲ್ಪಃ" ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಸ್ವಾಭಾವಿಕಗುಣಾಷ್ಟಕಗಳು ಆವಿರ್ಭವಿಸುವುವು ; ಸರ್ವಜ್ಞನಾಗಿ ನಿತ್ಯಸೂರಿಗಳೊಡನೆ ಸಮಾನವಾಗಿ ಯಾವತ್ಕಾಲವೂ ಉಭಯ ವಿಭೂತಿ ಉಭಯ ಲಿಂಗವಿಶಿಷ್ಟನಾದ ಪರ ಮಾತ್ಮಾನುಭವವೆಂಬ ಆನಂದವನ್ನು ಅನುಭವಿಸುತ್ತಿರುವನು. ಸಂಸಾರ ದಶೆಯಲ್ಲಿ ಕರ್ಮಾಧೀನವಾಗಿ ಅನುಕೂಲ ಪ್ರತಿಕೂಲ ಉದಾಸೀನರೂಪ ವಾಗಿ ತೋರಲ್ಪಟ್ಟ ಸಕಲ ವಸ್ತುಗಳು ಮಗನಿಗೆ ತಂದೆಯ ಐಶ್ವರ್ಯದಂತೆ, ಮುಕ್ತನಿಗೆ ಪರಮಾತ್ಮನ ಐಶ್ವರ್ಯವೆಂದು ಪ್ರತ್ಯಕ್ಷವಾಗಿ ನಿರತಿಶಯಾನು ಕೂಲವೆಂಬ ಆನಂದಮಯವಾಗಿಯೇ ಇರುವುವು.

ಇವನ ಐಶ್ವರ್ಯವು ಸದೇಹ ವಿದೇಹ ಅನಂತದೇಹ ಸರ್ವಲೋಕ ಸಂಚಾರ, ಪರಮಾತ್ಮನ ಅವತಾರಗಳಂತೆ ಸಹಾಯವಾಗಿಯೂ ಸ್ವತಂತ್ರ ವಾಗಿಯೂ ಪ್ರಕೃತಿ ಮಂಡಲದಲ್ಲಿ ಅವತಾರಗಳು, ಶಾಸ್ತ್ರಸಂಪ್ರದಾಯ ಉಪದೇಶಗಳು, ಭಗವನ್ಮಹಿಮೆಯ ಪ್ರದರ್ಶನಗಳು, ಮೊದಲಾದ ಸಕಲ ಜಗದುದ್ಧಾರಕಾರ್ಯವೆಂಬ ಪರಮಾತ್ಮ ಕೈಂಕರ್ಯರೂಪವಾಗಿ ಇರು ವುದು. ಇಂತಹ ಮುಕ್ತನಿಗೆ ಪ್ರಕೃತಿಮಂಡಲ ಪ್ರವೇಶವು ಕರ್ಮಮೂಲಕ ವಲ್ಲದೆ ಸಂಕಲ್ಪಮೂಲಕವಾಗಿರುವುದರಿಂದ ಪುನರಾವೃತ್ತಿ ದೋಷವಿಲ್ಲ. ಮೋಕ್ಷವನ್ನು ಸಾಯುಜ್ಯ, ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಎಂದು ವಿಭಾಗಮಾಡುವುದು ಶತೇಪಂಚಶನ್ನ್ಯಾಯದಿಂದ ಸಮನ್ವಯವಾಗುವುದು

ರಾಜಾಧಿರಾಜರುಗಳಿಗೆ ಚಿಹ್ನವಾಗಿರುವ ಛತ್ರಚಾಮರಾದಿಗಳಂತೆ ಪರಮಾತ್ಮನಿಗೆ ಹೇಳಲ್ಪಡುವ ಜಗತ್ಕಾರಣತ್ವ, ಮೋಕ್ಷಪ್ರದತ್ವ, ಸರ್ವಾ ಧಾರತ್ವ, ಸರ್ವನಿಯಂತೃತ್ವ, ಸರ್ವಶೇಷಿತ್ವ, ಸರ್ವಶರೀರಿತ್ವ, ಸರ್ವಶಬ್ದ ವಾಚ್ಯತ್ವ, ಸರ್ವವೇದ ವೇದ್ಯತ್ವ, ಸರ್ವಲೋಕಶರಣ್ಯತ್ವ, ಸರ್ವಮುಮು ಕ್ಷೂಪಾಸ್ಯತ್ವ, ಸರ್ವಫಲಪ್ರದತ್ವ, ಸರ್ವವ್ಯಾಪ್ತಜ್ಞಾನಾನಂದಸ್ವರೂಪತ್ವ, ಲಕ್ಷ್ಮೀಸಹಾಯತ್ವ—ಮೊದಲಾದ ಧರ್ಮಗಳು ಪರಮಾತ್ಮನಿಗೆ ವ್ಯವಸ್ಥಿತ ಗಳಾಗಿರುವುವು.

ಈ ಅಂಶಗಳಲ್ಲಿ ಶ್ರೀದೇವಿಗೂ ಭಗವಂತನಿಗೂ ಸಾಮ್ಯವಿದ್ದರೂ ಸ್ತ್ರೀಪುಂ ರೂಪಭೇದದಿಂದ ಸ್ವಾತಂತ್ರ್ಯ, ಶತ್ರುನಿಗ್ರಹ, ಸ್ಥಿರತ್ವ ಮೊದ ಲಾದ ಧರ್ಮಗಳು ಭಗವಂತನಲ್ಲೂ, ಮಾರ್ದವ, ಪತಿಪಾರಾರ್ಥ್ಯ, ಕರುಣೆ, ಕ್ಷಮೆ ಮೊದಲಾದ ಧರ್ಮಗಳು ಶ್ರೀದೇವಿಯಲ್ಲೂ ಪರಸ್ಪರೇಚ್ಛಾಧೀನವಾಗಿ ವ್ಯವಸ್ಥಿತಗಳಾಗಿರುವುವು.

ಅಧೇಯತ್ವ ವಿಧೇಯತ್ವ ಶೇಷತ್ವ ಅಣುತ್ವ ಮೊದಲಾದುವು ಮುಕ್ತಾತ್ಮರಿಗೆ ವ್ಯವಸ್ಥಿತಗಳಾಗಿರುವ ಧರ್ಮಗಳು. ನಟಸಾಮಾಜಿಕ ನ್ಯಾಯದಿಂದ ಆನಂದಾನುಭವವು ಸರ್ವಸಮವಾಗಿರುವುದು. ಹೀಗೆ ಕೈಂಕರ್ಯ ಪರ್ಯಂತಪರಿಪೂರ್ಣ ಪರಬ್ರಹ್ಮಾನುಭವವೆಂಬ ಮೋಕ್ಷವೇ ಪರಮಪುರುಷಾರ್ಥ; ಜೀವಾತ್ಮನ ಸ್ವಾಭಾವಿಕಸ್ವರೂಪಾವಸ್ಥಿತಿ. ಸ್ವರೂಪ ವಿರುವ ಪರ್ಯಂತವೂ ಶಾಶ್ವತವಾಗಿ ಇರುವುದು.



# ೧೧
# ದ್ವೈತದರ್ಶನ

**ಸಂಪ್ರದಾಯ**

ದ್ವೈತದರ್ಶನ ಹದಿಮೂರನೆಯ ಶತಮಾನದಲ್ಲಿ ಮಧ್ವಾಚಾರ್ಯ ರೆಂಬ ಪೂರ್ಣಪ್ರಜ್ಞರಿಂದ ಪ್ರಚಾರವಾಡಲ್ಪಟ್ಟಿತು. ಇವರು ಇತರ ಪೂರ್ವಾಚಾರ್ಯರುಗಳಂತೆ ಸಿದ್ಧಾಂತಪ್ರವರ್ತಕರಾಗಿ ಬಹುಗ್ರಂಥಗಳನ್ನು ರಚಿಸಿರುವರು. ಅವುಗಳಿಗೆ ಸರ್ವಮೂಲಗ್ರಂಥವೆಂದು ಪ್ರಸಿದ್ಧಿಯಿದೆ.

ಸರ್ವಮೂಲಗ್ರಂಥವೆಂಬುದು ಇಪ್ಪತ್ತೇಳು ವಿಧಗಳಾಗಿರುವುವು. ಅವುಗಳಲ್ಲಿ ಹತ್ತು ಪ್ರಕರಣಗ್ರಂಥಗಳು ; ಕೆಲವು ಆಚಾರಗ್ರಂಥಗಳು ; ಕೆಲವು ಸಿದ್ಧಾಂತಗ್ರಂಥಗಳು ; ಪ್ರಸ್ಥಾನತ್ರಯಭಾಷ್ಯಗಳು ; ಕೆಲವು ಪುರಾಣತಾತ್ಪರ್ಯನಿರ್ಣಯಗಳು. ಇಂತಹ ಸರ್ವಮೂಲಗ್ರಂಥಗಳಿಗೆ ಪ್ರಾಯಃ ಟೀಕಾಚಾರ್ಯರೆಂಬ ಜಯತೀರ್ಥಾಚಾರ್ಯರು ಟೀಕೆಗಳನ್ನೂ ಇನ್ನೂ ಅನೇಕ ಸ್ವತಂತ್ರಗ್ರಂಥಗಳನ್ನೂ ಬರೆದಿರುವರು. ಅನಂತರ ಟೀಕಾಟಿಪ್ಪಣಿಗಳು ಅಸಂಖ್ಯಾತಗಳಾಗಿ ಇನ್ನೂ ಬೆಳೆಯುತ್ತಿರುವುವು.

ಶ್ರುತಿಸ್ಮೃತೀತಿಹಾಸ ಪುರಾಣ ಮೊದಲಾದ ಸಕಲ ಶಾಸ್ತ್ರಗಳೂ ವಿಷ್ಣುವಿನ ಮಾಹಾತ್ಮ್ಯವನ್ನುಪದೇಶಮಾಡಿ ವಿಷ್ಣುವಿಗೆ ಸರ್ವೋತ್ಕರ್ಷ ವನ್ನು ಪ್ರತಿಪಾದಿಸುವುವು. ಇಂತಹ ಉತ್ಕರ್ಷಜ್ಞಾನವೇ ಮೋಕ್ಷಸಾಧನ ವಾಗುವುದೆಂದು ಸಿದ್ಧಾಂತಪಡಿಸಿರುವುವು. ಜಗತ್ಕಾರಣತ್ವ ಮೊದಲಾದ ಸರ್ವಕೃತ್ಯಗಳನ್ನೂ ವಿಷ್ಣುವಿಗೇ ಸಮರ್ಪಿಸಿ ವಿಷ್ಣುಭಕ್ತಿಯನ್ನೇ ಮುಖ್ಯ ವಾಗಿ ಕರ್ತವ್ಯವೆಂದು ನಿರ್ಣಯಿಸಿರುವುದರಿಂದ ಈ ದರ್ಶನಕ್ಕೆ ವೈಷ್ಣವ ಸಿದ್ಧಾಂತವೆಂದೂ ಪ್ರಸಿದ್ಧಿ.

ವಿಷ್ಣೂತ್ಕರ್ಷವಾದಕ್ಕೆ ಪ್ರತಿಕಕ್ಷಿಗಳಾಗಿರುವ ವಾದಗಳಿವು—

೧. ಜೀವಾತ್ಮ, ಪರಮಾತ್ಮ ಮೊದಲಾದ ಸರ್ವಶಬ್ದಗಳಿಂದಲೂ ಹೇಳಲ್ಪಡುವ ಆತ್ಮವಸ್ತುವೆಂಬುದು ಒಂದೇ ವ್ಯಕ್ತಿ.

ದೇಹೇಂದ್ರಿಯ ಮೊದಲಾದ ಭೇದದಿಂದ ಭೇದವ್ಯವಹಾರವೆಂದು ಆತ್ಮೈಕ್ಯವಾದವೊಂದು.

೨. ಜೀವಾತ್ಮವಸ್ತುಗಳನ್ನು ಬಿಟ್ಟು ದೇವತೆಗಳೆಂಬ ವಸ್ತುಗಳೆಲ್ಲಾ ದೇಹಭೇದವೆ ವಿನಾ ವಸ್ತು ಭೇದವಿಲ್ಲವೆಂಬ ದೇವತೈಕ್ಯವಾದವೊಂದು.

೩. ತ್ರಿಮೂರ್ತಿಗಳಿಗೆ ಮೂರ್ತಿಭೇದವೇ ವಿನಾ ಸ್ವರೂಪಭೇದವಿಲ್ಲವೆಂಬ ತ್ರಿಮೂರ್ತ್ಯೈಕ್ಯವಾದವೊಂದು.

೪. ಸ್ವರೂಪದಲ್ಲಿ ಭೇದವಿದ್ದರೂ ಅಧಿಕಾರದಲ್ಲಿ ಸಮರೆಂಬವಾದವೊಂದು.

೫. ತ್ರಿಮೂರ್ತಿಗಿಂತಲೂ ಬೇರೆಯಾದ ಸದಾಶಿವನು ಸರ್ವೋತ್ತಮನೆಂದು ವ್ಯೋಮಾತೀತ ವಾದವೊಂದು.

೬. ತ್ರಿಮೂರ್ತಿಗಳಲ್ಲೇ ಕಲ್ಪಭೇದದಿಂದ ಅಧಿಕಾರಭೇದವೆಂಬ ನಿರ್ಮೋನ್ನತೈಶ್ವರ್ಯ ವಾದವೊಂದು.

೭-೮. ತ್ರಿಮೂರ್ತಿಗಳಲ್ಲಿ ರುದ್ರನೋ ಬ್ರಹ್ಮನೋ ಅಧಿಕವೆಂಬ ಪಕ್ಷಗಳೆರಡು.

ಹೀಗೆ ಎಂಟು ಪ್ರತಿಪಕ್ಷವಾದಗಳು. ಇವುಗಳೆಲ್ಲಕ್ಕೂ ಪ್ರತಿಯಾಗಿ ಹರಿ ಸರ್ವೋತ್ತಮಪಕ್ಷವನ್ನು ಈ ದರ್ಶನ ಸ್ಥಾಪಿಸಿರುವುದು.

ವಿಷ್ಣು ಸರ್ವೋತ್ತಮ ವಾದದಲ್ಲಿ ಅವರ ಪಟ್ಟಮಹಿಷಿಯಾದ ಲಕ್ಷ್ಮೀದೇವಿಗೆ ಅನೇಕಾಂಶಗಳಲ್ಲಿ ಸಾಮ್ಯವಿದ್ದರೂ ತಾರತಮ್ಯವೂ ಅನೇಕಾಂಶಗಳಲ್ಲಿರುವವು. ಅವಳಿಗಿಂತಲೂ ಬ್ರಹ್ಮನು, ಅವರಿಗಿಂತಲೂ ವಾಯುದೇವರು, ಅವನಿಗಿಂತಲೂ ಸರಸ್ವತಿ, ಅವಳಿಗಿಂತಲೂ ವಾಯುದೇವರ ಪತ್ನಿ, ಹೀಗೆ ದೇವತೆಗಳಲ್ಲಿ ಸ್ವರೂಪಾನುರೂಪವಾಗಿ ಉಚ್ಚನೀಚಭಾವವೆಂಬ ತಾರತಮ್ಯವಿರುವುದು. ಮನುಷ್ಯರಲ್ಲೂ ಇತರ ಪಶುಪಕ್ಷಿ ಸ್ಥಾವರಗಳಲ್ಲೂ ಬಾಹ್ಯ ಶರೀರಗಳಲ್ಲಿ ತಾರತಮ್ಯವಿರುವ ಹಾಗೆ, ಆತ್ಮಸ್ವರೂಪದಲ್ಲೂ ಮನುಷ್ಯಾದ್ಯಾಕಾರ ಭೇದವಾದ ಏಕಾತ್ಮವಾದಕ್ಕೂ ಸಾಮ್ಯವಾದಕ್ಕೂ ಸಾಕ್ಷಾತ್ಪ್ರತಿಪಕ್ಷವಾಗಿರುವುದು. ಈ ತಾರಮ್ಯವಾದದ ಲೋಕಾನುಗ್ರಹದೃಷ್ಟಿ ಮುಂದೆ ವಿವರಿಸಲ್ಪಡುವುದು,

ದರ್ಶನ ದೃಷ್ಟಿಯಿಂದ ಪರಾಮರ್ಶೆಮಾಡಿದರೆ ಸಾಂಖ್ಯ ಮೊದಲಾದ ದರ್ಶನಗಳಲ್ಲಿ ಶರೀರೇಂದ್ರಿಯ ಮನಸ್ಸು ಜ್ಞಾನ ಸುಖ ದುಃಖ ಇಚ್ಛಾದ್ವೇಷ ಮೊದಲಾದ ಭೂತಭೌತಿಕ ಚಿತ್ತ ಚೈತ್ತ್ಯ ಸಕಲ ವಸ್ತುಗಳೂ ಬುದ್ಧಿ ಎಂಬ ಮಹತ್ತತ್ತ್ವದ ಪರಿಣಾಮಗಳೆಂದೂ, ಅವುಗಳಿಗೂ ಕೂಟಸ್ಥನಿರ್ವಿಕಾರ ಸ್ವರೂಪನಾದ ಆತ್ಮನಿಗೂ ದೃಗ್ದೃಶ್ಯಭಾವ ಸಂಬಂಧದಿಂದ ಸಂಸಾರವೆಂದೂ ನಿರ್ಣಯ. ಬೌದ್ಧದರ್ಶನ ವಿಜ್ಞಾನವಾದದಲ್ಲಿ ವಿಜ್ಞಾನವೆಂಬ ಆತ್ಮ ವಸ್ತುವಿನಲ್ಲೇ, ಪರಿಣಾಮವಾಗಿಯೇ ಭೂತಭೌತಿಕ ಚಿತ್ತಚೈತ್ತಗಳಿರುವು ವೆಂದು ಸಿದ್ಧಾಂತ. ತಾರ್ಕಿಕಮೀಮಾಂಸಕ ಮೊದಲಾದ ದರ್ಶನ ಗಳಲ್ಲಿ ಚಿತ್ತಚೈತ್ತ ಬೇರೆ, ಭೂತಭೌತಿಕ ಬೇರೆ. ಚೈತ್ತ ವಸ್ತುಗಳು ಆತ್ಮಸ್ವ ರೂಪದ ಗುಣವೋ ಪರಿಣಾಮವೋ ಆಗಿ ಆತ್ಮಸ್ವರೂಪಕ್ಕೆ ಸೇರಿ ಪ್ರಾಯಃ ಸೌಗತಮಾರ್ಗದಲ್ಲಿರುವುದೆಂದು ನಿರ್ಣಯ. ಅದ್ವೈತದರ್ಶನವು ಪ್ರಾಯಶಃ ಸಾಂಖ್ಯದರ್ಶನಮಾರ್ಗದಲ್ಲಿರುವುದು. ವಿಶಿಷ್ಟಾದ್ವೈತದರ್ಶನ ಸಾಂಖ್ಯ ದಲ್ಲೂ ಸೇರದೆ, ಸೌಗತದಲ್ಲೂ ಸೇರದೆ ಮನಸ್ಸಿಗೂ ಆತ್ಮನಿಗೂ ಮಧ್ಯೇ ವಿಜ್ಞಾನವೆಂಬ ತತ್ತ್ವವನ್ನೇ ಅಂಗೀಕರಿಸಿ ಅದರ ಪರಿಣಾಮವು ಜ್ಞಾನ ಸುಖಾದಿಗಳೆಂದು ಒಂದು ವಿಧವಾದ ಮಧ್ಯಸ್ಥಮಾರ್ಗದಲ್ಲಿರುವುದು. ಈ ದರ್ಶನದಲ್ಲಿ ಆತ್ಮವಸ್ತುವಿಗೆ ಪ್ರಾಯಃ ಸಕಲ ಬಾಹ್ಯವಸ್ತುಸ್ವಭಾವಗಳನ್ನಂಗೀ ಕರಿಸಿರುವುದರಿಂದ ಸಾಂಖ್ಯ, ಸೌಗತ ಎರಡುವಿಧ ಮಾರ್ಗದಲ್ಲೂ ಇರು ವುದು. ತತ್ತ್ವದೃಷ್ಟಿಯಲ್ಲಿ ಪ್ರಾಯಃ ಸಕಲ ಪದಾರ್ಥಗಳೂ ಪ್ರಾಮಾಣಿಕ ವ್ಯವಹಾರದಿಂದ ಅಂಗೀಕರಿಸಲ್ಪಟ್ಟಿರುವುವು. ಬಾಹ್ಯತತ್ತ್ವಗಳಂತೆ ಶರೀರಾ ಕಾರ, ಇಂದ್ರಿಯ, ಮನಸ್ಸು, ಬುದ್ಧಿ, ಸುಖದುಃಖ ಮೊದಲಾದುವು ಆತ್ಮ ಸ್ವರೂಪಾಂತರ್ಗತಗಳಾಗಿ ತತ್ತ್ವವಿಲಕ್ಷಣಗಳಾಗಿರುವುವು. ಇದೊಂದು ವಿಧವಾದ ಮಾಧ್ಯಸ್ಥ್ಯವಾಗುವುದು.

ಪ್ರಪಂಚ ಸಕಲವೂ ಮನಸ್ಸಿಗೆ ಸೇರಿದುದೆಂದೊಂದು ಮಾರ್ಗ ; ಆತ್ಮನಿಗೆ ಸೇರಿದುದೆಂದೊಂದು ಮಾರ್ಗ ; ಎರಡಕ್ಕೂ ಸೇರಿರುವುದೆಂದೂ ಎರಡಕ್ಕೂ ಸೇರಿಲ್ಲವೆಂದೂ ಮಾರ್ಗಗಳು ವಿಭಿನ್ನಗಳಾಗಿರುವುವು.

ಮತ್ತು ಕಾರ್ಯಕಾರಣಭಾವ ವಿಷಯದಲ್ಲಿ ಕೆಲವರು ಸತ್ಕಾರ್ಯ ವಾದಿಗಳು : ಕೆಲವರು ಅಸತ್ಕಾರ್ಯವಾದಿಗಳು ; ಕೆಲವರು ಸದಸತ್ಕಾರ್ಯ

ವಾದಿಗಳು ; ಕೆಲವರು ಸದಸದ್ವಿಲಕ್ಷಣಕಾರ್ಯವಾದಿಗಳು. ಇವರು ಬೇರೊಂದು ವಿಧವಾದ ಸದಸತ್ಕಾರ್ಯವಾದಿಗಳು. ಹೇಗೆಂದರೆ, ಕಾರಣಾವಸ್ಥೆಯಲ್ಲಿ ಕಾರಣವು ಸತ್ ಕಾರ್ಯವು ಅಸತ್, ಕಾರ್ಯಾವಸ್ಥೆಯಲ್ಲಿ ಕಾರಣವು ಅಸತ್, ಕಾರ್ಯವು ಸತ್ ಎಂದು ನಿರ್ಣಯ. ಇದರಿಂದ ಸತ್ ಅಸತ್ ಶಬ್ದಗಳು ಶಕ್ತಿ ವ್ಯಕ್ತಿ, ಸೂಕ್ಷ್ಮ ಸ್ಥೂಲಗಳೆಂಬ ಅರ್ಥದಲ್ಲಿ ಉಪಯೋಗಿಸಲ್ಪಡುವುವೆಂದು ತಿಳಿಯುತ್ತದೆ. ಮತ್ತು ಭ್ರಮಸ್ಥಲದಲ್ಲಿ ವಿಷಯವು ಇದೆಯೋ ಇಲ್ಲವೇ ಎಂಬ ವಿಚಾರದಲ್ಲಿ ಆತ್ಮಖ್ಯಾತಿಯೆಂಬ ನಿರ್ವಿಷಯಖ್ಯಾತಿವಾದವನ್ನು ವಿಜ್ಞಾನವಾದಿಗಳಾದ ಬೌದ್ಧರು ಸ್ಥಾಪಿಸಿದರು. ಅದಕ್ಕೆ ಪ್ರತಿಯಾಗಿ ಕೆಲವರು ತತ್ಕಾಲದಲ್ಲಿ ವಸ್ತು ಜನಿಸಿ ಭ್ರಮದಲ್ಲಿ ಗೋಚರವಾಗುವುದು. ಆ ವಸ್ತು ಪರಮಾರ್ಥವಾಗಿ ಕ್ಷಣಿಕವೆಂದು ಭಾಸ್ಕರರು ಹೇಳುವರು. ಅದು ಅಪರಮಾರ್ಥ. ಅನಿರ್ವಚನೀಯವೆಂದು ಅದ್ವೈತಿಗಳು ಹೇಳುವರು. ಇಲ್ಲಿಲ್ಲದಿದ್ದರೂ ಬೇರೆ ಸ್ಥಲದಲ್ಲಿರುತ್ತದೆ. ಎಲ್ಲೂ ಇಲ್ಲದಿರುವುದು ತೋರಲಾರದೆಂದು ತಾರ್ಕಿಕಮೀಮಾಂಸಕರ ಅಭಿಪ್ರಾಯ. ಅನ್ಯತ್ರವಿದೆಯಾದರೂ ಇಲ್ಲಿಲ್ಲವೆಂದು ಸಿದ್ಧ. ಅಸತ್ ಅಂದರೆ ಇದೇ ಅರ್ಥ. ಇಂತಹ ಅಸತ್ತೇ ತೋರುತ್ತದೆಂದು ಹೇಳಬಹುದು. ಅಪೂರ್ವವಸ್ತೂತ್ಪತ್ತಿ ಅವಶ್ಯವಿಲ್ಲ. ಅನ್ಯತ್ರವಸ್ತುವಿದ್ದರೂ ಇಲ್ಲದಿರುವ ಅದರ ಸಂಬಂಧ ತೋರುತ್ತದೆಂದು ಎಲ್ಲರೂ ಹೇಳಬೇಕು. ಅದರಂತೆ ಪ್ರಕಾರವಾಗಿ ತೋರುವ ರಜತಾದಿಗಳೂ ಇಲ್ಲಿ ಇಲ್ಲದಂತಹ ಅಸದ್ಭಾವವಿದ್ದರೂ ತೋರಬಹುದೆಂದು ನಿರ್ಣಯ. ಇಲ್ಲದಿರುವ ರಜತವು ತೋರಿತೆಂದು ಲೋಕಾನುಭವವಿರುತ್ತದೆ. ಇಲ್ಲದಿರುವುದು ಹೇಗೆ ತೋರಬಹುದೆಂದರೆ, ಅನ್ಯತ್ರವಿರುವುದು ಹೇಗೆ ತೋರಬಹುದೋ ಹಾಗೆ, ಎಂಬ ಉತ್ತರ ಸಿದ್ಧವಾಗಿದೆ. ಪ್ರಪಂಚ ತರ್ಕಮತವು ಇಲ್ಲಿಲ್ಲ ಎಂಬ ವಿಷಯದಲ್ಲಿ ದೃಷ್ಟಿಯಿಡಲಿಲ್ಲ. ಈ ಮತ ಅನ್ಯತ್ರವಿದೆಯೆಂಬ ಅಂಶದಲ್ಲಿ ದೃಷ್ಟಿಯಿಡಲಿಲ್ಲ. ವಸ್ತು ಅನ್ಯಥಾ ತೋರುತ್ತದೆಂಬುದು ಇಬ್ಬರಿಗೂ ಸಮ್ಮತ. ಎದುರಿಗಿರುವುದು ಅನ್ಯತ್ರವಿರುವ ವಸ್ತುರೂಪದಿಂದ ತೋರುತ್ತದೆಂದರೆ ಇಲ್ಲದಿರುವ ವಸ್ತುರೂಪದಿಂದ ತೋರುತ್ತದೆಂದು ಏತಕ್ಕೆ ಹೇಳಬಾರದು ? ಇದೊಂದು ವಿಧ ಅನ್ಯಥಾಖ್ಯಾತಿಯಾಗುವುದು. ಯಥಾರ್ಥವಾದ ಜ್ಞಾನಗಳು ಅನೇಕವಾಗಿ ಅನು

ಭವಸಿದ್ಧವಾಗಿರುವುದರಿಂದ ವಿಜ್ಞಾನವಾದ ನಿರಾಕರಣವು ಸಿದ್ಧ. ಇದ ರಿಂದ ಸತ್ಖ್ಯಾತಿ, ಅಸತ್ಖ್ಯಾತಿ ಇವೆರಡನ್ನೂ ಸ್ವೀಕರಿಸುವುದೆಂದೊಂದು ವಿಧ ಸಾಮರಸ್ಯ.

## ಭೇದನಿರೂಪಣ

ಈ ದರ್ಶನದಲ್ಲಿ ಅಂಗೀಕರಿಸಲ್ಪಟ್ಟಿರುವ ಪದಾರ್ಥಗಳು ಅಬಾಧಿತ ಲೌಕಿಕ ವ್ಯವಹಾರದಿಂದಲೂ ಶ್ರುತಿಸ್ಮೃತೀತಿಹಾಸಪುರಾಣ ವ್ಯವಹಾರಗ ಳಿಂದಲೂ ಪ್ರಾಮಾಣಿಕಗಳೆಂದು ನಿರೂಪಿಸಲ್ಪಟ್ಟಿರುವುವು. ಇಂತಹ ಪದಾ ರ್ಥಗಳಲ್ಲಿ ಜೀವಾತ್ಮ, ಪರಮಾತ್ಮ, ಆಕಾಶ, ಕಾಲ ಮೊದಲಾದ ವಸ್ತು ಗಳನ್ನು ಇತರರು ಅಖಂಡವೆಂದು ಎಂದರೆ ನಿರವಯುವಗಳೆಂದು ಸಾಧಿಸಿರು ವರು. ಈ ದರ್ಶನದಲ್ಲಿ ಪರಮಾಣು ಮೊದಲುಗೊಂಡು ಸಕಲದ್ರವ್ಯ ಗಳೂ ಸಖಂಡಗಳು, ಸಾವಯುವಗಳು. ಅಖಂಡವಾದ ದ್ರವ್ಯವೆಂಬುದು ಯಾವುದೂ ಇಲ್ಲ. ಸಾಮಾನ್ಯ, ಸಾದೃಶ್ಯ, ಅಭಾವ ಮೊದಲಾದ ವಸ್ತು ಗಳೂ ಸಹ ಆಧಾರಭೇದದಿಂದ ವಿಭಿನ್ನಗಳಾಗಿರುವುವು. ನಿತ್ಯವಾಗಿರುವ ಜೀವಾತ್ಮ, ಪರಮಾತ್ಮ ಮೊದಲಾದ ವಸ್ತುಗಳಿಗೂ ಅವಯುವಗಳುಂಟು. ಆದರೆ ಅವಯುವಗಳು ಆರಂಭಕ, ಅನಾರಂಭಕವೆಂದು ಎರಡು ಪ್ರಕಾರ. ಅನಿತ್ಯವಸ್ತುಗಳಾದ ಘಟಪಟಾದಿಗಳ ಅವಯುವಗಳು ಆರಂಭಕಾವಯುವ ಗಳು. ನಿತ್ಯವಾದ ಆತ್ಮಾದಿವಸ್ತುಗಳ ಅವಯುವಗಳು ಅನಾರಂಭಕಾವಯುವ ಗಳು. ಆಕಾಶವಸ್ತುವಿಗೆ ಅವಯುವವಿಲ್ಲದಿದ್ದರೂ ಅಂಶಭೇದಗಳು ಪ್ರತ್ಯಕ್ಷ ಗಳಾಗಿರುವುವು. ವಸ್ತ್ರ ಮೊದಲಾದ ವಸ್ತುಗಳಿಗೆ ತಂತುಗಳು ಅವಯುವ ಗಳು, ಗೇಣು ಮೊಳ ಮೊದಲಾದುವು ಅಂಶಗಳು. ಇದೇ ಅವಯುವಗಳಿಗೂ ಅಂಶಗಳಿಗೂ ಇರುವ ಭೇದ.

ಹೀಗೆ ಪದಾರ್ಥದಲ್ಲಿ ಅಂಶಿಯೆಂಬುದೊಂದು ವಿಭಾಗವಿದೆ. ಅಂಶಗ ಳಿಂದ ಕೂಡಿರುವುದು ಅಂಶಿ. ಆಕಾಶವೆಂಬ ವಸ್ತು ಆಕಾಶವೆಂದೂ ಅಂಶಿ ಯೆಂದೂ ಬೇರೆಯಾಯಿತು. ಹೀಗೆ ವಿಶಿಷ್ಟವೆಂಬುದೊಂದು ವಿಭಾಗವಿರು ವುದು. ಒಂದು ವಸ್ತುವಿನಲ್ಲಿರುವ ವಿಶೇಷಣಭೇದದಿಂದ ವಸ್ತು ಭಿನ್ನಭಿನ್ನ ವಾಗುವುದು. ಫಲವೆಂಬುದೊಂದು ವಸ್ತು ಗಂಧವಿಶಿಷ್ಟವಾದುದರಿಂದ

ಬೇರೆಯಾಯಿತು. ಹೀಗೆ ರೂಪವಿಶಿಷ್ಟ, ರಸವಿಶಿಷ್ಟ, ಸ್ಪರ್ಶವಿಶಿಷ್ಟ, ಸಂಖ್ಯಾವಿಶಿಷ್ಟ ಮೊದಲಾದ ವ್ಯವಹಾರಗಳಿಂದ ಭಿನ್ನ ಭಿನ್ನಗಳಾಗುವುವು. ಹೀಗೆ ವಿಶೇಷಣವೊಂದಾದರೂ ಸಂಬಂಧಗಳು ಬೇರೆಬೇರೆಯಾದರೆ ವಿಶಿಷ್ಟಗಳು ಬೇರೆಬೇರೆಯಾಗಬೇಕು.

ಹೀಗೆ ಒಂದೇ ವಸ್ತು ಸ್ವರೂಪದಲ್ಲಿ ಒಂದಾಗಿಯೂ ಪ್ರಾಮಾಣಿಕ ವ್ಯವಹಾರಗಳಿಂದ ಭಿನ್ನಭಿನ್ನಗಳಾಗಿಯೂ ಹೇಗೆ ಆಗುವುದೆಂದರೆ—ಪ್ರತಿಯೊಂದು ವಸ್ತುವಿನಲ್ಲೂ ವಿಶೇಷವೆಂಬ ಪದಾರ್ಥಗಳು ಬೇಕಾದಷ್ಟು ಇರುವುವು. ಅವುಗಳನ್ನು ಭೇದವ್ಯವಹಾರಕ್ಕಾಗಿಯೇ ಅಂಗೀಕರಿಸಿರುವುದರಿಂದ ಅಂತಹ ವಿಶೇಷಗಳಿಂದ ಪ್ರತಿವಸ್ತುವೂ ವಿಭಿನ್ನವಾಗಿ ವ್ಯವಹರಿಸಲ್ಪಡುವುದು. ಹೀಗೆ ಸಾಮಾನ್ಯ, ಸಾದೃಶ್ಯ, ಸಂಯೋಗ, ವಿಭಾಗ, ದ್ವಿತ್ವಾದಿಸಂಖ್ಯಾ ಮೊದಲಾದ ಪದಾರ್ಥಗಳು ಆಶ್ರಯಭೇದವಿದ್ದರೂ ಇತರರಿಂದ ಅಖಂಡವೆಂದು ಹೇಳಲ್ಪಟ್ಟಿರುವುವು. ಆಶ್ರಯವ್ಯಕ್ತಿಭೇದಗಳಿಂದ ಭಿನ್ನಗಳೆಂದು ಇವರಿಂದ ನಿರ್ಣಯಿಸಲ್ಪಟ್ಟಿರುವುವು.

ಅನ್ಯೋನ್ಯಾಭಾವವೆಂಬ ಭೇದಪದಾರ್ಥವು ಪ್ರತಿಯಾಗಿ ಭೇದದಿಂದ ಬೇರೆಬೇರೆಯಾಗಿ ಘಟಭೇದ, ಪಟಭೇದ ಎಂದು ವಿಭಿನ್ನಗಳಾಗಿದ್ದರೂ ಆಶ್ರಯಭೇದದಿಂದ ಬೇರೆಬೇರೆಯಲ್ಲವೆಂದು ಇತರರ ಅಭಿಪ್ರಾಯವು. ಎಂದರೆ, ಘಟಭೇದವು ಘಟವನ್ನು ಬಿಟ್ಟು ಉಳಿದ ಸರ್ವತ್ರ ಒಂದೇ ವಸ್ತುವೆಂದರ್ಥ. ಈ ದರ್ಶನದಲ್ಲಿ ಭೇದವೆಲ್ಲವೂ ಆಶ್ರಯಸ್ವರೂಪವೆಂದು ನಿರ್ಣಯಿಸಿರುವುದರಿಂದ ಒಂದು ಘಟಭೇದವು ಅಸಂಖ್ಯಾತವಿಭಿನ್ನವಾಯಿತು. ಹೀಗೆ ಸಕಲಭೇದಗಳೂ ಅನಂತ ಸ್ವರೂಪಗಳಾಗುತ್ತವೆ.

ಬಿಂಬ ಪ್ರತಿಬಿಂಬ ಭಾವವಿಷಯದಲ್ಲಿ ಬಿಂಬಕ್ಕಿಂತಲೂ ಪ್ರತಿಬಿಂಬವು ಬೇರೆ ವಸ್ತುವಲ್ಲ. ಚಾಕ್ಷುಷತೇಜಸ್ಸು ಸ್ವಚ್ಛದ್ರವ್ಯದಲ್ಲಿ ಹೊಡೆಯಲ್ಪಟ್ಟು ಹಿಂತಿರುಗಿ ಬಿಂಬವನ್ನೇ ಗ್ರಹಿಸುವುದರಿಂದ ತನ್ನ ಮುಖವನ್ನೇ ತಾನು ಗ್ರಹಿಸಿದಂತಾಯಿತು ಎಂದು ಇತರರ ಅಭಿಪ್ರಾಯ. ಈ ದರ್ಶನದ ಅಭಿಪ್ರಾಯದಲ್ಲಿ ಬಿಂಬದಿಂದ ಬಿಂಬಾಧೀನಸ್ಥಿತಿಗತಿಯುಳ್ಳ ಪ್ರತಿಬಿಂಬವೆಂಬ ಬೇರೆ ವಸ್ತು ದರ್ಪಣ ಮೊದಲಾದ ಸ್ವಚ್ಛದ್ರವ್ಯಗಳಲ್ಲಿ ಸಾಮಗ್ರೀ ವಿಶೇಷದಿಂದ ಉದಯಿಸುವುವು. ಆದುದರಿಂದಲೇ ಬಿಂಬಕ್ಕಿಂತಲೂ ಪ್ರತಿಬಿಂಬದಲ್ಲಿ ಆಕಾರ,

ವ್ಯತ್ಯಾಸ, ದಿಗ್ವ್ಯತ್ಯಾಸ, ಪಾರ್ಶ್ವವ್ಯತ್ಯಾಸ ಮೊದಲಾದುವು ಉಪಪನ್ನಗಳಾಗುವುವು. ಹೀಗೆ ಸೂರ್ಯಚಂದ್ರರ ಪ್ರತಿಬಿಂಬಗಳು ಜಲತರಂಗಗಳಲ್ಲಿ ಅನಂತಗಳಾಗಿ ತೋರುವುವು. ಇವುಗಳೂ ಸಹ ಸಾಮಗ್ರೀ ವಿಶೇಷದಿಂದ ಉದಯಿಸಿ ವಿಲಯವಾಗುವುದೆಂದು ನಿರ್ಣಯ ವಿರುವುದು. ಛಾಯಾ ವಿಷಯದಲ್ಲೂ ಇದೇ ನ್ಯಾಯ.

ನಿತ್ಯವಸ್ತುಗಳು ಪರಮಾತ್ಮನಿಗೆ ನಿತ್ಯಪ್ರತಿಬಿಂಬಗಳಾಗಿಯೇ ಇರುವುವು. ಹೀಗೆ ಜೀವಾತ್ಮರಲ್ಲೇ ಉಚ್ಚವಸ್ತುವಿಗೆ ನೀಚವಸ್ತು ನಿತ್ಯಪ್ರತಿಬಿಂಬವೆಂದು ನಿರ್ಣಯವಿರುವುದು. ಇದರಿಂದಲೂ ವಸ್ತುಗಳು ಒಡೆಯಲ್ಪಡುವುವು.

ಆದರೂ ಇದರಿಂದ ಜೀವಾತ್ಮಪಾರತಂತ್ರ್ಯ ವಿಷಯದಲ್ಲಿ ಇದಕ್ಕಿಂತಲೂ ಲೋಕದಲ್ಲಿ ಉದಾಹರಣೆಯಿಲ್ಲ. ವಿಶಿಷ್ಟಾದ್ವೈತದಲ್ಲಿ ಶರೀರಾತ್ಮಭಾವದಿಂದ ಪಾರತಂತ್ರ್ಯನಿರೂಪಣೆಯಿರುವುದು. ಅದಕ್ಕಿಂತಲೂ ಇದು ಅತ್ಯತಿಶಯವಾಗಿರುವುದು. ಇಂತಹ ಬಿಂಬ ಪ್ರತಿಬಿಂಬ ಭಾವಮನನದಿಂದ ಜೀವಾತ್ಮನು ತನ್ನ ಸ್ವರೂಪವನ್ನು ಎಂತಹ ಭೃತ್ಯಾನುಭೃತ್ಯಭಾವದಲ್ಲಿ ತಿಳಿಯಬೇಕೆಂದು ಯೋಚಿಸಿದರೆ, ವಿನಯವಿಷಯದಲ್ಲಿ ಇದಕ್ಕಿಂತಲೂ ಹೆಚ್ಚಾಗಿ ಹೇಳಲು ಸಾಧ್ಯವಿಲ್ಲವೆಂದು ನಿರ್ಣಯವಾಗುವುದು. ಈ ಬಿಂಬ ಪ್ರತಿಬಿಂಬ ವಿಚಾರವು 'ಶ್ಲೋಕವಾರ್ತಿಕ'ವೆಂಬ ಗ್ರಂಥದಲ್ಲಿ ಕುಮಾರಿಲ ಭಟ್ಟಾಚಾರ್ಯರಿಂದ ಅನುವದಿಸಲ್ಪಟ್ಟಿರುವುದು. ಅಲ್ಲಿ ಪ್ರತಿಬಿಂಬವು ಬೇರೊಂದು ವಸ್ತುವಾಗಿ ಉದಯಿಸುವುದೆಂದು ಜೈನರು ಹೇಳುತ್ತಾರೆಂಬ ಅಭಿಪ್ರಾಯವಿರುತ್ತದೆ.

ಹೀಗೆ ಭೇದಗಳು ವಿವಿಧವಿಚಿತ್ರರೂಪಗಳಿಂದ ಅನಂತಾಸಂಖ್ಯಾತಗಳಾದರೂ ಐದು ವಿಧ ರಾಶಿಯಿಂದ ಐದು ವಿಧ ಭೇದಗಳೆಂದು ಅಂಗೀಕರಿಸಲ್ಪಟ್ಟಿರುವುವು. ಜೀವೇಶ್ವರಭೇದ, ಪರಸ್ಪರ ಜೀವಭೇದ, ಜಡೇಶ್ವರಭೇದ, ಜಡಜೀವಭೇದ, ಪರಸ್ಪರ ಜಡಭೇದ ಎಂದು ಪ್ರಪಂಚವು ಪಂಚಪ್ರಕಾರವಾದ ಭೇದರೂಪವಾಗಿರುವುದು. ಹೀಗೆ ಭೇದನಿರೂಪಣಕ್ಕೆ ಪ್ರಯೋಜನವೇನೆಂದರೆ, ಇಲ್ಲಿ ಜೀವೇಶ್ವರಜ್ಞಾನವಿಲ್ಲದೆ ತಾನೇ ಈಶ್ವರನೆಂಬ ಭಾವನೆ ಬಂದರೆ, ಮಹಾರಾಜಭೃತ್ಯನು ತಾನೇ ಮಹಾರಾಜನೆಂದು ತಿಳಿದ

ಕೊಂಡು ರಾಜನ ವೇಷವನ್ನು ಧರಿಸಿ ವ್ಯಾಪಾರಗಳನ್ನು ಮಾಡತೊಡಗಿದರೆ, ಅವನಿಗೆ ಆಗತಕ್ಕ ಗತಿಯೇ ಇವನಿಗೂ ಆಗುವುದು. ತಾನು ದಾಸನೆಂದು ರಾಜಭೃತ್ಯನು ತಿಳಿದು ಸ್ವಾಮಿಭಕ್ತನಾಗಿ ರಾಜಸೇವಾಸಕ್ತನಾಗಿದ್ದರೆ ರಾಜಾನುಗ್ರಹಕ್ಕೆ ಪಾತ್ರನಾಗಿ ಸಕಲ ಭೋಗವನ್ನೂ ಅನುಭವಿಸುವನು. ಹೀಗೆ ಪರಮಾತ್ಮಭೃತ್ಯನೆಂದು ಭಾವಿಸಿ ಅವನ ಆರಾಧನೆಯಲ್ಲಿ ಸಕಲಸಂಪತ್ತನ್ನನುಭವಿಸುವುದಕ್ಕೆ ಈ ಭೇದಜ್ಞಾನವು ಮೂಲಕಾರಣ.

ಜಡಜೀವಭೇದಜ್ಞಾನವಿಲ್ಲದಿದ್ದರೆ ದೇಹಾತ್ಮಭ್ರಾಂತಿಯಿಂದ ಅನರ್ಥಗಳು ಬರುವುವು. ದೇಹಕ್ಕೆ ಹಿಂದಿಲ್ಲ, ಮುಂದಿಲ್ಲ ಮತ್ತು ಪುಣ್ಯಪಾಪಗಳಿಂದ ಉಪಯೋಗವಿಲ್ಲವೆಂದು ಭಾವಿಸಿ ತಾನೂ ಕೆಟ್ಟು ಲೋಕವನೂ ಕೆಡಿಸುವನು. ಇಂತಹ ನಾಸ್ತಿಕನು ಇಹವೂ ಪರವೂ ಇಲ್ಲದೆ ನಿತ್ಯದುಃಖಿಯಾಗುವನು. ದೇಹಾತ್ಮವಿವೇಕವಿದ್ದರೆ ತಾನೂ ಕೃತಾರ್ಥನಾಗಿ ಪ್ರಪಂಚವನ್ನೂ ಕೃತಾರ್ಥಗೊಳಿಸಿ ಶಾಶ್ವತಾನಂದಭಾಗಿಯಾಗುವನು. ಇದೇ ಸಕಲ ದರ್ಶನಗಳ ಸಾರಾಂಶ. ಹೀಗೆಯೇ ಇತರ ಭೇದಜ್ಞಾನಗಳ ಪ್ರಯೋಜನವನ್ನು ತಿಳಿದುಕೊಳ್ಳಬೇಕು.

ಇಲ್ಲಿ ಈಶ, ಜೀವ, ಜಡ ಎಂದು ಮೂರೇ ಪ್ರತಿಯೋಗಿಗಳು. ಸಾಮಾನ್ಯವಾಗಿ ಮೂರೇ ಭೇದಗಳಾಗುವುವು. ಪ್ರತಿವಸ್ತುವೂ ಪ್ರತಿಯೋಗಿಯಾದರೆ ಅನಂತಾಸಂಖ್ಯಾತಗಳಾಗುವುವು. ಆದರೂ ಸಕಲ ಭೇದಗಳೂ ಪಂಚವಿಧಗಳಾಗಿ ಸಂಗ್ರಹಿಸಲ್ಪಡುವುವು. ಜೀವೇಶಭೇದವೆಂದರೆ ಜೀವ, ಈಶ ಇವುಗಳಲ್ಲಿರುವ ಜೀವ ಪ್ರತಿಯೋಗಿಕ, ಈಶ್ವರಪ್ರತಿಯೋಗಿಕ ಭೇದಗಳೆಲ್ಲವೂ ಸಂಗ್ರಹಿಸಲ್ಪಡುವುವು. ಹೀಗೆ ಸಂಗ್ರಹವೆಂಬ ರಾಶಿಗಳು ಐದು ವಿಧವಾದುದರಿಂದ ಪಂಚರಾಶಿ ಮಾಡಿ ತಿಳಿಯಬೇಕೆಂಬ ಭಾವವು. ಸಕಲ ಭೇದಗಳೂ ಇವುಗಳಲ್ಲಿ ಅಡಗಿರುವುವು.

ಈ ರೀತಿ ಭೇದನಿರೂಪಣಕ್ಕೆ ಮುಖ್ಯವಾಗಿ ವ್ಯವಹಾರನಿರ್ವಾಹವನ್ನು ಸುಗಮವಾಗಿ ಶಿಕ್ಷಿಸುವುದು ಪ್ರಯೋಜನವಾಗಿದ್ದರೂ ಅಭೇದಸಿದ್ಧಾಂತವನ್ನು ಬಹುವಿಧವಾಗಿ ನಿರಾಕರಿಸುವುದರಲ್ಲಿ ದೃಷ್ಟಿಯಿದೆಯೆಂದು ಸ್ಪಷ್ಟವಾಗಿ ಸೂಚಿತವಾಗುತ್ತದೆ. ಅಭೇದದರ್ಶನದಲ್ಲಿ ಯಾವ ಯಾವ ಅಂಶಗಳಲ್ಲಿ ಅಭೇದಮಾರ್ಗವಿರುವುದೋ ಅವುಗಳೆಲ್ಲವೂ ಭೇದಮಾರ್ಗದಲ್ಲಿ ಪರ್ಯವಸಾನಮಾಡಲ್ಪಟ್ಟಿರುವುವು.

ಸಾಮಾನ್ಯವೆಂಬ ಜಾತಿರೂಪವಸ್ತು ಅನೇಕ ವ್ಯಕ್ತಿಗಳಲ್ಲಿ ಒಂದಿರ ಬೇಕು. ಇಲ್ಲದಿದ್ದರೆ ಸಾಮಾನ್ಯವಾಗಿ ಹೇತುಸಾಧ್ಯಗಳಿಗೆ ವ್ಯಾಪ್ಯವ್ಯಾಪಕ ಭಾವಗಳು ತಿಳಿಯುವುದಿಲ್ಲ. ಅನುಮಾನವು ಪ್ರಮಾಣವಾಗಲಾರದು. ಮತ್ತು ಶಬ್ದಪ್ರಮಾಣಕ್ಕೆ ಮುಖ್ಯವಾಗಿ ಬೇಕಾಗಿರುವುದು ಪದಪದಾರ್ಥ ಗಳಿಗೆ ವಾಚ್ಯವಾಚಕಭಾವಸಂಬಂಧವು. ಅದು ಸಾಮಾನ್ಯರೂಪವಾಗಿ ಗ್ರಹಿಸಲ್ಪಟ್ಟಿದ್ದರೇಯೇ ವಿದ್ವಾಂಸರಾಗುವರು. ಮತ್ತು ಲೌಕಿಕವೈದಿಕ ಸಕಲವ್ಯವಹಾರಕ್ಕೂ ಕಾರ್ಯಕಾರಣಸಂಬಂಧಜ್ಞಾನ ಬೇಕು. ಅದು ಅನುಗತರಾದ ಅನೇಕ ವ್ಯಕ್ತಿಗಳಲ್ಲಿರುವ ಸಾಮಾನ್ಯವೆಂಬ ಒಂದು ವಸ್ತುವಿ ಲ್ಲದಿದ್ದರೆ ತೊಂದರೆಯಲ್ಲವೇ ? ಎಂಬ ಶಂಕೆ ಬರುತ್ತದೆ. ಅದಕ್ಕೆ ಸಮಾ ಧಾನವಿದು. ಅನುಗತವಾದ ಜಾತಿ ಆವಶ್ಯವಿಲ್ಲ. ಒಂದು ವ್ಯಕ್ತಿಯಲ್ಲಿ ವ್ಯಾಪ್ತಿ ಗೃಹೀತವಾದರೆ ಅದಕ್ಕೆ ಸದೃಶವಾದ ಸಕಲ ವ್ಯಕ್ತಿಗಳಲ್ಲೂ ವ್ಯಾಪ್ತಿ ಗೃಹೀತ ವಾದ ಹಾಗಾಯಿತು. ಹಾಗೆಯೇ ವಾಚ್ಯವಾಚಕಭಾವ, ಕಾರ್ಯಕಾರಣ ಭಾವ ಮೊದಲಾದ ವಿಷಯಗಳೂ ಸಾದೃಶ್ಯದಿಂದ ತಿಳಿಯಲ್ಪಡುವುವು. ಸಾದೃಶ್ಯವು ಅನುಗತವಲ್ಲದಿದ್ದರೂ ನಿರೂಪ್ಯನಿರೂಪಕಭಾವದಿಂದ ಅನುಗತ ವಾಗಿದ್ದರೆ ಯಾವ ಪ್ರಯೋಜನವೋ, ಹಾಗೆಯೇ ಇಲ್ಲಿಯೂ ಇರುವು ದೆಂದು ತಿಳಿಯುವರು.

ಆದರೆ ಇಲ್ಲಿ ಈಶವು ಜ್ಞಾಪಕಬರುತ್ತದೆ. ಸಾಮಾನ್ಯ, ಸಾದೃಶ್ಯ ಇವುಗಳು ಬೇರೆ ಪದಾರ್ಥವೆಂಬಭಿಪ್ರಾಯದಿಂದ ಹೀಗೆ ಹೇಳಬೇಕಾಗುತ್ತದೆ. ಸಾಂಖ್ಯಸಿದ್ಧಾಂತದಲ್ಲಿ ಜಾತಿ, ಸಾಮಾನ್ಯ, ಸಾದೃಶ್ಯ ಇವುಗಳು ಒಂದೇ ಪದಾರ್ಥವೆಂದು ನಿರ್ಣಯ, ಹಾಗಾದರೆ ಶಬ್ದಭೇದವೇ ವಿನಾ ವಸ್ತುಭೇದ ವಿಲ್ಲವೆಂದು ಪರ್ಯವಸಾನ.

ಮತ್ತು ದ್ರವ್ಯ, ಗುಣ, ಕರ್ಮ ಮೊದಲಾದ ವಸ್ತುಗಳಲ್ಲಿ ಗುಣ ಕರ್ಮ ಮೊದಲಾದುವು, ದ್ರವ್ಯಗಳು ನಿತ್ಯಗಳಾಗಿದ್ದರೆ, ನಿತ್ಯಗಳಾಗುವುವು. ನಿತ್ಯವಾದ ಕೆಲವು ದ್ರವ್ಯಗಳಲ್ಲಿ ಕೆಲವು ಗುಣ ಮೊದಲಾದುವು ಹೊಸದಾಗಿ ಕಾಣಬಂದರೂ ಸೂಕ್ಷ್ಮಸ್ಥೂಲಭಾವದಿಂದ ಅಭಿವ್ಯಕ್ತಿಯಾಗುವುದೆಂದು ತಿಳಿಯಬೇಕು. ದ್ರವ್ಯಗಳು ಅನಿತ್ಯಗಳಾಗಿದ್ದರೆ ಗುಣಾದಿಗಳೂ ಅನಿತ್ಯಗ ಳಾಗಿರುವುವು. ಕೆಲವು ಗುಣಾದಿಗಳು, ದ್ರವ್ಯಗಳು ಸ್ಥಿರಗಳಾಗಿದ್ದರೂ ಅಸ್ಥಿ

ರೆಗಳಾಗುವುವು, ಆದುದರಿಂದ ಗುಣಾದಿಗಳಲ್ಲಿ ಯಾವದ್ದ್ರವ್ಯಭಾವಿ, ಅಯಾವದ್ದ್ರವ್ಯಭಾವಿ ಎಂದರೆ ದ್ರವ್ಯವಿರುವವರೆಗೆ ಇರತಕ್ಕವು, ಬದಲಾವಣೆಯಾಗತಕ್ಕುವು ಎಂದು ಎರಡು ವಿಧಗಳಾಗುವುವು. ಬದಲಾವಣೆಯಾಗದಿರುವ ಗುಣಾದಿಗಳು ದ್ರವ್ಯಸ್ವರೂಪದಲ್ಲೇ ಸೇರಿ ಭೇದವಿಲ್ಲದಂತಹವುಗಳಾಗಿರುವುವು. ವ್ಯತ್ಯಾಸವಾಗತಕ್ಕವುಗಳು ಭಿನ್ನಗಳಾಗಿಯೂ ಅಭಿನ್ನಗಳಾಗಿಯೂ ಇರುವುವು. ಇದರಿಂದ ದ್ರವ್ಯಕ್ಕೂ ಗುಣಾದಿಗಳಿಗೂ ಅಭೇದವುಂಟು. ಭೇದಾಭೇದವೂ ಉಂಟೆಂದು ವಿಭಾಗವಾಯಿತು. ಆದರೆ ಅಭೇದಪಕ್ಷದಲ್ಲಿ "ಪಟದಲ್ಲಿ ಶೌಕ್ಲವು ಇದೆ" ಇದು ಮೊದಲಾದ ಭೇದವ್ಯವಹಾರವು ಹೇಗೆಂದು ಕೇಳಿದರೆ, ವಿಶೇಷವೆಂಬ ಒಂದು ಬೇರೆ ಪದಾರ್ಥವು ಸ್ವೀಕರಿಸಲ್ಪಟ್ಟು ಇರುವುದು. ಅದು ಸಕಲ ಪದಾರ್ಥಗಳಲ್ಲೂ ಬೇಕಾದಷ್ಟು ಇರುವುದು. ಅವುಗಳ ಸಾಮರ್ಥ್ಯದಿಂದ ಅಭಿನ್ನವಾಗಿರುವುವು ; ಭಿನ್ನವಾಗಿ ವ್ಯವಹರಿಸಲ್ಪಡುವುವು. ಇದಕ್ಕಾಗಿಯೇ ವಿಶೇಷವೆಂಬುದಿರುವುದು. ಆ ವಿಶೇಷವೂ ದ್ರವ್ಯವೂ ಒಂದಾದರೂ ಭೇದವ್ಯವಹಾರಕ್ಕೂ ಬೇರೆ ವಿಶೇಷ ಬೇಕಾಗಿಲ್ಲ. ಸ್ವಪರನಿರ್ವಾಹಕರೀತಿಯಿಂದ ತನಗೂ ಭೇದವ್ಯವಹಾರಕ್ಕೆ ಕಾರಣವಾಗಿದ್ದುಕೊಂಡು ಇತರ ವಸ್ತುಗಳ ಭೇದವ್ಯವಹಾರಕ್ಕೂ ಕಾರಣಗಳಾಗಿರುವುವು ಎಂದು ಸಿದ್ಧಾಂತ.

ಇದರಿಂದ ಗುಣಗುಣಿಗಳಿಗೆ ಅಭೇದವನ್ನೂ ಪಾತಂಜಲರಂತೆ ಭೇದಾಭೇದವನ್ನೂ ಅಂಗೀಕರಿಸಿದಂತಾಯಿತು. ತಾರ್ಕಿಕರಂತೆ ಅತ್ಯಂತ ಭೇದಪಕ್ಷವಿಲ್ಲ. ದರ್ಶನದೃಷ್ಟಿಯಿಂದ ಇದು ಮಧ್ಯಸ್ಥಸಿದ್ಧಾಂತವೆಂದು ತಿಳಿದುಬರುವುದು.

ಆದರೂ ಅದ್ವೈತಸಿದ್ಧಾಂತದಲ್ಲಿ ಬ್ರಹ್ಮನೇ ಪರಮಾರ್ಥವಾದ ವಸ್ತುವೆಂದೂ ಅದು ನಿರ್ವಿಶೇಷವೆಂದೂ ಅಭಿಪ್ರಾಯವಿರುವುದು. ಅದಕ್ಕೆ ಪ್ರತಿಪಕ್ಷವಾಗಿ ಸಕಲ ಪದಾರ್ಥಗಳೂ ಪರಮಾರ್ಥಗಳು, ಸಕಲವೂ ಸವಿಶೇಷವೆಂದು ಅಭಿಪ್ರಾಯವನ್ನು ಪ್ರಸಿದ್ಧಪಡಿಸುವ ಸಿದ್ಧಾಂತವಿದೆಂದು ಅಭಿಪ್ರಾಯವಾಗುವುದು. "ಸರ್ವಂ ಹಿ ವಸ್ತುಜಾತಂ ಪ್ರತೀತಿವ್ಯವಸ್ಥಾಪ್ಯಮ್" ಅಬಾಧಿತಪ್ರತೀತಿಯಿಂದ ವಸ್ತುವ್ಯವಸ್ಥೆಯೆಂಬ ನ್ಯಾಯವು ಸರ್ವರಿಗೂ ಸಮ್ಮತವಾಗಿರುವುದು.

ಮುಖ್ಯವಾಗಿ ಈ ಸಿದ್ಧಾಂತದಲ್ಲಿರುವ ಅಂಶವು ತಾರತಮ್ಯವು, ಅಂದರೆ ಉಚ್ಚನೀಚಭಾವವು. ಇದು ಜೀವಾತ್ಮರೆಂಬ ವಸ್ತುಗಳಿಗೆ ಶಾಶ್ವತ ವಾಗಿ ವ್ಯತ್ಯಾಸವಾಗದೆ ಇರುವುದು. ಈ ನಿಷ್ಕರ್ಷೆ ಬಂದರೆ ಪ್ರತಿಜೀವನೂ ತನ್ನ ಯೋಗ್ಯತೆಯಿಷ್ಟೇ ಎಂದು ತಿಳಿದು ಅದರಲ್ಲೇ ತೃಪ್ತನಾಗಿ ದುರಾಶೆ ಯಿಲ್ಲದೆ, ಅಸೂಯೆಯಿಲ್ಲದೆ, ಕಾಮಕ್ರೋಧಗಳಿಗೆ ಅವಕಾಶವಿಲ್ಲದೆ. ಶಾಂತ ನಾಗಿರುವುದಕ್ಕೆ ಮೂಲಕಾರಣವಾಗಿರುವುದೆಂದು ತಾತ್ಪರ್ಯ. ತಾರತಮ್ಯ ವಿಲ್ಲದೆ ಯಾರುಬೇಕಾದರೂ, ಯಾವ ಅಂತಸ್ಥಿತಿಗೆ ಬೇಕಾದರೂ ಬರ ಬಹುದು ಎಂಬ ಭಾವವು ಬಂದರೆ ಇದಕ್ಕಿಂತಲೂ ದುರಾಶಾಕಾರಣವು ಬೇರೆ ಬೇಕಾಗಿಲ್ಲವೆಂದು ಹೇಳಬಹುದು. ಯಾರುಬೇಕಾದರೂ ಈಶ್ವರನಾಗ ಬಹುದೆಂಬ ಸಿದ್ಧಾಂತದಲ್ಲಿ ಕಲಹವನ್ನು ತಿಳಿದು ಈಶ್ವರವಾದಿಗಳು ನಿತ್ಯೈ ಕೇಶ್ವರವಾದವನ್ನು ಆಶ್ರಯಿಸಿರುವರು. ಸರ್ವರೂ ಸಮರೆಂಬ ಭಾವನೆ ಯಲ್ಲೂ ಸಾಮಾನ್ಯವಾಗಿ ಮನಸ್ಸು ತೃಪ್ತಿಯಿರುವುದಿಲ್ಲ. ತಾನು ಹೆಚ್ಚಾಗಿರ ಬೇಕೆಂಬ ಅಭಿಪ್ರಾಯವು ಸರ್ವಾನುಭವಸಿದ್ಧವು. ಆದುದರಿಂದ ತನ್ನ ಸ್ವರೂ ಪನಿರ್ಣಯದಿಂದ ಬರುವ ತೃಪ್ತಿ ಎಲ್ಲಕ್ಕಿಂತಲೂ ಉತ್ತಮವಾಗಿರುವುದೆಂಬ ಸಾರಾಂಶವು ತೋರಿಬರುವುದು. ಮತ್ತು ಬಿಂಬ ಪ್ರತಿಬಿಂಬ ಭಾವಾನು ಸಂಧಾನದಿಂದ ನೈಚ್ಯಾನುಸಂಧಾನವು ಸರ್ವೋತ್ತಮವಾಗಿರುವುದು.

ಹೀಗೆ ಜೀವಾತ್ಮರಲ್ಲಿ ಉತ್ತಮ ಮಧ್ಯಮಾಧಮಭೇದದಿಂದ ಮುಕ್ತಿ ಯೋಗ್ಯರು, ತಮೋಯೋಗ್ಯರು, ನಿತ್ಯಸಂಸಾರಿಗಳೆಂದು ಭೇದವಿರುವುದು. ಮೊದಲನೆಯವರು ಸಾಧನಾನುಷ್ಠಾನದಿಂದ ಮುಕ್ತರಾಗಿ ನಿತ್ಯಾನಂದವ ನ್ನನುಭವಿಸುತ್ತಿರಬಹುದು. ಎರಡನೆಯವರು ನಿತ್ಯನರಕವೆಂಬ ತಮೋ ಲೋಕಪ್ರಾಪ್ತಿಗೆ ಸಾಧನವನ್ನು ಸಂಪಾದಿಸಿಕೊಂಡು ನಿತ್ಯದುಃಖಾನುಭವಕ್ಕೆ ಸಿದ್ಧರಾಗುವರು. ಮೂರನೆಯವರು ನಿತ್ಯಸಂಸಾರವೆಂಬ ನಿತ್ಯಸುಖದುಃಖ ಮಿಶ್ರಾನುಭವಸ್ಥಾನಗಳಲ್ಲಿ ಸಾಧನಾನುಷ್ಠಾನದಿಂದ ಮಿಶ್ರಾನುಭವಕ್ಕೆ ಸಿದ್ಧ ರಾಗುವವರು.

ಈ ವಿಧವಾದ ಅನುಭವಗಳು ಅವರಿಗೆ ಶಾಶ್ವತವಾಗಿ ಪುನರಾವೃತ್ತಿ ಯಿಲ್ಲದೆ ನಿಂತುಬಿಡುವುವು. ಆದುದರಿಂದ ಮೂವರನ್ನೂ ಮುಕ್ತರೆಂದು ಬರೆಯಬಹುದು. ಆದರೆ ಸಾಧನವೂ ಫಲವೂ ಬೇರೆಬೇರೆಯಾಗಿರುವುವು.

ಇಂತಹ ಅಂಶವನ್ನು ಮನನಮಾಡಿದರೆ, ಈಗಿಲ್ಲ ನಾಳೆಯಾದರೂ ಸನ್ಮಾರ್ಗಕ್ಕೆ ಬಂದು ಸುಖವನ್ನನುಭವಿಸಬಹುದೆಂಬ ಸಂದರ್ಭವೇ ಮಧ್ಯಮಾಧವರಿಗೆ ಇಲ್ಲವೆಂಬ ಭಯ ಸಹಜವಾಗಿ ಯೋಚನಾಪರರಿಗೆ ಉದಯಿಸುವುದು. ಹೇಗಾದರೂ ನಾವು ಯಥಾಶಕ್ತಿ ಸನ್ಮಾರ್ಗದಲ್ಲಿದ್ದು ನಿಧಾನವಾಗಿಯಾದರೂ ಶಾಶ್ವತ ಸುಖಾನುಭವಕ್ಕೆ ಯೋಗ್ಯರಾಗೋಣವೆಂಬ ಅಭಿಪ್ರಾಯವು ಉದಯಿಸುವುದು. ಇದುವರೆಗೂ ಅಸನ್ಮಾರ್ಗದಲ್ಲಿದ್ದುದಕ್ಕಾಗಿ ಭಗವಂತನಲ್ಲಿ ಕ್ಷಮೆ ಬೇಡಿಕೊಳ್ಳೋಣವೆಂಬ ಭಾವವೂ ಲೋಕನ್ಯಾಯದಿಂದ ಬರುವುದು. ಆದುದರಿಂದ ಸರ್ವರೂ ಕಥಂಚಿತ್ ಯಾವಾಗಲಾದರೂ ಮೋಕ್ಷವನ್ನು ಪಡೆಯಬಹುದೆಂಬ ಸಿದ್ಧಾಂತಕ್ಕಿಂತಲೂ ಕಟ್ಟುನಿಟ್ಟಾದ ಈ ಸಿದ್ಧಾಂತ ಜಾಗ್ರತೆಯಾಗಿ ಸನ್ಮಾರ್ಗಪ್ರವರ್ತಕವಾಗಿರುವುದೆಂಬ ಗುಣಾಂಶವು ಸ್ಪಷ್ಟವಾಗುವುದು.

**ಪದಾರ್ಥನಿರೂಪಣ**

ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ವಿಶಿಷ್ಟ, ಅಂಶಿ, ಶಕ್ತಿ, ಸಾದೃಶ್ಯ, ಅಭಾವ ಎಂದು ಪದಾರ್ಥಗಳು ಹತ್ತು. ಪರಮಾತ್ಮ, ಲಕ್ಷ್ಮಿ, ಜೀವಾತ್ಮ, ಅವ್ಯಾಕೃತಾಕಾಶ, ಪ್ರಕೃತಿ, ಗುಣತ್ರಯ, ಮಹತ್ತತ್ತ್ವ, ಅಹಂಕಾರತತ್ತ್ವ, ಬುದ್ಧಿ, ಮನಸ್ಸು, ಇಂದ್ರಿಯ, ಮಾತ್ರಾ, ಭೂತ, ಬ್ರಹ್ಮಾಂಡ, ಅವಿದ್ಯೆ, ವರ್ಣ, ಅಂಧಕಾರ, ಕಾಲ, ವಾಸನಾ, ಪ್ರತಿಬಿಂಬ ಎಂದು ದ್ರವ್ಯಗಳು ಇಪ್ಪತ್ತು. ರೂಪ, ರಸ, ಗ್ರಂಥ, ಸ್ಪರ್ಶ, ಸಂಖ್ಯಾ, ಪರಿಮಾಣ, ಸಂಯೋಗ, ವಿಭಾಗ, ಪರತ್ವ, ಅಪರತ್ವ, ಗುರುತ್ವ, ದ್ರವತ್ವ, ಲಘುತ್ವ, ಮೃದುತ್ವ, ಕಠಿನತ್ವ, ಸ್ನೇಹ, ಶಬ್ದ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ, ಸಂಸ್ಕಾರ, ಆಲೋಕ, ಶಮ, ದಮ, ದಯೆ, ತಿತಿಕ್ಷೆ, ಭಯ, ಬಲ, ಲಜ್ಜೆ, ಗಾಂಭೀರ್ಯ, ಸೌಂದರ್ಯ, ಔದಾರ್ಯ, ಸ್ಥೈರ್ಯ, ಶೌರ್ಯ, ಸೌಭಾಗ್ಯವೆಂದು, ಸಾಮಾನ್ಯವಾಗಿ ನಲವತ್ತು ವಿಧ ಗುಣಗಳು. ಇಲ್ಲಿ ದ್ವೇಷ ಮೊದಲಾದುವು ದೋಷಗಳಾದರೂ ಅಸಭ್ಯರ ವಿಷಯದಲ್ಲಿದ್ದರೆ ಗುಣವೆಂದೇ ನಿರ್ಣಯ. ಪ್ರಾಯಃ ಈ ಗುಣಗಳು ಪರಮಾತ್ಮ ಲಕ್ಷ್ಮಿ ಜೀವಾತ್ಮ ಸ್ವರೂಪಭೂತಗಳಾಗಿಯೂ

ಇರುವುದರಿಂದ ಸ್ವರೂಪ ಭೂತಬಾಹ್ಯವೆಂಬ ವಿಭಾಗವು, ನಿತ್ಯಾನಿತ್ಯ ವಿಭಾಗವು, ಶುಭಾಶುಭ ವಿಭಾಗವು, ಸದಸಜ್ಜೀವಾನುಗುಣ ವಿಭಾಗವು. ಬದ್ಧ ಮುಕ್ತದಶಾಭೇದದಿಂದ ವಿಭಾಗವು. ಇವರುಗಳ ಯೋಗ್ಯತಾ ತಾರತಮ್ಯಾನುಗುಣವಾಗಿ ತಾರತಮ್ಯವೂ ತಿಳಿಯಲ್ಪಡಬೇಕು.

ವಿಹಿತ, ನಿಷಿದ್ಧ, ಉದಾಸೀನ ಎಂದು ಕರ್ಮವು ಮೂರು ವಿಧ. ಶಾಸ್ತ್ರಾಧಿಕಾರಿಗಳ ಕರ್ಮವೆಲ್ಲವೂ ವಿಹಿತನಿಷಿದ್ಧಗಳಲ್ಲಿ ಸೇರುವುವು. ಚಲನೆಯೆಂಬ ಇತರ ದ್ರವ್ಯಗಳಲ್ಲಿರುವ ಕರ್ಮ ಉದಾಸೀನ.

ಸಾಮಾನ್ಯವು ಜಾತಿ, ಉಪಾಧಿ ಎಂದೆರಡು ಪ್ರಕಾರ. ಆತ್ಮತ್ವ, ಮನುಷ್ಯತ್ವ, ಗೋತ್ವಾದಿಗಳು ಜಾತಿಗಳು. ಸರ್ವಜ್ಞತ್ವ, ಪ್ರಮೇಯತ್ವ, ವಾಚ್ಯತ್ವಾದಿಗಳು ಉಪಾಧಿಗಳು. ಈ ಎರಡೂ ಅನುಗತವ್ಯವಹಾರ ನಿಯಾಮಕಗಳಾಗಿದ್ದಾಗಲೂ ಉಪಾಧಿ ಇತರ ಪದಾರ್ಥನಿರೂಪಣೆಯಿಂದ ನಿರೂಪಣೀಯವಾಗಬೇಕು. ಎಂದರೆ ಪ್ರಮೇಯ ಸ್ವರೂಪವು ತಿಳಿದ ಹೊರತು ಪ್ರಮೇಯತ್ವದ ಸ್ವರೂಪ ತಿಳಿಯದು.

ಭೇದವಿಲ್ಲದಿರುವ ವಸ್ತುವಿನಲ್ಲಿ ಭೇದವ್ಯವಹಾರಕ್ಕೆ ನಿರ್ವಾಹಕವಾಗಿರುವುದು ವಿಶೇಷವು. ಇದು ಆಶ್ರಯಕ್ಕೂ ತನಗೂ ಸ್ವತಃ ಭೇದನಿರ್ವಾಹಕವಾಗಿದ್ದು ಆಶ್ರಯದಲ್ಲಿರುವ ಗುಣಕ್ರಿಯಾದಿಗಳಿಗೂ ಆಶ್ರಯಕ್ಕೂ ಭೇದ ವ್ಯವಹಾರ ನಿರ್ವಾಹಕವಾಗಿರುವುದು. ಯಾವ ವಸ್ತುವಿಗೆ ಎಷ್ಟು ವಿಶೇಷಗಳು ಬೇಕೋ ಅಲ್ಲಿ ಅಷ್ಟು ವಿಶೇಷಗಳು ಅಂಗೀಕರಿಸಲ್ಪಡುವುವು.

ವಿಶಿಷ್ಟ, ಅಂಶಿ ಎಂಬ ಎರಡು ಪದಾರ್ಥಗಳು ಅಬಾಧಿತಪ್ರಾಮಾಣಿಕ ವ್ಯವಹಾರದಿಂದ ಅಂಗೀಕರಿಸಲ್ಪಟ್ಟಿರುವುವು.

ಶಕ್ತಿ, ಸಾದೃಶ್ಯ, ಅಭಾವ—ಈ ಮೂರು ಪದಾರ್ಥಗಳೂ ಇತರ ದರ್ಶನಗಳಲ್ಲಿರುವ ಹಾಗೆಯೇ ಪ್ರಾಯಃ ಇಲ್ಲಿಯೂ ಇರುವುವು. ಸಹಜ ಶಕ್ತಿ, ಆಧೇಯಶಕ್ತಿ, ಪದಶಕ್ತಿ—ಈ ಮೂರೂ ಪ್ರಸಿದ್ಧಗಳು. ಪರಮಾತ್ಮ ಅಚಿಂತ್ಯಶಕ್ತಿಯೊಂದಿರುವುದು. ಪದಶಕ್ತಿಯಲ್ಲಿ ಮುಖ್ಯ ಗೌಣಗಳಲ್ಲದೆ ಪರಮುಖ್ಯವೆಂದೊಂದು ಸ್ವೀಕರಿಸಲ್ಪಟ್ಟು ಸಕಲಶಬ್ದವಾಚ್ಯತ್ವವೂ ಪರಮಾತ್ಮನಿಗೆ ಸ್ಥಾಪಿಸಲ್ಪಟ್ಟಿರುವುದು. ಅಭಾವದಲ್ಲಿ ಭೇದವೆಂಬ ಅನ್ಯೋನ್ಯಾಭಾವವು ಆಶ್ರಯಸ್ವರೂಪವಾಗಿರುವುದು. ಆತ್ಯಂತಾಭಾವವು ಅಸತ್ಪ್ರತಿ

ಯೋಗಿಕವು. ಶಶಶೃಂಗ, ಗಗನಕುಸುಮ ಮೊದಲಾದ ಅಪ್ರಮಾಣಿಕ ಅಸದ್ವಸ್ತುಗಳ ಅಭಾವವು.

## ದ್ರವ್ಯನಿರೂಪಣ

ಉಪಾದಾನಕಾರಣವಾಗಿರುವುದು ದ್ರವ್ಯಪದಾರ್ಥವು. ಉಪಾದಾನವೆಂದರೆ ಮೂಲಕಾರಣವು. ಇದರ ಕಾರ್ಯವು ಪರಿಣಾಮವೆಂದೂ ಅಭಿವ್ಯಕ್ತಿಯೆಂದೂ ಎರಡು ವಿಧ. ಕೆಲವು ದ್ರವ್ಯಗಳು ಪರಿಣಮಿಸಿ ಬೇರೆಬೇರೆ ದ್ರವ್ಯಗಳಾಗಿ ತೋರುವುವು. ಪ್ರಕೃತಿಯಿಂದ ಮಹದಹಂಕಾರಾಧಿಗಳು ತಂತ್ವಾದಿಗಳಿಂದ ಪಟಾದಿಗಳು—ಉದಾಹರಣೆಗಳು. ಪರಮಾತ್ಮನು ತನ್ನ ರೂಪಾದಿಗಳಿಗೆ ಪರಿಣಾಮ ಕಾರಣವಿಲ್ಲ, ಅಭಿವ್ಯಕ್ತಿಕಾರಣನು. ಅಂದರೆ ಪ್ರದೀಪವು ಅಂಧಕಾರದಲ್ಲಿರುವ ವಸ್ತುಗಳನ್ನು ಪ್ರಕಾಶಪಡಿಸುವ ಹಾಗೆ ಪ್ರಕಾಶಪಡಿಸುವನು. ಆದುದರಿಂದ ಕಾರ್ಯಕಾರಣಭಾವವು ಎರಡು ಪ್ರಕಾರವೆಂದು ನಿರ್ಣಯವು. ಸಾಂಖ್ಯರು ಇವೆರಡನ್ನೂ ಒಂದೇ ಎಂದು ತಿಳಿಯುವರು.

ದ್ರವ್ಯಗಳಲ್ಲಿರುವ ಗುಣಕರ್ಮಸಾಮಾನ್ಯಾದಿಗಳು ನಿತ್ಯದಲ್ಲಿದ್ದರೆ ನಿತ್ಯ ; ಅನಿತ್ಯದಲ್ಲಿದ್ದರೆ ಅನಿತ್ಯವೆಂಬ ವ್ಯವಸ್ಥೆಯಿಲ್ಲದಿದ್ದರೆ ಕೆಲವು ಧರ್ಮಧರ್ಮಿಗಳಿಗೆ ಅಭೇದವನ್ನು ಸ್ವೀಕರಿಸಿರುವುದರಿಂದ ನಿತ್ಯಾನಿತ್ಯವ್ಯವಸ್ಥೆಯಿಲ್ಲದೆ ಹೋಗುವುದು.

ಅವ್ಯಾಕೃತಾಕಾಶವೆಂದೊಂದು ದ್ರವ್ಯವು ಭೂತಾಕಾಶಕ್ಕಿಂತಲೂ ಬೇರೆಯಾಗಿರುವುದು. ಇದೇ ಪ್ರಾಚೀ, ಪ್ರತೀಚೀ ಮೊದಲಾದ ಅಂಶಭೇದವುಳ್ಳದ್ದಾಗಿ ದಿಕ್ ಎಂಬ ವ್ಯವಹಾರಕ್ಕೆ ಗೋಚರವು. ಇದು ಸೃಷ್ಟಿಪ್ರಳಯಕಾಲದಲ್ಲೂ ವಿಕಾರವನ್ನು ಹೊಂದದಿರುವ ಸರ್ವವ್ಯಾಪಕವಾದ ನಿತ್ಯವಸ್ತು. ಸಕಲ ಪ್ರಕೃತಿ ಪ್ರಾಕೃತವಸ್ತುಗಳೂ ಇದರಲ್ಲಿರುವುವು. ಇದು ಭಗವಂತನಿಗೆ ಅಧೀನವಾಗಿ ತನ್ನಲ್ಲೇ ತಾನು ಇರುವಂತಹುದು. ಸೃಷ್ಟಿಕಾಲದಲ್ಲಿ ಸಕಲ ವಸ್ತುಗಳಿಗೂ ಸೃಷ್ಟಿ ಹೇಳಲ್ಪಟ್ಟಿರುವುದರಿಂದ ಪರಾಧೀನವಿಶೇಷಾವ್ಯಾಪ್ತಿಯೆಂಬ ಪರಿಣಾಮವು ನಿತ್ಯವಸ್ತುಗಳಿಗೂ ಇರುವುದು.

ಸಾಕ್ಷಾತ್ತಾಗಿಯೂ ಪರಂಪರೆಯಾಗಿಯೂ ಪ್ರಪಂಚಕ್ಕೆ ಮೂಲಕಾರ

ಣವಾಗಿರುವುದು ಪ್ರಕೃತಿ. ಸರ್ವಜಗತ್ತನ್ನೂ ನಿರ್ಮಾಣಮಾಡುವುದ ರಿಂದ ಇದೇ ಮಾಯೆ ; ನಿತ್ಯವಾಗಿಯೂ ವ್ಯಾಪಕವಾಗಿಯೂ ಪ್ರಪಂಚೋ ಪಾದಾನಕಾರಣವಾಗಿಯೂ ಇರುವುದು. ಸಾಂಖ್ಯಮತದಲ್ಲಿ ಸ್ವತಂತ್ರ ಪ್ರಕೃತಿ ಜಗದುಪಾದಾನವು. ಇಲ್ಲಿ ಪರಮೇಶ್ವರ ಪರತಂತ್ರಪ್ರಕೃತಿ ಉಪಾ ದಾನವು. ಪರಮಾತ್ಮನು ನಿಮಿತ್ತಕಾರಣನು. ಇಂತಹ ಪ್ರಕೃತಿ ಸಂಬಂಧವೇ ಜೀವಾತ್ಮನಿಗೆ ಸಂಸಾರವು. ಪ್ರಕೃತಿಯ ದರ್ಶನವೇ ಸಂಸಾರವೆಂದು ಸಾಂಖ್ಯಾದಿಗಳ ಅಭಿಪ್ರಾಯವು. ಇದರ ಪರಿಣಾಮವಾದ ಸೂಕ್ಷ್ಮರೂಪ ದಲ್ಲಿರುವ ಇಂದ್ರಿಯಪ್ರಾಣಸಂಘಾತಗಳು ಪ್ರತಿಜೀವಾತ್ಮನಿಗೂ ಲಿಂಗಶರೀರ ವಾಗಿರುವುದು. ಇದರ ಸಂಬಂಧವಿನಾಶವೇ ಲಿಂಗಭಂಗ ಮತ್ತು ಸ್ವಸ್ವರೂಪ ಸ್ಥಿತಿ. ತ್ರಿವಿಧಜೀವರ ಮುಕ್ತಿಯಲ್ಲೂ ಲಿಂಗಭಂಗವುಂಟು.

ಪ್ರಕೃತಿಯ ಪರಿಣಾಮವೇ ಸತ್ತ್ವರಜಸ್ಸು ತಮಸ್ಸೆಂಬ ಗುಣಸಮು ದಾಯ ದ್ರವ್ಯವು. ಗುಣಗಳ ವೈಷಮ್ಯಸಾಮ್ಯಗಳಿಂದ ಸೃಷ್ಟಿಸ್ಥಿತಿಲಯ ಗಳು. ಶುದ್ಧಸತ್ತ್ವ ದ್ರವ್ಯವು ಮುಕ್ತರಿಗೆ ಲೀಲಾವಿಗ್ರಹ ಪರಿಗ್ರಹಮೂಲಕ ಉಪಯೋಗವಾಗಿರುವುದು. ಇದರಿಂದ ಮಹತ್ತತ್ತ್ವವು ಉದಯಿಸುವುದು. ಇದು ಚತುರ್ಮುಖನ ದೇಹವೆಂದೂ ವ್ಯವಹಾರವು. ಸಕಲತತ್ತ್ವಗಳಿಗೂ ಆಯಾ ದೇವತೆಗಳು ಅಭಿಮಾನಿಗಳೆಂದು ಹೇಳಲ್ಪಟ್ಟಿರುವುದರಿಂದ ಆಯಾ ತತ್ತ್ವಗಳು ಆಯಾ ದೇವತೆಗಳಿಗೆ ಶರೀರವೆಂದು ವ್ಯವಹರಿಸಲ್ಪಡಬಹುದು. ಇದರಿಂದ ಅಹಂಕಾರತತ್ತ್ವದ ಉದಯವು. ಅದರಿಂದ ಬುದ್ಧಿತತ್ತ್ವೋ ದಯವು. ಈ ಬುದ್ಧಿಪದವು ದ್ರವ್ಯರೂಪವಾದ ತತ್ತ್ವದಲ್ಲೂ ಗುಣರೂಪ ವಾದ ಜ್ಞಾನದಲ್ಲೂ ಪ್ರಯೋಗಿಸಲ್ಪಡುವುದು.

ಬುದ್ಧಿತತ್ತ್ವದಿಂದ ಮನಸ್ತತ್ತ್ವೋದಯವು. ಮನಸ್ಸು ತತ್ತ್ವ ರೂಪವಾಗಿಯೂ ಇಂದ್ರಿಯರೂಪವಾಗಿಯೂ ಇರುವುದು. ಇಂದ್ರಿಯ ವೆಂಬ ಮನಸ್ಸು ನಿತ್ಯ, ಅನಿತ್ಯವೆಂದು ಎರಡು ವಿಧ. ನಿತ್ಯವೆಂಬ ಮನಸ್ಸು ಸಕಲ ಆತ್ಮತತ್ತ್ವ ಸ್ವರೂಪಭೂತವಾಗಿರುವುದು. ಅನಿತ್ಯವಾದ ಮನೋ ರೂಪೇಂದ್ರಿಯವು ಪ್ರಾಕೃತವು, ಬಾಹ್ಯವು, ಬ್ರಹ್ಮಾದಿಸರ್ವಜೀವಾತ್ಮರಿಗೂ ಸಂಸಾರದಶೆಯಲ್ಲಿ ಸಂಬಂಧಿಸಿರುವುದು. ಇದರಂತೆ ರಾಜಸಾಹಂಕಾರ ಪರಿಣಾಮವಾದ ದಶವಿಧ ಜ್ಞಾನಕರ್ಮೇಂದ್ರಿಯಗಳು, ಪ್ರಾಕೃತೇಂದ್ರಿಯ

ಗಳು ಬಾಹ್ಯಗಳು. ಸಕಲಾತ್ಮಸ್ವರೂಪಭೂತಗಳಾಗಿಯೂ ದಶೇಂದ್ರಿಯ ಗಳಿರುವುವು. ಅವುಗಳಲ್ಲಿ ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸೂ ಸೇರಿ ಸಾಕ್ಷಿಯೆನ್ನಲ್ಪಡುವುವು.

ತಾಮಸಾಹಂಕಾರದ ಪರಿಣಾಮಗಳು ಶಬ್ದಾದಿಪಂಚತನ್ಮಾತ್ರಗಳು. ಅವುಗಳ ಪರಿಣಾಮಗಳು ಆಕಾಶಾದಿಪಂಚಭೂತಗಳು. ಅವುಗಳ ಪರಿಣಾ ಮವೇ ಬ್ರಹ್ಮಾಂಡ. ಮುಕ್ತಾತ್ಮಸ್ವರೂಪಗಳಲ್ಲೂ ಆಕಾಶಾದಿಪಂಚಭೂತ ಗಳ ಸ್ವಭಾವಗಳಿರುವುವು. ಈ ಬ್ರಹ್ಮಾಂಡವು ಐವತ್ತುಕೋಟಿಯೋಜನ ಪರಿಮಾಣವುಳ್ಳದ್ದು. ಇದರೊಳಗೆ ಚತುರ್ದಶಲೋಕಗಳೂ ದೇವಾದಿ ಸಕಲಜೀವಾತ್ಮರೂ ಇರುವರು. ಇದಕ್ಕೆ ಅಭಿಮಾನಿ ಚತುರ್ಮುಖನು, ಒಂದು ಕಲ್ಪದಲ್ಲಿ, ಎಂದರೆ ಸೃಷ್ಟಿಯಲ್ಲಿ ಅನಂತಕೋಟಿ ಬ್ರಹ್ಮಾಂಡಗಳಿಲ್ಲ. ಒಂದೇ ಬ್ರಹ್ಮಾಂಡವು, ಅಸಂತ್ಯ ವ್ಯವಹಾರವು ಪ್ರವಾಹಮೂಲಕವು. ಸೃಷ್ಟಿಕಾಲದಲ್ಲಿ ಸಕಲಜೀವಾತ್ಮ ಸ್ವರೂಪದಲ್ಲೂ ಅನಾದಿಯಾಗಿ ಸೂಕ್ಷ್ಮ ರೂಪದಲ್ಲಿರುವ ಭಾವರೂಪಜ್ಞಾನವೆಂಬ ಅವಿದ್ಯೆ ಸೃಷ್ಟಿಕಾಲದಲ್ಲಿ ಸ್ಥೂಲ ರೂಪವನ್ನು ಹೊಂದುವುದು. ಇದೇ ಸಂಸಾರಮೂಲಕಾರಣವು. ಇದಕ್ಕೆ ಆವರಣಶಕ್ತಿಯಿರುವುದರಿಂದ ತಮ್ಮ ಪದಾರ್ಥದಂತೆ ಇದೊಂದು ದ್ರವ್ಯ ವಾಗಿ ಅಂಗೀಕರಿಸಲ್ಪಟ್ಟಿರುವುದು. ಭಗವಂತನು ಜೀವಾತ್ಮರನ್ನು ಬಂಧಿಸು ವುದಕ್ಕೆ ಇದೇ ಸಹಾಯವಾಗಿರುವುದು.

ವರ್ಣವೆಂದರೆ ಅಕಾರಾದಿ ಅಕ್ಷರಗಳು ಐವತ್ತೊಂದು. ಪ್ರತ್ಯಕ್ಷರವೂ ಸರ್ವತ್ರ ವ್ಯಾಪ್ತನಾಗಿಯೂ ನಿತ್ಯವಾಗಿಯೂ ಇರುವುದು, ಕಂಠ, ತಾಲು ಮೊದಲಾದ ಅವಯವಗಳ ಸಂಯೋಗದಿಂದ ಅಭಿವ್ಯಕ್ತಗಳಾಗುವುವು. ಲೌಕಿಕ ವೈದಿಕ ಸಕಲಶಬ್ದಗಳೂ ಈ ಅಕ್ಷರಮಯವಾಗಿರುವುವು. ಆನು ಪೂರ್ವೀ ವಿಶೇಷಗಳಿಂದ ಅರ್ಥ ವಿಶೇಷಗಳನ್ನು ಬೋಧಿಸುವುವು. ಇಂತಹ ವರ್ಣನಿತ್ಯತ್ವವಾದದಿಂದಲೇ ಮೀಮಾಂಸಕರು ವೇದಾಪೌರುಷೇಯತ್ವ ನಿತ್ಯತ್ವಾದಿಗಳನ್ನು ಸಾಧಿಸಿರುವರು.

ಪ್ರಕಾಶದಿಂದ ವಿನಾಶವನ್ನು ಹೊಂದುವ ವಸ್ತು ಅಂಧಕಾರ. ವಸ್ತು ಗಳನ್ನು ಆವರಣಮಾಡುವ ಸ್ವಭಾವದಿಂದ ತೆರೆಯಂತೆ ಇದೊಂದು ವಸ್ತು. ಪ್ರಕಾಶವಿಲ್ಲದಿರುವಿಕೆಯೇ ಅಂಧಕಾರವೆಂದು ತಾರ್ಕಿಕರ ಅಭಿಪ್ರಾಯ.

ಮಧ್ಯೇ ಅಂಧಕಾರವಿದ್ದರೂ ದೂರದಲ್ಲಿರುವ ದೀಪದಿಂದ ಅಲ್ಲಿರುವ ವಸ್ತು ವನ್ನು ನೋಡಬಹುದು.

ಸ್ವಪ್ನದಲ್ಲಿ ನೋಡಲ್ಪಡುವ ವಸ್ತುಗಳಿಗೆ ಕಾರಣವಾಗಿರುವ ದ್ರವ್ಯವು ವಾಸನೆಯೆನ್ನಲ್ಪಡುವುದು ; ಸ್ಮೃತಿಗೆ ಕಾರಣವಾದ ಭಾವನೆಯೆಂಬ ಸಂಸ್ಕಾರಕ್ಕಿಂತಲೂ ಬೇರೆಯಾದುದು. ಈ ವಾಸನಾದ್ರವ್ಯವೂ ಪೂರ್ವಾನುಭವದಿಂದ ಮನಸ್ಸಿನಲ್ಲಿ ಹುಟ್ಟಿರುವುದು. ಆದುದರಿಂದ ಸ್ವಾಪ್ನಪದಾರ್ಥಗಳು ವಾಸ್ತವವಾದುವು. ಮನೋರಥ ವಸ್ತುಗಳಲ್ಲೂ ಇದೇ ನ್ಯಾಯವು. ಹಾಗೆಯೇ ಧ್ಯಾನದಲ್ಲಿ ಪರಮಾತ್ಮಸ್ವರೂಪ ಸಮಾನರೂಪವು ವಾಸನಾಮಯವಾಗಿ ಗೋಚರವಾಗುವುದು,

ಕಾಲವೆಂಬ ವಸ್ತು ದೀರ್ಘಾಯುಸ್ಸು, ಶತಾಯುಸ್ಸು ಮೊದಲಾದ ವ್ಯವಹಾರಕ್ಕೆ ಕಾರಣವಾದ, ಕ್ಷಣ ಮೊದಲಾದ ವಿಭಾಗವುಳ್ಳ ಉತ್ಪತ್ತಿ ವಿನಾಶಶಾಲಿಯಾದ ದ್ರವ್ಯ. ಇದಕ್ಕೆ ಉಪಾದಾನಕಾರಣವು ಮೂಲಪ್ರಕೃತಿ. ಪ್ರತಿಯೊಂದು ವಿಭಾಗವೂ ಸರ್ವತ್ರ ವ್ಯಾಪ್ತವಾಗಿ ಸರ್ವಜ್ಞಾನ ಗೋಚರವಾಗಿರುವುದು. ಇದು ಸರ್ವಾಧಾರವು, ಸರ್ವಕಾರ್ಯೋತ್ಪತ್ತಿಹೇತುವು. ಪ್ರವಾಹರೂಪದಿಂದ ನಿತ್ಯವು. ಕಾಲದೇಶ ಸಂಬಂಧವೇ ಸತ್ತ್ವವಾದುದರಿಂದ ಕಾಲದೇಶಗಳಿಗೆ ಸ್ವಸ್ವಸಂಬಂಧದಿಂದ ಸತ್ತ್ವವನ್ನು ಹೇಳಬಹುದು. ಮಹಾಪ್ರಳಯದಲ್ಲೂ ಕಾಲವು ಕ್ಷಣ ಲವರೂಪವಾಗಿ ಪ್ರವಹಿಸುತ್ತಲಿರುವುದು. ಪ್ರತಿಬಿಂಬವಿಚಾರವು ಹಿಂದೆ ಆಗಿರುತ್ತದೆ.

## ಪ್ರಮಾಣ

ಉಪಲಬ್ಧಿ, ಬುದ್ಧಿ ಮೊದಲಾದ ಪದಗಳಿಂದ ಹೇಳಲ್ಪಡುವ ಜ್ಞಾನವೆಂಬ ಗುಣವು ಸರ್ವವ್ಯವಹಾರಹೇತುವಾಗಿರುವುದೆಂಬುದು ಪ್ರಸಿದ್ಧವು. ಮಹತ್ತೆಂಬ ತ್ರಿಗುಣಪರಿಣಾಮವನ್ನೂ ಬುದ್ಧಿಪದದಿಂದ ವ್ಯವಹರಿಸುವುದರಿಂದ ಅದಕ್ಕಿಂತಲೂ ಬೇರೆಯಾದ ಬುದ್ಧಿಶಬ್ದವಾಚ್ಯವಾದ ಜ್ಞಾನವಿದು. ಮನಸ್ಸೆಂಬ ಅಂತಃಕರಣಪರಿಣಾಮವಾದ ವೃತ್ತಿಜ್ಞಾನವೆಂದೂ ಸಕಲಾತ್ಮರ ಸ್ವರೂಪಜ್ಞಾನವೆಂದೂ ಎರಡು ಪ್ರಕಾರವು. ಜ್ಞಾನದಲ್ಲಿ ನಿತ್ಯಾನಿತ್ಯ ವಿಭಾಗವೂ ಯಥಾರ್ಥ ಅಯಥಾರ್ಥವೆಂಬ ವಿಭಾಗವೂ ಇರುವುವು.

ಯಥಾರ್ಥವಾದ ನಿತ್ಯಜ್ಞಾನವು ಈಶ ಲಕ್ಷ್ಮೀ ಬ್ರಹ್ಮಾದಿಸಜ್ಜೀವರಿಗೂ ಅಯಥಾರ್ಥವಾದ ನಿತ್ಯಜ್ಞಾನವು ಅಸಜ್ಜೀವರಿಗೂ, ಯಥಾರ್ಥವಾದ ಅನಿತ್ಯಜ್ಞಾನವು ಬ್ರಹ್ಮಾದಿ ಸಕಲಜೀವರಿಗೂ ಅಯಥಾರ್ಥವಾದ ಅನಿತ್ಯ ಜ್ಞಾನವು ರುದ್ರಾದಿ ಸರ್ವಜೀವರಿಗೂ ಇರುವುದು.

ಅನುಭವ ಮತ್ತು ಸ್ಮೃತಿಯೆಂದು ಪುನಃ ಜ್ಞಾನ ಎರಡು ವಿಧ. ಪ್ರತ್ಯಕ್ಷ, ಅನುಮಿತಿ, ಶಾಬ್ದಬೋಧವೆಂದು ಅನುಭವ ಮೂರು ಪ್ರಕಾರ. ಅನುಭವದಿಂದುಂಟಾದ ಸಂಸ್ಕಾರಮೂಲಕ ಬರುವ ಜ್ಞಾನ ಸ್ಮೃತಿ: ಇದರಲ್ಲೂ ಯಥಾರ್ಥ, ಅಯಥಾರ್ಥಗಳೆಂಬ ವಿಭಾಗಗಳಿವೆ. ಈಶ, ಲಕ್ಷ್ಮಿ ಮತ್ತು ಮುಕ್ತರ ಜ್ಞಾನ ಸರ್ವದಾ ಪ್ರತ್ಯಕ್ಷಾನುಭವರೂಪವಾಗಿಯೇ ಇರುವುದು. ಬ್ರಹ್ಮಾದಿ ಸರ್ವಜೀವರ ಜ್ಞಾನ ಎರಡು ವಿಧವಾಗಿಯೂ ಇರುವುದು.

ಯಥಾರ್ಥವಾದ ಜ್ಞಾನವು ಪ್ರಮೆ. ವಸ್ತು ಹೇಗಿರುವುದೋ ಹಾಗೆ ಸಾಕ್ಷಾದ್ವಿಷಯೀಕರಿಸತಕ್ಕದ್ದು. ಇಂತಹ ವಿಷಯೀಕರಿಸುವುದಕ್ಕೆ ಸಾಧನ ವಾಗಿರತಕ್ಕದ್ದು ಪ್ರಮಾಣವು. ಪ್ರಮಾಣವು ಕೇವಲ ಪ್ರಮಾಣ, ಅನು ಪ್ರಮಾಣವೆಂದು ಎರಡು ವಿಧ. ಯಥಾರ್ಥಜ್ಞಾನವೇ ಕೇವಲ, ಅದಕ್ಕೆ ಸಾಧನವಾಗಿರುವ ಇಂದ್ರಿಯಾದಿಗಳು ಅನುಪ್ರಮಾಣ. ಸಕಲ ಜ್ಞಾನಗಳೂ ಸವಿಕಲ್ಪಕವಾದುದರಿಂದ ಪ್ರತ್ಯಕ್ಷದಲ್ಲಿ ಸವಿಕಲ್ಪಕ ನಿರ್ವಿಕಲ್ಪಕ ವಿಭಾಗ ವಿಲ್ಲ.

ಅನುಪ್ರಮಾಣವು ಪ್ರತ್ಯಕ್ಷ, ಅನುಮಾನ, ಶಬ್ದವೆಂದು ಮೂರು ವಿಧ. ಪ್ರತ್ಯಕ್ಷವು—ಮನಸ್ಸು ಸೇರಿ ಆರು ಜ್ಞಾನೇಂದ್ರಿಯಗಳು. ಸಾಕ್ಷಿ ಪ್ರತ್ಯಕ್ಷವೆಂದು ಹೇಳಲ್ಪಡುವ ಆತ್ಮಸ್ವರೂಪಭೂತವಾದ ಆರುಇಂದ್ರಿಯಗಳ ಸಮುದಾಯವೊಂದು, ಅಂತೂ ಏಳು ವಿಧವು. ರೂಪಾದಿವಿಷಯಜ್ಞಾನಗಳು ಚಕ್ಷುರಾದೀಂದ್ರಿಯಜನ್ಯಗಳು. ಸ್ಮೃತಿ ಮನೋಜನ್ಯವು. ಸ್ವರೂಪೇಂದ್ರಿ ಯಕ್ಕೆ ಆತ್ಮ, ಆತ್ಮನ ಧರ್ಮಗಳು, ಅವಿದ್ಯೆ, ಮನಸ್ಸು, ಮನೋವೃತ್ತಿಗ ಳಾದ ಜ್ಞಾನ, ಸುಖ, ದುಃಖ ಇತ್ಯಾದಿಗಳು, ಕಾಲ, ಅವ್ಯಾಕೃತಾಕಾಶ— ಇವೆಲ್ಲಾ ಸಾಕ್ಷಾದ್ವಿಷಯಗಳು. ಹಾಗೆ ಬಾಹ್ಯೇಂದ್ರಿಯಗಳ ಮೂಲಕ ರೂಪಾದಿಗಳೂ ವಿಷಯಗಳಾಗುವುವು. ಇವುಗಳಿಂದ ಸ್ವರೂಪಜ್ಞಾನಕ್ಕೆ ಅಭಿವ್ಯಕ್ತಿಯೇ ಉತ್ಪತ್ತಿಯೆಂದು ವ್ಯವಹಾರ.

ಮುಕ್ತಿದೆಶೆಯಲ್ಲಿ ಸ್ವರೂಪೇಂದ್ರಿಯಮೂಲಕ ಸುಖಾನುಭವವಿರುವುದು. ಪರಮಾತ್ಮ, ಲಕ್ಷ್ಮಿ ಇವರುಗಳ ಸ್ವರೂಪೇಂದ್ರಿಯಗಳಿಗೆ ರೂಪಾದಿ ವಿಷಯ ನಿಯಮವಿಲ್ಲ.

ಅನುಮಾನಪ್ರಮಾಣವು ಉಪಪತ್ತಿ, ವ್ಯಾಪ್ತಿ, ಯುಕ್ತಿ, ಲಿಂಗ ಎಂದು ಹೇಳಲ್ಪಡುವುದು. ವ್ಯಾಪ್ತಿ ಅನ್ವಯಸಹಚಾರದಿಂದಲೂ ವ್ಯತಿರೇಕಸಹಚಾರದಿಂದಲೂ ಉಭಯಸಹಚಾರದಿಂದಲೂ ಗ್ರಹಿಸಲ್ಪಡುವುದು. ಆದುದರಿಂದ ಲಿಂಗವು ಕೇವಲಾನ್ವಯಿ, ಕೇವಲವ್ಯತಿರೇಕಿ, ಅನ್ವಯವ್ಯತಿರೇಕಿಯೆಂದು ಮೂರು ಪ್ರಕಾರವಾದರೂ ಅನ್ವಯವ್ಯಾಪ್ತಿಯಲ್ಲೇ ಪರ್ಯವಸಾನವಾಗಿ ಅನುಮಿತಿ ಉದಯಿಸುವುದು. ಹೇತುವು ಪಕ್ಷದಲ್ಲಿರಬೇಕೆಂಬ ಪಕ್ಷಧರ್ಮತೆ ಅವಶ್ಯವಿಲ್ಲ. ಕೆಳಗಿನ ಪ್ರವಾಹದಿಂದ ಮೇಲೆ ವೃಷ್ಟಿ ತಿಳಿದು ಬರುತ್ತದೆ. ಆದ್ದರಿಂದ ಉಚಿತ ದೇಶದಲ್ಲಿದ್ದರೆ ಸಾಕೆಂದು ಅಭಿಪ್ರಾಯವು. ಉಳಿದ ವಿಷಯಗಳು ಪ್ರಾಯಃ ಇತರ ದರ್ಶನಗಳಿಗೆ ಸಮಾನವಾಗಿರುವುವು. ಹೇತುವಿಗೆ ವ್ಯಾಪ್ತಿ ಮತ್ತು ಸಮುಚಿತದೇಶವೃತ್ತಿತ್ವ ಎರಡೇ ಮುಖ್ಯವಾದುವು.

**ಶಬ್ದ**

ಶಬ್ದ ಪ್ರಮಾಣದಲ್ಲಿರುವ ವಿಶೇಷಾಂಶಗಳೆಂತೆಂದರೆ—ಪದಜನ್ಯ ಪದಾರ್ಥಸ್ಮೃತಿ ಬೇರೆ ಆವಶ್ಯಕವಿಲ್ಲ. ಪದಪದಾರ್ಥ ಸಂಬಂಧವೆಂಬ ಶಕ್ತಿಜ್ಞಾನದಿಂದಲೇ ಸೇರಿಹೋಗುತ್ತದೆ. ಆಕಾಂಕ್ಷಾ, ಯೋಗ್ಯತಾ, ಆಸತ್ತಿ ಮತ್ತು ತಾತ್ಪರ್ಯ ಇವುಗಳಲ್ಲಿ ಯೋಗ್ಯತೆ ಆವಶ್ಯಕವಿಲ್ಲ. "ಅಗ್ನಿನಾ ಸಿಂಚತಿ," "ಉದಕೇನಾದೀಪಯತಿ"—ಇವು ಮೊದಲಾದ ವಾಕ್ಯಗಳಿಂದಲೂ ಜ್ಞಾನ ಉದಯಿಸುವುದು. ವಿಷಯಗಳು ಅಸತ್ತಾದರೂ ಜ್ಞಾನ ಶಬ್ದದಿಂದ ಬರಬಹುದು. 'ಅತ್ಯನ್ತಾ ಸತ್ಯಪಿಹ್ಯರ್ಥೇ ಜ್ಞಾನಂ ಶಬ್ದಃ ಕರೋತಿ ಹಿ" ಎಂದು ಪ್ರಸಿದ್ಧಿಯಿರುವುದು ಎಂದು ಅಭಿಪ್ರಾಯವು. ಆದರೆ ಅಂತಹ ಜ್ಞಾನವು ಪ್ರಮೆಯಲ್ಲ. ಪ್ರಮಾಣಕತ್ವವೆಂಬ ಪ್ರಾಮಾಣ್ಯವು ಅಂತಹ ವಾಕ್ಯಗಳಿಗಿಲ್ಲ. ಆದುದರಿಂದಲೇ ಪ್ರತಿವಾದಿವಾಕ್ಯಗಳಿಂದ ಅರ್ಥವನ್ನು ತಿಳಿದುಕೊಂಡು ಪ್ರತ್ಯುತ್ತರದಿಂದ ನಿಷೇಧಿಸುತ್ತೇವೆ. ಶಾಸ್ತ್ರ

ವನ್ನೇ ಶಬ್ದಪ್ರಮಾಣವೆಂದರೂ ಆಪ್ತವಾಕ್ಯವನ್ನು ಶಬ್ದಪ್ರಮಾಣವೆಂದರೂ ಇಂತಹ ವಿಚಾರಕ್ಕೆ ಅವಕಾಶವಿಲ್ಲ. ಪದಗಳಿಗೆ ಯೋಗ್ಯೇತರಾರ್ಥಾನ್ವಿತಾರ್ಥದಲ್ಲಿ ಶಕ್ತಿಸ್ವೀಕಾರಮಾಡಿ ಅನ್ವಿತಾಭಿಧಾನವಾದವನ್ನು ಒಪ್ಪಿರುತ್ತಾರೆ.

ಋಗ್ಯಜುಸ್ಸಾಮಾಥರ್ವಾ ಚ ಭಾರತಂ ಪಾಂಚರಾತ್ರಕಂ
ಮೂಲರಾಮಾಯಣಂ ಚೈವ ಶಾಸ್ತ್ರಮಿತ್ಯಭಿಧೀಯತೇ॥

ಇತ್ಯಾದಿ ಸಕಲ ಶಾಸ್ತ್ರಗಳಿಂದಲೂ ಪ್ರತ್ಯಕ್ಷಾದಿ ಪ್ರಬಲಪ್ರಮಾಣಗಳಿಂದಲೂ ಪೂರ್ವದಲ್ಲಿ ನಿರೂಪಿಸಲ್ಪಟ್ಟ ಪಂಚವಿಭೇದಗಳು ಪ್ರಾಮಾಣಿಕಗಳಾಗಿರುವುದರಿಂದ ಕೆಲವು ಶಾಸ್ತ್ರಗಳಿಂದ ಅಪಾತವಾಗಿ ತೋರುವ ಜೀವೇಶ್ವರರ ಅಭೇದವೂ ಪ್ರಪಂಚೇಶ್ವರರ ಅಭೇದವೂ ಪ್ರಾಮಾಣಿಕಗಳಾಗುವುದಿಲ್ಲ. ''ಆದಿತ್ಯೋಯೂಪಃ'' ಎಂಬ ಶ್ರುತಿಯಿಂದ ಯೂಪಸ್ತಂಭಕ್ಕೂ ಸೂರ್ಯನಿಗೂ ತೋರುವ ಅಭೇದವು ಪ್ರಬಲಪ್ರತ್ಯಕ್ಷವಿರುದ್ಧವಾದುದರಿಂದ ಆ ವಾಕ್ಯಕ್ಕೆ ಸೂರ್ಯನಂತೆ ಪರಿಶುದ್ಧವಾಗಿ ಪ್ರಕಾಶಿಸುವ ಯೂಪವೆಂದರ್ಥವನ್ನು ಎಲ್ಲರೂ ಮಾಡಿರುವಂತೆ ''ತತ್ತ್ವಮಸಿ'' ಮೊದಲಾದ ವಾಕ್ಯಗಳಿಗೆ ಜ್ಞಾನಾನಂದಸ್ವರೂಪದಿಂದ ಪರಮಾತ್ಮನಿಗೆ ಸದೃಶನಾಗಿ ನೀನಿರುತ್ತೀಯೆ ಎಂಬರ್ಥವನ್ನು ಹೇಳಬೇಕು. ಅಥವಾ ಅಲ್ಲಿ ''ಅತತ್ತ್ವಮಸಿ'' ಎಂದು ಪದವಿಭಾಗ ಮಾಡಿ ಈಶ್ವರನೇ ನಾನೆಂದು ಭ್ರಮಿಸಬೇಡ ; ಅವನಿಗೆ ಭೃತ್ಯಭೂತನಾಗಿರುತ್ತೀಯೆ ಎಂದು ತಂದೆ ಮಗನಿಗೆ ಉಪದೇಶವನ್ನು ಮಾಡುತ್ತಾನೆಂದು ಅರ್ಥವನ್ನು ಮಾಡಬೇಕು. ಈ ಅರ್ಥವು ಸ್ವಬುದ್ಧಿಯಿಂದ ಕಲ್ಪಿಸಿದುದಲ್ಲ. ಪುರಾಣಗಳಲ್ಲೂ ಈ ವಾಕ್ಯಕ್ಕೆ ಹೀಗೆ ಅರ್ಥವೆಂದು ಹೇಳುವ ಮಹರ್ಷಿವಚನಗಳು ಉದಹರಿಸಲ್ಪಟ್ಟಿರುವುವು.

ಹೀಗೆ ''ಸರ್ವಂ ಖಲ್ವಿದಂ ಬ್ರಹ್ಮ'' ಮೊದಲಾದ ವಾಕ್ಯಗಳಿಗೆ ಸರ್ವವೂ ಬ್ರಹ್ಮಾಧೀನವೆಂದರ್ಥ. ತತ್ಸದೃಶ, ತದಧೀನ ಎಂಬರ್ಥದಲ್ಲಿ ಸಮಾನವಿಭಕ್ತಿಯೆಂಬ ಸಾಮಾನಾಧಿಕರಣ ಪ್ರಯೋಗಗಳು, ''ಸಿಂಹೋ ಮಾಣವಕಃ, ನರಪತಿರೇವ ಸರ್ವೇ ಲೋಕಾಃ'' ಇತ್ಯಾದಿ ಪ್ರಯೋಗಗಳು ಲೋಕದಲ್ಲಿ ಬಹಳವಿರುವುವು. ಅದರಂತೆ ನಿರ್ವಾಹಮಾಡಬೇಕೆಂಬಭಿಪ್ರಾಯವು.

**ಪರಮಾತ್ಮ**

ಪರಮಾತ್ಮನು ಸರ್ವಜ್ಞನು, ಸರ್ವಶಕ್ತನು, ಸರ್ವವ್ಯಾಪಕನು. ನಿರತಿಶಯ ಜ್ಞಾನಾನಂದಕಲ್ಯಾಣಗುಣಪರಿಪೂರ್ಣನು, ಭಕ್ತಪರಾಧೀನನು. ಸೃಷ್ಟಿಸ್ಥಿತಿ ಸಂಹಾರನಿಯಮನಜ್ಞಾನಾಜ್ಞಾನಸಂಸಾರಮೋಕ್ಷಗಳೆಂಬ ಎಂಟು ವ್ಯಾಪಾರಗಳಿರುವುದರಿಂದ ಜಗತ್ಕರ್ತನು ; ಸರ್ವದೇಶ ಸರ್ವಕಾಲ ಸರ್ವಗುಣಗಳಿಂದ ವ್ಯಾಪ್ತನಾಗಿರುವುದರಿಂದಲೂ ಕಾಲದೇಶ ವಸ್ತು ಪರಿಚ್ಛೇದವೆಂಬ ಅಂತವಿಲ್ಲದಿರುವುದರಿಂದಲೂ ಅನಂತನು, ಸರ್ವಶಬ್ದ ವಾಚ್ಯನು, ಸರ್ವವೇದವೇದ್ಯನು ; ಅಚಿಂತ್ಯ ಶಕ್ತಿಯಿಂದ ಹೇಗೆ ಬೇಕಾದರೆ ಹಾಗೆ ಇರುವನು. ರೂಪ, ಗುಣ, ಕ್ರಿಯಾ ಮೊದಲಾದುವು ಇವನ ಸ್ವರೂಪದಲ್ಲೇ ಸೇರಿರುವುವು. ಆದರೂ ವಿಶೇಷವೆಂಬ ಧರ್ಮದಿಂದ ಸಕಲ ಭೇದವ್ಯವಹಾರಗಳೂ ಉಪಪನ್ನವಾಗುವುವು. ಹೀಗೆ ಅಸಂಖ್ಯಾತ ರೂಪಗಳೂ ಅವುಗಳಲ್ಲಿ ಇಚ್ಛಾನುಗುಣ ಸ್ತ್ರೀಪುಂವಿಭಾಗವೂ ಚಕ್ಷುರಾದೀಂದ್ರಿಯಗಳೂ ಅವುಗಳಿಂದ ಜ್ಞಾನಾನಂದಾದಿಗಳೂ ಇರುವುವು. ಸಾಲಗ್ರಾಮ, ಪ್ರತಿಮೆ ಮೊದಲಾದ ಅರ್ಚಾರೂಪಗಳು ಭಗವಂತನಿಗೆ ಇರುವುವು. ಆದರೆ ಅವು ಸಾಕ್ಷಾದ್ರೂಪಗಳಲ್ಲ. ಭಗವಂತನ ಸಾನಿಧ್ಯದಿಂದ ಭಗವದ್ರೂಪವೆಂದು ವ್ಯವಹಾರವು. ಸಾನಿಧ್ಯವೆಂದರೆ ಆ ರೂಪದಲ್ಲಿ ಭಗವಂತನ ಸಾಮರ್ಥ್ಯ ವ್ಯಂಜನವು, ಅಂದರೆ ಆ ರೂಪಮೂಲಕ ಭಗವಂತನ ಆರಾಧನೆಯಿಂದ ಪೂಜಕರು ಬೇಕಾದ ಇಷ್ಟಗಳೆನ್ನು ಭಗವಂತನ ಶಕ್ತಿಯಿಂದ ಹೊಂದಬಹುದೆಂದು ಭಗವಂತನ ಸಾಮರ್ಥ್ಯಕ್ಕೆ ಅಭಿವ್ಯಂಜಕಗಳಾಗಿ ರೂಪಗಳಾಗಿರುವುವು. ಕೆಲವು ಮನುಷ್ಯೋತ್ತಮರಿಗೆ ಪ್ರತಿಮಾಮೂಲಕವಾದ ಉಪಾಸನೆಯೇ ಮೋಕ್ಷಸಾಧನವಾದ ಅಪರೋಕ್ಷಜ್ಞಾನಕ್ಕೆ ಮಾರ್ಗವಾಗಿರುವುದು. ಜ್ಞಾನಾನಂದಮಯವಾದ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಕೇಶವಾದಿ ನಾಮಭೇದದಿಂದ ಅನೇಕವಿಧ ರೂಪಗಳು ಇರುವುವು. ರಾಮಕೃಷ್ಣಾದಿ ದಶಾವತಾರರೂಪಗಳು ಅಜ್ಞರ ದೃಷ್ಟಿಗೆ ಪಾಂಚಭೌತಿಕವಾಗಿ ತೋರುತ್ತಿದ್ದರೂ ಪ್ರಾಜ್ಞರ ದೃಷ್ಟಿಗೆ ಜ್ಞಾನಾನಂದಮಯವಾಗಿಯೇ ತೋರುವುವು. ಈ ಪ್ರಕಾರವಾಗಿ ಭಗವಂತನ ಅವತಾರವಿಚಾರವು ಪುರಾಣಗಳಲ್ಲಿ ಬಹುವಿಸ್ತಾರವಾಗಿ ನಿರೂಪಿಸಲ್ಪಟ್ಟಿರುವುದು. ಪರಮಾತ್ಮನ ಸ್ವರೂ

ಜವು ಜ್ಞಾನಾನಂದಮಯವಾಗಿ ಮನಸ್ಸು ಮೊದಲಾದ ಏಕಾದಶೇಂದ್ರಿಯಾತ್ಮಕವಾಗಿರುವುದು. ಇವುಗಳಿಂದ ರೂಪಾದಿವಿಷಯವ್ಯವಸ್ಥೆಯಿಲ್ಲದೆ ಸಕಲ ವಿಷಯ ಸಾಕ್ಷಾತ್ಕಾರವನ್ನು ಸರ್ವದಾ ಹೊಂದಿರುವನು.

ಇಂತಹ ಪರಮಾತ್ಮನೆಂಬ ಬಿಂಬಕ್ಕೆ ಸಕಲಚೇತನವಸ್ತುಗಳೂ ಪ್ರತಿಬಿಂಬಗಳಾಗಿರುವುವು. ಪ್ರತಿಬಿಂಬವೆಂದರೆ ಬಿಂಬಾಧೀನವಾದ ಸ್ಥಿತಿಗತಿಗಳನ್ನುಳ್ಳ ವಸ್ತುವೆಂದರ್ಥ. ಸಕಲಜೀವವಸ್ತುಗಳೂ ಪರಮಾತ್ಮನ ಸಂಕಲ್ಪಾಧೀನವಾದ ಸ್ಥಿತಿಗತಿಗಳನ್ನುಳ್ಳದ್ದಾಗಿರುವುದರಿಂದ ಪರಮಾತ್ಮನ ಪ್ರತಿಬಿಂಬವೆಂದು ವ್ಯವಹಾರ. ಈ ಬಿಂಬಪ್ರತಿಬಿಂಬಭಾವದಲ್ಲಿ ಚಿದ್ರೂಪತ್ವ ಕರಚರಣಾದ್ಯವಯವತ್ವ ಮೊದಲಾದುವುಗಳಿಂದ ಸಾದೃಶ್ಯವಿರಬೇಕು. ಆದುದರಿಂದ ಘಟಾಘಟಾದಿವಸ್ತುಗಳು ಪರಮಾತ್ಮಪ್ರತಿಬಿಂಬವೆಂದು ವ್ಯವಹಾರವಿಲ್ಲ.

ಪರಮಾತ್ಮನು ಸರ್ವವ್ಯಾಪಕನಾಗಿರುವುದರಿಂದ ಸರ್ವವಸ್ತುಗಳಲ್ಲೂ ಸರ್ವಶರೀರಗಳಲ್ಲೂ ಅನುಪ್ರವೇಶಮಾಡಿದ್ದರೂ ಅವು ಪರಮಾತ್ಮನ ರೂಪಗಳೆಂದು ವ್ಯವಹಾರವಿಲ್ಲ. ಜೀವಾತ್ಮರಿಂದ ತಮ್ಮ ದೇಹವೆಂದಭಿಮಾನಿಸಲ್ಪಡದಿರುವ ವಸ್ತುವೇ ಪರಮಾತ್ಮನ ರೂಪ. ಪೃಥಿವ್ಯಾದಿ ಸಕಲವಸ್ತುಗಳೂ ಶರೀರಗಳೂ ಆಯಾ ಅಭಿಮಾನಿದೇವತೆಗಳಿಂದಲೂ ಜೀವಾತ್ಮರಿಂದಲೂ ಅಭಿಮಾನಿಸಲ್ಪಟ್ಟಿರುವುದರಿಂದ ಅವುಗಳು ರೂಪುಗಳಾಗಲಾರವು.

ಈ ಪರಮಾತ್ಮವಸ್ತು ನಿತ್ಯಮುಕ್ತವೆನ್ನಲ್ಪಡುವುದು. ಬಂಧವೆಂಬುದು ಇವಕ್ಕೆ ಯಾವಾಗಲೂ ಇಲ್ಲ. ಇಂತಹ ಪರಮಾತ್ಮನು ವಿಚಿತ್ರಶಕ್ತಿಯಿಂದ ಅಣುಗಳಿಗಿಂತಲೂ ಅಣುಪರಿಮಾಣವುಳ್ಳವನಾಗುವನು ; ಮಹತ್ತುಗಳಿಗಿಂತಲೂ ಮಹಾಪರಿಮಾಣವುಳ್ಳವನಾಗುವನು. ಸ್ವರೂಪಭೂತಗಳಾದ ಸೃಷ್ಟ್ಯಾದಿ ಕ್ರಿಯೆಗಳು ಅನಂತಗಳಾಗಿರುವುವು. ಪ್ರಪಂಚಸೃಷ್ಟ್ಯಾದಿಗಳು ಪರಮಾತ್ಮನ ವ್ಯಾಪಾರಗಳು. ಸೃಷ್ಟಿಕಾಲದಲ್ಲಿ ಮಹಾಕಲ್ಪ ಮತ್ತು ಬ್ರಹ್ಮಕಲ್ಪವೆಂದು ಎರಡು ವಿಧ. ಮಹದಾದಿ ಅಂಡಪರ್ಯಂತ ಸೃಷ್ಟಿಕಾಲವು ಮಹಾಕಲ್ಪ. ಬ್ರಹ್ಮಾಂಡದಲ್ಲಿ ಪದ್ಮ, ಚತುರ್ಮುಖ ಇವುಗಳ ಸೃಷ್ಟಿಕಾಲವು ಬ್ರಹ್ಮಕಲ್ಪ, ಇದೇ ಪಾದ್ಮಕಲ್ಪ. ಇವುಗಳ ಸಂವತ್ಸರಗಣನೆ ಪುರಾಣಗಳಲ್ಲಿ ವಿಸ್ತರಿಸಲ್ಪಟ್ಟಿರುವುದು. ಪ್ರತಿ ಬ್ರಹ್ಮಕಲ್ಪದಲ್ಲೂ ಸಕಲ ಬದ್ಧಜೀವರುಗಳಿಗೂ ಸೃಷ್ಟಿಯುಂಟು.

ಈ ಪ್ರಕಾರ ಸೃಷ್ಟಿಸಲ್ಪಟ್ಟ ಪ್ರಪಂಚವನ್ನು ಜಾಗ್ರದಾದ್ಯವಸ್ಥೆಗಳಲ್ಲಿ ನಾನಾರೂಪಗಳಿಂದ ಪೋಷಿಸುವುದು ಸ್ಥಿತಿ. ಇಂತಹ ಪ್ರಪಂಚದ ಸಂಹಾರವೇ ಪ್ರಲಯ. ಮಹಾಪ್ರಲಯ ಮತ್ತು ಅವಾಂತರ ಪ್ರಲಯವೆಂದು ಪ್ರಲಯ ಎರಡು ವಿಧ. ಬ್ರಹ್ಮಾಂಡ ಮೊದಲು ತ್ರಿಗುಣಪರ್ಯಂತ ಪ್ರಲಯವು ಮಹಾಪ್ರಲಯ. ಇದರಲ್ಲಿ ತಮಸ್ಸೆಂಬ ನಿತ್ಯನರಕ, ಸಾಂಕಲ್ಪಿಕ ಸ್ವರ್ಗ, ಶ್ವೇತದ್ವೀಪ, ಅನಂತಾಸನ, ವೈಕುಂಠ ಇವುಗಳ ವಿನಾಶವಿಲ್ಲ. ಬ್ರಹ್ಮಾಂಡದೊಳಗೆ ಆಗತಕ್ಕ ಪ್ರಲಯಗಳು ಅವಾಂತರ ಪ್ರಲಯಗಳು, ಮಹಾಪ್ರಲಯದಲ್ಲಿ ಮುಕ್ತರಾದ ಬ್ರಹ್ಮಾದಿ ಸಕಲ ಜೀವರೂ ಪರಮಾತ್ಮನ ಉದರದಲ್ಲಿ ಪ್ರವೇಶಮಾಡಿ ಸ್ವರೂಪಾನಂದದಲ್ಲಿ ಮಾತ್ರ ಇರುವರು. ಸೃಷ್ಟಿಸಿದ ಅನಂತರ ಬಾಹ್ಯಭೋಗವೂ ಇರುವುದು. ತಮೋಯೋಗ್ಯರಿಗೂ ನಿತ್ಯಸಂಸಾರಿಗಳಿಗೂ ಮಹಾಪ್ರಲಯದಲ್ಲಿ ಭಗವದುದರ ಪ್ರವೇಶವು ಇರಬೇಕು. ನಿಯಮನವೆಂದರೆ ಸಕಲವಿಧ ಪ್ರಯತ್ನಕ್ಕೂ ಕಾರಣವಾಗಿರುವ ಪರಮಾತ್ಮಪ್ರೇರಣೆ.

ಸಕಲ ಪ್ರಾಣಿಗಳ ಜ್ಞಾನವೂ ಪರಮಾತ್ಮಾಧೀನವಾಗಿ ಸಂಸಾರ ಹೇತುವಾಗಿಯೂ ಬ್ರಹ್ಮಾದಿಸಜ್ಜೀವರಿಗೆ ಮೋಕ್ಷಹೇತುವಾಗಿಯೂ ಸಾಧನ ವಿಶೇಷಗಳಿಂದ ಉದಯಿಸುವುದು. ಅಜ್ಞಾನ, ಬಂಧ. ಮೋಕ್ಷ ಈ ಮೂರೂ ಜೀವಪ್ರಕರಣದಲ್ಲಿ ನಿರೂಪಿಸಲ್ಪಡುವುವು. ಇಂತಹ ಪರಮಾತ್ಮನು ಉಪಾಸಕರಿಗೆ ಅಪರೋಕ್ಷಜ್ಞಾನವನ್ನೂ ಪ್ರಸಾದಮೂಲಕ ಪರಮಭಕ್ತಿಯನ್ನೂ ಉಂಟುಮಾಡಿ ಮೋಕ್ಷವನ್ನನುಗ್ರಹಿಸುವನು.

**ಲಕ್ಷ್ಮಿ**

ಪರಮಾತ್ಮನ ಮಹಿಷಿಯಾದ ಲಕ್ಷ್ಮಿಯೆಂಬ ಪರಮಾತ್ಮಾಧೀನವಾದ ಚೇತನವಸ್ತು ಇರುವುದು. ಇದು ಜ್ಞಾನಾನಂದಾತ್ಮಕಾನಂತಕಲ್ಯಾಣಗುಣ ಪರಿಪೂರ್ಣವು. ಜ್ಞಾನಾನಂದಾತ್ಮಕಕಲ್ಯಾಣವಿಗ್ರಹವೆಂಬ ನಾನಾವಿಧ ರೂಪವುಳ್ಳದ್ದು ಸೀತೆ, ರುಕ್ಮಿಣಿ ಮೊದಲಾದ ಅವತಾರಪತ್ನಿಯರು ಈ ಲಕ್ಷ್ಮೀದೇವಿಯ ಅವತಾರಗಳು. ಬ್ರಹ್ಮಾದಿ ಸಕಲಜೀವರಿಗಿಂತಲೂ ಅನೇಕ ಕೋಟಿ ಅಂಶಗಳಿಂದ ಸರ್ವೋತ್ತಮಳು. ಪರಮಾತ್ಮನಿಗಿಂತ ಕಡಮೆಯಾ

ಗಿರುವಳು. ಸರ್ವದೇಶಕಾಲಗಳಲ್ಲಿ ವ್ಯಾಪ್ತಳಾಗಿರುವುದರಿಂದ ಸರ್ವ ವ್ಯಾಪಕಳು. ಪರಮಾತ್ಮನಿಗೆ ಸಮಾನಗುಣಪೂರ್ತಿಯಿಲ್ಲದಿರುವುದರಿಂದ ವಸ್ತುಪರಿಚ್ಛೇದ ರಾಹಿತ್ಯವಿಲ್ಲ. ಪರಮಾತ್ಮಸ್ವರೂಪದಂತೆ ನಿತ್ಯಮುಕ್ತ ಸ್ವರೂಪವುಳ್ಳವಳು, ಸಕಲಶಬ್ದವಾಚ್ಯಳು. ಇವಳ ಸ್ವರೂಪವೂ ಜ್ಞಾನಾ ನಂದಾತ್ಮಕ ಏಕಾದಶೇಂದ್ರಿಯಾತ್ಮಕವಾಗಿರುವುದು. ನಿಯಮವಿಲ್ಲದೆ ಆ ಇಂದ್ರಿಯಗಳು ಸಕಲ ವಿಷಯಗಳನ್ನೂ ಗ್ರಹಿಸುವ ಸಾಮರ್ಥ್ಯವುಳ್ಳವು. ಅನಾದ್ಯವಿದ್ಯೆ ಎಂಬ ದುಃಖಕಾರಣವಾದ ಅಜ್ಞಾನದಿಂದ ಆವರಣವಿಲ್ಲ. ನಿತ್ಯಮುಕ್ತಸ್ವರೂಪವುಳ್ಳದ್ದು, ಆದರೂ ಪರಮಾತ್ಮನ ಸಕಲ ಗುಣಗಳ ಸಂಪೂರ್ಣಜ್ಞಾನವಿಲ್ಲದೇ ಇರುವುದರಿಂದ ಆ ವಿಷಯದಲ್ಲಿ ಜ್ಞಾನಾಭಾವ ವೆಂಬ ಅಜ್ಞಾನವಿರುವುದು. ಭಗವಂತನಿಗೆ ಸರ್ವದಾ ಸಹಾಯಕವಾಗಿ ಸಕಲಚೇತನಾನುಗ್ರಹ ಮೂರ್ತಿಯಾಗಿ ಪರಮಾತ್ಮನ ಆನಂದವೇ ತನ್ನ ಆನಂದವೆಂದು ತಿಳಿದು ಸರ್ವದಾ ಪರಮಾತ್ಮನನ್ನು ಸೇವಿಸುತ್ತಿರುವಳು. ಸಕಲ ಸಜ್ಜೀವರಿಗೆ ಭಗವಂತನು ಪಿತೃಸ್ಥಾನೀಯನಾದರೆ ಲಕ್ಷ್ಮಿ ಮಾತೃ ಸ್ಥಾನೀಯಳಾಗಿರುವಳು; ವಾತ್ಸಲ್ಯಮೂರ್ತಿ, ದಯಾಮಯ ಹೃದಯವುಳ್ಳ ವಳು. ಆದುದರಿಂದ ಇವಳು ಜೀವಕೋಟಿಯಲ್ಲೂ ಈಶ್ವರಕೋಟಿಯಲ್ಲೂ ಸೇರಿರುವಳು.

### ಜೀವಾತ್ಮ

ಅಜ್ಞಾನಾದಿ ದೋಷಸಹಿತರಾಗಿ ಸಂಸಾರಿಗಳಾಗಿರುವ ಜೀವಾತ್ಮರು ಅಸಂಖ್ಯಾತರು ; ಗುಂಪುಗುಂಪಾಗಿಯೂ ಅಸಂಖ್ಯಾತರು. ದೇವ ಮನುಷ್ಯ ತಿರ್ಯಕ್ ಸ್ಥಾವರಗಳೆಂಬ ಬಾಹ್ಯರೂಪಗಳಂತೆ ವಿಚಿತ್ರವಾದ ಆಕಾರಾವಯವಗಳುಳ್ಳ ಸ್ವರೂಪವುಳ್ಳವರು ; ಸ್ತ್ರೀಪುಂಭೇದವುಳ್ಳವರು. ನಪುಂಸಕಜೀವರಿಲ್ಲ. ಪುರುಷಜೀವನಿಗೆ ಸ್ತ್ರೀದೇಹ ಪ್ರಾಪ್ತಿಯಾದರೂ ಬಿಂಬಜೀವವು ಪುರುಷಾಕಾರವಾಗಿಯೇ ಇರುವುದು. ಸ್ತ್ರೀಜೀವರಿಗೆ ಪುರು ಷದೇಹಪ್ರಾಪ್ತಿಯೇ ಇಲ್ಲ. ಮತ್ತು ಸಾಂಶ, ನಿರಂಶ ಎಂದು ವಿಭಾಗವಿರು ವುದು. ರುದ್ರೇಂದ್ರ ಮೊದಲಾದ ದೇವತೆಗಳು ಸಾಂಶರು. ಅಂಶವಿಶೇಷ ದಿಂದ ಅವತಾರಗಳನ್ನು ಮಾಡುವರು. ಅವುಗಳಿಂದ ವ್ಯಾಪಕರಾಗಿರುವರು.

ಮನುಷ್ಯಜೀವರು ನಿರಂಶರು. ಇವರು ಆತ್ಮಪ್ರಭೆಯಿಂದ ಮುಕ್ತಿಯಲ್ಲಿ ವ್ಯಾಪಕರಾಗಿರುವರು.

ಮತ್ತು ಮುಕ್ತಿಯೋಗ್ಯರು, ತಮೋಯೋಗ್ಯರು, ನಿತ್ಯಸಂಸಾರಿಗಳೆಂದು ಮೂರು ವಿಧಗಳಾಗಿರುವರು. ಮುಕ್ತಿಯೋಗ್ಯರಲ್ಲಿ ದೇವ, ಮನುಷ್ಯ, ಪಿತೃ, ಚಕ್ರವರ್ತಿ, ಮನುಷ್ಯೋತ್ತಮ ಎಂದು ಐದು ವಿಧಗಳು. ಇವರು ನಿತ್ಯಜ್ಞಾನಾನಂದ ಸ್ವರೂಪಯೋಗ್ಯತೆಯುಳ್ಳವರು. ಸಾಧನಾನುಷ್ಠಾನದಿಂದ ಮುಕ್ತರಾಗುವರು. ಮಧ್ಯಮ ಮನುಷ್ಯರೇ ಸುಖದುಃಖ ಮಿಶ್ರನಿತ್ಯಾನುಭವ ಯೋಗ್ಯತೆಯುಳ್ಳ ಅಸಂಖ್ಯಾತರಾದ ನಿತ್ಯಸಂಸಾರಿಗಳು. ತಮೋಯೋಗ್ಯರಲ್ಲಿ ದೈತ್ಯ, ರಾಕ್ಷಸ, ಪಿಶಾಚ, ಮನುಷ್ಯಾಧಮ ಎಂದು ನಾಲ್ಕು ಪ್ರಕಾರಗಳು. ಚೈತನ್ಯಸ್ವರೂಪದಿಂದ ಸರ್ವರೂ ಉತ್ಕರ್ಷಾಪಕರ್ಷ ಎಂಬ ಬಹುವಿಧವಾದ ತಾರತಮ್ಯವುಳ್ಳವರು.

ಜೀವಾತ್ಮರಿಗೆ ಸಂಸಾರದಶೆಯಲ್ಲೂ ಮುಕ್ತದಶೆಯಲ್ಲೂ ವಿಚಿತ್ರವಾದ ಗುಣಕ್ರಿಯೆಗಳಿರುವುವು. ಇವುಗಳು ಕೆಲವು ನಿತ್ಯಗಳು. ಕೆಲವು ಅನಿತ್ಯಗಳು. ನಿತ್ಯಗಳು ಸ್ವರೂಪದಲ್ಲಿ ಸೇರಿರುವುವು. ಅನಿತ್ಯಗಳು ಭಿನ್ನಭಿನ್ನಗಳಾಗಿರುವುವು.

ಅಣುಮಾತ್ರ ಪ್ರದೇಶದಲ್ಲಿ ಅನಂತಜೀವರಾಶಿಕೋಟಿಗಳು ಅಡಗಿರುವುವು. ಪ್ರತಿಜೀವಾತ್ಮಸ್ವರೂಪವು ಸಾವಯವವು. ಆದರೆ ಅವಯವಗಳಿಂದ ಆರಂಭವಾದ ವಸ್ತುವಲ್ಲ.

ಪ್ರತಿಜೀವಾತ್ಮಸ್ವರೂಪವೂ ನಿತ್ಯವಾದ ಏಕಾದಶೇಂದ್ರಿಯಾತ್ಮಕವಾಗಿರುವುದು. ಅನಿತ್ಯಗಳಾದ ಪ್ರಾಕೃತೇಂದ್ರಿಯಗಳೂ ಇರುವುವು. ಸ್ವರೂಪಭೂತೇಂದ್ರಿಯಗಳಿಗೆ ಸಾಕ್ಷಿ ಎಂಬ ವ್ಯವಹಾರವು. ಇವುಗಳಿಂದ ನಿಯತವಾದ ವಿಷಯಾನುಭವಗಳು ಇರುವುವು. ಇಂತಹ ಸಾಕ್ಷಿಸ್ವರೂಪೇಂದ್ರಿಯದಿಂದ ಆತ್ಮ, ಮನಸ್ಸು, ಅದರ ಧರ್ಮಗಳಾದ ಸುಖದುಃಖಾದಿಗಳು, ಅಜ್ಞಾನ, ಕಾಲ, ಅವ್ಯಾಕೃತಾಕಾಶ—ಇವುಗಳು ಸಾಕ್ಷಾತ್ತಾಗಿ ಗ್ರಹಿಸಲ್ಪಡುವುವು. ಇತರ ವಿಷಯಗಳು ಬಾಹ್ಯೇಂದ್ರಿಯ ಮೂಲಕ ಗ್ರಹಿಸಲ್ಪಡುವುವು. ಹೀಗೆ ಜ್ಞಾನಸ್ವರೂಪದಲ್ಲಿರುವ ಪ್ರಾಮಾಣ್ಯ, ಸಂಶಯ, ಸಂಭಾವನಾ ಮೊದಲಾದ ಅಂಶಗಳು ಸಾಕ್ಷಿಸ್ವರೂಪೇಂದ್ರಿಯಕ್ಕೆ ಗೋಚರಗಳಾಗು

ವುವು. ಕೆಲವು ಸಂದರ್ಭಗಳಲ್ಲಿ ಪ್ರಾಮಾಣ್ಯಸಂಶಯವಿದ್ದರೂ ಅದು ಔಪಾಧಿಕವು. ಸ್ವಾಭಾವಿಕವಾಗಿ ಪ್ರಾಯಶಃ ಜ್ಞಾನವು ಪ್ರಮಾಣವಾಗಿಯೇ ಇರುವುದು. ಮುಕ್ತಾತ್ಮಸ್ವರೂಪವು ಕಾಮರೂಪವಾದುದರಿಂದ ಪಂಚ ಭೂತಾತ್ಮಕವಾಗಿಯೂ ಇರುವುದು.

ಮುಕ್ತರು ಶುದ್ಧಸತ್ತ್ವದ್ರವ್ಯದಿಂದ ಲೀಲಾವಿಗ್ರಹಗಳನ್ನು ಪರಿಗ್ರಹಿಸಿ ವಿಹರಿಸುವರು. ಸಕಲ ಜೀವಾತ್ಮಸ್ವರೂಪವೂ ಸ್ವಪ್ರಕಾಶ ಜ್ಞಾನಸ್ವರೂಪ ವಾದರೂ ಬದ್ಧದಶೆಯಲ್ಲಿ ಅನಾದ್ಯಜ್ಞಾನವೆಂಬ ಆವರಣವು ಭಗವಂತನ ಅಚಿಂತ್ಯಶಕ್ತಿಯಿಂದ ಇರುವುದು. ಕಾದ ಕಬ್ಬಿಣದ ಗುಂಡಿನ ಸಂಬಂಧ ದಿಂದ ವಸ್ತ್ರ ಸುಟ್ಟುಹೋಗುವ ಹಾಗೆ ಅಂತಃಕರಣವೃತ್ತಿ ಎಂಬ ಅಪರೋ ಕ್ಷಜ್ಞಾನದಿಂದ ಅಂತಃಕರಣ ಸಂಯುಕ್ತಜೀವಾತ್ಮನಲ್ಲಿರುವ ಅಜ್ಞಾನವು ನಾಶವಾಗುವುದು. ಮತ್ತು ಅಪರೋಕ್ಷಜ್ಞಾನವು ಉಷ್ಣಸ್ಪರ್ಶವುಳ್ಳದ್ದಾಗಿ ಸರ್ವಕರ್ಮಗಳನ್ನೂ ದಹಿಸುವುದು. ಪುಣ್ಯಪಾಪವೆಂಬ ಅದೃಷ್ಟವು ಮನಸ್ಸಿ ನಲ್ಲೂ ಸ್ವರೂಪದಲ್ಲೂ ಇರುವುದು. ಈಶ, ಲಕ್ಷ್ಮಿ—ಇವರುಗಳಿಗೆ ಕರ್ಮ ಸಂಬಂಧವೇ ಇಲ್ಲ. ಬ್ರಹ್ಮಾದಿ ಸಜ್ಜೀವರಿಗೆ ದ್ವಿವಿಧಪುಣ್ಯಸಂಬಂಧವೂ ಅಸಜ್ಜೀವರಿಗೆ ದ್ವಿವಿಧಪಾಪ ಸಂಬಂಧವೂ ಇರುವುದು. ಸ್ವರೂಪದಲ್ಲಿರುವ ಅದೃಷ್ಟಕ್ಕೆ ಶಕ್ತಿವ್ಯಕ್ತಿಭಾವವೇ ವಿನಾ ಉತ್ಪತ್ತಿ ವಿನಾಶಗಳಿಲ್ಲ.

ಬ್ರಹ್ಮಾದಿಸಜ್ಜೀವರು ಅಪರೋಕ್ಷಜ್ಞಾನ ಪ್ರಾಪ್ತವಾಗಿದ್ದರೂ ದೇಹಾ ವಸಾನಪರ್ಯಂತ ಸ್ವೋತ್ತಮಾಪರಾಧವಿಲ್ಲದೆ ಸತ್ಕರ್ಮನಿಷ್ಠರಾಗಿರಬೇಕು. ಇದರಿಂದ ದುರಾಚಾರಪ್ರಿಯರ ದುರ್ವಾದಕ್ಕೆ ಅವಕಾಶವಿಲ್ಲ. ಪ್ರಾಯಃ ಸಕಲ ದರ್ಶನಗಳಲ್ಲೂ ಮೋಕ್ಷಸಾಧನವು ಸಿದ್ಧವಾದರೆ ಕರ್ತವ್ಯವಿಲ್ಲದಿರು ವುದರಿಂದ ಮನುಷ್ಯಸ್ವಭಾವಸಿದ್ಧವಾದ ಆಲಸ್ಯಮೂಲಕ ಸ್ವೇಚ್ಛಾಚಾರ ಶಂಕೆ ದುರಾತ್ಮರಿಗೆ ಉದಯಿಸುವುದು. ಕೆಲವು ದುರಾತ್ಮರು ಸ್ವೇಚ್ಛಾ ಚಾರಕುತುಕರಾಗಿ ದುರ್ವಾದಗಳನ್ನೂ ಗ್ರಂಥಗಳನ್ನೂ ಹರಡುತ್ತಿರುವರು. ಅಜ್ಞಾನಿಗಳಿಗಿಂತಲೂ ಜ್ಞಾನಿಲೋಕವಿನಾಶಭಯದಿಂದ ಸದಾಚಾರ ಪ್ರಿಯ ನಾಗಿರಬೇಕು. ಈ ಅಂಶವು ಗೀತಾಚಾರ್ಯರಿಂದ ಸ್ಪಷ್ಟವಾಗಿ ಉಪದೇಶಿ ಸಲ್ಪಟ್ಟಿರುವುದು.

ಆತ್ಮನಿಗೆ ಸತ್ಯವಾದ ಸುಖದುಃಖಾನುಭವವಿರುವುದರಿಂದ ಸತ್ಯವಾದ

ಉಚ್ಚನೀಚಭಾವ ಮೂಲಕ ಅನ್ಯಥಾಭಾವವೆಂಬ ಪರಿಣಾಮ ಬಂದರೂ ಧರ್ಮಿಸ್ವರೂಪಕ್ಕೆ ವಿನಾಶವಿಲ್ಲ. ಯಾವ ವಿಧವಾದ ಪರಿಣಾಮದಿಂದ ವಸ್ತು ಸ್ವರೂಪವೇ ಬದಲಾಯಿಸುವುದೋ ಅದೇ ಉತ್ಪತ್ತಿವಿನಾಶವ್ಯವಹಾರ ನಿಮಿತ್ತವು. ಇದು ಅಂತಹದ್ದಲ್ಲ.

ಸಾಮಾನ್ಯವಾಗಿ ಜೀವಾತ್ಮರಿಗೆ ಜಾಗ್ರತ್, ಸ್ವಪ್ನ, ಸುಷುಪ್ತಿ, ಮೋಹ, ತುರೀಯ ಎಂದು ಐದು ಅವಸ್ಥೆಗಳು ಇರುವುವು. ನಾಲ್ಕು ಪ್ರಸಿದ್ಧಗಳು. ತುರೀಯಾವಸ್ಥೆಯೇ ಮುಕ್ತಾವಸ್ಥೆ. ಅಲ್ಲಿ ತುರೀಯನೆಂಬ ಪರಮಾತ್ಮಪ್ರಾಪ್ತಿಯಾಗುವುದು.

ದುಃಖಸ್ವರೂಪರಾದ ತಮೋಯೋಗ್ಯರು ಸಂಸಾರದಶೆಯಲ್ಲಿ ಜಾಗ್ರತ್ ಸ್ವಪ್ನ ಸುಷುಪ್ತಿಗಳಲ್ಲಿ ಅನುಭವಿಸುವ ಸುಖವು ಮನಃಪರಿಣಾಮವಾದ ಪ್ರಾಕೃತಸುಖವೇ ವಿನಾ ಸ್ವರೂಪಸುಖವಲ್ಲ. ಸ್ವರೂಪವು ದುಃಖಮಯವಾದುದರಿಂದ ಅಲ್ಲಿ ಸುಖವಿಲ್ಲ. ಮುಕ್ತ್ಯವಸ್ಥೆಯಲ್ಲಿ ನಿತ್ಯದುಃಖಾನುಭವವು. ಹೀಗೆ ನಿತ್ಯಸಂಸಾರಿಗಳಿಗೆ ಸಂಸಾರದಶೆಯಲ್ಲಿ ಕ್ರಮವಾಗಿ ಪ್ರಾಕೃತ ಸುಖದುಃಖಾನುಭವವಿದ್ದರೂ ಮುಕ್ತಿದಶೆಯಲ್ಲಿ ಮಿಶ್ರಾನುಭವವು ಏಕಕಾಲದಲ್ಲೇ ಶಾಶ್ವತವಾಗಿರುವುದು. ತಮೋಯೋಗ್ಯ ನಿತ್ಯಸಂಸಾರಿಗಳ ಸ್ವರೂಪದಲ್ಲೂ ಯೋಗ್ಯತಾ ತಾರತಮ್ಯವಿರುವುದರಿಂದ ಮುಕ್ತಿಸಾಧನಸಿದ್ಧ್ಯನಂತರ ಮಾಡಿದ ದುರಾಚಾರದಿಂದ ಸಜ್ಜೀವರಿಗೆ ಸದಾಚಾರದಿಂದ ಆಗುವ ಆನಂದಾತಿಶಯದಂತೆ ದುಃಖಾತಿಶಯವು ಬರುವುದು.

ಧರ್ಮಾಧರ್ಮವೆಂಬ ಪುಣ್ಯಪಾಪಗಳಲ್ಲಿ ನಿತ್ಯಪುಣ್ಯವು ಬ್ರಹ್ಮಾದಿ ಸಜ್ಜೀವಸ್ವರೂಪವು. ಅಪರೋಕ್ಷ ಜ್ಞಾನೋತ್ಪತ್ತ್ಯನಂತರ ಸತ್ಕರ್ಮಗಳಿಂದಾದ ಸ್ವರೂಪವು ಪುಣ್ಯಾಭಿವ್ಯಕ್ತಿಯಿಂದಲೂ ಅಸತ್ಕರ್ಮಗಳಿಂದಾದ ಪುಣ್ಯತಿರೋಧಾನದಿಂದಲೂ ಮೋಕ್ಷದ ಆನಂದದಲ್ಲಿ ವೃದ್ಧಿಹ್ರಾಸಗಳು ಬರುವುವು. ಅನಿತ್ಯ ಪುಣ್ಯವು ಸರ್ವಜೀವರಿಗೂ ಮನೋಧರ್ಮವಾಗಿ ಯಥಾಸಂಭವ ಫಲಪ್ರದವಾಗಿರುವುದು.

ನಿತ್ಯವಾದ ಪಾಪವು ತಮೋಯೋಗ್ಯಸ್ವರೂಪವು. ಅನಿತ್ಯಪಾಪವು ದ್ವೇಷಪರಿಪಾಕಕ್ಕೆ ಸಾಧನವಾಗುವುದು.

ನಿತ್ಯಸಂಸಾರಿಗಳಿಗೆ ನಿತ್ಯಮಿಶ್ರ ಪುಣ್ಯಪಾಪವು ಸ್ವರೂಪಭೂತವಾ

ಗಿಯೂ ಅನಿತ್ಯಮಿಶ್ರ ಪುಣ್ಯಪಾಪವು ಯಥಾಯೋಗ್ಯವಾಗಿ ಫಲಪ್ರದವಾಗಿಯೂ ಇರುವುವು.

ಅದೃಷ್ಟವು ದೃಷ್ಟಸಾಮಗ್ರೀಸಂಮೇಲನ ಮೂಲಕ ಕಾರ್ಯಸಾಮಾನ್ಯಕ್ಕೊ ಕಾರಣವು. ಸಾಮಗ್ರೀವೈಕಲ್ಯವಿದ್ದಲ್ಲಿ ಕಾಲದೇಶಗಳನ್ನು ಪ್ರತೀಕ್ಷಿಸುತ್ತಿರುವುದು. ಆದುದರಿಂದ ಪುರುಷಪ್ರಯತ್ನದಿಂದ ದುರದೃಷ್ಟವನ್ನು ನಿವೃತ್ತಿಮಾಡಿಕೊಳ್ಳಬಹುದು. ವಿಧಿನಿಷೇಧಶಾಸ್ತ್ರವು ಸಾರ್ಥಕವಾಗುವುದು. ಪರಮಾತ್ಮನ ಸ್ವಾತಂತ್ರ್ಯ, ಜೀವಾತ್ಮನ ಪುಣ್ಯಪಾಪ ಕರ್ತೃತ್ವ ಸ್ವಾತಂತ್ರ್ಯ, ರಕ್ಷೆ, ಶಿಕ್ಷೆ ಮೊದಲಾದುವುಗಳ ಸಾಮರಸ್ಯ ಇವೆಲ್ಲವೂ ಉಪಪನ್ನವಾಗುವುವು.

ಸರ್ವಜೀವರಿಗೂ ಸಂಸ್ಕಾರವೆಂಬ ಭಾವನೆಯಿರುವುದು. ಸಾಮಾನ್ಯವಾಗಿ ಸಂಸ್ಕಾರವು ಭಾವನಾ, ವೇಗ, ಹಠಾಖ್ಯಯೋಗ್ಯತಾ, ಸ್ಥಿತಸ್ಥಾಪಕಗಳೆಂದು ನಾಲ್ಕುಪ್ರಕಾರವಾದ ಮನಃಪರಿಣಾಮವು. ಸ್ವಾಪ್ನಪದಾರ್ಥಗಳಿಗೆ ಉಪಾದಾನಕಾರಣವಾಗಿರುವ ವಾಸನೆಯೆಂಬ ದ್ರವ್ಯಕ್ಕಿಂತಲೂ ಬೇರೆಯಾದುದು. ಭಾವನೆ ಅನುಭವದಿಂದುಂಟಾಗಿ ಸ್ಮೃತಿಹೇತುವಾಗಿರುವುದು. ವಾಸನಾ ಪದಾರ್ಥವೂ ಅನುಭವದಿಂದಲೇ ಉಂಟಾಗಿ ಮನಸ್ಸಿನಲ್ಲೇ ಇರುವುದರಿಂದ ಸಮಾನಶಬ್ದಗಳಿಂದಲೇ ವ್ಯವಹರಿಸಲ್ಪಡುವುದು. ವೇಗಸ್ಥಿತಸ್ಥಾಪಕಗಳು ಪ್ರಸಿದ್ಧಗಳು. ಹಠವೆಂಬ ಯೋಗ್ಯತೆ ಸಕಲ ವಸ್ತುಗಳಲ್ಲೂ ಇರುವುದು. ಇದು ಸಕಲವಸ್ತುಗಳನ್ನೂ ಆಯಾ ಸ್ವಭಾವದಲ್ಲಿಡುವುದು. ಆದುದರಿಂದಲೇ ಚೇತನ ಅಚೇತನವಾಗುವುದಿಲ್ಲ. ಮೋಕ್ಷ ಬಂಧನವಾಗುವುದಿಲ್ಲ. ಪುಣ್ಯ ಪಾಪವಾಗುವುದಿಲ್ಲ. ತಾರತಮ್ಯವು ವ್ಯತ್ಯಾಸವಾಗುವುದಿಲ್ಲ. ಮುಕ್ತಿಯೋಗ್ಯರು ತಮೋಯೋಗ್ಯರಾಗುವುದಿಲ್ಲ.

**ಮೋಕ್ಷಸಾಧನ**

ಮೋಕ್ಷಸಾಧನವಾದ ಅಪರೋಕ್ಷಜ್ಞಾನಸಾಧನಗಳು ಮೊದಲು ತಿಳಿಯಲ್ಪಡಬೇಕು. ಗುರುಕುಲವಾಸ, ಗುರುಭಕ್ತಿ, ಅಧ್ಯಯನಸಂಪತ್ತಿ, ಸಚ್ಛಾಸ್ತ್ರಶ್ರವಣ, ವಿಚಾರವೆಂಬ ಮನನ, ವಿವಿಧಸಂಸಾರದುಃಖದರ್ಶನದಿಂದಲೂ ಸತ್ಸಹವಾಸದಿಂದಲೂ ಬರುವ ಐಹಿಕಾಮುಷ್ಮಿಕಭೋಗವೈರಾಗ್ಯ,

ಶಮದಮಾದಿಗುಣಸಂಪತ್ತಿ, ನಿಷಿದ್ಧಕರ್ಮಪರಿತ್ಯಾಗ, ನಿವೃತ್ತಿಧರ್ಮಾನುಷ್ಠಾನ, ಅಧಮರಲ್ಲಿ ದಯೆ, ಸಮರಲ್ಲಿ ಸ್ನೇಹ, ಉತ್ತಮರಲ್ಲಿ ಭಕ್ತಿ, ತಾರತಮ್ಯಪರಿಜ್ಞಾನ, ಪಂಚಭೇದಜ್ಞಾನ, ಪ್ರಕೃತಿಪುರುಷ ವಿವೇಕಜ್ಞಾನ, ಅಯೋಗ್ಯಸಂಸರ್ಗಪರಿತ್ಯಾಗ, ಪರಮಾತ್ಮಭಕ್ತಿ, ಸರ್ವಕರ್ಮಸಮರ್ಪಣ, ವಿಶ್ವಾಸಪೂರ್ವಕ ಆತ್ಮಸಮರ್ಪಣವೆಂಬ ಶರಣಾಗತಿ, ಉಪಾಸನೆ—ಇವು ಬ್ರಹ್ಮಾದಿ ಸಕಲ ಸಜ್ಜೀವಸಾಧಾರಣಗಳು. ಹರಿಸ್ಮರಣ, ಹರನಾಮಸಂಕೀರ್ತನ, ಜಪ, ಅರ್ಚನ, ದ್ವಾದಶೀವ್ರತ, ತೀರ್ಥಯಾತ್ರೆ, ದಾನ ಮೊದಲಾದ ಅಂಶಗಳೂ ಭಕ್ತಿಪೂರ್ವಕವಾಗಿ ಮಾಡಲ್ಪಡಬೇಕು. ಇವುಗಳಲ್ಲಿ ವ್ಯಾಖ್ಯಾನ, ಹರಿಪೂಜನ—ಇವುಗಳು ಪ್ರಧಾನವೆಂದು ತಿಳಿಯಬೇಕು.

ಸ್ತ್ರೀ ಶೂದ್ರರಿಗೆ ವೇದಾಧಿಕಾರವಿಲ್ಲದಿದ್ದರೂ ಪಂಚಮವೇದವಾದ ಮಹಾಭಾರತಾದಿ ಶ್ರವಣಮೂಲಕವಾದ ಜ್ಞಾನವೂ ಪೂರ್ವೋಕ್ತ ಸಾಧನಗಳಲ್ಲಿ ಯಥಾಯೋಗ್ಯಾನುಷ್ಠಾನವೂ ಅಪರೋಕ್ಷಜ್ಞಾನಸಾಧನಗಳಾಗುವುವು. ಅನೇಕ ಜನ್ಮಗಳಲ್ಲಿ ಅನುಷ್ಠಿಸಲ್ಪಟ್ಟ ಇಂತಹ ಸಾಧನಾನುಷ್ಠಾನವೆಂಬ ಕರ್ಮಸಹಕೃತವಾದ ಅಪರೋಕ್ಷಜ್ಞಾನವು ಮೋಕ್ಷಸಾಧನವಾಗುವುದು.

ಮೋಕ್ಷಸಾಧನವಾದ ಅಪರೋಕ್ಷಜ್ಞಾನ ಧ್ಯಾನದಿಂದಲೂ ಸತತ ಶಾಸ್ತ್ರಾಭ್ಯಾಸದಿಂದಲೂ ಉದಯಿಸುವುದು. ಧ್ಯಾನ ಶ್ರವಣಮನನಪೂರ್ವಕವಾದುದರಿಂದ ಶಾಸ್ತ್ರಾಭ್ಯಾಸವು ಧ್ಯಾನಕ್ಕೆ ಅಂಗವಾಗಿದ್ದರೂ ಸಾಕ್ಷಾದ್ಧ್ಯಾನಸ್ಥಾನದಲ್ಲಿದ್ದು ಅಪರೋಕ್ಷಜ್ಞಾನವೆಂಬ ಸಾಕ್ಷಾತ್ಕಾರಸಾಧನವಾಗುವುದು. ಅಧಿಕಾರಿಗಳ ಯೋಗ್ಯತೆ ನಾನಾಪ್ರಕಾರವಾಗಿರುವುದರಿಂದ ಅವರವರ ಭಾಗೋದಯಪ್ರಕಾರ ಶ್ರವಣಮೂಲಕವಾಗಿಯೂ ಪ್ರತಿಮಾದರ್ಶನ ಮೂಲಕವಾಗಿಯೂ ಸ್ಮೃತಿಸಂತತಿ ಬರಬಹುದು. ಧ್ಯಾನವೆಂದರೆ ವಿಷಯಾಂತರ ವ್ಯವಧಾನವಿಲ್ಲದೆ ಭಗವದ್ವಿಷಯದಲ್ಲಿ ಅಖಂಡಸ್ಮೃತಿಧಾರಣೆ. ಪ್ರಯತ್ನವಿಲ್ಲದೆ ಮನಸ್ಸಿನಲ್ಲಿ ಸ್ಮೃತಿ ನಿಂತರೆ ಸಮಾಧಿ. ಈ ಮೂರೂ ಉಪಾಸನೆಯೆನ್ನಲ್ಪಡುವುದು.

ಭಗವದ್ರೂಪವನ್ನು ಆತ್ಮತ್ವವೆಂಬ ಒಂದೇಗುಣದಿಂದ ಅಂದರೆ ಅಂತರ್ಯಾಮಿಯೆಂದು ಉಪಾಸನೆ ಮಾಡುವವರು ಕೆಲವರು. ಇವರು ಏಕಗುಣೋ

ಪಾಸಕರು ; ಮನುಷ್ಯೋತ್ತಮರು ಚತುರ್ಗುಣೋಪಾಸಕರು. ಸತ್, ಚಿತ್, ಆನಂದ, ಆತ್ಮಾ—ಎಂದು ನಾಲ್ಕು ಗುಣಗಳು. ಬ್ರಹ್ಮಾದಿದೇವರು ಅವರವರ ಯೋಗ್ಯತಾನುಸಾರ ಗುಣಕ್ರಿಯಾದಿಗಳಿಂದ ವಿಶಿಷ್ಟನಾದ ಭಗವಂತನ ಉಪಾಸನೆಯನ್ನು ಮಾಡುವರು. ಅಂತರ್ದೃಷ್ಟಿಗಳು, ಬಹಿರ್ದೃಷ್ಟಿಗಳು, ಅವತಾರದೃಷ್ಟಿಗಳು, ಸರ್ವದೃಷ್ಟಿಗಳು ಎಂದು ಭಗವದ್ರೂಪದರ್ಶನವಿಭಾಗದಿಂದ ಮನುಷ್ಯರು ಬಹಿರ್ದೃಷ್ಟಿಗಳು. ಆ ಬಾಹ್ಯ ರೂಪವು ಅಗ್ನಿ, ಪ್ರತಿಮೆ ಎಂಬ ಎರಡು ವಿಧವಾಗಿ ಕ್ರಿಯಾನಿಷ್ಠರಿಗೆ ಅಗ್ನಿ, ಇತರರಿಗೆ ಪ್ರತಿಮೆಯೆಂದು ವಿಭಾಗವು. ಇಂತಹ ಬಹಿರುಪಾಸಕರೂ, ಹೃದಯದಲ್ಲಿರುವ ಭಗವದ್ಬಿಂಬವೆಂಬ ಪ್ರಾಜ್ಞರೂಪವನ್ನು ಆಗಾಗ್ಗೆ ಧ್ಯಾನ ಮಾಡುತ್ತಿರಬೇಕು. ಹೃದಯದಲ್ಲಿರುವ ಭಗವದ್ರೂಪವು ಪ್ರಾದೇಶ ಅಗ್ರೇಶ, ಮೂಲೇಶ ಎಂದು ಮೂರು ಪ್ರಕಾರ. ಇವರೇ ಆತ್ಮ, ಅಂತರಾತ್ಮ ಪರಮಾತ್ಮ ಎಂದು ಹೇಳಲ್ಪಡುವರು. ಹೃದಯ ಪ್ರದೇಶವನ್ನೆಲ್ಲಾ ವ್ಯಾಪಿಸಿರುವ ಶಂಖಚಕ್ರಗದಾದ್ಯನೇಕಾಭರಣಾಯುಧಭೂಷಿತರೂಪವು ಪ್ರಾದೇಶ. ಹೃದಯ ಕಮಲಕರ್ಣಿಕಾಮೂಲಭಾಗದಲ್ಲಿ ಅಂಗುಷ್ಠಮಾತ್ರ ಪರಿಮಾಣರೂಪವು ಮೂಲೇಶ, ಕರ್ಣಿಕಾಗ್ರಭಾಗದಲ್ಲಿರುವ ಇಂತಹ ರೂಪವು ಅಗ್ರೇಶ. ಈ ಮೂರು ರೂಪಗಳಲ್ಲಿ ಯೋಗ್ಯತಾನುಸಾರ ಯಾವುದಾದರೊಂದು ರೂಪವನ್ನು ಮನುಷ್ಯೋತ್ತಮರು ಉಪಾಸನೆ ಮಾಡಬೇಕು.

ಭಗವದುಪಾಸನೆಯನ್ನು ಶತಬ್ರಹ್ಮಕಲ್ಪಕಾಲ ಋಜುದೇವತೆಗಳು ಮಾಡಿ ಬ್ರಹ್ಮಪದವನ್ನು ಹೊಂದಿ ಅಧಿಕಾರಾವಸಾನಕಾಲದಲ್ಲಿ ಮುಕ್ತರಾಗುವರು. ಹೀಗೆ ಇಂದ್ರ, ಚಂದ್ರ, ಸೂರ್ಯ ಮೊದಲಾದ ಅಧಿಕಾರ ಪದಕ್ಕೆ ಉಪಾಸನೆಯನ್ನು ಮಾಡಿ ದೇವತೆಗಳು ಆಯಾ ಪದವನ್ನು ಅನುಭವಿಸಿ ಮುಕ್ತರಾಗುವರು.

ಹೀಗೆ ಸಾಧನಾನುಷ್ಠಾನದಿಂದ ಬರುವ ಅಪರೋಕ್ಷಜ್ಞಾನವು ಮನುಷ್ಯರಿಗೆ ವಿದ್ಯುತ್ಸದೃಶವಾಗಿಯೂ, ದೇವತೆಗಳಿಗೆ ಸೂರ್ಯತೇಜಃಪುಂಜದಂತೆಯೂ, ಗರುಡ ರುದ್ರರಿಗೆ ಪ್ರತಿಬಿಂಬದಂತೆಯೂ, ಬ್ರಹ್ಮನಿಗೆ ಸರ್ವಾವಯವವಿಶಿಷ್ಟವಾಗಿಯೂ, ಭಗವದ್ರೂಪಸಾಕ್ಷಾತ್ಕಾರವಾಗುವುದು.

ಇಂತಹ ಅಪರೋಕ್ಷಜ್ಞಾನದಿಂದ ದೇವಋಷ್ಯಾದಿಗಳಿಗೆ ಅಣಿಮಾ,

ದೃಷ್ಟಸಿದ್ಧಿಗಳು ಸಿದ್ಧಿಸುವುವು. ಆ ಸಿದ್ಧಿಗಳು ಆಯಾ ಜೀವಯೋಗ್ಯತಾ ತಾರತಮ್ಯಾನುಗುಣಗಳಾಗಿರುವುವು.

ಉಪಾಸನಾನುಗುಣವಾಗಿ ಅಪರೋಕ್ಷಜ್ಞಾನವು ಸಿದ್ಧಿಸಬೇಕಾಗಿರುವುದರಿಂದಲೂ ಅದಕ್ಕೆ ಅನುಗುಣವಾಗಿ ಸ್ವರೂಪಜ್ಞಾನವು ನಿಲ್ಲಬೇಕಾಗಿರುವುದರಿಂದಲೂ ಅಪರೋಕ್ಷಜ್ಞಾನದಲ್ಲಿ ತೋರುವ ಅಂಶಗಳು ಉಪಾಸನೆಯಲ್ಲೂ ಗೋಚರವಾಗಬೇಕು. ಅಪರೋಕ್ಷಜ್ಞಾನದಲ್ಲಿ ಸ್ವಸ್ವರೂಪವು ಸ್ವೋತ್ತಮ ದೇವತಾಪ್ರತಿಬಿಂಬವಾಗಿ ತೋರುವುದು. ಸ್ವೋತ್ತಮದೇವತೆಗಳು ಶೇಷಪ್ರತಿಬಿಂಬವಾಗಿ ತೋರುವರು. ಶೇಷನು ಬ್ರಹ್ಮಪ್ರತಿಬಿಂಬನಾಗಿಯೂ ಬ್ರಹ್ಮನು ಪರಮಾತ್ಮ ಪ್ರತಿಬಿಂಬನಾಗಿಯೂ ತೋರುವರು. ಹೀಗಾದರೆ ಪರಮಾತ್ಮನು ಇಂತಹ ಪ್ರತಿಬಿಂಬಪರಂಪರಾಪೂರ್ವಕವಾಗಿ ಗೋಚರನಾಗುವನು. ಇದರಂತೆ ಉಪಾಸನೆ ಇರಬೇಕಾದರೆ ಚತುರ್ಗುಣದಲ್ಲಿ ಆತ್ಮತ್ವ ಎಂಬಂಶವು ಮೇಲ್ಕಂಡ ರೀತಿಯಾಗಿ ಅನುಸಂಧಾನಮಾಡಲ್ಪಡಬೇಕು. ಇದರಿಂದ ಸ್ವಸ್ವರೂಪವು ನಿರತಿಶಯಪರತಂತ್ರವಾಗಿಯೂ ತರತಮಭಾವಾಪನ್ನವಾಗಿಯೂ ಅನುಸಂಧಿಸಲ್ಪಡಬೇಕೆಂದು ತಾತ್ಪರ್ಯವು. ಇದೇ ಸಿದ್ಧಾಂತಸಾರ.

ಈ ಅಪರೋಕ್ಷಜ್ಞಾನ ಸ್ವರೂಪಜ್ಞಾನವಲ್ಲ ; ಶುದ್ಧವಾದ ಮನಃ ಪರಿಣಾಮರೂಪವೃತ್ತಿಜ್ಞಾನ. ಇದಕ್ಕೆ ಮನಸ್ಸೇ ಕಾರಣವು. ಚಕ್ಷುರಿಂದ್ರಿಯಜನ್ಯವಾದ ಅವತಾರರೂಪದರ್ಶನದಿಂದ ಮೋಕ್ಷವನ್ನು ಹೇಳುವ ಸಂದರ್ಭದಲ್ಲೂ ತನ್ಮೂಲಕ ಮಾನಸಜ್ಞಾನದಿಂದಲೇ ಮೋಕ್ಷವೆಂದು ತಿಳಿಯಬೇಕು.

ಇಂತಹ ಅಪರೋಕ್ಷಜ್ಞಾನದಿಂದ ಭಗವತ್ಪ್ರಸಾದಮೂಲಕ ಪ್ರಕೃತಿಸಂಬಂಧವಿನಾಶವೆಂಬ ಮುಕ್ತಿ ಸಿದ್ಧಿಸಿದರೆ ಪ್ರಕೃತಿಸಂಬಂಧದೊಡನೆ ಮನಸಂಬಂಧವೂ ಅಪರೋಕ್ಷಜ್ಞಾನವೆಂಬ ವೃತ್ತಿಸಂಬಂಧವೂ ವಿಲಯವಾಗಿ ಸ್ವರೂಪಜ್ಞಾನವು ಸದಾಪ್ರಕಾಶಮಾನವಾಗಿ ಜ್ಞಾನಾನಂದಸ್ವಸ್ವರೂಪವನ್ನು ಸಾಕ್ಷಾತ್ಕರಿಸುತ್ತಾ ಇತರ ಸರ್ವ ಜೀವಾತ್ಮಸ್ವರೂಪಗಳನ್ನು ಯಥಾಯೋಗ್ಯವಾಗಿ ಸಾಕ್ಷಾತ್ಕರಿಸುತ್ತಾ ಭಗವದ್ಗುಣಾನುಭವಧಾರಣಾನುಭವಗಳಲ್ಲಿ ಜೀವನು ಮಗ್ನನಾಗುವನು.

**ಮೋಕ್ಷನಿರೂಪಣ**

ಮೋಕ್ಷವೆಂದರೆ ಪರಮಾತ್ಮನಿಗ್ರಹಸಂಕಲ್ಪ ಮೂಲಕ ಅನಾದಿಯಾಗಿರುವ ಅವಿದ್ಯೆಯೆಂಬ ಬಂಧದಿಂದ ವಿಮೋಚನೆ. ಭಗವದಪರೋಕ್ಷವೆಂಬ ಸಾಕ್ಷಾತ್ಕಾರವಾದರೆ ಭಗವಂತನಲ್ಲಿ ನಿರಂತರ ನಿರವಧಿಕಪ್ರೇಮಪ್ರವಾಹವುಂಟಾಗುವುದು. ಇದೇ ಪರಮಭಕ್ತಿ. ಇದು ನಿರವಧಿಕಾನಂತಾನವದ್ಯ ಕಲ್ಯಾಣ ಗುಣಪೂರ್ಣತಾಜ್ಞಾನಪೂರ್ವಕವಾಗಿಯೂ, ಆತ್ಮಾತ್ಮೀಯ ಸಮಸ್ತ ವಸ್ತುಗಳಿಗಿಂತಲೂ ಅನೇಕಾಂಶಗಳಲ್ಲಿ ಸರ್ವೋತ್ತಮವಾಗಿಯೂ, ಅನೇಕ ಸಹಸ್ರ ವಿಘ್ನಗಳಿಂದಲೂ ತಡೆಯಲಶಕ್ಯವಾಗಿಯೂ ಇರುವುದು. ಇದರಿಂದ ಪರಮಾನುಗ್ರಹವೆಂಬ ಪರಮಾತ್ಮಪ್ರಸಾದವು ಉದಯಿಸುವುದು. ಇದರಿಂದ ಬರುವ ಮೋಕ್ಷ, ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ, ಭೋಗ ಎಂದು ನಾಲ್ಕು ಪರ್ವಗಳುಳ್ಳದ್ದು. ಬ್ರಹ್ಮಾದಿದೇವತೆಗಳಿಗೆ ನೂರಾರು ಕಲ್ಪಗಳು ಪ್ರಾರಬ್ಧಾನುಭವಕಾಲವಾದರೂ ಮನುಷ್ಯೋತ್ತಮರಿಗೆ ಒಂದೇ ಕಲ್ಪದಲ್ಲಿ ಪ್ರಾರಬ್ಧಕರ್ಮಾವಸಾನದಲ್ಲಿ ಮೋಕ್ಷ ಬರುವುದು. ಕರ್ಮಕ್ಷಯವೆಂದರೆ ಸಂಚಿತ ಕರ್ಮಗಳಲ್ಲಿ ಸಕಲ ಪಾಪವೂ ಸಕಲ ಪುಣ್ಯವೂ ಶತ್ರುಮಿತ್ರ ಪ್ರಾಪ್ತಿ ಎಂಬ ಲಯವನ್ನು ಹೊಂದುವುವು. ಉತ್ಕ್ರಾಂತಿಯೆಂದರೆ ದೇಹಾವಸಾನಸಮಯದಲ್ಲಿ ಬ್ರಹ್ಮನಾಡೀದ್ವಾರಾ ಬಹಿರ್ನಿರ್ಗಮನವು ; ಅಲ್ಲಿಂದ ಅರ್ಚಿರಾದಿಮಾರ್ಗದಲ್ಲಿ ಅನೇಕ ಲೋಕಗಳಿಗೆ ಹೋಗಿ ಅಲ್ಲಲ್ಲಿ ಆಯಾ ಲೋಕಾಧಿಪತಿಗಳಿಂದ ಸತ್ಕರಿಸಲ್ಪಟ್ಟು ಸತ್ಯಲೋಕಕ್ಕೆ ಹೋಗುವನು. ಅಲ್ಲಿ ಬ್ರಹ್ಮದೇವನ ಉಪದೇಶವೂ ಶ್ವೇತದ್ವೀಪದಲ್ಲಿ ವಾಸುದೇವನ ದರ್ಶನವೂ ಧ್ರುವಲೋಕದಲ್ಲಿ ಶಿಂಶುಮಾರದರ್ಶನವೂ ಸರ್ವರಿಗೂ ನಿಯತವು. ಸರ್ವರೂ ಬ್ರಹ್ಮದೇವನೊಡನೆ ವಿರಜಾನದಿಯಲ್ಲಿ ಸ್ನಾನ ಮಾಡುವರು. ಸೂಕ್ಷ್ಮರೂಪದಲ್ಲಿರುವ ಬಾಹ್ಯದಶೇಂದ್ರಿಯಗಳೂ ಪಂಚಪ್ರಾಣಗಳೂ ಮನಸ್ಸೂ ಸೇರಿ ಷೋಡಶಕಲಾತ್ಮಕವಾಗಿ ಅನಾದಿಯಾಗಿರುವ ಲಿಂಗಶರೀರವು ನಿವೃತ್ತಿಯಾಗುವುದು. ಇದೇ ಲಿಂಗಭಂಗವು. ತಮೋಯೋಗ್ಯರಿಗೂ ನಿತ್ಯ ಸಂಸಾರಿಗಳಿಗೂ ಅವರವರ ಮುಕ್ತಿಯ ಪೂರ್ವಕ್ಷಣದಲ್ಲಿ ಲಿಂಗಶರೀರವು ನಿವೃತ್ತಿಯಾಗುವುದು. ಅವರಿಗೂ ಲಿಂಗಭಂಗವುಂಟು.

ತಮೋಯೋಗ್ಯರಿಗೆ ಅಪರೋಕ್ಷಜ್ಞಾನವಿಲ್ಲ. ದ್ವೇಷಪರಿಪಾಕದಿಂದ

ಭಗವನ್ನಿಗ್ರಹ ಮೂಲಕ ನಿತ್ಯನರಕಪ್ರಾಪ್ತಿ ಆಗುವುದು. ದ್ವೇಷಪರಿಪಾಕ ಸಾಧನಗಳು ಸದಾ ದುರ್ವಿಷಯಾನುಭವಚಾಪಲ್ಯ, ತ್ರಿವಿಧಗುರುದ್ವೇಷ, ನವವಿಧಹರಿದ್ವೇಷ ಮೊದಲಾದುವು. ಉತ್ತಮರಲ್ಲಿ ದ್ವೇಷ. ಅವರ ಗುಣಗಳಲ್ಲಿ ಅಸೂಯೆ, ಅವರ ಐಶ್ವರ್ಯಾಪಹಾರ— ಈ ಮೂರೂ ಗುರುದ್ವೇಷಗಳು. ಜೀವಾಭೇದ, ನಿರ್ಗುಣತ್ವ, ಅಪೂರ್ಣಗುಣತ್ವ, ಇತರ ಸಾಮ್ಯ, ಇತರಾಧಿಕ್ಯ, ಬ್ರಹ್ಮನಾನಾತ್ವ, ಅವತಾರನಿಂದೆ, ಭಕ್ತನಿಂದೆ, ತತ್ಪ್ರಮಾಣನಿಂದೆ—ಈ ಒಂಬತ್ತೂ ಹರಿದ್ವೇಷಗಳು. ಇಂತಹ ಸಾಧನಗಳಿಂದ ಸಿದ್ಧವಾದ ದ್ವೇಷಪರಿಪಾಕದಿಂದ ಕಲಿಪ್ರಾಪ್ತಿಪೂರ್ವಕ ಬ್ರಹ್ಮನಿಗೆ ಲಿಂಗಭಂಗ ಸಮಯದಲ್ಲಾಗಲಿ ತತ್ಪೂರ್ವದಲ್ಲಾಗಲಿ ಲಿಂಗಭಂಗವಾಗಿ ಶಾಶ್ವತ ದುಃಖಮಯವಾದ ಸ್ವಸ್ವರೂಪಾವಸ್ಥೆಯಲ್ಲಿರುವರು. ಯಾವತ್ಕಾಲವೂ ಶಾಶ್ವತವಾದ ನಿತ್ಯದುಃಖಾನುಭವವನ್ನು ಮಾಡುತ್ತಿರುವರು.

ಹೀಗೆಯೇ ನಿತ್ಯಸಂಸಾರಿಗಳೂ ಮಿಶ್ರಸಾಧನದಿಂದ ಶಾಶ್ವತವಾದ ಸಾಂಕಲ್ಪಿಕಸ್ವರ್ಗದಲ್ಲಿ ಮಿಶ್ರಾನುಭವದಲ್ಲಿರುವರು.

ಮೋಕ್ಷಭೋಗವು ಯೋಗ್ಯತಾ ತಾರತಮ್ಯಾನುಗುಣ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯ ಎಂದು ನಾಲ್ಕು ವಿಧ. ಸಾಯುಜ್ಯವೆಂದರೆ ದೇವತೆಗಳಿಗೆ ಮಾತ್ರ ಭಗವಂತನ ಶರೀರದಲ್ಲಿ ಅನುಪ್ರವೇಶಮಾಡಿ ಆನಂದವನ್ನು ಅನುಭವಿಸುತ್ತಿರುವುದು. ಆ ಪ್ರವೇಶವು ಸ್ವಸ್ವೋತ್ತಮ ದೇವತಾ ಶರೀರಾನುಪ್ರವೇಶಪೂರ್ವಕವು. ಅನುಪ್ರವೇಶ ಮಾಡಿದವರು ಅಲ್ಲೇ ಇರಬೇಕೆಂಬ ನಿಯಮವಿಲ್ಲ. ಇಚ್ಛಾನುಗುಣವಾಗಿ ಪ್ರವೇಶನಿರ್ಗಮಗಳಿರುವುವು. ಪರಮಾತ್ಮ ದೇಹಪ್ರವೇಶ ಕಾಲದಲ್ಲೂ ಪರಮಾತ್ಮ ತುಲ್ಯಾನಂದಾನುಭವವಿಲ್ಲ. ಸ್ವಸ್ವಯೋಗ್ಯತಾನುಗುಣ ಸ್ವರೂಪಾನಂದಾನುಭವ ಮಾತ್ರವಿರುವುದು. ಪರಮಾತ್ಮನಿಗೆ ಜೀವ ಭೋಜ್ಯಾನಂದಾನುಭವವೂ ಇರುವುದು.

ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಈ ಭೋಗಗಳು ಭಗವಲ್ಲೋಕದಲ್ಲೂ ಇತರ ಸ್ವರ್ಗಾದಿಲೋಕಗಳಲ್ಲೂ ಭಗವತ್ಸ್ವರೂಪ ಸಾಕ್ಷಾತ್ಕಾರ ಸಹಿತವಾಗಿ ಅವರವರ ಇಚ್ಛಾನುಗುಣ ತಾರತಮ್ಯಾನುಗುಣಗಳಾಗಿರುವುವು.

ಅವ್ಯಾಕೃತಾಕಾಶದಲ್ಲಿ ಪರಮಪದ, ವೈಕುಂಠ, ಶ್ವೇತದ್ವೀಪ ಮೊದ

ಲಾದ ಶಬ್ದಗಳಿಂದ ಹೇಳಲ್ಪಡುವ ಅತ್ಯದ್ಭುತಾನಂದಮಯವಾದ ಮುಕ್ತಿ ಸ್ಥಾನವೆಂಬ ಲೋಕವಿರುವುದು. ಪ್ರಕೃತಿಮಂಡಲಕ್ಕೂ ಪರಮಪದಕ್ಕೂ ಮಧ್ಯೇ ವಿರಜೆಯೆಂಬ ನದಿ ಇರುವುದು. "ಅರ", "ಣ್ಯ" ಎಂಬ ಸುಧಾರಸ ಸಮುದ್ರಗಳೂ, ಮಧ್ಯ ಸರೋವರವೂ ಅಮೃತವನ್ನು ಸುರಿಯುತ್ತಿರುವ ಅಶ್ವತ್ಥವೃಕ್ಷಗಳೂ ಅಪರಾಜಿತೆಯೆಂಬ ಪಟ್ಟಣವೂ ಇರುವುವು.

ಕೆಲವರು ಕ್ಷೀರಸಾಗರದಲ್ಲೂ, ಕೆಲವರು ಅಶ್ವತ್ಥವನದಲ್ಲೂ, ಕೆಲವರು ಅರ, ಣ್ಯ ಎಂಬ ಸುಧಾಸಮುದ್ರದಲ್ಲೂ ಕೆಲವರು ಉದ್ಯಾನವನಗಳಲ್ಲೂ ಭೋಗವನ್ನನುಭವಿಸುವರು. ಅಲ್ಲಿ ಸ್ವೇಚ್ಛಾನುಗುಣವಾಗಿಯೂ ತಾರತಮ್ಯಾನುಗುಣವಾಗಿಯೂ ಈರ್ಷ್ಯಾಸೂಯಾಲೇಶರಹಿತರಾಗಿ ಪರಸ್ಪರ ನಿರತಿಶಯ ಸೌಹಾರ್ದದಿಂದ ಸಕಲ ಸೌಭಾಗ್ಯಗಳನ್ನೂ ಅನುಭವಿಸುತ್ತಿರುವರು. ಮುಕ್ತರು ಅಣುಸ್ವರೂಪರಾಗಿದ್ದರೂ ಭಗವದನುಗ್ರಹದಿಂದ ಯಥೇಷ್ಟ ಭೋಗಕ್ಕೆ ಅನುಗುಣವಾದ ಮಹತ್ತರವಾದ ಪರಿಮಾಣವುಳ್ಳವರಾಗಿ ಅಭಿವ್ಯಕ್ತರಾಗುವರು.

ವೈಕುಂಠಾದಿ ದಿವ್ಯಲೋಕಗಳು ಮಹಾಪ್ರಲಯದಲ್ಲೂ ವಿನಾಶವಾಗದೆ ಶಾಶ್ವತವಾಗಿರುವುದರಿಂದ ಅಲ್ಲಿ ಸರ್ವದಾ ಮಹಾಲಕ್ಷ್ಮಿ ಸಮೇತನಾಗಿ ಪರಮಾತ್ಮನು ಸಕಲವಿಧ ಭೋಗಗಳನ್ನನುಭವಿಸುತ್ತಾ ಸಕಲ ಮುಕ್ತಾತ್ಮರುಗಳಿಗೆ ಸಕಲವಿಧ ಭೋಗಗಳನ್ನೂ ಅನುಗ್ರಹಿಸುತ್ತಾ ವಿರಾಜಿಸುತ್ತಿರುವನು ; ಸರ್ವಲೋಕ ಯೋಗಕ್ಷೇಮನಿರತನಾಗಿರುವನು.

೧೨

# ಶೈವದರ್ಶನ

**ಪೀಠಿಕೆ**

ಶೈವದರ್ಶನವು ಈಗ ವೇದಾಂತದರ್ಶನಗಳಲ್ಲಿ ಸೇರಿ ಶೈವವಿಶಿಷ್ಟಾದ್ವೈತವೆಂದು ವ್ಯವಹರಿಸಲ್ಪಡುವುದು. ಇದರಲ್ಲಿ ಶಿವೋತ್ಕರ್ಷವನ್ನು ನಿರೂಪಿಸಿ ಉಪನಿಷತ್ತುಗಳಿಗೂ ಬಾದರಾಯಣಸೂತ್ರಗಳಿಗೂ ಭಾಷ್ಯವನ್ನು ಶ್ರೀಕಂಠ ಶಿವಾಚಾರ್ಯರು ರಚಿಸಿರುವರು. ಇದಕ್ಕೆ ಅಪ್ಪಯ್ಯ ದೀಕ್ಷಿತರು ಶಿವಾರ್ಕಮಣಿದೀಪಿಕೆಯೆಂಬ ವಿಪುಲವಾದ ವ್ಯಾಖ್ಯಾನವನ್ನು ರಚಿಸಿರುವರು. ಪ್ರಾಯಃ ಈ ಭಾಷ್ಯ ೧೫-೧೬ನೆಯ ಶತಮಾನದಲ್ಲಿ ಹುಟ್ಟಿರಬೇಕು. ಹಿಂದಿನವರು ಇದನ್ನು ಉದಹರಿಸಲಿಲ್ಲ. ಮುಂದಿನವರು ಉದಹರಿಸುತ್ತಾರೆ. ಶಾಂಕರ ಭಾಷ್ಯಕ್ಕಿಂತಲೂ ಪ್ರಾಚೀನವೆಂದು ಕೆಲವರು ಅಭಿಮಾನದಿಂದ ಬರೆಯುತ್ತಾರೆ.

ಈ ಭಾಷ್ಯವ್ಯಾಖ್ಯಾನಗಳಲ್ಲಿ ಶೈವಾಗಮಗಳಿಗೂ ವೇದಾಂತಕ್ಕೂ ಸಾಮರಸ್ಯದೃಷ್ಟಿ ಬಹಳವಾಗಿರುತ್ತದೆ. ಮತ್ತು ಶ್ರೀಕಂಠಭಾಷ್ಯದಲ್ಲಿ (೧-೩-೧೨) ವಿಷ್ಣು ಶಿವರು ಪ್ರಪಂಚಕ್ಕೆ ಉಪಾದಾನನಿಮಿತ್ತ ಕಾರಣರಾಗಿರುವರು. ಇವರಿಗೆ ಅವಸ್ಥಾಭೇದ ಹೊರತು ಸ್ವರೂಪಭೇದವಿಲ್ಲವೆಂದು ತ್ರಿಮೂರ್ತಿಕಲಹವನ್ನೂ ಶಮನ ಮಾಡಿರುತ್ತದೆ.

ಆದುದರಿಂದಲೇ ಶೈವದರ್ಶನವು ವೈದಿಕವೇದಾಂತಿಗಳಿಂದ ವ್ಯಾಕುಲವಾಯಿತೆಂದು ಕೇವಲ ಆಗಮವಾದಿಗಳು ಬರೆಯುತ್ತಾರೆ. ಬಾದರಾಯಣಾಚಾರ್ಯರು ಪಾಶುಪತಮತಪ್ರಾಮಾಣ್ಯನಿರಾಕರಣ ಪ್ರಕರಣದಲ್ಲಿ "ಅಭಿನ್ನನಿಮಿತ್ತೋಪಾದಾನವಾದವು ವೇದಾಂತಸಮ್ಮತವು. ಇದು ಕೇವಲ ನಿಮಿತ್ತಕಾರಣವಾದವಾದುದರಿಂದ ಅನಾದರಣೀಯ" ಎಂದು ಸೂಚಿಸಿರುತ್ತಾರೆ. ಮತ್ತು ಸಾಪೇಕ್ಷೇಶ್ವರವಾದವು ಬಾದರಾಯಣಸಮ್ಮತವು. ಆಗಮಮತವು ನಿರಪೇಕ್ಷೇಶ್ವರವಾದವು, ಎಂದರೆ ಪರಮಾತ್ಮನಿಗೆ ವೈಷಮ್ಯನೈರ್ಘೃಣ್ಯ

ಪರಿಹಾರಕ್ಕಾಗಿ ಜೀವಾತ್ಮರ ಕರ್ಮಾನುಗುಣಫಲವನ್ನು ಕೊಡುತ್ತಾನೆಂಬುದು ಸಾಪೇಕ್ಷೇಶ್ವರವಾದವು. ಸ್ವೇಚ್ಛೆಯಿಂದ ನಿರಂಕುಶನಾಗಿ ಜಗದ್ವ್ಯಾಪಾರ ಮಾಡುವುದು ನಿರಪೇಕ್ಷೇಶ್ವರವಾದವು. ಇದು ನಕುಲೀಶಪಾಶುಪತದರ್ಶನ ವೆಂದು 'ಸರ್ವದರ್ಶನ ಸಂಗ್ರಹ'ದಲ್ಲಿ ಸ್ಪಷ್ಟವಾಗಿದೆ. ಇದು ಬಾದರಾಯಣ ಸಮ್ಮತವಲ್ಲ. ಇತ್ಯಾದಿ ವ್ಯತ್ಯಾಸಗಳು ಬಹಳವಿರುವುವು. ಈಗಿನ ವ್ಯಾಖ್ಯಾನ ಕಾರರು "ಸನ್ಧಿಮಿಚ್ಛನ್ತಿ ಸಾಧವಃ" ಎಂಬ ನ್ಯಾಯದಿಂದ ಸಮರಸ ಮಾಡಿರುವರು.

ಹೇಗಾದರೂ ಈಗ ನಿರೂಪಿಸಲ್ಪಡುವ ಶೈವದರ್ಶನಪದಾರ್ಥ ವಿಜ್ಞಾನವು ಸಕಲ ಶೈವಾಗಮವಿಜ್ಞಾನಕ್ಕೆ ಅತ್ಯಾವಶ್ಯಕವಾಗಿರುವುದು.

## ಸಂಗ್ರಹ

ಈ ದರ್ಶನದಲ್ಲಿ ಪತಿ, ಪಶು, ಪಾಶವೆಂದು ಸಂಗ್ರಹವಾಗಿ ವಿಷಯವು ಮೂರು ವಿಧ. ಪತಿಯೇ ಪರಮಶಿವನು, ಪರಮಾತ್ಮನು, ಸರ್ವಶಕ್ತಿಸಂಪ ನ್ನನು. ಪಶುವೇ ಪುರುಷನು, ಜೀವಾತ್ಮನು, ಜ್ಞಾತೃತ್ವ ಕರ್ತೃತ್ವ ಭೋಕ್ತೃತ್ವ ಶಕ್ತಿಯುಕ್ತನು. ಪರಮಶಿವನಿಗೆ ಸಮನಾಗುವ ಸ್ವರೂಪ ಯೋಗ್ಯತೆಯುಳ್ಳವನು. ಮಲ, ಕರ್ಮ, ಮಾಯೆ, ಮಹಾಮಾಯೆ, ತಿರೋಧಶಕ್ತಿಯೆಂದು ಪಾಶ ಐದು ವಿಧ. ಮಲವು ಪುರುಷನಿಗೆ ಅನಾದಿ ಯಾಗಿರುವ ಅಶುದ್ಧಿ. ಕರ್ಮ, ಪುಣ್ಯಪಾಪಗಳು, ಮಾಯೆ, ಕಾಲ, ನಿಯತಿ ಮೊದಲಾದ ಮೂವತ್ತು ತತ್ತ್ವಗಳು. ಮಹಾಮಾಯೆ ಬಿಂದು ಶಿವತತ್ತ್ವ ಮೊದಲಾದ ಹೆಸರುಳ್ಳ ಶುದ್ಧಸೃಷ್ಟಿಯ ಮೂಲಕಾರಣವು. ತಿರೋಧಶಕ್ತಿ ಪುರುಷನ ಜ್ಞಾನಶಕ್ತಿ ಕ್ರಿಯಾಶಕ್ತಿಗಳನ್ನು ಆವರಣಮಾಡುವ ಪರಮಶಿವಶಕ್ತಿ.

## ವಿಸ್ತರ

ವಿಸ್ತಾರವಾಗಿ ಮೂವತ್ತಾರು ತತ್ತ್ವಗಳು. ಸೃಷ್ಟಿಪ್ರಲಯಪ್ರವಾ ಹವು ಅನಾದ್ಯನಂತವಾಗಿ ಪ್ರವಹಿಸುತ್ತಲಿರುವುದು. ಮಹಾಪ್ರಲಯದಲ್ಲಿ ಶಿವ, ಮಾಯೆ, ಪುರುಷ, ಎಂಬ ಮೂರು ತತ್ತ್ವಗಳು ಪರಸ್ಪರವಿಭಕ್ತಿಗಳಾಗಿ

ಉಳಿದಿರುವುವು. ಸೃಷ್ಟಿ ಶುದ್ಧ, ಅಶುದ್ಧವೆಂದು ಎರಡು ಪ್ರಕಾರ. ಶುದ್ಧ ಸೃಷ್ಟಿಯಲ್ಲಿ ಬಿಂದು ಮಹಾಮಾಯೆಯೆಂಬ ಶಿವತತ್ತ್ವ, ಶಕ್ತಿತತ್ತ್ವ, ಸದಾ ಶಿವತತ್ತ್ವ, ಈಶ್ವರತತ್ತ್ವ, ವಿದ್ಯಾತತ್ತ್ವಗಳಾಗಿ ಪರಿಣಮಿಸಿ ಪಂಚತತ್ತ್ವ ಗಳಾಗುವುವು. ಶಿವತತ್ತ್ವವು ಜಡವಸ್ತು, ಪರಮಶಿವನೆಂಬ ಪರಮಾತ್ಮನಲ್ಲ. ಅಶುದ್ಧಸೃಷ್ಟಿಯಲ್ಲಿ ಮಾಯಾತತ್ತ್ವವು ಕಾಲ, ನಿಯತಿ, ಕಲಾ, ವಿದ್ಯಾ, ರಾಗ ಎಂದು ಪಂಚವಿಧವಾಗಿ ಪರಿಣಮಿಸುವುದು. ಕಾಲನಿಯತಿಗಳ ಸಹಾಯದಿಂದ ಕಲಾತತ್ತ್ವ ಪ್ರಕೃತಿ, ಮಹತ್, ಅಹಂಕಾರ, ಏಕಾ ದಶೇಂದ್ರಿಯ, ಪಂಚತನ್ಮಾತ್ರ, ಪಂಚಭೂತಗಳೆಂಬ ಇಪ್ಪತ್ತುನಾಲ್ಕು ತತ್ತ್ವಗಳಾಗಿ ಪರಿಣಮಿಸುವುವು. ಅಂತು ಶುದ್ಧಸೃಷ್ಟಿಯಲ್ಲಿ ಐದು, ಅಶುದ್ಧ ಸೃಷ್ಟಿಯಲ್ಲಿ ಮೂವತ್ತು, ಪುರುಷನೂ ಸೇರಿ ಮೂವತ್ತಾರು ತತ್ತ್ವಗಳು. ಇಲ್ಲಿ ಸಾಂಖ್ಯರಂತೆ ಸತ್ಕಾರ್ಯವಾದವು ಸಮ್ಮತವು. ಪರಮಶಿವನು ಸರ್ವ ತತ್ತ್ವಾತೀತನು. ತತ್ತ್ವಗಳಲ್ಲಿ ಅವನಿಗೆ ಗಣನೆಯಿಲ್ಲ.

ಅಶುದ್ಧಸೃಷ್ಟಿಯಲ್ಲಿರುವ ಮೂವತ್ತು ತತ್ತ್ವಗಳ ಸೂಕ್ಷ್ಮರೂಪದಿಂದ ಆದಿಸರ್ಗಕಾಲದಲ್ಲಿ ಪ್ರತಿಪುರುಷನಿಗೂ ಶರೀರವಾಗಿ ಮಹಾಪ್ರಲ ಯಪರ್ಯಂತವಿರುವುದು. ಇದಕ್ಕೆ ಪುರ್ಯಷ್ಟಕವೆಂದೂ ತಾತ್ತ್ವಿಕಶರೀರ ವೆಂದೂ ಹೆಸರು. ಸ್ಥೂಲಶರೀರವು ಭೌವನಶರೀರವೆನ್ನಲ್ಪಡುವುದು. ಮಂತ್ರೇಶ್ವರನಿಗೆ ಶುದ್ಧ ಸೃಷ್ಟಿಯಲ್ಲಿ ಬರುವ ಶರೀರ ಆಧಿಕಾರಿಕ ಶರೀರ.

## ಅಶುದ್ಧಸೃಷ್ಟಿ

ಮಾಯೆಯೆಂಬ ಸರ್ವಕಾರ್ಯಶಕ್ತಿ ಸಮುದಾಯರೂಪವಾದ ವಸ್ತು ವಿನಿಂದ ಕ್ಷಣ, ದಿನ, ಮಾಸ, ಸಂವತ್ಸರ, ಯುಗ, ಕಲ್ಪಸ್ವರೂಪವಾದ ಎರಡನೆಯ ತತ್ತ್ವ ಉದಯಿಸುವುದು. ಶುದ್ಧಸೃಷ್ಟಿಯಲ್ಲಿಯೂ ಕಾಲತತ್ತ್ವ ವಿರುವುದೆಂದು ಅಘೋರಶಿವಾಚಾರ್ಯ ಮೊದಲಾದವರ ಅಭಿಪ್ರಾಯ.

ಕಾಲದಿಂದ ನಿಯತಿಯೆಂಬ ಮೂರನೆಯ ತತ್ತ್ವೋದಯವು. ನಿಯತಿ ಯೆಂದರೆ ನಿಯಮನಶಕ್ತಿಯೆಂದರ್ಥ. ಇದರಿಂದ ಕಾರ್ಯಕಾರಣವ್ಯವಸ್ಥೆ, ಪುಣ್ಯಪಾಪವ್ಯವಸ್ಥೆ, ಅವುಗಳಿಂದ ಫಲವ್ಯವಸ್ಥೆ, ಅವುಗಳ ಭೋಗವ್ಯವಸ್ಥೆ, ಆಯಾ ವಸ್ತುಸ್ವಭಾವವ್ಯವಸ್ಥೆ, ಇತ್ಯಾದಿ ಸರ್ವವಿಧ ವ್ಯವಸ್ಥೆಗಳೂ ನಿಯತ್ಯ

ಧೀನವಾಗಿವೆ. ಕರ್ಮವೆಂಬ ಅದೃಷ್ಟವು ಫಲವನ್ನುಂಟುಮಾಡುವ ಶಕ್ತಿ ಮಂತ್ರವುಳ್ಳದ್ದು. ವ್ಯವಸ್ಥೆ ಅದರ ಅಧೀನವಲ್ಲ. ಈಶ್ವರನು ತತ್ತ್ವಗಳ ಮೂಲಕವೇ ಸರ್ವಕಾರ್ಯಕಾರಣನಾಗಿರುತ್ತಾನೆ. ಸಾಕ್ಷಾತ್ಕಾರಣವಾಗು ವುದಾದರೆ ಯಾವ ತತ್ತ್ವವೂ ಅವಶ್ಯಕವಿಲ್ಲದೇ ಹೋಗುವುದು.

ಕಲಾ ಎಂಬ ತತ್ತ್ವವು ನಾಲ್ಕನೆಯದು. ಇದು ಪುರುಷನೆಂಬ ಜೀವಾತ್ಮನಿಗೆ ಕರ್ತೃತ್ವವೆಂಬ ಕ್ರಿಯಾಶಕ್ತಿಯನ್ನು ಅಭಿವ್ಯಕ್ತಮಾಡುವುದು. ವಿದ್ಯಾತತ್ತ್ವವು ಐದನೆಯದು. ಜ್ಞಾತೃತ್ವವೆಂಬ ಜ್ಞಾನಶಕ್ತಿಯನ್ನು ಅಭಿ ವ್ಯಕ್ತಮಾಡುವುದು. ಇದಕ್ಕೆ ಪ್ರಕಾಶವೆಂದೂ ಹೆಸರು. ಬುದ್ಧಿತತ್ತ್ವ ವೆಂಬುದು ಸುಖದುಃಖ ಮೊದಲಾದ ಸ್ವಭಾವವುಳ್ಳದ್ದು ಗ್ರಾಹ್ಯವಾಗಿರು ವುದು. ಇದು ಗ್ರಹಣಕ್ಕೆ ಕಾರಣವಾಗಿರುವುದು. ವಿಷಯಾವರಣಭಂಗ ವನ್ನುಂಟುಮಾಡುವುದು.

ಆದ್ದರಿಂದ ಶಬ್ದಾದಿವಿಷಯಾನುರಕ್ತವಾದ ಸುಖಾದಿವಿಷಯ ಸ್ವರೂಪವಾದ ಬುದ್ಧಿ ಜ್ಞಾನಕ್ಕೆ ಸಾಕ್ಷಾತ್ ಗ್ರಾಹ್ಯವಾಗಿರುತ್ತದೆ. ಶಬ್ದಾದಿ ಗಳು ಪರಂಪರೆಯಾಗಿ ಗ್ರಾಹ್ಯವೆಂದು ವಿಷಯವು ಎರಡು ವಿಧ. ಹಾಗೆ ಜ್ಞಾನವೂ ಪ್ರಮಾಣಫಲವೆಂದೆರಡು ಪ್ರಕಾರವು. ಸುಖದುಃಖಾದಿವಿಷ ಯಾವೇದನರೂಪದಿಂದ ಪ್ರಮಾಣವಾಗಿರುವುದು. ಸುಖದುಃಖಾಧಿವೇದನ ರೂಪದಿಂದ ಫಲವೆಂಬ ಅನುಭವವಾಗಿರುವುದು. ಆವೇದನವೆಂದರೆ ತಿಳಿಯ ಪಡಿಸುವುದು. ವೇದನವೆಂದರೆ ತಿಳಿಯುವುದು ಎಂದರ್ಥ.

ರಾಗವೆಂಬುದು ಆಸಕ್ತಿ. ಇದು ಸರ್ವಪ್ರವೃತ್ತಿಗೂ ಕಾರಣವಾಗಿರು ವುದು. ಜ್ಞಾನೇಚ್ಛೆಗಳು ಪ್ರವೃತ್ತಿಹೇತುಗಳಾದರೂ ವಿಷಯಾವಚ್ಛಿನ್ನ ವಾಗಿ, ಅಂದರೆ ಆಯಾ ವಿಷಯ ವಿಶೇಷ ಸಂಸೃಷ್ಟವಾಗಿ, ಕಾರಣವಾಗಿರು ವುವು. ರಾಗವೆಂಬುದು ವಿಷಯಾವಚ್ಛೇದವಿಲ್ಲದೆ ಸಾಮಾನ್ಯವಾಗಿ ಕಾಲಾ ದೃಷ್ಟಾದಿಗಳಂತೆ ಕಾರಣವಾಗಿರುವುದು.

ಕಾಲನಿಯತಿಸಹಕೃತವಾದ ಕಲಾತತ್ತ್ವದಿಂದಲೇ ಪ್ರಕೃತಿ ಮಹ ದಹಂಕಾರ ಮೊದಲಾದ ಇಪ್ಪತ್ತುನಾಲ್ಕು ತತ್ತ್ವಗಳು ಉದಯಿಸುವುವು. ಪ್ರವೃತ್ತಿ ಶಕ್ತಿಯುತವಾದುದರಿಂದ ರಾಜಸಾಹಂಕಾರದಿಂದ ಪಂಚ ಕರ್ಮೇಂದ್ರಿಯಗಳೆಂದು ಕೆಲವರ ಅಭಿಪ್ರಾಯ. ಅವಕಾಶ, ವ್ಯೂಹನ,

ಪಚನ, ಸಂಗ್ರಹಣ, ಧಾರಣವೆಂದು ಆಕಾಶಾದಿ ಪಂಚಮಹಾಭೂತಗಳ ಕೃತ್ಯಗಳು. ವ್ಯೂಹನವೆಂದರೆ ಅವಯವಗಳ ಸಂಯೋಜನ. ಇಲ್ಲಿಂದ ಬ್ರಹ್ಮಾಂಡ ಲೋಕ ಮೊದಲಾದುವುಗಳ ಸೃಷ್ಟಿ. ಹೀಗೆ ನಡೆಯುವ ಕಲಾ ಸೃಷ್ಟಿಯೂ ಪರಮ ಶಿವೇಚ್ಛಾಮೂಲಕ ನಡೆಯುವುದು. ಸಾಂಖ್ಯರಂತೆ ಸ್ವತಂತ್ರಪ್ರಕೃತಿ ಕಾರಣವಾದವಲ್ಲ.

**ಶುದ್ಧಸೃಷ್ಟಿ**

ಶುದ್ಧಸೃಷ್ಟಿಗೆ ಮೂಲಕಾರಣವಾಗಿರುವ ಜಡವಾದ ನಿತ್ಯವಾದ ದ್ರವ್ಯವೇ ಶಿವತತ್ತ್ವ. ಇದೇ ಬಿಂದು. ಇದೇ ಮಹಾಮಾಯೆ. ಶುದ್ಧ ಭುವನವನ್ನು ಹೊಂದಿರುವ ಅಪರ ಮುಕ್ತರಿಗೆ ಜ್ಞಾನಕ್ರಿಯಾ ಸ್ವಭಾವ ವೆಂದು ಹೇಳಲ್ಪಡುವುದು. ಪರಮಶಿವನ ಪರಿಕರಶಕ್ತಿ. ಮುಕ್ತಿಯಲ್ಲಿ ಅಪರ ಮುಕ್ತಿ, ಪರಮಮುಕ್ತಿ ಎಂದೆರಡು ಪ್ರಕಾರ.

ಇದರಿಂದ ಪರಮಶಿವನ ಅನುಗ್ರಹೇಚ್ಛಾಮೂಲಕ ಶಾಂತ್ಯಾದಿಭುವ ನಾತ್ಮಕವಾದ ನಾದಪದದಿಂದ ಹೇಳಲ್ಪಡುವ ಪರಿಣಾಮವು, ಶಕ್ತಿತತ್ತ್ವವು, ಉದಯಿಸುವುದು. ಇಲ್ಲಿಂದ ಜ್ಞಾನಕ್ರಿಯಾಶಕ್ತಿ ಮೂಲಕವಾಗಿ ಸದಾಶಿವ ತತ್ತ್ವೋದಯವು. ಇದರಲ್ಲೇ ಸ್ಥೂಲಬಿಂದು ಸ್ಥೂಲನಾದಗಳಿಗೆ ಅಂತ ರ್ಭಾವವು.

ಇಲ್ಲಿಂದ ಪರಮಶಿವನ ಕ್ರಿಯಾಶಕ್ತಿಪ್ರಚುರವಾದ ಈಶ್ವರತತ್ತ್ವೋ ದಯವು. ಈ ತತ್ತ್ವಮೂಲಕವಾಗಿ ಅನಂತಾದಿಗಳನ್ನು ಅಧಿಷ್ಠಾನಮಾಡಿ ಅವರ ಮೂಲಕ ಅಶುದ್ಧಮಾರ್ಗದಲ್ಲಿ ಸೃಷ್ಟಿಸಂಹಾರಾದಿಗಳು ನಡೆಯುವುವು. ಇದರಲ್ಲೇ ವಿದ್ಯೇಶರಾದ ಅನಂತಾದಿಗಳಿಗೆ ಅಂತರ್ಭಾವವು. ಆಮೇಲೆ ಐದನೆಯದು ಶುದ್ಧವಾದ ವಿದ್ಯಾತತ್ತ್ವೋದಯವು. ಇದು ಸಪ್ತಕೋಟಿ ಮಹಾಮಂತ್ರಾಧಿಷ್ಠಾನದಿಂದ ಪರಮಶಿವನ ಜ್ಞಾನಶಕ್ತಿ ಪ್ರಚುರವಾಗಿರು ವುದು. ಇದರಲ್ಲೇ ಮಹಾಮಂತ್ರಗಳು, ವ್ಯೋಮವ್ಯಾಪ್ಯಾದಿವಿದ್ಯೆಗಳು, ಕಾಮಿಕಾಗಮ ಮೊದಲಾದ ಇಪ್ಪತ್ತೆಂಟು ತಂತ್ರಗಳು ಅಂತರ್ಭೂತಗಳಾಗಿ ರುವುವು. ಹೀಗೆ ಶಿವಶಕ್ತಿ ಮೊದಲಾದ ಐದು ತತ್ತ್ವಗಳಲ್ಲೂ ವಿಚಿತ್ರ ಸನ್ನಿವೇಶ ಸಮಲಂಕೃತವಾದ ಲೋಕಗಳಿರುವುವು.

ಇದರಿಂದ ಪರಮಶಿವವಸ್ತು ಬೇರೆ, ಶಿವತತ್ತ್ವ ಸದಾಶಿವತತ್ತ್ವಗಳು ಬೇರೆ—ಈ ರೀತಿಯಾದುವು. ಶಾಸ್ತ್ರಗಳಲ್ಲಿ ಅಭೇದವ್ಯವಹಾರವು ವ್ಯಾಪಾರಾವೇಶ ಮೂಲಕವೆಂದು ನಿರ್ಣಯವಾಗಿದೆ. ಹೀಗೆ ಶಿವ, ಶಕ್ತಿ, ಸದಾಶಿವ, ಈಶ್ವರ –ಈ ನಾಲ್ಕು ತತ್ತ್ವಗಳೂ ಕ್ರಮವಾಗಿ ಪುರುಷ ಪ್ರಕೃತಿ ಮಹತ್ ಅಹಂಕಾರ ಪದಗಳಿಂದಲೂ ವ್ಯವಹರಿಸಲ್ಪಡುವುವು.

**ಪುರುಷತತ್ತ್ವ**

ಪುರುಷತತ್ತ್ವವೆಂಬ ಜೀವಾತ್ಮನು ಜ್ಞಾತೃತ್ವ ಕರ್ತೃತ್ವ ಭೋಕ್ತೃತ್ವ ಶಕ್ತಿ ಯುಕ್ತಸಂಪನ್ನನು. ಚಿನ್ಮಾತ್ರಸ್ವರೂಪನಾದರೂ ಭೋಕ್ತೃತ್ವಾವಸ್ಥೆಯಲ್ಲಿ ತತ್ತ್ವಾಂತರವೆಂದು ಗಣನಾರ್ಹನಾಗಿರುತ್ತಾನೆ. ಮುಕ್ತಿಯಲ್ಲಿ ತತ್ತ್ವಾತೀತನಾಗುತ್ತಾನೆ. ಪುರುಷನು ವಿಜ್ಞಾನಕಲ, ಪ್ರಲಯಾಕಲ, ಸಕಲ ಎಂದು ಮೂರು ವಿಧವಾಗಿರುವನು, ಮಲಮಾತ್ರ ಬಂಧವುಳ್ಳವನು ಮೊದಲನೆಯುವನು. ಮಲಕರ್ಮವೆಂಬ ಎರಡು ವಿಧ ಬಂಧವುಳ್ಳವನು ಎರಡನೆಯುವನು. ಮಲಕರ್ಮಮಾಯಾ ಎಂಬ ಮೂರು ವಿಧವಾದ ಬಂಧವುಳ್ಳವನು ಮೂರನೆಯುವನು.

ಪ್ರಥಮವರ್ಗದಲ್ಲಿರುವವರು ಪರಿಪಕ್ವಮಲರಾದರೆ ಬೈಂದವಶರೀರವೆಂಬ ಶುದ್ಧಸೃಷ್ಟಿಶರೀರವನ್ನು ಕೆಲವರಿಗೆ ಕೊಟ್ಟು ವಿದ್ಯೇಶತ್ವ, ಸರ್ವಜ್ಞತ್ವ, ಶುದ್ಧಮಾರ್ಗದಲ್ಲಿ ಅಧಿಕಾರ, ಪಂಚಕೃತ್ಯಾಧಿಕಾರ ಮೊದಲಾದುವುಗಳನ್ನು ಅನುಗ್ರಹಿಸುವನು. ಕೆಲವರಲ್ಲಿ ಏಳುಕೋಟಿ ಪುರುಷರಿಗೆ ಮಹಾಮಂತ್ರಾಧಿಕಾರವನ್ನು ಕೊಟ್ಟು ವಿದ್ಯಾತತ್ತ್ವನಿವಾಸಿಗಳನ್ನಾಗಿ ಮಾಡುತ್ತಾನೆ, ಇವುಗಳಲ್ಲಿ ಅರ್ಧ ಜನರು ಪರಮಶಿವನಿಗೆ ಜಗದನುಗ್ರಹದಲ್ಲಿ ಸಹಾಯಕರಾಗಿದ್ದು ಪ್ರಲಯದಶೆಯಲ್ಲಿ, ಅಧಿಕಾರಾವಸಾನ ಸಮಯದಲ್ಲಿ ಮೋಕ್ಷವನ್ನು ಹೊಂದುವರು. ಉಳಿದ ಅರ್ಧ ಜನರು ಸೃಷ್ಟಿಕಾಲಪರ್ಯಂತವೂ ಅಲ್ಲಿಯೇ ಇದ್ದು ಪುನಃ ಹಿಂತಿರುಗುವರು. ದ್ವಿತೀಯವರ್ಗದಲ್ಲಿ ಪರಿಪಕ್ವಮಲರಾದವರಿಗೆ ಮೋಕ್ಷವು ದೊರೆಯುತ್ತದೆ. ಇತರರಿಗೆ ಸಂಸಾರವು. ಮೂರನೆಯ ವರ್ಗದವರು ಸಂಸಾರದಲ್ಲಿಯೇ ಇರುತ್ತಾರೆ. ಅವರಲ್ಲೂ ಕೆಲವರನ್ನು ಮಂತ್ರಮಹೇಶ್ವರರನ್ನಾಗಿಯೂ ಭುವನಪತಿಗಳನ್ನಾಗಿಯೂ ಅಣಿಮಾದಿಸಿದ್ಧಿಯುಳ್ಳವರನ್ನಾಗಿಯೂ ಮಾಡುವರು. ಕೆಲವರನ್ನು ಅನು

ಗ್ರಹಿಸಿ ಹದಿನೆಂಟು ಮಂತ್ರೇಶ್ವರರನ್ನಾಗಿ ಮಾಡುವರು. ಯಾರು ವಿದ್ಯೇಶ್ವರಾರಾಧನೆಯಿಂದಲೂ ದೀಕ್ಷಾದಿವಿಧಿಯಿಂದಲೂ ಅತ್ಯಂತಪಕ್ವಮಲರಾಗುವರೋ ಅವರು ಮೋಕ್ಷಕ್ಕೆ ಹೋಗುವರು. ಕೇವಲಜ್ಞಾನದಿಂದ ಮಲನಿವೃತ್ತಿಯೂ ಮೋಕ್ಷವೂ ಇಲ್ಲ. ದೀಕ್ಷಾದಿವಿಧಿಗಳಿಂದ ಸಂಪಾದಿಸಲ್ಪಟ್ಟ ಪರಮಶಿವಾನುಗ್ರಹದಿಂದಲೇ ಮೋಕ್ಷವೆಂದು ಸಿದ್ಧಾಂತ.

ಅನಂತಾದಿಗಳೇ ಮಂತ್ರಮಹೇಶ್ವರರೆಂಬ ವಿದ್ಯೇಶ್ವರರು. ಇವರು ಅನಂತ, ಸೂಕ್ಷ್ಮ, ಶಿವೋತ್ತಮ, ಏಕನೇತ್ರ, ಏಕರುದ್ರ, ತ್ರಿಮೂರ್ತಿ, ಶ್ರೀಕಂಠ, ಶಿಖಂಡಿ ಎಂದು ಎಂಟು ಮಹಾತ್ಮರು ; ಈಶ್ವರತತ್ತ್ವನಿವಾಸಿಗಳು. ಸಪ್ತಕೋಟಿ ಮಹಾಮಂತ್ರಪದವು ಸಪ್ತಕೋಟಿ ಜೀವಾತ್ಮರುಗಳ ನಾಮಧೇಯವು ; ಸರ್ಗಾದಿಯಲ್ಲಿ ಪರಮಶಿವಾನುಗ್ರಹದಿಂದ ಅಧಿಕಾರವನ್ನು ಹೊಂದಿದವರು. ವಾಚ್ಯವಾಚಕಗಳಿಗೆ ಅಭೇದದೃಷ್ಟಿಯಿಂದ ಮಹಾಮಂತ್ರಗಳೆಂದು ಅವರಿಗೆ ನಾಮಧೇಯವಾಗಿರುವುದು. ಮನನದಿಂದಲೂ ಧ್ಯಾನದಿಂದಲೂ ತ್ರಾಣವನ್ನೂ ರಕ್ಷಣೆಯನ್ನೂ ಮಾಡುವವರಾದ್ದರಿಂದ ಮಂತ್ರಶಬ್ದವು ಇವರಿಗೆ ವಾಚಕವಾಗಿರುವುದು. ಇವರೇ ಇತರರಿಗೆ ದೀಕ್ಷಾದಿವಿಧಿಗಳಿಂದಲೂ ಪೂಜಾಪುರಸ್ಕಾರಾದಿಗಳಿಂದಲೂ ಪ್ರೀತರಾಗಿ ವಿವಿಧ ಸಿದ್ಧಿಗಳನ್ನು ಅನುಗ್ರಹಿಸುವರು.

ಇವರೇ ಶುದ್ಧಸೃಷ್ಟಿಯಲ್ಲಿ ಅಪರ ಮುಕ್ತಿಯನ್ನು ಹೊಂದಿದವರು. ಇವರು ಪರಮಶಿವಸಾಮ್ಯವೆಂಬ ಪರಮುಕ್ತಿಯನ್ನು ಹೊಂದುವರು. ಆದುದರಿಂದ ಮಂತ್ರೇಶ್ವರರು, ಮಂತ್ರಮಹೇಶ್ವರರು, ಲೋಕಪಾಲಕರು— ಇವರುಗಳೆಲ್ಲ ಅಧಿಕಾರಿಗಳು, ಅಪರಮುಕ್ತರು. ಅಪರಮುಕ್ತಿ ಮೋಹಕವಲ್ಲ ; ಬೋಧಕವಾಗಿ ತತ್ತ್ವಜ್ಞಾನವನ್ನೂ ತೀವ್ರ ವೈರಾಗ್ಯವನ್ನೂ ಉಂಟುಮಾಡಿ ಪರಮುಕ್ತಿಗೆ ಸಾಧಕವಾಗುವುದು.

**ಪರಮಶಿವ**

ಪರಮಶಿವನು ಚಿದ್ಘನಸ್ವರೂಪನು. ಸ್ವಲ್ಪವೂ ಮಿಶ್ರವಲ್ಲದ ಶುದ್ಧವಾದ ಜ್ಞಾನಸ್ವರೂಪನು. ಅವನ ಶಕ್ತಿಗಳಾದ ಜ್ಞಾನಕ್ರಿಯೇಚ್ಛಾ ಮೊದಲಾದುವೂ ಚಿದ್ಘನಸ್ವರೂಪವು, ಜಡಸ್ವರೂಪವಲ್ಲ. ಮಾಯಾ, ಮಹಾಮಾಯಾ—ಈ ಎರಡೂ ಪರಿಗ್ರಹಶಕ್ತಿಗಳು, ಜಡಸ್ವರೂಪಗಳು, ಬಾಹ್ಯ

ವಸ್ತುಗಳು. ಶುದ್ಧ ಸೃಷ್ಟಿಯಲ್ಲಿ ಪರಮಶಿವನು ಸಾಕ್ಷಾತ್ ನಿಮಿತ್ತಕಾರಣನು. ಶಿವತತ್ತ್ವವು ಉಪಾದಾನಕಾರಣ. ಅಶುದ್ಧಸೃಷ್ಟಿಯಲ್ಲಿ ಅನಂತಾದಿ ಮೂಲಕ ನಿಮಿತ್ತಕಾರಣನು. ಮಾಯೆ ಉಪಾದಾನಕಾರಣ. ಶುದ್ಧಸೃಷ್ಟಿಯಲ್ಲಿಯೂ ಭುವನಾದಿ ನಿರ್ಮಾಣವು ಅದರಲ್ಲಿ ವಾಸಮಾಡುವ ವಿದ್ಯೇಶ್ವರರಿಗೆ ಬೈಂದವಶರೀರಪ್ರಧಾನ ಮೊದಲಾದುವು ಪರಮಶಿವನ ವ್ಯಾಪಾರಗಳು.

ಶುದ್ಧಾಶುದ್ಧವೆಂಬ ಎರಡುವಿಧ ಸೃಷ್ಟಿಗಳಲ್ಲೂ ಸೃಷ್ಟಿ, ಸ್ಥಿತಿ, ಸಂಹಾರ, ಅನುಗ್ರಹ, ತಿರೋಭಾವವೆಂದು ಐದು ವಿಧ ವ್ಯಾಪಾರಗಳಿರುವುವು. ಸೃಷ್ಟಿ ಸ್ಥಿತಿ ಸಂಹಾರಗಳು ಪ್ರಸಿದ್ಧವಾದುವುಗಳು. ಅನುಗ್ರಹವೆಂದರೆ ಚೇತನರಿಗೆ ಭೋಗ ಮೋಕ್ಷಪ್ರಧಾನ ಮಾಡತಕ್ಕದ್ದು. ಅಚೇತನಗಳಿಗೆ ಆಯಾ ವಸ್ತುವಿನ ಸಾಮರ್ಥ್ಯಪ್ರಕಾಶವೆಂಬ ಪ್ರವೃತ್ತಿಯ ಉತ್ಪಾದನವು. ತಿರೋಭಾವವೆಂದರೆ ಬಂಧ. ಹೀಗಾದರೆ ಭೋಗದಿಂದ ಕರ್ಮಕ್ಷಯ ಮೂಲಕ ಮೋಕ್ಷಪ್ರಾಪ್ತಿಯಾಗುವುದೆಂದು ಸಿದ್ಧಾಂತ.

ಈ ಪರಮಶಿವನಿಗೆ ಮಲ, ಕರ್ಮ, ಮಾಯಾ ಮೊದಲಾದ ಪಾಶಸಂಬಂಧವಿಲ್ಲದಿರುವುದರಿಂದ ಪ್ರಾಕೃತಶರೀರಕ್ಕೆ ಅವಕಾಶವಿಲ್ಲ. ಶಾಕ್ತಶರೀರವಿರುವುದು. ಅದು ಈಶಾನ ಮೊದಲಾದ ಪಂಚಮಂತ್ರಗಳಿಂದ, ಪಂಚಾವಯವಕಲ್ಪನೆಯಿಂದ ಮಂತ್ರಮಯಶರೀರವು. ಈಶಾನಮಂತ್ರಕ, ತತ್ಪುರುಷವಕ್ತ್ರ, ಅಘೋರಹೃದಯ, ವಾಮದೇವಗುಹ್ಯ, ಸದ್ಯೋಜಾತವಾದ ಎಂದು ರಹಸ್ಯವು. ಆದುದರಿಂದ ಅನುಗ್ರಹ, ತಿರೋಭಾವ, ಸೃಷ್ಟಿ, ಸಂಹಾರವೆಂಬ ಕೃತ್ಯಪಂಚಕಕಾರಣವಾದ ಶರೀರವು ಪಂಚಮಂತ್ರವೆಂಬ ಪಂಚಶಕ್ತಿಮಯವು.

ನಿರಾಕಾರನಾದ ಪರಮಶಿವನ ಪೂಜಾಧ್ಯಾನಾದಿಗಳು ಅಶಕ್ಯವಾದುದರಿಂದ ಸಾಧಕಾನುಗ್ರಹಕ್ಕಾಗಿ ದೈವಮನುಷ್ಯಾದ್ಯಾಕಾರಗಳಲ್ಲಿ ಸಾನಿಧ್ಯವಿಶೇಷದಿಂದ ಅವತಾರಶರೀರಗಳೂ ಅನೇಕವಿರುವುವು.

ಇಂತಹ ಪರಮಶಿವನ ಉಪಾಸನೆಯಿಂದ ವೀತಮಲರಾದ ಪುರುಷರು ಪರಮಶಿವನ ಪರಮಸಾಮ್ಯವೆಂಬ ಮುಕ್ತಿಯನ್ನು ಹೊಂದಿ ಶಾಶ್ವತಶಿವರಾಗಿರುವರು. ಆದರೆ ಇವರು ಆದಿಮುಕ್ತರು, ಪರಮಶಿವನು ಅನಾದಿಮುಕ್ತನು. ಆದುದರಿಂದಲೇ ಪರಮಪದವಿಶೇಷಣವು.

# ಪರಿಸಮಾಪ್ತಿ

ಹೀಗೆ ಸಕಲ ಶಾಸ್ತ್ರಗಳೂ, ರಾಗಾದಿ ದೋಷನಿವೃತ್ತಿರೂಪ ಶಾಂತಿಯೆಂಬ ಆತ್ಮಸೌಖ್ಯವನ್ನು ಉದ್ದೇಶಿಸಿಯೇ ಹೊರಟಿರುವುವು. ವಿವಿಧ ವೈದ್ಯಶಾಸ್ತ್ರಗಳು ರೋಗಿಗಳ ದೇಶಕಾಲ ಸಂದರ್ಭಾನುಸಾರ ಪಥ್ಯಾನುಪಾನ ಭೇದದಿಂದ ಆರೋಗ್ಯವೆಂಬ ದೇಹಸೌಖ್ಯಕ್ಕಾಗಿಯೇ ಹೊರಟು ಪರಸ್ಪರ ದ್ವೇಷವಿಲ್ಲದೆ ಹೇಗೆ ಆದರಣೀಯಗಳಾಗಿರುವುವೋ, ಹಾಗೆ ದರ್ಶನಶಾಸ್ತ್ರಗಳಲ್ಲೂ ಪರಸ್ಪರ ಅನಾದರಣೆಯಿಲ್ಲದೆ ಯಥೋಚಿತ ಪರಿಗ್ರಹದಿಂದ ಯಾವನ ಮನಸ್ಸು ಶಾಂತವಾಗಿರುತ್ತದೆಯೋ ಅವನೇ ಸಕಲ ಶಾಸ್ತ್ರಜ್ಞನೆಂದು ಮಹಾಭಾರತದಲ್ಲೂ 'ಲಂಕಾವತಾರ'ದಲ್ಲೂ ಸ್ಪಷ್ಟವಾಗಿರುತ್ತದೆ.

ಶಮಾರ್ಥಂ ಸರ್ವ ಶಾಸ್ತ್ರಾಣಿ ವಿಹಿತಾನಿ ಮನೀಷಿಭಿಃ
ಸ ಏವ ಸರ್ವಶಾಸ್ತ್ರಜ್ಞಃ ಯಸ್ಯ ಶಾಂತಂ ಮನಸ್ಸದಾ ॥
ವೈದ್ಯಾ ಯಥಾತುರವಶಾತ್ ಕ್ರಿಯಾಭೇದಂ ಪ್ರಕುರ್ವತೇ
ಸ ತು ಶಾಸ್ತ್ರಸ್ಯಭೇದೋಸ್ತಿ ದೋಷ ಭೇದಾತ್ತು ಭಿದ್ಯತೇ ॥
ಸರ್ವದರ್ಶನ ಸಾರಾಂಶ ವಿಜ್ಞಾನಮಪಿ ಶಾಂತಿಕೃತ್
ಶಾಂತಾಕಾರೋ ದೇವದೇವಃ ವಾಸುದೇವಃ ಪ್ರಸೀದತು ॥
ಯತ್ಕರೋಮಿ ಯದಶ್ನಾಮಿ ಯಜ್ಜುಹೋಮಿ ದದಾಮಿ ಯತ್
ಯತ್ತಪಸ್ಯಾಮಿ ಹೇ ಕೃಷ್ಣ ತತ್ಕರೋಮಿ ತ್ವದರ್ಪಣಂ ॥

ಇತಿ ಶ್ರೀ ಮಹಾಮಹೋಪಾಧ್ಯಾಯ ಪಂಡಿತರತ್ನ ಸಂಸ್ಥಾನ ಧರ್ಮಾಧಿಕಾರಿ
ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರಿಂದ ಬರೆಯಲ್ಪಟ್ಟ ಹಿಂದೂ
ದರ್ಶನಸಾರವೆಂಬ ಪ್ರಬಂಧವು ಸಂಪೂರ್ಣಂ

**ಜಗನ್ಮಂಗಳಂ**

# ಈ ಬಗೆಯ ಇತರ ಕೃತಿಗಳು

1. ಗ್ರೀಕರ ತತ್ತ್ವಶಾಸ್ತ್ರ ಸಾರ ಸಂಗ್ರಹ–
   ಕೆ. ಆರ್. ಶ್ರೀನಿವಾಸ ಅಯ್ಯಂಗಾರ್ ರೂ. ೩.೭೦ ; ೪.೭೦
2. ಕ್ರೈಸ್ತ ತತ್ತ್ವದರ್ಶನ–ವಿದ್ವಾನ್ ಎಡ್ವಿನ್ ಡಿಸೋಜ ರೂ. ೮.೦೦
3. ತತ್ವಶಾಸ್ತ್ರ–ಪ್ರಾಚ್ಯ ಮತ್ತು ಪಾಶ್ಚಾತ್ಯ ರೂ. ೩೦.೦೦
4. ಯುಗಯಾತ್ರೀ ಭಾರತೀಯ ಸಂಸ್ಕೃತಿ–ಸಂಪುಟ ೧ ರೂ. ೩೦.೦೦
5. ಯುಗಯಾತ್ರೀ ಭಾರತೀಯ ಸಂಸ್ಕೃತಿ–ಸಂಪುಟ ೨ ರೂ. ೩೨.೦೦
6. ಯುಗಯಾತ್ರೀ ಭಾರತೀಯ ಸಂಸ್ಕೃತಿ–ಸಂಪುಟ ೩ ರೂ. ೪೫.೦೦
7. ಉಪನಿಷತ್ತುಗಳ ಸಂದೇಶ–ಅನು : ಡಾ. ಪ್ರಭುಶಂಕರ ರೂ. ೩೨.೫೦
8. ಭಾರತೀಯ ಸಂಸ್ಕೃತಿ ಪರಂಪರೆ–
   ಅನು : ಆರ್. ಎಲ್. ಅನಂತರಾಮಯ್ಯ ರೂ. ೭.೦೦ ; ೯.೦೦
9. ಹಿಂದೂ ಜೀವನ ದರ್ಶನ–
   ಅನು : ಡಾ. ಕೆ. ಬಿ. ರಾಮಕೃಷ್ಣರಾವ್ ರೂ. ೪.೫೦ ; ೮.೦೦
10. ಭಾರತೀಯ ದರ್ಶನ–
   ಅನು : ಎಸ್. ರಾಮಚಂದ್ರಶಾಸ್ತ್ರಿ ರೂ. ೨೫.೦೦ ; ೩೦.೦೦
11. ಭಾರತೀಯ ತತ್ತ್ವಶಾಸ್ತ್ರದ ರೂಪರೇಖೆಗಳು–
   ಅನು : ಡಾ. ಪ್ರಭುಶಂಕರ ರೂ. ೧೫.೦೦
12. ಇಸ್ಲಾಂ ಸಂಸ್ಕೃತಿ–ಬಿ. ಎಂ. ಶ್ರೀಕಂಠಯ್ಯ ರೂ. ೪.೨೫
13. ಪ್ರಾಚ್ಯ ಮತ್ತು ಪಾಶ್ಚಾತ್ಯ ಸಂಸ್ಕೃತಿ–
   ಅನು : ಪ್ರೊ. ಎನ್. ಎ. ನಿಕ್ಕಂ
   ಮತ್ತು ಡಾ. ಎನ್. ಎಸ್. ಅನಂತರಂಗಾಚಾರ್ ರೂ. ೩.೧೦ ; ೪.೧೦
14. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ–
   ಡಾ. ಎಂ. ಚಿದಾನಂದಮೂರ್ತಿ ರೂ. ೬೫.೦೦ ; ೮೦.೦೦
15. ಭಾರತೀಯ ತತ್ವಶಾಸ್ತ್ರದ ಮೂಲಾಂಶಗಳು–
   ಅನು : ಡಾ. ಕೆ. ಬಿ. ರಾಮಕೃಷ್ಣರಾವ್ ರೂ. ೧೦.೦೦ ; ೧೮.೦೦
16. ಸಮಕಾಲೀನ ಭಾರತೀಯ ತತ್ವಶಾಸ್ತ್ರ–
   ಡಾ. ವಿ. ಎನ್. ಶೇಷಗಿರಿರಾವ್ ರೂ. ೧೫.೦೦

ಪ್ರತಿಗಳಿಗೆ
ನಿರ್ದೇಶಕರು, ಪ್ರಸಾರಾಂಗ, ಮಾನಸಗಂಗೋತ್ರಿ, ಮೈಸೂರು-೫೭೦೦೦೬